


# ಇತಿಹಾಸ ದರ್ಶನ

ಸಂಪುಟ ೯ / ೧೯೯೪



೧೯೯೩ರಲ್ಲಿ ಮೈಸೂರಿನಲ್ಲಿ ಸಮಾವೇಶಗೊಂಡ ಅಕಾದೆಮಿಯ
ಏಳನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಪುಟ

*ಸಂಪಾದಕರು*

ಡಾ। ಸೂರ್ಯನಾಥ ಕಾಮತ್

ಡಾ। ದೇವರಕೊಂಡಾರೆಡ್ಡಿ




ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

**ITIHASA DARSHANA**
Proceedings of the Seventh Annual
Conference of the Karnataka Itihasa
Academy (regd.) held at Mysore
on 23, 24 and 25th July 1993.

Volume 9, July 1994.

Edited by Dr. Suryanath Kamath
& Dr. Devarakonda Reddy
Published by Karnataka Itihasa Academy (Regd.)
Ghokhale Institute of Public Affairs Compound
Basavanagudi Road, Narasimharaja Colony
Bangalore - 560 019



ಬೆಲೆ : ರೂ ೧೦೦–೦೦

ಲಕ್ಷ್ಮಿ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು – ೫೬೦ ೦೧೮
ದೂರವಾಣಿ : ೬೬೧೪೧೨೪




# ಸಂಪಾದಕೀಯ

ಹೋದ ವರ್ಷ (೧೯೯೩) ಮೈಸೂರಲ್ಲಿ ನಡೆದ ಸಮ್ಮೇಳನದಲ್ಲಿ ೭೦ಕ್ಕೂ ಮೇಲ್ಪಟ್ಟು ಪ್ರಬಂಧಗಳು ಮಂಡಿತವಾದರೂ ಇಲ್ಲಿ ಕೇವಲ ೬೧ ಮುದ್ರಿತವಾಗಿವೆ. ಕೆಲವೊಂದು ಪ್ರಬಂಧಗಳ ಹಸ್ತಪ್ರತಿ ಕೈ ಸೇರಿಲ್ಲ. ಕೆಲವೊಂದು ಕರ್ನಾಟಕಕ್ಕೆ ಸಂಬಂಧಿಸಿದ್ದಲ್ಲ ಅಥವಾ ಹೊಸ ವಿಷಯವನ್ನು ಹೇಳುತ್ತಿಲ್ಲ ಎಂಬ ಕಾರಣಕ್ಕೆ ಕೈಬಿಡುವುದು ಅನಿವಾರ್ಯವಾಯಿತು.

ಎಂದಿನಂತೆ ಪ್ರಾಗಿತಿಹಾಸ, ಶಾಸನ, ಪುರಾತತ್ತ್ವ, ಪ್ರಾಚೀನ, ಮಧ್ಯ ಹಾಗೂ ಆಧುನಿಕ ಎಂಬ ವರ್ಗೀಕರಣಕ್ಕೆ ಅನುಗುಣವಾಗಿ ಪ್ರಬಂಧಗಳನ್ನು ಪ್ರಕಟಿಸಿದೆ. ವಿಶ್ವವಿದ್ಯಾಲಯದ ಅಧ್ಯಾಪಕರಷ್ಟೇ, ಶಾಲಾ ಉಪಾಧ್ಯಾಯರೂ ಇತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಇತಿಹಾಸ ಪ್ರೇಮಿಗಳೂ–ರೈತರೂ ಸಹ–ತಮ್ಮ ಹೊಸ ಕಾಣಿಕೆಗಳನ್ನು ಪ್ರಬಂಧರೂಪದಲ್ಲಿ ಇಲ್ಲಿ ಮಂಡಿಸಿದ್ದಾರೆ. ಸಮ್ಮೇಳನದಲ್ಲಿ ಪ್ರಬಂಧ ಮಂಡಿಸಲು ಬಯಸುವ ಎಲ್ಲರಿಗೂ ಅವಕಾಶ ಆಗುತ್ತಿಲ್ಲ. ಸಾಕಷ್ಟು ಸಮಯವೂ ಸಿಗುತ್ತಿಲ್ಲ. ಎರಡು ದಿನದ ಸಮ್ಮೇಳನ ಈಗ ಮೂರು ದಿನಗಳದ್ದಾಗುತ್ತಿದೆ. ಔಪಚಾರಿಕ ಸಮಾರೋಪ, ಮನರಂಜನೆ ಕಾರ್ಯಕ್ರಮಗಳನ್ನೂ ಕೈಬಿಟ್ಟಿದೆ – ಪ್ರಬಂಧ ಮಂಡನೆಗೆ ಹೆಚ್ಚಿನ ಅವಕಾಶ ಆಗಲಿ, ಎಂದು.

ಇತಿಹಾಸದ ಬಗ್ಗೆ, ಹೊಸ ವಿಷಯ ಶೋಧಿಸುವ ಬಗ್ಗೆ ತರುಣ ಪೀಳಿಗೆಯಲ್ಲಿ ಮೂಡುತ್ತಿರುವ ಉತ್ಸಾಹ ಹೆಮ್ಮೆ ತರುವಂಥದ್ದು; ಆಶಾದಾಯಕವಾದುದು. ಇತಿಹಾಸ ಅಕಾದೆಮಿ ತಾನು ಇಟ್ಟುಕೊಂಡ ಗುರಿಯತ್ತ ಸಾಗುತ್ತಿರುವ ಬಗ್ಗೆ ಹೆಮ್ಮೆಯಾಗುತ್ತಿದೆ. ಇದಕ್ಕೆ ಎಲ್ಲರ ಉತ್ಸಾಹೀ ಸಹಕಾರವೇ ಕಾರಣ.

ಈ ಸಂಪುಟದ ಕರಡುತಿದ್ದಲು ಆರಂಭದಲ್ಲಿ ನೆರವಾದ ಶ್ರೀ ಶಿವಣ್ಣ ಮನ್ವಾಚಾರ್ ಅವರಿಗೂ ಚಿತ್ರ, ನಕಾಶೆಗಳ ವಿನ್ಯಾಸ ತಯಾರಿಸಿಕೊಟ್ಟ ಶ್ರೀ ಅ.ಲ. ನರಸಿಂಹನ್ ಅವರಿಗೂ ಸುಂದರವಾಗಿ ಸಕಾಲದಲ್ಲಿ ಸಂಪುಟವನ್ನು ಮುದ್ರಿಸಿದ ಶ್ರೀ ಲಕ್ಷ್ಮಿ ಮುದ್ರಣಾಲಯದ ಸಿಬ್ಬಂದಿಯವರಿಗೂ ನಮ್ಮ ಕೃತಜ್ಞತೆಗಳು.

ಸೂರ್ಯನಾಥ ಕಾಮತ್
ದೇವರಕೊಂಡಾರೆಡ್ಡಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

## ಬೆಂಗಳೂರು

### ಕಾರ್ಯಕಾರಿ ಸಮಿತಿ

(ದಿನಾಂಕ ೮–೭–೧೯೯೪ ರಲ್ಲಿದ್ದಂತೆ)

ಅಧ್ಯಕ್ಷರು

ಡಾ। ಜಿ. ಎಸ್. ದೀಕ್ಷಿತ್, ಬೆಂಗಳೂರು

ಉಪಾಧ್ಯಕ್ಷರು

ಡಾ। ಡಿ. ವಿ. ದೇವರಾಜ್, ಮೈಸೂರು

ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು

ಪ್ರಧಾನ ಕಾರ್ಯದರ್ಶಿ

ಡಾ। ಎಚ್. ಎಸ್. ಗೋಪಾಲರಾವ್, ಅರಿಶಿನಕುಂಟೆ

ಕಾರ್ಯದರ್ಶಿಗಳು

ಡಾ। ಎಚ್. ಆರ್. ರಘುನಾಥಭಟ್ಟ, ಧಾರವಾಡ

ಡಾ। ದೇವರಕೊಂಡಾರೆಡ್ಡಿ, ಬೆಂಗಳೂರು

ಕೋಶಾಧಿಕಾರಿ

ಶ್ರೀ ಎಂ. ಬಿ. ಪಾಟೀಲ, ಬೆಂಗಳೂರು

ಸದಸ್ಯರು

ಡಾ। ಸೂರ್ಯನಾಥ ಕಾಮತ್, ಬೆಂಗಳೂರು

ಡಾ। ಎ. ವಿ. ನರಸಿಂಹಮೂರ್ತಿ, ಮೈಸೂರು

ಡಾ। ರು.ಮ. ಷಡಕ್ಷರಯ್ಯ, ಧಾರವಾಡ

ಶ್ರೀ ವಿ. ಸಿ. ಮಾಲಗತ್ತಿ, ಬೆಳಗಾವಿ

ಶ್ರೀ ಎಸ್. ರಾಜೇಂದ್ರಪ್ಪ, ಬೆಂಗಳೂರು

ಶ್ರೀ ಎಸ್. ಎಂ. ನಾಗಭೂಷಣ, ಧಾರವಾಡ

ಶ್ರೀ ಕೆ. ಬಿ. ಶಿವತಾರಕ್, ಬ್ರಹ್ಮಾವರ

ಡಾ। ಚೂಡಾಮಣಿನಂದಗೋಪಾಲ್, ಬೆಂಗಳೂರು

ಡಾ। ಬಸವಲಿಂಗ ಸೊಪ್ಪಿಮಠ, ರಾಯಚೂರು

ಶ್ರೀಮತಿ ಉಷಾ ದೇಸಾಯಿ, ರಾಯಚೂರು

ಪ್ರೊ। ವಸಂತ ಕುಷ್ಟಗಿ, ಗುಲ್ಬರ್ಗ

ಶ್ರೀ ಬಿ. ರಾಜಶೇಖರಪ್ಪ, ಚಿತ್ರದುರ್ಗ

ಡಾ। ಬಿ. ನಂಜುಂಡಸ್ವಾಮಿ, ತುಮಕೂರು

ಡಾ। ಶ್ರೀನಿವಾಸ ಕೆ. ಹಾವನೂರು, ಪುಣೆ

ಡಾ। ಎಸ್. ಕೆ. ಕೊಪ್ಪಾ, ಇಂಡಿ

ಡಾ। ಜ್ಯೋತಿಬಾಯಿ, ಬೆಂಗಳೂರು



ಡಾ। ಅ. ಸುಂದರ

ಸಮ್ಮೇಳನದ ಅಧ್ಯಕ್ಷರು

ಚಿತ್ರ : ಕೆ. ಎಲ್. ರಾಜಶೇಖರ್

# ಪರಿವಿಡಿ

## ಕರ್ನಾಟಕ ಇತಿಹಾಸ ಅಕಾದೆಮಿ

ಬೆಂಗಳೂರು

## ಇತಿಹಾಸ ಪ್ರೇಮಿಗಳಿಗೆ ಕರೆ

# 'ಐತಿಹಾಸಿಕ ಪರಂಪರೆ ಉಳಿಸಿ'

ಕರ್ನಾಟಕದಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಎಂಬ ಜನಜಾಗೃತಿ ಚಳವಳಿ ನಡೆಸಲು ಕರ್ನಾಟಕ ಇತಿಹಾಸ ಅಕಾದೆಮಿ ಯತ್ನಿಸುತ್ತಿದೆ. ಪ್ರಾಚೀನ ಕೋಟೆಗಳು, ಕಟ್ಟಡಗಳು, ದೇವಾಲಯಗಳು, ಮಸೀದಿಗಳು, ಇಗರ್ಜಿ(ಚರ್ಚು)ಗಳು, ಶಾಸನಗಳು, ವೀರಗಲ್ಲು ಮುಂತಾದ ಸ್ಮಾರಕಶಿಲೆಗಳು, ತಾಮ್ರಪಟಗಳು, ತಾಳೆಗರಿಯ ಹೊತ್ತಿಗೆಗಳು, ಐತಿಹಾಸಿಕ ದಾಖಲೆಗಳಾಗಬಲ್ಲ ಕಾಗದಪತ್ರಗಳು, ನಾಣ್ಯಗಳು, ಕಲಾಕೃತಿಗಳು (ಶಿಲ್ಪ ಕರ–ಕುಶಲ ಕಲೆಯ ವಸ್ತುಗಳು, ವರ್ಣಚಿತ್ರಗಳು), ಆಯುಧಗಳು ಮುಂತಾದ ಪ್ರಾಚೀನ ವಸ್ತುಗಳ ರಕ್ಷಣೆಗಾಗಿ ಪ್ರಚಾರ ಮಾಡುವುದು ಈ ಚಳವಳಿಯ ಉದ್ದೇಶ.

### ಚಟುವಟಿಕೆಯ ಸ್ವರೂಪ

ಪ್ರಾಚೀನ ವಸ್ತು ಮತ್ತು ಕಲಾಕೃತಿಗಳ (ಯಾಂಟಿಕ್ವಿಟೀಸ್) ನೋಂದಾವಣೆಗೆ ಪ್ರೇರಣೆ ನೀಡುವುದು.

ಪ್ರಾಚೀನ ಶಾಸನ, ಪ್ರತಿಮೆ, ಸ್ಮಾರಕಶಿಲೆಗಳ ರಕ್ಷಣೆಯ ಅವಶ್ಯಕತೆಯ ಬಗೆಗೆ ಅವುಗಳ ಪರಿಸರದ ಬಗೆಗೆ ಜನರಿಗೆ ತಿಳುವಳಿಕೆ ನೀಡುವುದು.

ಪ್ರಾಚೀನ ಕಟ್ಟಡಗಳ ನಾಶ, ದುರುಪಯೋಗ, ಅವುಗಳ ಪರಿಸರದ ಮೇಲೆ ಒತ್ತುವರಿ ನಡೆಸುವುದರ ವಿರುದ್ಧ ಧ್ವನಿಯೆತ್ತುವುದು (ಪ್ರಚಾರ, ಸರಕಾರಕ್ಕೆ ಬರೆಯುವುದು, ಪತ್ರಿಕೆಗಳಿಗೆ ಬರೆಯುವುದು).

ಓಲೆಗರಿಗಳ ಅಸ್ತಿತ್ವದ ಬಗೆಗೆ ಅಧಿಕೃತ ಸಂಗ್ರಾಹಕರಿಗೆ (ಸಾಹಿತ್ಯ ಪರಿಷತ್ತು, ವಿಶ್ವವಿದ್ಯಾಲಯಗಳ ಸಂಬಂಧಿಸಿದ ಶಾಖೆಗಳು) ಮಾಹಿತಿ ನೀಡುವುದು. ಐತಿಹಾಸಿಕ ಮಹತ್ವದ ಕಾಗದ ಪತ್ರಗಳ ಬಗೆಗೆ ರಾಜ್ಯ ಪತ್ರಾಗಾರಕ್ಕೆ ಮಾಹಿತಿ ನೀಡುವುದು.

ಅಧ್ಯಾಪಕರು, ವಿದ್ಯಾರ್ಥಿಗಳು, ಬುದ್ಧಿಜೀವಿಗಳು ಈ ಚಟುವಟಿಕೆಯಲ್ಲಿ ವಿಶೇಷವಾಗಿ ಪಾಲುಗೊಳ್ಳಲು ಅಕಾದೆಮಿ ಕರೆ ನೀಡುತ್ತದೆ.



ಶ್ರೀ ಶಿವರಾತ್ರೀಶ್ವರ ದೇಶಿಕೇಂದ್ರ ಮಹಾಸ್ವಾಮಿಗಳು ಸುತ್ತೂರು




ಮೈಸೂರಿನ ಸಮ್ಮೇಳನದ ಸ್ಥಳೀಯ ಕಾರ್ಯದರ್ಶಿ ಶ್ರೀ ಪಿ. ಎಂ. ಚನ್ನಬಸವಣ್ಣನವರಿಂದ ಸ್ವಾಗತ




ಮೈಸೂರು ಮೇಯರ್ ಶ್ರೀ ಧೃವಕುಮಾರ್ ಅವರಿಂದ ಪ್ರಾಸ್ತಾವಿಕ



ಕನ್ನಡ ಮತ್ತು ಸಂಸ್ಕೃತಿ ಇಲಾಖಾ ಮಾನ್ಯ ಸಚಿವ ಶ್ರೀ ವಿಶ್ವನಾಥ್ ಅವರಿಂದ ಉದ್ಘಾಟನೆ



ಪುರಾತತ್ತ್ವ ಇಲಾಖೆ ಸಂಘಟಿಸಿದ್ದ ವಸ್ತು ಪ್ರದರ್ಶನ ಉದ್ಘಾಟನೆ. ಇಲಾಖಾ ನಿರ್ದೇಶಕ
ಡಾ। ಡಿ. ವಿ. ದೇವರಾಜ್‌ರಿಂದ ವಿವರಣೆ




ಪುಸ್ತಕದ ಬಿಡುಗಡೆ ಪ್ರೊ। ಷೇಕ್ ಅಲಿ ಅವರಿಂದ



ಸಮಾರಂಭದಲ್ಲಿ ಪ್ರೇಕ್ಷಕರು



ಪಿಎಚ್.ಡಿ. ಪಡೆದ ಸದಸ್ಯರಿಗೆ ಸನ್ಮಾನ




ಪ್ರೊ। ದೇ. ಜವರೇಗೌಡ ಅವರಿಂದ ಮುಕ್ತಾಯ ಭಾಷಣ




ಕಾರ್ಯದರ್ಶಿಗಳಾದ ಡಾ। ಎಚ್. ಆರ್. ರಘುನಾಥಭಟ್ ಅವರಿಂದ ವಂದನಾರ್ಪಣೆ



ಸೂಕ್ಷ್ಮ ಶಿಲಾಯುಧಗಳು ಮೂಗನಾಯಕನ ಕೋಟೆ
ಪು. ೧–೨



ಹೂಜಿಗಲ್ಲಿನ ಸಮಾಧಿಯೊಂದರ ಸೀಳುನೋಟ
ಪು. ೩–೫



ಹೂಜಿಗಲ್ಲಿನಲ್ಲಿಯ ಜೈನಶಾಸನದ ಗುಂಡು










1. ಚಲುವನಹಳ್ಳಿ ಗವಿಮಠ ಬಳಿಯ ಗುಹೆ ಮತ್ತು ಅದರಲ್ಲಿನ ಚಿತ್ರಗಳು ಪು. ೬–೮
2. ತಲಕಾಡಿನ ಉತ್ಖನನದಲ್ಲಿ ಜೈನಬಸದಿ ಪು. ೯–೧೪
3. ಅದೇ ಜೈನಬಸದಿಯ ಗರ್ಭಗೃಹ ಪು. ೧೩೪–೧೩೭










1. ಅಕ್ಕನಬಸದಿಯ ಶಾಸನ ಪು. ೨೮
2. ಹಳೇಬೆಳಗೊಳದ ಶಾಸನ ಪು. ೨೫
3. ಶ್ರವಣಬೆಳಗೊಳದ ಎರಡು ಕಟ್ಟೆ ಬಸದಿಯ ಶಾಸನ ಪು. ೨೭







1. ಸಂಗಳದ ಮಿಥುನಶಿಲ್ಪದ ಪುರುಷ ಪು. ೬೯ ರಿಂದ ೭೪
2. ಮಿಥುನಶಿಲ್ಪದ ಸ್ತ್ರೀ
3. ಸಿದ್ದೇಶ್ವರ ದೇವಾಲಯ, ಗೇಣಸಿನ ಕುಣಿ













1. ಲಕ್ಕವಳ್ಳಿ ವೀರಭದ್ರದೇವಾಲಯದ ರೇಖಾಚಿತ್ರ ಪು. ೭೯ ರಿಂದ ೭೪

2. ಉಳವಿ, ಮಿಥಿನಶಿಲ್ಪ

3 4 5. ಲಕ್ಕವಳ್ಳಿ ವೀರಭದ್ರದೇವಾಲಯದ ಕಂಬಗಳು

6. ಗೆಣಸಿನ ಕುಣಿ ಸಿದ್ದೇಶ್ವರ ದೇವಾಲಯದ ಕಂಬ













1. ಗೋಸಾಸ ಕಂಬ, ಹನುಮನಹಳ್ಳಿ ಪು. ೮೦
2. ಗೋಸಾಸ ಕಂಬಗಳು, ಹಿರೇಮಾಗನೂರು ಪು. ೮೧
3. ವಿಷ್ಣು ಶಿಲ್ಪ, ಅಬ್ಬಲೂರು ಪು. ೭೯
4. ಜಿನಶಿಲ್ಪ, ದೇವಗಿರಿ ಪು. ೮೦









1. ಮಹಿಷಮರ್ದಿನಿ, ಸಿಡೇನೂರು ಪು. ೭೮
2. ಮಹಿಷಮರ್ದಿನಿ, ಹಳೇರಿತ್ತಿ ಪು. ೭೮
3. ವೀರಗಲ್ಲು, ಮಾಸಣಗಿ ಪು. ೮೫
4. ವೀರಗಲ್ಲು, ಅರಳೀಕಟ್ಟೆ ಪು. ೮೫







1. ಕೂಡಲದ ಅಪೂರ್ವಲಿಂಗ ಪುಟ ೧೦೦
2.3. ನಾಯಕನ ಹಟ್ಟಿಯ ಒಳಮಠದ ಗಾರೆಶಿಲ್ಪಗಳು ಪು. ೧೦೨–೧೦೪








1. ಪಂಚತಂತ್ರದ ಅತಿಲೋಭಿಯಾದ ನರಿಯ ಕಥೆ, ಬಳ್ಳಿಗಾವೆ ಪು. ೧೦೮
2. ಬ್ರಾಹ್ಮಣ, ಏಡಿ ಮತ್ತು ಕಾಗೆಕಥೆ, ಬಳ್ಳಿಗಾವೆ ಪು. ೧೦೮
3. ಬ್ರಾಹ್ಮಣ–ಕಳ್ಳ–ಬ್ರಹ್ಮರಾಕ್ಷಸನ ಕಥೆ, ಬಳ್ಳಿಗಾವೆ ಪು. ೧೧೦



1

2

1. ಕೆಳದಿ ರಾಣಿ ವೀರಮ್ಮಾಜಿ ಸಮಾಧಿ, ಉಜ್ಜಿನಿ ಪು. ೧೫೨
2. ಸಮಾಧಿಯ ಶಾಸನ, ಉಜ್ಜನಿ ಪು. ೧೫೩









1. ಕೊಲ್ಲೀರೆ ಕೈಮಡ, ಅಮ್ಮತ್ತಿ ಪು. ೨೨೩
2. ಹಾಲೇರಿ ಅರಸರ ಪನ್ಯತ್ ಅರಮನೆ, ಅಪ್ಪಂಗಳ ಪು. ೨೨೩
3. ತೈಲಪನ್ಯದ ಭದ್ರಕಾಳಿದೇವಾಲಯ ಪು. ೨೨೩
4. ಅಮೃತಾಪುರದ ಹೊಯ್ಸಳರ ಭೂಮಾಪನ ಗಳೆ ಪು. ೨೪೫
5. ಅಲ್ಲೇ ದ್ವಿಬಾಹು ಗಣೇಶಾನಿ ಪು. ೨೪೭

ಸನ್ನತಿ ಸುತ್ತಮುತ್ತ

1. ಸೋಮೇಶ್ವರದೇವಾಲಯ 2. ಸೈಕಪ್ಪಸ್ವಾಮಿ ಸಮಾಧಿ 3. ಬುತ್ತಿ ಬಸವಣ್ಣ ದೇವಾಲಯ
4. ಚಂದ್ರಲಾಂಬದೇವಾಲಯ 5. ದುರ್ಗಾದೇವಾಲಯ




ಸನ್ನತಿ ಕೋಟೆ ಗೋಡೆಯ ಅಡ್ಡಕೊಯ್ತ ಪು. ೧೫




ಮೈಸೂರಿನ ಕೋಟೆ ಮತ್ತು ನಗರ ಪು. ೪೧



ಆಯುಧಪುರುಷ ಸುದರ್ಶನ ಪು. ೧೧೩



ಸುದರ್ಶನ ನರಸಿಂಹ ಪು. ೧೧೨




ತಲಕಾಡಿನ ಜೈನಬಸದಿ ಕ್ರಿ. ಶ. ಸು. ೭ನೇ ಶತಮಾನ ಮೊದಲಹಂತ




0 1 2 3 4 5
ಮೀ. ಗಳಲ್ಲಿ

ಗೋಡೆ
ಇಟ್ಟಿಗೆಯ ನೆಲಹಾಸು
ಅಧಿಷ್ಠಾನ

9.40
10.00
11.60
21.00
16.70
26.00

MSKM

ತಲಕಾಡಿನ ಜೈನಬಸದಿ ಕ್ರಿ. ಶ. ಸು. ೧೧ನೆಯ ಶತಮಾನ ಎರಡನೇಯ ಹಂತ




ತಲಕಾಡಿನ ಜೈನಬಸದಿಯ ಉತ್ಖನನದ ನಕ್ಷೆ





The Palace,
Mysore.

12-5-'41

My dear Sir Mirza Ismail,

I have already told you in person with what great regret I have received the intimation conveyed in your note of the 7th instant that you wish to withdraw from the office which you have filled with such conspicuous ability since you took it up in May 1926.

I fully realise how deeply attached you were to my late uncle and how you have been feeling ever since his death how difficult it was to carry on without his constant counsel and support.

I am grateful to you that you have continued your great services to the State under these conditions for so many months.

I need hardly say that I shall do everything I can to meet your wishes in respect of the matters referred to in your note.

Yours sincerely,

Jaya Chamaraja Wadiyar

ಮಿರ್ಜಾ ಅವರಿಗೆ ಜಯಚಾಮರಾಜೇಂದ್ರರು ಬರೆದ ಪತ್ರ ಪು. ೨೦೩

New Delhi
3. 12. 46

My dear Sir Mirza

Who can question and no wonder Sir Arthur Lothian complimented you on your capacity for friendliness? Otherwise how could you have tolerated me and thought kindly of me in spite of my — maybe involuntary — churlishness in not being at home on both the occasions you tried to find me and in being too late when I tried to see you at the Hyderabad Guest House?

I join Sir Arthur Lothian ~~and~~ in considering it a piece of good luck & wisdom that H.E.H. has you to guide the affairs of the State.

Yours affectionately

C Rajagopalachari

How I wish I had an Indian State to look after where there is [illegible] no democracy and no committees & other hurdles to cross over before you could do a single useful thing!

ಸಿ. ರಾಜಗೋಪಾಲಾಚಾರಿಯವರು ಮಿರ್ಜಾ ಅವರಿಗೆ ಬರೆದ ಪತ್ರ ಪು. ೨೦೪

























ಗಂಡಸುಗೂ ಸೀರೆ ಪು. ೨೪೨




# The Mysore Vrittanta Bodhini

OR

# NEWS RECORDER.

# ಮೈಸೂರ ವೃತ್ತಾಂತ ಬೋಧಿನಿ.

PUBLISHED EVERY SATURDAY UNDER THE PATRONAGE OF HIS HIGHNESS THE MAHA RAJAH OF MYSORE.

[VOL. 4 No. 9] BANGALORE —SATURDAY. AUGUST 2, 1862. { SUBSCRIPTION EIGHT ANNAS PER MONTH OR SIX RUPEES PER ANNUM }

ಪು.೪] ಈಪತ್ರಿಕೆ ಶ್ರೀಮನ್ಮಹಾರಾಜಾಸ್ವಾಮಿಗಳವರ ಪ್ರೋತ್ಸಹನೆಯಿಂದ ನಿರ್ಮಿಸಲ್ಪಟ್ಟು ಪ್ರತಿಶನಿವಾರದಲ್ಲೂ ಪ್ರಕಟಿಸಲ್ಪಡುತ್ತದೆ [ಸಂಚಿಕೆ




## MAIL COACH AND CARRYING COMPANY.

A Bullock Coach will leave the Mail Coach office, Choolay every Monday and Friday Morning at 10 o'clock. arriving at Tripator in 24 Hours. The coach will stop at Shoolaghery for 2 or 3 Hours to allow Passengers to take Represhment.

Charge

Rs 3. 8. 0. for each person with 20 lb. Luggage free of charge.

Bangalore 17th July. 1862.

## NOTIFICATION.

An auction sale of about 7000 maunds of Sandalwood will take place at Denkin-Cotta on the 1st September 1862 on account of Government.

Terms of Sale will appear in the Salem *Gazette*.—Parties requiring further information are requested to address the Assistant conservator of Forests Salem.

(Signed) M. OUCHTERLONY
*Assistant Conservator of Forests.*

Salem
23rd June 1862. }

ಪ್ರಕಟನೆ.

ಮೈಸೂರು ಧೊರೆಗಳ ಶೀಮೆಯ ರಾಜ್ಯಕಾರದ ಕಮೀಷನರವರು.

ದುಂದುಭಿನಾಮ ಸಂವತ್ಸರದ ಆಷಾಢ ಶುದ್ಧ ೧೨ ಲ್ಲು ಸಮಸ್ತಜನಗಳಿಗೂ ತಿಳಿಯತಕ್ಕಬಗ್ಯೆ ಬರಶಿ ಕಳುಹಿಸಿದ ಯಿಸ್ತಿಹಾರ್ ನಾಮೆ ಅದಾಗಿ-

ಮೈಸೂರಲ್ಲಿಯಿರುವ ಅಷ್ಟಗ್ರಾಮ ಕುಕಡೀ ಸೂಪ್ರಿಂಟೆಂಡೆಂಟ್ ಸಾಹೆಬರ ಖಜಾನೆಯಲ್ಲಿ ಶಿಲ್ ಕ್ ಉಳದುಯಿರತಕ್ಕ (೪೦.೦೦೦೦) ನಾಲ್ಕುಲಕ್ಷ ರೂಪಾಯಿಗಳಿಗೆ ಸರ್ಕಾರ ಮಜಕೂರ್ ಅಕ್ಟೋಬರ್ ಆಖೈರ್ ವರಿಗೆ ಬಿಲ್ಲುಗಳು ಕೊಡಲ್ಪಡುತ್ತೆ- ಆದ್ದರಿಂದ ಖಾಯಿಷ್ ಪಡತಕ್ಕಂತಾವರು ಕಾಯಿದೇಶಿರ್ ಬೇಕಾದಷ್ಟು ಐವಜು ಹುಜೂರ್ ಖಜಾನೆಯಲ್ಲಿ ದಾಖಲೀ ಮಾಡಿ ಬಿಲ್ಲುಗಳು ತೆಗದುಕೊಳ್ಳಬಹುದು- ಬ ತಾರೀಖು ೧೯ನೇ ಮಾಹೇ ಜೂಲೈ ಸನ್ ೧೮೬೨ನೇಯಿಸವಿ ದರ್ ಜಾಗಾ ಬೆಂಗಳೂರ್.

By Order
TREDWAY G. CLARKE
*Asst. Commr. in charge of the Commrs. Treasury.*

ಪ್ರಕಟನೆ

ಮೇಯಿಲ್ ಕೋಚೀಅಂಡ್ ಕ್ಯಾರೀಯಿಂಗ್ ಕಂಪಿನೀಯವರು ಇದರಿಂದ ಸಮಸ್ತಜನಗಳಿಗೂ ತಿಳಿಯಪಡಿಸುವದೇನಂದರೆ— ಬೆಂಗಳೂರು ದಂಡಿಗೆಸೇರಿದ ಚೂಳಿಯಲ್ಲಿ ಸ್ಥಾಪಿಸಲ್ಪಟ್ಟಿರುವ ಸದರಹು ನಮ್ಮ ಕಾರ್ಖಾನೇಯಿಂದ- ಪ್ರತಿ ಸೋಮವಾರದಬೆಳಿಗ್ಗೆ, ಶುಕ್ರವಾರದಬೆಳಿಗ್ಗೆ, ಸಹ ೧೦ ಘಂಟೆಗೆ ಸರಿಯಾಗಿ ಯೆತ್ತುಗಳು ಕಟ್ಟಿದ ಟಪಾಲ್ ಕೋಚ್ ಬಂಡಿಗಳು ಬಿಡಲ್ಪಟ್ಟು ೨೪ ಘಂಟೆಗಳ ಹೊತ್ತಿನೊಳಗಾಗಿ ತಿರುಪತ್ತೂರು ಸೇರುತ್ತೆ. ಪ್ರಯಾಣಸ್ಥರ ಆಯಾಸಪರಿಹಾರಾರ್ಥವಾಗಿ ೨ ಅಥವಾ ೩ ಘಂಟೆಗಳಕಾಲ ಶೂಳಗಿರಿಯಲ್ಲಿ ಬಂಡಿನಿಲ್ಲಿಸಲ್ಪಟ್ಟೀತು. ಇದರರಿವಾಜು ಒಬ್ಬಮನುಷ್ಯನು ಮುವ್ವತ್ತುನಾಲ್ಕು ಶೇರು ತೂಕದ ಸಾಮಾನ್ ಸಹಿತವಾಗಿ ಹೋಗತಕ್ಕಬಗ್ಗೆ ೩ ರೂಪಾಯಿ ೮ ಆಣೆ ಕೊಡಬೇಕು.

ಸನ್ ೧೮೬೨ ನೇಯಿಸವಿಜೂಲೈ ೧೭ ನೇತಾರೀಖು ಬೆಂಗಳೂರು }

ಇಸ್ತಿಹಾರು-

ಇದರಿಂದ ಇಜಾರೇಮಾಡತಕ್ಕವರಿಗೆ ತಿಳಿಯಪಡಿಸುವದೇನಂದರೆ ಕೆಲವು ಕಚ್ಚೇರಿಗಳು ಕಟ್ಟತಕ್ಕಬಗ್ಗೆ ತ್ಯಾಗದಮರಗಳನ್ನೂ ಮತ್ತು ಸುಣ್ಣಕಲ್ಲುಗಳನ್ನೂ ಸರಬರಾಯಿಮಾಡತಕ್ಕದ್ದಕ್ಕೆ- ಇಷ್ಟವಿದ್ದವರು ದರಖಾಸ್ತುಕೊಟ್ಟು ಸದರೀ ಕಚ್ಚೇರಿಗಳು ಕಟ್ಟತಕ್ಕ ಜಾಗಾಬಳೀ ಠಂಪು ಹಾಕಬೇಕಾಗುತ್ತೆ-

ಇನ್ನೂ ಇದಕ್ಕಾಗಿ ಬೇಕಾಗಿರುವ ತಪಶೀಲ್ ಬೆಂಗಳೂರು ಡಿವಿಜನ್ ಎಗ್ಜಿಕ್ಯೂಟಿವ್ ಇಂಜನೀರ್ ಆಫೀಸ್ನಲ್ಲಿ ಶಿಕ್ಕೀತಾದವಿವರ ತಿಳಿಯುವರು. ಬ ತಾರೀಖು ೧೮ನೇಮಾಹೆಜೂಲೈ ಸನ್ ೧೮೬೨ನೇಯಿಸವಿ ದರಜಾಗಾ ಬೆಂಗಳೂರು

ಮೋಹಿಂಮಯ್ಯ-ಮು- R. C. DOBBS.

# ಕರ್ನಾಟಕ ಇತಿಹಾಸ ಅಕಾದೆಮಿಯ ಏಳನೆಯ ಸಮ್ಮೇಳನದಲ್ಲಿ ಡಾ। ಅ. ಸುಂದರ ಅವರು ಮಾಡಿದ ಅಧ್ಯಕ್ಷ ಭಾಷಣ

ಮಾನ್ಯರೇ,

ಇದುವರೆಗಿನ ನನ್ನ ವೈಯಕ್ತಿಕ ಪರಿಶ್ರಮ ಮತ್ತು ಅಧ್ಯಯನದ ಗತಿಯಿಂದ ನನ್ನ ಇಂದಿನ ಚಿಂತನೆಯಲ್ಲಿ ಪುರಾತತ್ತ್ವ ಸಂಶೋಧನೆಯ ವಿಷಯವೇ ಪ್ರಧಾನವಾಗಿದೆ. ಪ್ರಾಚೀನ, ಮಧ್ಯಯುಗೀನ ಹಾಗೂ ಅಸಂಖ್ಯಾತ ದಾಖಲೆ ಪತ್ರಗಳೊಡನೆ ಆಧುನಿಕ ಕಾಲದ ಕರ್ನಾಟಕ ಇತಿಹಾಸದ ಪುನರ್ರಚನೆಗೆ ಪುರಾತತ್ತ್ವ ಆಕರವೇ ಬಹು ಮುಖ್ಯವಾದುದು ಎಂಬುದು ತಮಗೆಲ್ಲ ತಿಳಿದಿರುವ ವಿಷಯವು. ಈ ಕ್ಷೇತ್ರದಲ್ಲಿ ತೋರಿಬರುವ ಅಧ್ಯಯನ ಪ್ರಗತಿ, ಸಮಸ್ಯೆ, ಪರಿಸ್ಥಿತಿ ಸ್ವಲ್ಪ ಹೆಚ್ಚು ಕಡಿಮೆ ಇತರ ಪ್ರಕಾರದ ಆಕರಗಳ ಅಧ್ಯಯನದಲ್ಲೂ ಇವೆ. ತಮ್ಮಿಂದ ಮಾರ್ಗದರ್ಶನ, ತಿದ್ದುಪಡಿ ಸಲಹೆ ಸೂಚನೆಗಳನ್ನು ಪಡೆಯುವದಕ್ಕೋಸ್ಕರ ತಮ್ಮೊಡನೆ ಹಂಚಿಕೊಳ್ಳಬೇಕೆಂದಿರುವ ನನ್ನ ಇಂದಿನ ಚಿಂತನೆಗಳಲ್ಲಿ ಎರಡು ಮುಖ್ಯಾಂಶಗಳಿವೆ. ಮೊದಲನೆಯದಾಗಿ ಇಂದಿನಿಂದ ಮೂರು ದಿನಗಳ ಪರ್ಯಂತ ನಡೆಯುವ ಏಳನೇ ವಾರ್ಷಿಕ ಸಮ್ಮೇಳನವು ಮೈಸೂರಿನಲ್ಲಿ ನಡೆಯುತ್ತಿರುವುದರಿಂದ ಮೈಸೂರು ಜಿಲ್ಲಾ ಪ್ರದೇಶದ ಪುರಾತತ್ತ್ವ ಸಂಶೋಧನೆಗಳನ್ನು ಸ್ವಲ್ಪ ಹೆಚ್ಚು ಗಮನಿಸಲಾಗಿದೆ. ಎರಡನೆಯದಾಗಿ, ಹಾಗೆಯೇ ಮುಂದುವರೆದು ಕರ್ನಾಟಕದಲ್ಲಿಯ ಇತ್ತೀಚಿನ ಪುರಾತತ್ತ್ವ ಸಂಶೋಧನೆಯ ಮುಖ್ಯಾಂಶಗಳು ಮತ್ತು ಅವುಗಳ ಮಹತ್ತ್ವ, ಇದರಿಂದ ಇನ್ನೂ ಮುಂದೆ ಆಗಬೇಕಾದ ಸಂಶೋಧನೆಯ ಕ್ಷೇತ್ರಗಳು ಮತ್ತು ಈ ಪುರಾತತ್ತ್ವ ಸಂಶೋಧನೆಯ ತೀವ್ರತೆ ಮತ್ತು ಕ್ರಮಗಳ ಬಗ್ಗೆ ವಿವೇಚಿಸಿದ್ದೇನೆ.

ತಮ್ಮೆಲ್ಲರಿಗೂ ತಿಳಿದಂತೆ ಪುರಾತತ್ತ್ವ ಅಧ್ಯಯನದಲ್ಲಿ ಎರಡು ಪ್ರಮುಖ ಭಾಗಗಳಿವೆ. ಒಂದು ಪ್ರಾಗಿತಿಹಾಸದ ಪುರಾತತ್ತ್ವ, ಮತ್ತೊಂದು ಇತಿಹಾಸದ ಪುರಾತತ್ತ್ವ. ಕರ್ನಾಟಕದಲ್ಲಿಯ ಪ್ರಾಗಿತಿಹಾಸಕ್ಕೆ ಸಂಬಂಧಪಟ್ಟ ಪುರಾತತ್ತ್ವ ಶೋಧನೆಯ ಆಧಾರದ ಮೇಲೆ ಈ ಪ್ರದೇಶದ ಮಾನವನ ಅತೀ ದೀರ್ಘ ಕಾಲದ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಅನುಕ್ರಮವಾಗಿ ಆರು ಘಟ್ಟಗಳನ್ನು ಗುರುತಿಸಲಾಗಿದೆ. ಅವುಗಳು – (೧) ಇಂದಿನಿಂದ ಕನಿಷ್ಠ ಎರಡು ಲಕ್ಷದಿಂದ ಐದು ಲಕ್ಷ ವರ್ಷಗಳ ಹಿಂದಿನ ಆದಿ ಹಳೆಯ ಶಿಲಾಯುಗ, (೨) ಸುಮಾರು ೪೦,೦೦೦ ದಿಂದ ೧,೦೦,೦೦೦ ವರ್ಷಗಳ ಹಿಂದಿನ ಮಧ್ಯ ಹಳೆಯ ಶಿಲಾಯುಗ, (೩) ೧೦,೦೦೦ ರಿಂದ ೪೦,೦೦೦ ವರ್ಷಗಳ ಹಿಂದಿನ ಅಂತ್ಯ ಹಳೆಯ ಶಿಲಾಯುಗ, (೪) ಸುಮಾರು ಕ್ರಿ. ಪೂ. ೧೦,೦೦೦ – ೭೦೦೦ ದಿಂದ ೩೦೦೦ ವರ್ಷಗಳ ಹಿಂದಿನ ಸೂಕ್ಷ್ಮ ಶಿಲಾಯುಗ, (೫) ಸುಮಾರು ಕ್ರಿ. ಪೂ. ೨೨೦೦ ರಿಂದ ೮೦೦ರ ವರೆಗಿನ ನೂತನ ಇಲ್ಲವೇ ಶಿಲಾ ತಾಮ್ರಯುಗ ಹಂತದಲ್ಲಿಯ ನೂತನ ಶಿಲಾಯುಗ ಇಲ್ಲವೇ ಶಿಲಾ ತಾಮ್ರ ಯುಗ ಮತ್ತು (೬) ಕ್ರಿ. ಪೂ. ೧೨೦೦ ರಿಂದ ೨೦೦ರ ವರೆಗಿನ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿ. ಈ ಕೊನೆಯ ಘಟ್ಟದಿಂದ ಇತಿಹಾಸ ಕಾಲದ ಮೌರ್ಯ–ಶಾತವಾಹನ, ಪುನ್ನಾಟ ಆದಿ ಕದಂಬ–ಗಂಗ, ಬಾದಾಮಿ ಚಾಲುಕ್ಯ ಮೊದಲಾಗಿ ಇತ್ತೀಚಿನ ಮೈಸೂರಿನ ಒಡೆಯರ–ಹೈದರಾಬಾದ್ ನಿಜಾಮರ–ಬೊಂಬಾಯಿ ಪ್ರಾಂತದ ಕರ್ನಾಟಕದ ತನಕ ಕೆಲವು ಪ್ರಮುಖ ಘಟ್ಟಗಳನ್ನು ಗುರುತಿಸಲಾಗಿದೆ. ಹಿಂದಿನ ಮೈಸೂರು ದೇಶದ ಅರಸರಾದ ಚಿಕ್ಕದೇವರಾಜ ಒಡೆಯರ (೧೬೭೩–೧೭೦೪) ಕಾಲದಿಂದ ಅವರ ಇಚ್ಛೆಯಂತೆ ದೇವಾಲಯಗಳಲ್ಲಿ ಪರಂಪರಾನುಗತವಾಗಿ ನಡೆದು ಬಂದ ಪೂಜಾ ವಿಧಾನಗಳನ್ನು, ಆಚರಿಸುತ್ತಿದ್ದ ಹಬ್ಬ ಹುಣ್ಣಿಮೆಗಳನ್ನು ಸರಿಯಾಗಿ ತಿಳಿದುಕೊಂಡು ಅವುಗಳನ್ನೂ ಮುಂದುವರೆಸುವ ಉದ್ದೇಶದಿಂದ ಪ್ರಾರಂಭಿಸಿದ ಶಾಸನಗಳ ಸರ್ವೇಕ್ಷಣೆಯನ್ನು ಮೊದಲು ಗಮನಿಸಬೇಕು. ನಿರ್ದಿಷ್ಟವಾಗಿ ೧೯ನೇ ಶತಮಾನದ ಮಧ್ಯದಿಂದ ಒಂದೊಂದು ಕಾಲದಲ್ಲಿ ಒಂದೊಂದು ಸಾಂಸ್ಕೃತಿಕ ಘಟ್ಟಕ್ಕೆ ಅಥವಾ ಘಟ್ಟಗಳಿಗೆ ಸಂಬಂಧಿಸಿದ ನೆಲೆ, ಅವಶೇಷಗಳು ಹಲವಾರು ನಿರ್ಮಿತಿಗಳು ಸಾವಿರಾರು ಶಾಸನಗಳು ಮೊದಲಾದವುಗಳನ್ನು ಆಕಸ್ಮಿಕವಾಗಿ ಹಾಗೂ ವ್ಯವಸ್ಥಿತ

ಅನ್ವೇಷಣೆಗಳಿಂದ ಅಲ್ಲೊಬ್ಬರು ಇಲ್ಲೊಬ್ಬರು ನೋಡಿ ಕುತೂಹಲದಿಂದ ಪರೀಕ್ಷಿಸಿ ಅವುಗಳನ್ನು ಬೆಳಕಿಗೆ ತಂದು ಪ್ರಕಟಿಸಿದರು. ಈ ವ್ಯಕ್ತಿಗಳ ಪರಿಶ್ರಮದ ಶೋಧನೆಗಳು ಕ್ರಮೇಣ ಕ್ರಮಬದ್ಧವಾದ ವೈಜ್ಞಾನಿಕ ಪುರಾತತ್ವ ಶೋಧನೆಗೆ ಮೂಲವಾದವು. ಅಂಥ ವ್ಯಕ್ತಿಗಳಲ್ಲಿ ಪ್ರಮುಖರಾದವರು ಕರ್ನಲ್ ಮೆಡೋಸ್ ಟೇಲರ್, ರಾಬರ್ಟ್ ಬ್ರೂಸ್ ಫುಟ್, ಕರ್ನಲ್ ಕೋಲ್, ಜೆ. ಎಫ್. ಫ್ಲೀಟ್, ಬಿ. ಎಲ್. ರೈಸ್, ಜೇಮ್ಸ್ ಬರ್ಜೆಸ್ ಮೊದಲಾದವರು. ೧೮೫೧–೬೦ರಲ್ಲಿ ಪ್ರಥಮವಾಗಿ ಕರ್ನಾಟಕದಲ್ಲಿ (ಗುಲಬರ್ಗಾ ಜಿಲ್ಲಾ ಪ್ರದೇಶ) ಬೃಹತ್ ಶಿಲಾ ಸಂಸ್ಕೃತಿಯ ನೆಲೆಗಳನ್ನು ಶೋಧಿಸಿದವರು ಕರ್ನಲ್ ಮೆಡೋಸ್ ಟೇಲರ್. ಇದೇ ಶತಮಾನದ ಉತ್ತರಾರ್ಧದಲ್ಲಿ ಆದಿ ಹಳೆಯ ಶಿಲಾಯುಗ, ನೂತನ ಶಿಲಾಯುಗ ಮತ್ತು ಬೃಹತ್‌ಶಿಲಾ ಸಂಸ್ಕೃತಿ ನೆಲೆಗಳನ್ನು ನೂತನ ಶಿಲಾಯುಗದ್ದೆಂದು ತರ್ಕಿಸಲಾದ ಕುತೂಹಲಕಾರಿ ದೊಡ್ಡ ದೊಡ್ಡ ಸಾಂಸ್ಕೃತಿಕ ಬೂದಿ ಗುಡ್ಡೆಗಳನ್ನು ಮಲಪ್ರಭಾ ನದಿ ದಂಡೆಯ ಮೇಲಿರುವ ಬ್ಯಾಡ ಮತ್ತು ಥಾಣಕ್ ಶಿರೂರ (ವಿಜಾಪುರ ಜಿಲ್ಲೆ), ಕಾವೇರಿ ನದಿ ದಂಡೆಯ ಮೇಲಿರುವ ತಿರುಮಕೂಡಲು ನರಸೀಪುರ ಮತ್ತು ಬಳ್ಳಾರಿ ಸಮೀಪ ತುಂಗಭದ್ರಾ ನದಿ ಪ್ರದೇಶದ ಸಂಗನಕಲ್ಲು, ಕುಡುತಿನಿ, ಕುಪ್ಪಗಲ್ಲು ಮೊದಲಾದ ಸ್ಥಳಗಳಲ್ಲಿ ಗುರುತಿಸಿದವರು ರಾಬರ್ಟ್ ಬ್ರೂಸ್ ಫುಟ್. ಬಿ. ಎಲ್. ರೈಸ್ ಅವರು ದಕ್ಷಿಣ ಕರ್ನಾಟಕದಲ್ಲಿ ಹಿಂದಿನ ಮೈಸೂರು ಸಂಸ್ಥಾನದ ಎಲ್ಲ ಜಿಲ್ಲೆಗಳಲ್ಲಿಯ ಶಾಸನಗಳನ್ನೂ, ವಿವಿಧ ಪ್ರಕಾರಗಳ ನಿರ್ಮಿತಿಗಳನ್ನೂ, ಫ್ಲೀಟ್ ಅವರು ಉತ್ತರ ಕರ್ನಾಟಕದ ಹಲವಾರು ಶಾಸನಗಳನ್ನು, ಜಾನಪದ ಗೀತೆಗಳನ್ನು, ಲಾವಣಿಗಳನ್ನು ಸಂಗ್ರಹಿಸಿದರು. ಕೋಲ್ ಅವರು ಕೊಡಗು, ಕೋಲಾರ ಪ್ರದೇಶಗಳಲ್ಲಿಯ ಬೃಹತ್ ಶಿಲಾ ಸಂಸ್ಕೃತಿ ನೆಲೆಗಳನ್ನು ಶೋಧಿಸಿದರು. ಇವರೆಲ್ಲರೂ ತಮ್ಮ ತಮ್ಮ ಅಧ್ಯಯನಗಳನ್ನು ಪ್ರಕಟಿಸಿ ಪುರಾತತ್ವ ಸಂಶೋಧನೆಯ ಗಟ್ಟಿ ತಳಪಾಯವನ್ನು ಹಾಕಿದರು.

ಅಲ್ಲಿಂದ ಮುಂದೆ ಡಾ। ಎಂ. ಎಚ್. ಕೃಷ್ಣರವರ ಚಂದ್ರವಳ್ಳಿ, ಬ್ರಹ್ಮಗಿರಿಯ ಅನ್ವೇಷಣೆ, ಉತ್ಖನನಗಳಿಂದ ಇಂದಿನ ಹಂಪಿ–ವಟಗಲ್–ತಲಕಾಡಿನಲ್ಲಿಯ ಪುರಾತತ್ವ ಸಂಶೋಧನೆ ಹಂತದವರೆಗೆ ವಿಶೇಷವಾಗಿ ಉತ್ಖನನ ಮತ್ತು ವಾಸ್ತುಶಿಲ್ಪ ಅಧ್ಯಯನಗಳಲ್ಲಿ ವೈಜ್ಞಾನಿಕ ವಿಧಾನಗಳ ಬಳಕೆ, ವೈಶಾಲ್ಯತೆ ಮತ್ತು ವ್ಯಾಪ್ತಿ ಗಣನೀಯ ಪ್ರಮಾಣದಲ್ಲಿ ಬೆಳೆದಿವೆ, ಬೆಳೆಯುತ್ತಲಿವೆ. ಮಾನವನ ಸಾಂಸ್ಕೃತಿಕ ಇತಿಹಾಸದ ಅಧ್ಯಯನವು ಬರು ಬರುತ್ತಾ ವಸ್ತುನಿಷ್ಠವಾಗಿಯೂ, ವೈಜ್ಞಾನಿಕವಾಗಿಯೂ, ಸೂಕ್ಷ್ಮವಾಗಿಯೂ ಪ್ರಗತಿ ಹೊಂದುತ್ತಿದೆ. ಅರ್ಥೈಸುವುದರಲ್ಲಿ ಯಾವುದೇ ರೀತಿಯ ವೈಪರೀತ್ಯಗಳಿಗೆ, ವಿರೋಧಾಭಾಸಗಳಿಗೆ, ಶುಷ್ಕ ತರ್ಕಕ್ಕೆ ಅವಕಾಶ ಕಡಿಮೆ.

ವಿಶೇಷವಾಗಿ ೧೯೪೭ರಿಂದ, ಆಸಕ್ತ ವ್ಯಕ್ತಿಗಳ, ತಜ್ಞರ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ, ವಿಶ್ವವಿದ್ಯಾಲಯಗಳ ಸಂಶೋಧನಾ ಸಂಸ್ಥೆಗಳ, ಸಂಶೋಧನ ವಿದ್ಯಾರ್ಥಿಗಳ ಶೋಧನೆಗಳಿಂದ ಕರ್ನಾಟಕದಲ್ಲಿ ಎಲ್ಲಾ ನದಿಗಳ ಬಯಲುಗಳಲ್ಲಿ, ಗುಡ್ಡ ಪ್ರದೇಶಗಳಲ್ಲಿ, ಕಡಲ ತೀರ–ಘಟ್ಟ ಪ್ರದೇಶಗಳಲ್ಲಿ ನೂರಾರು ಆದಿ, ಮಧ್ಯ ಮತ್ತು ಅಂತ್ಯ ಹಳೆಯ ಶಿಲಾಯುಗದ, ಸೂಕ್ಷ್ಮ ಶಿಲಾಯುಗದ, ನೂತನ ಶಿಲಾ ತಾಮ್ರ ಯುಗ–ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯ, ಇತಿಹಾಸ ನೆಲೆಗಳನ್ನು ಗುರುತಿಸಲಾಗಿದೆ. ಜೊತೆಗೆ ವಿವಿಧ ಪ್ರಕಾರಗಳ ನಿರ್ಮಿತಿಗಳು, ಮೂರ್ತಿ ಶಿಲ್ಪಗಳು, ಗವಿ ಹಾಗೂ ಇತರ ವರ್ಣಚಿತ್ರಗಳು, ನಾಣ್ಯಗಳು ಮೊದಲಾದವು ಬೆಳಕು ಕಂಡಿವೆ.

ಹಾಗೆಯೇ ಇತಿಹಾಸ, ಪುರಾತತ್ವ ಕ್ಷೇತ್ರಗಳಲ್ಲಿ ಕರ್ನಾಟಕದಲ್ಲಿ ಈಗಾಗಲೇ ೨೫೦೦೦ಕ್ಕೂ ಮಿಕ್ಕಿ ಶಾಸನಗಳು ಶೋಧವಾಗಿದ್ದರೂ, ಇದ್ದಕ್ಕಿದ್ದಂತೆ ಹೊಸ ಶೋಧನೆಗಳು ನಮ್ಮನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತವೆ, ಉದಾಹರಣೆಗೆ ದಕ್ಷಿಣ ಭಾರತದಲ್ಲಿಯೇ ಪ್ರಥಮ ಬಾರಿಗೆ ೧೯೯೧ರಲ್ಲಿ ಸನ್ನತಿಯಲ್ಲಿ ಮೌರ್ಯ ಚಕ್ರವರ್ತಿ ಅಶೋಕನ ೧೨ ಮತ್ತು ೧೪ ಪ್ರಧಾನ ಶಾಸನಗಳ ಜೊತೆಗೆ ಕಳಿಂಗ ಶಾಸನಗಳ ಪ್ರತಿಗಳ ಆಕಸ್ಮಿಕ ಶೋಧನೆ. ಮೈಸೂರು ಜಿಲ್ಲೆಯಿಂದ ಮಂಡ್ಯ ಜಿಲ್ಲೆಯನ್ನು ಹೊಸದಾಗಿ ರಚಿಸುವುದಕ್ಕೆ ಮುಂಚೆ ೧೭೬೫ ಶಾಸನಗಳು ಪ್ರಕಟವಾಗಿದ್ದವು. ಸುಮಾರು ೫೨ ವರ್ಷಗಳ ಹಿಂದೆ ಈ ಮಂಡ್ಯ ಜಿಲ್ಲೆಯಾದ ಮೇಲೆಯೂ ಉಳಿದ ಭಾಗದ ಪರಿಷ್ಕೃತ ಮೂರು ಸಂಪುಟಗಳಲ್ಲಿಯ ಶಾಸನಗಳ ಸಂಖ್ಯೆ ೨೩೮೫. ಇವುಗಳ ಸಮಗ್ರ ಸಾಂಸ್ಕೃತಿಕ ಅಧ್ಯಯನವಲ್ಲದೆ, ಪ್ರಾಚೀನ

ಆಡಳಿತ ಘಟಕಗಳ ಪ್ರದೇಶದ ಇಲ್ಲವೇ ಸಂಸ್ಕೃತಿಯ ಒಂದೊಂದು ಮುಖದ ಧಾರ್ಮಿಕ, ಆರ್ಥಿಕ–ಸಾಮಾಜಿಕ–ಶೈಕ್ಷಣಿಕ (ಅಗ್ರಹಾರಗಳೇ ಮೊದಲಾದವು) ರಾಜಕೀಯ ವಂಶಾವಳಿಗಳ ಉತ್ತಮ ಅಧ್ಯಯನಗಳು ದಿನೇ ದಿನೇ ಹೆಚ್ಚುತ್ತಿವೆ. ನಾಣ್ಯ ಅಧ್ಯಯನ ಮಾತ್ರ ತುಲನಾತ್ಮಕವಾಗಿ ಬಡವಾಗಿದೆ. ಡಾ। ಎಂ. ಎಚ್. ಕೃಷ್ಣ ಅವರ ನಂತರ ಡಾ। ಎ.ವಿ. ನರಸಿಂಹಮೂರ್ತಿಯವರು ಏಕೈಕ ವೀರರಾಗಿ ಈ ಕ್ಷೇತ್ರದಲ್ಲಿ ಪ್ರಶಂಸನೀಯವಾಗಿ ಸಾಗಿದ್ದಾರೆ. ಇವರ ಹಿಂದೆ ಮತ್ತೆ ಯಾರಾದರೂ ಮುಂದುವರೆಯುವುದಕ್ಕೆ ಬರುತ್ತಾರೆಯೋ ಕಾದು ನೋಡಬೇಕಾಗಿದೆ. ಶಾಸನಗಳು, ವಾಸ್ತು ಮೂರ್ತಿ ಶಿಲ್ಪಗಳು, ವರ್ಣಚಿತ್ರಗಳು, ಅಲ್ಪ ಪ್ರಮಾಣದಲ್ಲಿ ನಾಣ್ಯಗಳು, ಕೈಫಿಯತ್ತುಗಳು, ಮೋಡಿ ಹಾಗೂ ಇತರ ದಾಖಲೆ ಪತ್ರಗಳು, ಸಾಂಗತ್ಯ, ಲಾವಣಿ ಜಾನಪದಗಳು ಹೀಗೆ ಹಲವಾರು ಪ್ರಕಾರ ಆಕರಗಳ ಶೋಧನೆ ಮತ್ತು ಅಧ್ಯಯನಗಳು ಆಗಿವೆ, ಆಗುತ್ತಿಲಿವೆ. ಜೊತೆಗೆ ವಿಚಾರ ಸಂಕಿರಣಗಳ ಮೂಲಕ ಹಲವಾರು ಉಪಯುಕ್ತ ಗ್ರಂಥಗಳೂ ಪ್ರಕಟವಾಗಿವೆ.

ಪ್ರಾದೇಶಿಕ ಅನ್ವೇಷಣೆಗಳ ಜೊತೆಗೆ ಇದುವರೆಗೆ ಕರ್ನಾಟಕದಲ್ಲಿ ಎಲ್ಲ ಪ್ರಕಾರದ ನೆಲೆಗಳು ಸೇರಿದಂತೆ ಒಟ್ಟು ೩೧ ನೆಲೆಗಳನ್ನೂ ಹಂಪಿಯೊಂದನ್ನು ಬಿಟ್ಟು ಸಣ್ಣ ಪ್ರಮಾಣದಲ್ಲಿ ಅಂದರೆ ಊರ್ಧ್ವ ಕ್ರಮದ ಉತ್ಖನನ ಮಾಡಲಾಗಿದೆ. ಅವುಗಳಲ್ಲಿ ಆದಿ–ಅಂತ್ಯ ಹಳೆಯ ಶಿಲಾಯುಗದ ಕೇವಲ ೩ ನೆಲೆಗಳು, ನೂತನ/ಶಿಲಾ ತಾಮ್ರ ಯುಗದ ನೆಲೆಗಳು – ೧೨, ಬೂದಿಗುಡ್ಡೆ ನೆಲೆಗಳು – ೩, ಬೃಹತ್ ಶಿಲಾ ಕಲ್ಗೋರಿಗಳಿರುವ ನೆಲೆಗಳು – ೬, ಇತಿಹಾಸ ಕಾಲದ ನೆಲೆಗಳು – ೭, ಇದಲ್ಲದೆ ಮೂರು ಸ್ಥಳಗಳಲ್ಲಿಯ ಪ್ರಾಚೀನ ನೆಲೆಗಳನ್ನು ಪರೀಕ್ಷಕ ಉತ್ಖನನದ ಮೂಲಕ ಪರೀಕ್ಷಿಸಲಾಗಿದೆ. (ಕಿಣೆ ರಂಜೋಳ, ಮೆರಲಭಾವಿ ಮತ್ತು ಬೆನಕನಹಳ್ಳಿ).

ಈಗ ನಮ್ಮ ಮೈಸೂರು ಜಿಲ್ಲಾ ಪ್ರದೇಶದಲ್ಲಿಯ ಶೋಧನೆಗಳನ್ನು ಪರಿಶೀಲಿಸುವ. ೧೯೩೦ರಲ್ಲಿ ಶ್ರೀಪಾದರಾವ್ ಎಂಬ ಭೂ–ವಿಜ್ಞಾನಿಯು ಆದಿ ಹಳೆಯ ಶಿಲಾಯುಗದ ಕಲ್ಲಿನ ಉಪಕರಣಗಳನ್ನು ರಂಗನಾಥಪುರದಲ್ಲಿ ಕಾವೇರಿ ನದಿ ದಂಡೆ ಪ್ರದೇಶದಲ್ಲಿ ಶೋಧಿಸಿದರು. ಡಾ। ಬಿ. ಕೆ. ಗುರುರಾಜರಾವ್ ಮತ್ತು ಶಿವರುದ್ರಪ್ಪನವರು ತಲಕಾಡು ಪ್ರದೇಶದ ಪರಿಸರ ಮತ್ತು ಪುರಾತತ್ವ ಸ್ಥಿತಿಗತಿಗಳ ಅಧ್ಯಯನದಲ್ಲಿ ಈ ಪ್ರದೇಶದಲ್ಲಿ ಮಧ್ಯ–ಹಳೆಯ ಶಿಲಾಯುಗದ ಕಲ್ಲಿನ ಉಪಕರಣಗಳನ್ನು ಶೋಧಿಸಿದ್ದಾರೆ. ಅಷ್ಟೇ ಏಕೆ ಮೈಸೂರಿನಲ್ಲಿಯೇ ಈ ಸಂಸ್ಕೃತಿಯ ಉಪಕರಣಗಳನ್ನು ಕುವೆಂಪು ನಗರ ಪ್ರದೇಶದಲ್ಲಿಯೂ ಶೋಧಿಸಿದ್ದಾರೆ. ಸ್ವಲ್ಪ ಸಮಯದ ಹಿಂದೆ ಶ್ರೀರಂಗಪಟ್ಟಣದ ಹತ್ತಿರ ಸೂಕ್ಷ್ಮಶಿಲಾಯುಗ ಸಂಸ್ಕೃತಿಯ ಕಲ್ಲಿನ ಉಪಕರಣಗಳು ಸಿಕ್ಕ ಬಗ್ಗೆ ವೃತ್ತಪತ್ರಿಕೆಗಳಲ್ಲಿ ವರದಿಯಾಗಿತ್ತು. ಈಗ ನಡೆಯುತ್ತಿರುವ ತಲಕಾಡಿನ ಉತ್ಖನನ ಪ್ರದೇಶದಲ್ಲಿಯೂ ನೂತನ ಶಿಲಾಯುಗಕ್ಕೆ ಸಮೀಪವಾದ ಸೂಕ್ಷ್ಮ ಶಿಲಾಯುಗದ ಸಣ್ಣ ಸಣ್ಣ ನೀಳ ಚಕ್ಕೆಗಳನ್ನೆಬ್ಬಿಸಿದುದರಿಂದುಂಟಾದ ಪಟ್ಟೆ ಪಟ್ಟೆಗಳುಳ್ಳ ಒಂದು ಕಾರ್ನೀಲಿಯನ್ ಕಲ್ಲಿನ ತಿರುಳನ್ನು ಉತ್ಖನನದವರು ಸಂಗ್ರಹಿಸಿದ್ದಾರೆ. ಇನ್ನು ನೂತನ ಶಿಲಾಯುಗ ಸಂಸ್ಕೃತಿಯ ಜನರ ವಾಸ್ತವ್ಯದ ನೆಲೆಗಳನ್ನು ತಿ. ನರಸೀಪುರ, ತೆಲ್ಲನೂರು (ಕೊಳ್ಳೇಗಾಲ ತಾಲ್ಲೂಕ), ಬೂದಿ ತಿಟ್ಟು (ಚಾಮರಾಜ ನಗರ ತಾಲ್ಲೂಕ), ಬೂದಿ ತಿಟ್ಟು (ಯಳಂದೂರು ತಾಲೂಕ), ಮುತ್ತಲವಾಡಿ, ಯೇಚಗಳ್ಳಿ (ನಂಜನಗೂಡು ತಾಲ್ಲೂಕ) ಶಿವಕಳ್ಳಿ (ಯಳಂದೂರ ತಾಲೂಕ), ಹೆಮ್ಮಿಗೆ, ಹೊಸಹಳ್ಳಿಗಳಲ್ಲಿ ಶೋಧವಾಗಿವೆ. ಇನ್ನು ಬೃಹತ್ ಶಿಲಾ ಸಂಸ್ಕೃತಿಯ ಕಲ್ಗೋರಿ ನೆಲೆಗಳನ್ನು ಚಕ್ಕೂರು, ಬೆಳತೂರು (ಹೆಗ್ಗಡದೇವನಕೋಟೆ ತಾಲೂಕ) ಕೊಪ್ಪ, ಪಿರಿಯಾ ಪಟ್ಟಣ, ಬೆಟ್ಟದ ಪುರ (ಪಿರಿಯಾ ಪಟ್ಟಣ ತಾಲೂಕ) ಅರಕಲವಾಡಿ, ನರಸಮಂಗಲ (ಚಾಮರಾಜನಗರ ತಾಲೂಕ) ಮರಳಹಳ್ಳಿ, ಬೆಳಕಹಳ್ಳಿಗಳಲ್ಲಿ ಶೋಧಿಸಲಾಗಿದೆ. ಮುತ್ತಲವಾಡಿ ಹೆಮ್ಮಿಗೆ, ಕೊಪ್ಪ ಮತ್ತು ದೊಡ್ಡ ಪ್ರಮಾಣದಲ್ಲಿ ತಿ. ನರಸೀಪುರದ ನೆಲೆಗಳನ್ನು ಉತ್ಖನನ ಮಾಡಲಾಗಿದೆ. ಈ ಉತ್ಖನನಗಳಿಂದ ಮೊದಲಿನ ಎರಡು ನೆಲೆಗಳಲ್ಲಿ ಕೇವಲ ನೂತನ ಶಿಲಾಯುಗದ ಸಾಂಸ್ಕೃತಿಕ ಘಟ್ಟವಲ್ಲದೇ ಬೃಹತ್ ಶಿಲಾ ಸಂಸ್ಕೃತಿಯ ಮತ್ತು ಇದಕ್ಕೆ ಸೇರಿಕೊಂಡಂತೇ ತರುವಾಯ ಕಾಲದ ಇತಿಹಾಸ ಆರಂಭಕಾಲದ ಸಂಸ್ಕೃತಿಯ ಘಟ್ಟಗಳು ಶೋಧವಾದವು. ಕೊಪ್ಪ ಉತ್ಖನನವು

ಮೂರು ಪ್ರಕಾರಗಳ ಅಂದರೆ ೧೫ ಕಲ್ಲು ವೃತ್ತಗಳು, ೧೩ ಕಲ್ಮನೆಗಳು, ೧ ಕಲ್ಲುಗುಪ್ಪೆಗೆ ಸೀಮಿತವಾಗಿತ್ತು. ಈ ನೆಲೆಯಲ್ಲಿಯ ಇತರ ಕೆಲವು ಕಲ್ಗೋರಿಗಳನ್ನು ೧೮೬೮–೬೯ರಲ್ಲಿ ಕ್ಯಾಪ್ಟನ್ ಕೋಲ್‌ರವರು ಅಗೆದಿದ್ದರು. ಇವೆಲ್ಲ ಉತ್ಖನನಗಳಿಂದ ಈ ಜನರ ನಿತ್ಯ ಜೀವನಕ್ಕೆ ಸಂಬಂಧಪಟ್ಟ ಕೆಲವು ಮುಖ್ಯ ವಿಷಯಗಳು ಮತ್ತು ವಿಶೇಷವಾಗಿ ಬೃಹತ್‌ಶಿಲಾ ಸಂಸ್ಕೃತಿಯ ಜನರ ಶವಸಂಸ್ಕಾರದ ಬಗ್ಗೆ ತಿಳಿದು ಬಂದಿದೆ. ನೂತನ ಶಿಲಾಸಂಸ್ಕೃತಿಯ ವಿಷಯದಲ್ಲಿ ಕೆಲವು ಗಮನಾರ್ಹ ಅಂಶಗಳನ್ನು ಇಲ್ಲಿ ಸೂಚಿಸುವುದು ಅವಶ್ಯ. ಮೊದಲನೆಯದಾಗಿ ಈ ನೆಲೆಯ ಮೇಲೆ ಈ ಸಂಸ್ಕೃತಿ ಕಲ್ಲಿನ ಉಪಕರಣಗಳು ಬಹಳಷ್ಟು ದೊರೆತಿವೆ. ಆದರೆ ಪ್ರಕಟಿತ ವರದಿಯ ಪ್ರಕಾರ ಉತ್ಖನನದಲ್ಲಿ ಒಂದೇ ಒಂದು ಕಲ್ಲಿನ ಉಪಕರಣ ಅದೂ ಈ ಸಂಸ್ಕೃತಿ ಘಟ್ಟದ ಕೊನೆಯ ಭಾಗದಲ್ಲಿ ದೊರೆತಿದೆ. ಇದು ಹೇಗೆ ? ಇಂಥ ಪರಿಸ್ಥಿತಿ ಈ ಪ್ರದೇಶದ ಆಗ್ನೇಯ ದಿಕ್ಕಿಗೆ ತಮಿಳುನಾಡಿನ ಧರ್ಮಪುರಿ ಜಿಲ್ಲೆಯ ಶೆವರಾಯ್ ಬೆಟ್ಟ ಪ್ರದೇಶದಲ್ಲಿಯೂ ಮತ್ತು ರಾಯಚೂರು ಜಿಲ್ಲೆಯ ಮಸ್ಕಿಯಲ್ಲಿಯೂ ಕಂಡು ಬಂದಿದೆ. ಆದರೆ ಮಸ್ಕಿ ಮತ್ತು ನರಸೀಪುರ ಮಧ್ಯದಲ್ಲಿರುವ ಸಂಗನಕಲ್ಲಿನಲ್ಲಿ ನೆಲೆಯ ಮೇಲು ಮತ್ತು ಉತ್ಖನದಲ್ಲಿ ನೂತನ ಶಿಲಾಯುಗ ಘಟ್ಟದಲ್ಲಿ ತಕ್ಕ ಪ್ರಮಾಣದಲ್ಲಿ ಈ ಕಲ್ಲನ ಉಪಕರಣಗಳು ದೊರೆತಿವೆ. ಹಾಗಾದರೆ ನರಸೀಪುರ ಮತ್ತು ಮಸ್ಕಿಯಲ್ಲಿ ಈ ಸಾಂಸ್ಕೃತಿಕ ಪರಿಸ್ಥಿತಿಯ ಸೂಚನೆ ಏನು ?

ಕಾಶ್ಮೀರ ಪ್ರದೇಶದಲ್ಲಿ ಬೂರ್ಜಹಾಮ್ ಮತ್ತು ಗುಫ್‌ಕ್ರಾಲ್ ಎಂಬ ಸ್ಥಳಗಳಲ್ಲಿಯ ಉತ್ಖನನಗಳಲ್ಲಿ ಕಂಡು ಬಂದ ಮೃತ್ ಪಾತ್ರೆ ರಹಿತ ಅತೀ ಪ್ರಾಚೀನ ನೂತನ ಶಿಲಾಯುಗ ಹಂತ ಮತ್ತು ನಂತರದ ಸುಧಾರಿತ ಮೃತ್ ಪಾತ್ರೆ ಸಹಿತ ನೂತಸ ಶಿಲಾಯುಗಗಳಂತೆಯೇ, ತಿ. ನರಸಿಪುರ ನೆಲೆಯ ಮೇಲೆ ದೊರೆತ ಕಲ್ಲಿನ ಉಪಕರಣಗಳು ಈ ಸಂಸ್ಕೃತಿಯ ಸುಧಾರಿತ ಹಂತವು ಆಗಿದೆಯೆ ? ಕಾಶ್ಮೀರ ಪ್ರದೇಶದಲ್ಲಿಯ ಉತ್ಖನನದಿಂದ ಇವೆರಡು ಹಂತಗಳು ತಿಳಿದಂತೆ ಈ ಪ್ರದೇಶದಲ್ಲಿಯೂ ಉತ್ಖನನದ ಮೂಲಕವೇ ಈ ಪ್ರಶ್ನೆಯನ್ನು ಬಗೆಹರಿಸಬೇಕಾಗಿದೆ. ಎರಡನೆಯದಾಗಿ ಈ ಸಂಸ್ಕೃತಿಯ ಉತ್ತರ ಭಾಗದ ಹಂತಕ್ಕೆ ಒಂದು ಶವಕುಣಿಯಲ್ಲಿ ವಿಶಿಷ್ಟವಾದ ಒಂದು ತಲೆಯಾನಿಕೆ ಸಿಕ್ಕಿದೆ. ಇದು ಈಜಿಪ್ಟಿನ ಸುಮಾರು ಕ್ರಿ. ಪೂ. ೧೩೫೨ರಲ್ಲಿ ಪಟ್ಟಕ್ಕೆ ಬಂದ ಟೂಟನ್–ಕಾ–ಮೆನ್ ಎಂಬ ರಾಜನ ಪಿರಮಿಡ್ಡಿನಲ್ಲಿ ದೊರೆತ ದಂತದ ಮತ್ತು ಕಲ್ಲಿನ ತಲೆಯಾನಿಕೆಗಳಿಗೆ ಸ್ಥೂಲವಾಗಿ ಹೋಲುವುದೆಂದು ತಜ್ಞರ ಅಭಿಪ್ರಾಯವಾಗಿದೆ. ಆದರೆ ಈಜಿಪ್ತ್ ಸಂಸ್ಕೃತಿಯ ವಿಶೇಷ ತಜ್ಞರಾದ ಹಂಗೇರಿಯ ಕೋಸುತ್ ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ವಿಭಾಗದ ಡಾ। ಶ್ರೀಮತಿ ಇಲ್ಡಿಕೊಫುಸ್ಕಸ್ ಇವರು ಇವೆಲ್ಲವನ್ನು ಅಧ್ಯಯನ ಮಾಡಿ ಈ ಅಭಿಪ್ರಾಯವನ್ನು ಒಪ್ಪಿಲ್ಲ. ಆದರೆ ಈ ಘಟ್ಟ ಮತ್ತು ಮುಂದಿನ ಘಟ್ಟದ ಕಾಲದ ಕರ್ನಾಟಕ ಮತ್ತು ಸಮಕಾಲೀನ ಈಜಿಪ್ತ್ ಪ್ರದೇಶದಲ್ಲಿಯ ಇತರ ಕೆಲವು ಸಾಂಸ್ಕೃತಿಕ ಅಂಶಗಳಲ್ಲಿ ತೋರುಗಾಣಿಕೆಯ ಸಾಮ್ಯತೆಯಿದೆ. ಉದಾ : ಬ್ರಹ್ಮಗಿರಿ ಮತ್ತು ನೂಬಿಯನ್ ಪ್ರದೇಶಗಳಲ್ಲಿಯ ಕಲ್ಗೋರಿಗಳು ಮತ್ತು ಇವುಗಳಲ್ಲಿ ದೊರೆತ ಕಪ್ಪು–ಕೆಂಪು ದ್ವಿವರ್ಣದ ಮಣ್ಣಿನ ಪಾತ್ರೆಗಳು. ಹಳ್ಳೂರಿನ ಉತ್ಖನನದಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಘಟ್ಟದಲ್ಲಿ ದೊರೆತ ಸುಟ್ಟ ರಾಗಿ ಕಾಳಿನ ವೈಜ್ಞಾನಿಕ ವಿಶ್ಲೇಷಣೆಯಿಂದ ಇದರ ಮೂಲ ತಳಿ ಆಫ್ರಿಕ ಜನ್ಯವಾದುದೆಂದು ಅಭಿಪ್ರಾಯ. ಆದರೆ ಈ ಅಭಿಪ್ರಾಯವನ್ನೂ ಇತ್ತೀಚೆಗೆ ಪ್ರಶ್ನಿಸಲಾಗಿದೆ. ಆದ್ದರಿಂದ ಈ ಮಹತ್ವದ ವಿಷಯವನ್ನು ಹೆಚ್ಚು ಹೆಚ್ಚು ಉತ್ಖನನದಿಂದ ವ್ಯಾಪಕ ಅಧ್ಯಯನದಿಂದ ಸ್ಪಷ್ಟಪಡಿಸಬೇಕಾಗಿದೆ. ಮೂರನೆಯದಾಗಿ ಈ ಘಟ್ಟದ ಕೊನೆಯಲ್ಲಿ ಬೇರೆಡೆಯಿಂದ ಪ್ರಸರಣವಾದ ಭಿನ್ನ ರೀತಿಯ ವರ್ಣಚಿತ್ರಿತ ಮೃತ್ ಪಾತ್ರೆಯ ಚೂರುಗಳು, ಕಲ್ಲಿನ ನೀಳ ಚಕ್ಕೆಗಳು ದೊರೆತಿವೆ. ಇವುಗಳು ಕೃಷ್ಣಾನದಿ ಬಯಲಿನ, ವಿಶೇಷವಾಗಿ ಇದರ ಮೇಲ್ದಂಡೆ ಪ್ರದೇಶದ ಶಿಲಾ–ತಾಮ್ರಯುಗ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳಾಗಿವೆ. ಕಾವೇರಿ ನದಿ ಪ್ರದೇಶಕ್ಕೆ ಈ ಸಂಸ್ಕೃತಿಯ ಪ್ರಸಾರ ಯಾವ ಮಾರ್ಗದಿಂದ ಆಯಿತು. ಇದರ ಪರಿಣಾಮ ಏನು ? ಇವುಗಳನ್ನೂ ಬಿಡಿಸಬೇಕಾಗಿದೆ. ಬೃಹತ್ ಶಿಲಾ ಸಂಸ್ಕೃತಿಯ ಹಂತದಲ್ಲಿ ದೊರೆತ ಮಣ್ಣಿನ ಪಾತ್ರೆಗಳಲ್ಲಿ ವಿವಿಧ ರೀತಿಯ ಗೀಚುಗಳು ಜಡಿಗೇನಹಳ್ಳಿ (ಬೆಂಗಳೂರು ಜಿಲ್ಲೆ)ಯಲ್ಲಿಯ ಈ ಸಂಸ್ಕೃತಿಯ ಕಲ್ಲು

ವೃತ್ತಗಳಲ್ಲಿದ್ದಂತೆ ವಿಪುಲ ಸಂಖ್ಯೆಯಲ್ಲಿ ದೊರೆತಿವೆ. ಮತ್ತು ಇವು ಹೆಚ್ಚಾಗಿ ತಮಿಳು ನಾಡಿನ ಚೆಂಗಲ್ಪೇಟೆ ಪ್ರದೇಶದ ಈ ಸಂಸ್ಕೃತಿಯ ಇಂಥ ಮಣ್ಣಿನ ಪಾತ್ರೆಗಳ ಗೀಚುಗಳಿಗೆ ಹೋಲುತ್ತವೆ. ಉತ್ತರ ಕರ್ನಾಟಕದಲ್ಲಿ ಇವು ತೀರ ಕಡಿಮೆ. ಈ ಗೀಚುಗಳ ಸಂಕೇತದ ಬಗ್ಗೆ ತಜ್ಞರಲ್ಲಿ ಭಿನ್ನಾಭಿಪ್ರಾಯಗಳಿವೆ. ಇವು ಕುಂಬಾರರ ಗುರುತುಗಳಾಗಿರಬಹುದು, ಇಲ್ಲವೆ ಇವುಗಳ ಕೊಂಡವರ ಸ್ವತ್ತೆಂದು ಸೂಚಿಸುವ, ಧಾರ್ಮಿಕ ಕಟ್ಟಳೆಯ ಇಲ್ಲವೇ ತರುವಾಯ ಕಾಲದ ಬ್ರಾಹ್ಮಿ ಅಕ್ಷರ ಮಾಲಿಕೆಯ ಮೂಲ ಹಂತದ ಗುರುತುಗಳಾಗಿರಬಹುದು. ಇತ್ತೀಚೆಗೆ ಕೊಯಮುತ್ತೂರು ಜಿಲ್ಲೆಯ ಕೊಡಮಾನು ಉತ್ಖನನದಲ್ಲಿ ದೊರೆತ ಬೃಹತ್ ಶಿಲಾ ಸಂಸ್ಕೃತಿಯ ಮೃತ್ ಪಾತ್ರೆಗಳ ಇಂಥ ಗೀಚುಗಳೊಡನೆ ಬ್ರಾಹ್ಮಿ ಅಕ್ಷರಗಳೂ ಇದ್ದು ಈ ಗೀಚುಗಳು ಹೆಚ್ಚು ಅರ್ಥಗರ್ಭಿತವಾಗಿ ಕಾಣುತ್ತಿವೆ. ಆದ್ದರಿಂದ ಈ ಗೀಚುಗಳನ್ನು ಮತ್ತೆ ವಿಶೇಷವಾಗಿ ಅಧ್ಯಯನ ಮಾಡಬೇಕಾಗಿದೆ. ಇನ್ನು ಇತಿಹಾಸ ಪುರಾತತ್ವಕ್ಕೆ ಸಂಬಂಧಿಸಿದ ಹಾಗೆ ಶಾಸನಗಳು, ದೇವಾಲಯ, ಬಸದಿ, ಕೋಟೆ ಕೊತ್ತಲಗಳು ಪಟ್ಟಣ ನೆಲೆಗಳು ಮೊದಲಾದವುಗಳ ಶೋಧನೆಗಳು ಪರಿಷ್ಕೃತ ಎಪಿಗ್ರಾಫಿಯಾ ಕರ್ನಾಟಿಕ ೩, ೪ ಮತ್ತು ೫ನೇ ಸಂಪುಟಗಳಲ್ಲಿಯೂ ರಾಜ್ಯ ಸರ್ಕಾರದ ಪುರಾತತ್ವ ವಾರ್ಷಿಕ ವರದಿಗಳಲ್ಲಿಯೂ ಕೆಲವು ಏಕ ವಿಷಯ ಗ್ರಂಥಗಳಲ್ಲಿಯೂ ತಕ್ಕ ಮಟ್ಟಿನ ಪ್ರಮಾಣದಲ್ಲಿ ಪ್ರಕಟವಾಗಿವೆ.

ಈಗ ನಡೆಯುತ್ತಿರುವ ತಲಕಾಡು ಉತ್ಖನನದಲ್ಲಿ ನಿರೀಕ್ಷಿಸಿದ್ದ ಗಂಗರ ಕಾಲದ ಕಟ್ಟಡಗಳಲ್ಲಿಯ ಸುಮಾರು ೯ನೇ ಶತಮಾನದ ಬೃಹತ್ ಜೈನ ಬಸದಿಯು ಗಂಗರ ಕಾಲದ ವಾಸ್ತು ಮತ್ತು ಮೂರ್ತಿ ಶಿಲ್ಪ ಅಧ್ಯಯನಕ್ಕೆ ಒಂದು ಮಹತ್ವದ ಕೊಡುಗೆ. ಮತ್ತೊಂದು ಇನ್ನೂ ದೊಡ್ಡ ಕಟ್ಟಡ ಕುತೂಹಲಕಾರಿಯಾಗಿದೆ. ಇವೆಲ್ಲವನ್ನೂ ಹಾಗೂ ಸುತ್ತಮುತ್ತಲು ಕಾಣುವ ಕುರುಹುಗಳನ್ನು ಕ್ರಮೇಣ ಬಿಡದೆ ಬಿಡಿಸಿದಾಗ ಗಂಗರ ರಾಜಧಾನಿಯ ಅರಮನೆಯೂ ಸೇರಿದಂತೆ ಕೆಲವು ಭಾಗಗಳಾದರೂ ಬೆಳಕಿಗೆ ಬರಬಹುದೇನೋ ? ಜೊತೆಗೆ ಪ್ರಥಮ ಬಾರಿಗೆ ರೋಮನ್ ನಾಣ್ಯದ ಅಚ್ಚು ಮತ್ತು ಗಂಗ ಪೂರ್ವದ ಇತಿಹಾಸ ಆರಂಭ ಕಾಲದ ಘಟ್ಟವು ಈ ಸ್ಥಳವನ್ನು ಗಂಗರು ತಮ್ಮ ರಾಜಧಾನಿಯಾಗಿ ಮಾಡಿಕೊಂಡ ಹಿನ್ನೆಲೆಯನ್ನು ಸೂಚಿಸುತ್ತವೆ. ಇದಲ್ಲದೆ, ಇಲ್ಲಿಯೇ ಸುತ್ತಮುತ್ತ ನೂತನ ಶಿಲಾಯುಗದ ಜನರು ಮತ್ತು ಅದಕ್ಕಿಂತಲೂ ಪೂರ್ವದ ಸೂಕ್ಷ್ಮ ಶಿಲಾಯುಗದ ಜನರು ಇಲ್ಲಿ ವಾಸ್ತವ್ಯವಿದ್ದ ಸೂಚನೆಗಳು ಕೂಡಾ ಗೊತ್ತಾಗಿದೆ. ಮೂರ್ತಿ ಮತ್ತು ವಾಸ್ತುಶಿಲ್ಪ ಕಲೆಯ ಒಂದು ಸ್ಥೂಲ ಸಮೀಕ್ಷೆಯನ್ನು ನಾನು ಅಖಿಲ ಭಾರತ ೬೦ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಪ್ರಕಟಿಸಿದ ವಜ್ರದೀಪ್ತಿ ನೆನಪಿನ ಸಂಪುಟದಲ್ಲಿ ಮಾಡಿದ್ದೇನೆ. ಇತ್ತೀಚೆಗೆ ಪ್ರಕಟವಾದ ಡಾ। ದಯಾನಂದ ಪಟೇಲರ ಸೋಮನಾಥಪುರ ಕೇಶವ ದೇವಾಲಯದ ಒಂದು ಸಾಂಸ್ಕೃತಿಕ ಅಧ್ಯಯನ ಮತ್ತು ಡಾ। ಜ್ಯೋತಿಬಾಯಿಯವರ ಮೈಸೂರು ನಗರದಲ್ಲಿಯ ಪ್ರಮುಖ ನಿರ್ಮಿತಿಗಳು – ಒಂದು ಅಧ್ಯಯನ ಶ್ರೀರಂಗರಾಜು ಅವರ ಶ್ರೀ ಚಾಮುಂಡೇಶ್ವರ ದೇವಾಲಯ – ಒಂದು ಅಧ್ಯಯನ ಇವುಗಳನ್ನು ಇಲ್ಲಿ ನೆನೆಸಬಹುದು. ಆಧುನಿಕ ಮೈಸೂರು ಪ್ರದೇಶಕ್ಕೆ ಸಂಬಂಧಿಸಿದಂತೆ ವಿಶೇಷವಾಗಿ ದಾಖಲೆ ಪತ್ರಗಳ ಆಧಾರದ ಮೇಲೆ ಸಂಶೋಧನೆಗಳು ಆಗುತ್ತಿವೆ. ಇತ್ತೀಚೆಗೆ ಪ್ರಕಟವಾದ ಡಾ। ಸತ್ಯನಾರಾಯಣರವರ ಗ್ರಂಥವು ಗಮನಾರ್ಹ. ಇಷ್ಟೆಲ್ಲ ಆಗುತ್ತಿದ್ದರೂ ಕೂಡ, ಗಂಗ ಪೂರ್ವ ಮೈಸೂರು ಪ್ರದೇಶದ ಅಷ್ಟೇ ಅಲ್ಲ ದಕ್ಷಿಣ ಕರ್ನಾಟಕದ ಇತಿಹಾಸವೇ ನಮಗೆ ಏನೂ ತಿಳಿದಿಲ್ಲ. ಮೌರ್ಯ ಚಕ್ರವರ್ತಿ ಅಶೋಕನು ತನ್ನ ಸಾಮ್ರಾಜ್ಯದಿಂದ ದೂರವಿರುವ ಚೋಳ, ಪಾಂಡ್ಯ ಮೊದಲಾದ ರಾಜ್ಯಗಳನ್ನೂ ತನ್ನ ಶಾಸನಗಳಲ್ಲಿ ಉಲ್ಲೇಖಿಸಿರುವಾಗ ಇದರ ಪಕ್ಕದಲ್ಲಿಯೇ ದಕ್ಷಿಣ ಕರ್ನಾಟಕದ ಬಗ್ಗೆ ಏನನ್ನೂ ಏಕೆ ಹೇಳಿಲ್ಲ ? ಚೆಂಗಾಳ್ವರೇ ಮೊದಲಾದ ಸಣ್ಣ ಪುಟ್ಟ ಅರಸುಮನೆತನಗಳ ಸಾಂಸ್ಕೃತಿಕ ಅಧ್ಯಯನವು ಆಗಬೇಕಾಗಿದೆ. ಮೈಸೂರು, ರಾಜ್ಯದ ಅರಸು ಮನೆತನದ ಕಾರ್ಯಕೇತ್ರದ ಕೇಂದ್ರ ಮೈಸೂರು ಶ್ರೀರಂಗಪಟ್ಟಣ ಈ ಪ್ರದೇಶದ ಕೂಲಂಕಶ ಸರ್ವತೋಮುಖ ಅಧ್ಯಯನವನ್ನು ಮಾಡಬೇಕಾಗಿದೆ. ಹೀಗೆ ಹಲವಾರು ಕೇತ್ರಗಳಲ್ಲಿ ಶೂನ್ಯ ಭಾಗಗಳು ಬಹಳ ಇವೆ.

ಕರ್ನಾಟಕದ ಇನ್ನುಳಿದ ಭಾಗದಲ್ಲಿಯ ಕೆಲವು ಮುಖ್ಯ ಶೋಧನೆಗಳ ಸಿಂಹಾವಲೋಕನ ಮಾಡಿದಾಗಲೂ ಇಂಥ ನೂರಾರು ಸಮಸ್ಯೆಗಳಿವೆ, ಶೂನ್ಯ ಭಾಗಗಳಿವೆ ಎಂಬುದು ಬೇಗ ಸ್ಪಷ್ಟವಾಗುತ್ತದೆ.

ಆದಿ ಹಳೆಯ ಶಿಲಾಯುಗದ ನೆಲೆಯಾದ ಹುಣಸಿಗಿಯಲ್ಲಿ ಮಾನವನು ತಾತ್ಕಾಲಿಕವಾಗಿ ಒಂದೆಡೆ ನಿಂತು ಬಿಸಿಲನ್ನು ತಡೆಯಲು ಪ್ರಾಯಶಃ ತಟ್ಟಿಮರೆಯನ್ನು ನಿರ್ಮಿಸಿ ಕಲ್ಲಿನ ಉಪಕರಣಗಳನ್ನು ಸಿದ್ಧ ಮಾಡುತ್ತಿದ್ದ ಮೂಲ ನೆಲೆ ಕರ್ನಾಟಕದಲ್ಲಿ ಪ್ರಪ್ರಥಮವಾಗಿ ಶೋಧವಾಗಿದೆ. ಅನಗವಾಡಿಯಲ್ಲಿ (ಬಾಗಲಕೋಟ ತಾಲೂಕ, ವಿಜಾಪುರ ಜಿಲ್ಲೆ) ಆದಿ ಮತ್ತು ಮಧ್ಯ ಹಳೆ ಶಿಲಾಯುಗದ ನಡುವಿನ ಬದಲಾವಣೆಯನ್ನು ಸೂಚಿಸುವ ಪ್ರಮಾಣಗಳು ದೊರೆತಿವೆ. ಸಾಲವಡಗಿ (ವಿಜಾಪುರ ಜಿಲ್ಲೆ), ಮೆರಲಭಾವಿ (ಗುಲಬರ್ಗ ಜಿಲ್ಲೆ)ಯಲ್ಲಿ ಆದಿ, ಮಧ್ಯ, ಅಂತ್ಯ ಮತ್ತು ಸೂಕ್ಷ್ಮ ಶಿಲಾಯುಗಗಳ ಘಟ್ಟಗಳನ್ನು ಕಾಲಾನುಕ್ರಮವನ್ನು ಮತ್ತು ಆಯಾಯ ಘಟ್ಟಗಳ ಒಂದೆರಡು ವಿಶಿಷ್ಟ ಲಕ್ಷಣಗಳನ್ನು ಸ್ಪಷ್ಟಪಡಿಸಿವೆ. ತಿ. ನರಸಿಪುರ ಮತ್ತು ಹೆಮ್ಮಿಗೆಯಲ್ಲಿ ನೂತನ ಶಿಲಾಯುಗದ ಪೂರ್ವದ ಆದರೆ ದಖನ್ನಿನ ಇತರೆಡೆಗಳಲ್ಲಿಯ ಮಧ್ಯ, ಹಳೆ ಶಿಲಾಯುಗ ಸೂಕ್ಷ್ಮ ಶಿಲಾಯುಗದ ಕಲ್ಲಿನ ಉಪಕರಣಗಳಿಗಿಂತ ಭಿನ್ನವಾದ, ಶಿಲಾಯುಗ ಉಪಕರಣಗಳನ್ನು ಗುರುತಿಸಲಾಗಿದೆ. ಬ್ರಹ್ಮಗಿರಿ, ಸಂಗನಕಲ್ಲು, ಮಸ್ಕಿ, ತಿ. ನರಸಿಪುರ, ಹೆಮ್ಮಿಗೆ, ಪಿಕ್ಲಿಹಾಳ್, ಹಳ್ಳೂರು, ಬನಹಳ್ಳಿ ಈ ನೆಲೆಗಳಲ್ಲಿ ನೂತನ ಶಿಲಾ ಅಥವಾ ಶಿಲಾತಾಮ್ರಯುಗ ಹಂತದಲ್ಲಿಯ ನೂತನಶಿಲಾ ಸಾಂಸ್ಕೃತಿಕ ಘಟ್ಟಗಳಲ್ಲದೆ ಕಾಲಾನುಕ್ರಮವಾಗಿ ಕಬ್ಬಿಣ ಯುಗದ ಬೃಹತ್‌ಶಿಲಾ ಸಂಸ್ಕೃತಿ ಮತ್ತು ಇತಿಹಾಸ ಆರಂಭ ಕಾಲದ ಸಂಸ್ಕೃತಿಯ ಘಟ್ಟಗಳು ಬೆಳಕಿಗೆ ಬಂದಿವೆ. ತೇರದಾಳ ಕೇವಲ ಒಂದು ಶಿಲಾ ತಾಮ್ರಯುಗದ ನೆಲೆ.

ಆದರೆ ತೆಕ್ಕಲಕೋಟೆಯಲ್ಲಿ ಕೇವಲ ಶಿಲಾ–ತಾಮ್ರಯುಗ ಹಂತದಲ್ಲಿಯ ನೂತನ ಶಿಲಾಯುಗ ಸಾಂಸ್ಕೃತಿಕ ಘಟ್ಟದ ವಾಸ್ತವ್ಯದ ನೆಲೆ. ವಟಗಲ್ಲಿನಲ್ಲಿಯ ನೂತನ ಶಿಲಾಯುಗದ ಘಟ್ಟದ ಬಗ್ಗೆ ಶವಸಂಸ್ಕಾರ ಮೊದಲಾದ ಒಂದೆರಡು ಅಂಶಗಳು ಮಾತ್ರ ವೃತ್ತ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ತಡಕನಹಳ್ಳಿ, ಕೊಮರನಹಳ್ಳಿ, ಜಡಿಗೇನಹಳ್ಳಿ, ಹಳಿಂಗಳಿ, ಕೊಪ್ಪ, ಹೆಗ್ಗಡೆ–ಹಳ್ಳಿ ಮತ್ತು ತೇರದಾಳದಲ್ಲಿಯೂ ಕೂಡಾ (ಇಲ್ಲಿ ಶಿಲಾ–ತಾಮ್ರ ಸಂಸ್ಕೃತಿ ನೆಲೆಯಿಂದ ನೇರವಾಗಿ ಸುಮಾರು ೨ ಕಿ. ಮೀ. ದೂರದಲ್ಲಿ ಗಡ್ಡದ ಮೇಲೆ ನೂರಾರು ಬೃಹತ್ ಶಿಲಾ ಗೋರಿಗಳಿವೆ) ವಿವಿಧ ಪ್ರಕಾರ ನಿರ್ಮಿತಿಗಳ ಕಲ್ಗೋರಿಗಳನ್ನು ಉತ್ಖನನ ಮಾಡಲಾಗಿದೆ. ಮೊದಲಿನ ಎರಡು ಸ್ಥಳಗಳಲ್ಲಿ ದಕ್ಷಿಣ ಭಾರತದ ಬೇರೆಡೆಗಳಲ್ಲಿ (ಪೆರಂಬೂರು ಪ್ರದೇಶ ಬಿಟ್ಟು) ಸಾಮಾನ್ಯವಾಗಿ ದೊರೆಯದಂತಹ ಬಿಳಿ ರೇಖಾ ಚಿತ್ರಗಳುಳ್ಳ ಕಪ್ಪು–ಕೆಂಪು ದ್ವಿವರ್ಣದ ಪಾತ್ರೆಗಳಿರುವುದು ಒಂದು ವಿಶೇಷ. ಜೊತೆಗೆ ಐದು ಬಾಯಿಗಳುಳ್ಳ ಗಡಿಗೆಗಳು (ಪಂಚಮುಖ ವಾದ್ಯದ ತರಹ) ಇಲ್ಲಿ ಮಾತ್ರ ಸಿಕ್ಕಿವೆ. ಜಡಿಗೇನ ಹಳ್ಳಿಯಲ್ಲಿ ಕಾಲುಗಳುಳ್ಳ ದೋಣಿಯಾಕಾರದ ಅಸ್ಥಿ ಪಾತ್ರೆಗಳು ಇದ್ದು ಅವು ತಮಿಳುನಾಡಿನ ಚಂಗಲ್ಪೇಟೆ ಜಿಲ್ಲೆಯ ಬೃಹತ್‌ಶಿಲಾ ಗೋರಿಗಳಲ್ಲಿ ದೊರೆಯುವ ಇಂಥ ಪಾತ್ರೆಗಳಿಗೆ ಹೋಲುತ್ತವೆ. ತೇರದಾಳ ಮತ್ತು ಹಳಿಂಗಳಿಯಲ್ಲಿಯ ಕಲ್ಗೋರಿಗಳ ಗ್ರೀಕ್ ಅಥವಾ ರೋಮನ್ ಶಿಲುಬೆಯಾಕಾರದ ವಿನ್ಯಾಸವು ಬಹಳ ಅಪರೂಪದ್ದು. ಕೊಪ್ಪದಲ್ಲಿಯ ಕಲ್ಗೋರಿಗಳಲ್ಲಿ ಭತ್ತ, ಕಾರ್ನಿಲಿಯನ್ ಎಂಬ ಉತ್ತಮ ಜಾತಿಯ ಕಲ್ಲಿನ ಮಣಿಗಳು, ಮೂರು ಕಾಲಿನ ಗಡಿಗೆಗಳು ಒಂದರಲ್ಲಿ ನೂತನ ಶಿಲಾಯುಗದ ಕಲ್ಲಿನ ಕೊಡಲಿಯು ಮೊದಲಾದ ದೊರೆತ ವಸ್ತುಗಳು ಗಮನಾರ್ಹ. ಹೆಗ್ಗಡೆ ಹಳ್ಳಿಯಲ್ಲಿ ಉತ್ಖನದ ಮಾಡಿದ ನಾಲ್ಕು ಗೋರಿಗಳಲ್ಲೂ, ಕಬ್ಬಿಣದ ವಸ್ತುಗಳು ಒಂದೇ ಸಮನೆ ಇಲ್ಲದಿರುವುದು ತುಂಬ ಕುತೂಹಲಕಾರಿಯಾಗಿದೆ. ಏಕೆಂದರೆ ಉಳಿದೆಲ್ಲ ನೆಲೆಗಳ ಕಲ್ಗೋರಿಗಳಲ್ಲಿ ಕಬ್ಬಿಣದ ಉಪಕರಣಗಳಿರುವುದು ಸರ್ವೇ ಸಾಮಾನ್ಯ. ಕೊಡೆಕಲ್ಲು, ಕುಪಗಲ್ಲು ಮತ್ತು ಇತ್ತೀಚೆಗೆ ಬೂದಿಹಾಳಗಳಲ್ಲಿ ಉತ್ಖನನ ಮಾಡಿದ ಬೂದಿ ಗುಡ್ಡಗಳಿಂದ ಅವು ನೂತನ ಶಿಲಾಯುಗದವೆಂದೂ, ಆದರೆ ಅಲ್ಚಿನ್ ಅವರು ಇಂಥ ಬೂದಿ ಗುಡ್ಡಗಳ ಸಮಗ್ರ ಮತ್ತು ಸುದೀರ್ಘ ಅಧ್ಯಯನದಲ್ಲಿ ಇವು ಮೂಲತಃ ದನದ ಕೊಟ್ಟಿಗೆಗಳೆಂದು ವ್ಯಕ್ತಪಡಿಸಿದ ಅಭಿಪ್ರಾಯವನ್ನು ಅನುಮೋದಿಸುವುದಿಲ್ಲವೆಂದು ಉತ್ಖನನಕಾರರು ವಿವರಿಸಿದ್ದಾರೆ.

ಬೆನಕನಹಳ್ಳಿಯ ಪರೀಕ್ಷಕ ಗುಂಡಿಯಲ್ಲಿ ಕಾಲಾನುಕ್ರಮದಲ್ಲಿ ನೂತನ ಶಿಲಾಯುಗ ಮತ್ತು ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಗಳ ಘಟ್ಟಗಳಿದ್ದು ಆದರೆ ನೂತನ ಶಿಲಾಯುಗದ ಕೊನೆಯ ಭಾಗದಲ್ಲಿಯೇ ವಿಶಿಷ್ಟವಾದ ಬಿಳಿ ರೇಖಾ ಚಿತ್ರಗಳುಳ್ಳ ಕಪ್ಪು–ಕೆಂಪು ದ್ವಿವರ್ಣದ ಪಾತ್ರೆಗಳ ಅವಶೇಷಗಳಿರುವುದು ಬಹಳ ಕುತೂಹಲಕಾರಿಯಾಗಿದೆ. ನಾವು ಈಗಾಗಲೇ ಗಮನಿಸಿದಂತೆ, ಹಳ್ಳೂರು, ತಡಕನಹಳ್ಳಿ ಮತ್ತು ಕೊಮರನಹಳ್ಳಿಯಲ್ಲಿ ಈ ವಿಶಿಷ್ಟ ಸಾಂಸ್ಕೃತಿಕ ಕುರುಹುಗಳು ನೂತನ ಶಿಲಾಯುಗ ನಂತರ ಕಾಲದ ಬೃಹತ್ ಶಿಲಾ ಸಂಸ್ಕೃತಿಯ ಭಾಗವಾಗಿವೆ. ಆದ್ದರಿಂದ ಈ ಪ್ರದೇಶದಲ್ಲಿ ಈ ಮೃತ್ ಪಾತ್ರೆಗಳು ಸೂಚಿಸುವ ಸಂಸ್ಕೃತಿಯ ಪ್ರಾಚೀನತೆಯನ್ನು ಇನ್ನೂ ಹಿಂದಕ್ಕೆ ಒಯ್ಯಲ್ಪಟ್ಟದ್ದು ಇದರ ಬಗ್ಗೆ ವಿಶೇಷ ಅಧ್ಯಯನವಾಗಬೇಕಾಗಿದೆ. ಬನಹಳ್ಳಿಯಲ್ಲಿಯ ನೂತನ – ಬೃಹತ್ ಶಿಲಾ – ಇತಿಹಾಸ ಆರಂಭ ಕಾಲದ ಸಾಂಸ್ಕೃತಿಕ ಘಟ್ಟಗಳ ಕಾಲಾನುಕ್ರಮ ಮಾಲಿಕೆಯಲ್ಲಿ ಪ್ರಥಮ ಬಾರಿಗೆ ಕಬ್ಬಿಣಯುಗ ಆರಂಭ ಕಾಲದ ಬೃಹತ್ ಶಿಲಾ ಸಂಸ್ಕೃತಿಯ ಕಬ್ಬಿಣ ಅದಿರನ್ನು ಕರಗಿಸಿ ಲೋಹವನ್ನು ಮಾಡುವ ಭಟ್ಟಿಯೇ ಶೋಧವಾಗಿದೆ. ಇದೇ ತರಹದ ಭಟ್ಟಿಯು ಮಹಾರಾಷ್ಟ್ರದ ವಿದರ್ಭಪ್ರದೇಶದಲ್ಲಿಯ ನಾಯ್ಕುಂದದಲ್ಲಿ ಆ ಪ್ರದೇಶದ ಭಿನ್ನ ಹಾಗೂ ವಿಶಿಷ್ಟವಾದ ಬೃಹತ್ ಶಿಲಾ ಸಂಸ್ಕೃತಿ ಘಟ್ಟದಲ್ಲಿ ಶೋಧವಾಗಿದೆ. ಹೀಗೆ ದಕ್ಷಿಣ ಭಾರತದಲ್ಲಿ ಕನಿಷ್ಠ ಕ್ರಿ. ಪೂ. ೮೦೦–೩೦೦ ಕಾಲದ ಕಬ್ಬಿಣ ಲೋಹ ತಂತ್ರದ ಬಗ್ಗೆ ಪ್ರಥಮ ಬಾರಿಗೆ ತಿಳಿಯಲು ಸಾಧ್ಯವಾಗಿದೆ.

ಚಂದ್ರವಳ್ಳಿ, ಬನವಾಸಿ ಮತ್ತು ಸನ್ನತಿಯಲ್ಲಿ ಕ್ರಿ. ಪೂ. ೩–೨ನೇ ಶತಮಾನದಿಂದ ಕ್ರಿ. ಶ. ೩ನೇ ಶತಮಾನದವರೆಗಿನ ಶಾತವಾಹನ ಕಾಲದ ನಗರ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳು ಅಂದರೆ ದೊಡ್ಡ ದೊಡ್ಡ ಇಟ್ಟಿಗೆಯ ಕಟ್ಟಡಗಳು, ಶಾತವಾಹನ ಅರಸರ ಹಾಗೂ ಇವರ ಮಾಂಡಲಿಕರ ಹೆಸರುಗಳುಳ್ಳ ಹಾಗೂ ರೋಮನ್ ಚಕ್ರಾಧಿಪತ್ಯದ ಕೆಲವು ಅರಸರುಗಳ ಹೆಸರುಗಳುಳ್ಳ ನಾಣ್ಯಗಳು, ನಾನಾ ಪ್ರಕಾರದ ಮಣ್ಣಿನ ಗೊಂಬೆಗಳು ತುಂಬ ಸ್ವಾರಸ್ಯಕರವಾಗಿವೆ. ಚಂದ್ರವಳ್ಳಿ, ವಡಗಾಂವ–ಮಾಧವಪುರ ಮತ್ತು ಸನ್ನತಿಯಲ್ಲಿ ಹೆಚ್ಚಾಗಿ ಲೌಕಿಕ ಕಟ್ಟಡಗಳು ಕಂಡು ಬಂದು ಬನವಾಸಿಯಲ್ಲಿ ಬಹುಶಃ ಧಾರ್ಮಿಕ ಬೃಹದಾಕಾರದ ಗಜಪೃಷ್ಠಾಕಾರದ ಕಟ್ಟಡಗಳು ಬೆಳಕಿಗೆ ಬಂದಿವೆ.

ಗುಡ್ನಾಪುರದ ೫ನೇ ಶತಮಾನದ ಕದಂಬ ರವಿವರ್ಮ (ಸುಮಾರು ೪೮೫–೫೧೯)ನ ಶಾಸನದಲ್ಲಿ ಸ್ಥಳದಲ್ಲಿಯ ಅರಮನೆ, ಮನ್ಮಥ ದೇವಾಲಯ ಮೊದಲಾದವುಗಳನ್ನು ಉಲ್ಲೇಖಿಸಿದ ಆಧಾರದ ಮೇಲೆ ಅಲ್ಲಿಯ ಉತ್ಖನನದಲ್ಲಿ ನಿರ್ದಿಷ್ಟವಾಗಿ ಪ್ರಥಮ ಬಾರಿಗೆ ಆದಿ ಕದಂಬರ ಕಾಲದ ಬೃಹತ್ ಇಟ್ಟಿಗೆ ಕಟ್ಟಡವು ಶೋಧವಾಗಿದೆ. ಮಸ್ಕಿಯಲ್ಲಿ ಸುಮಾರು ೧೧–೧೪ನೇ ಶತಮಾನದ ಸಾಮಾನ್ಯ ಜನರ ನಿತ್ಯಬಳಕೆಯ ವಸ್ತುಗಳು ದೊರೆತಿರುವುದೇ ವಿಶೇಷ. ಹಂಪಿಯಲ್ಲಿ ಅರಮನೆ ಪ್ರದೇಶದಲ್ಲಿಯ ಕಟ್ಟಡಗಳ ತಳವಿನ್ಯಾಸ, ನಿರ್ಮಿತಿ ಕ್ರಮ, ಪರಸ್ಪರ ಸಂಬಂಧ ಇವುಗಳನ್ನು ಸ್ಪಷ್ಟಪಡಿಸಲಾಗಿದೆ. ಇಲ್ಲಿ ಸಾಮಾನ್ಯ ಗಡಿಗೆ ಮಡಿಕೆಯ ಪಾತ್ರೆಗಳ ಜೊತೆಗೆ ಸುಲಲಿತ ಕಂದು ಬಣ್ಣದ ಚಿತ್ರಗಳುಳ್ಳ ಸಮಕಾಲೀನ ಚೈನಾದೇಶದ ಪಿಂಗಾಣಿ ಬಟ್ಟಲುಗಳು ದೊರೆತಿರುವುದು ಪರದೇಶಿಯರ ಸಮಕಾಲಿನ ಬರವಣಿಗೆಗಳಲ್ಲಿ ವರ್ಣಿಸಲಾದ ಚೈನಾ–ವಿಜಯನಗರ ವ್ಯಾಪಾರ ಸಂಬಂಧವನ್ನು ಪುಷ್ಟೀಕರಿಸುತ್ತವೆ.

**ಸಮಸ್ಯೆಗಳು :**

ಹೀಗೆ ಆದಿ ಹಳೆಯ ಶಿಲಾಯುಗದಿಂದ ಹಿಡಿದು ೧೯ನೇ ಶತಮಾನದ ಕೊನೆಯವರೆಗಿನ ಜನಸಾಮಾನ್ಯರ ಜೀವನಕ್ಕೆ ಸಂಬಂಧಿಸಿದ ಮೂಲ ಪ್ರಮಾಣಗಳ ಜೊತೆಗೆ ಅಲ್ಲಲ್ಲಿಯ ಒಂದೆರಡು ವಿಶಿಷ್ಟ ಸಾಂಸ್ಕೃತಿಕ ಹೆಗ್ಗುರುತುಗಳನ್ನು ತಿಳಿಯಲು ಸಾಧ್ಯವಾಗಿರುವುದು ಸ್ವಲ್ಪಮಟ್ಟಿಗೆ ಸಮಾಧಾನಕರವಷ್ಟೆ.

ಇವೆಲ್ಲವು ೫ ಲಕ್ಷ ವರ್ಷಗಳಿಗಿಂತಲೂ ಹಿಂದಿನಿಂದ ಇಂದಿನವರೆಗೆ ಸುದೀರ್ಘ ಕಾಲದ ಸಾಂಸ್ಕೃತಿಕ ಬೆಳವಣಿಗೆಯ ಹಲವಾರು ಘಟ್ಟಗಳಲ್ಲಿಯ ಕೆಲವುದರ ಅಲ್ಲೊಂದು ಇಲ್ಲೊಂದು ಕೇವಲ ಎಳೆಗಳಂತಿವೆಯೇ

ಹೊರತು, ಪೂರ್ಣವಲ್ಲದಿದ್ದರೂ ಸ್ಪಷ್ಟವಾಗಿ ಗುರುತಿಸಿಬಹುದಾದ ಕರ್ನಾಟಕದ ಸಾಂಸ್ಕೃತಿಕ ವಿರಾಟ ರೂಪ ವ್ಯಕ್ತಿತ್ವವು ತಿಳಿದಿಲ್ಲ. ಪುಣೆಯ ಹತ್ತಿರ ಇನಾಂಗಾವ್‌ದಲ್ಲಿಯ ಸುಮಾರು ಕ್ರಿ. ಪೂ. ೧೬೦೦–೮೦೦ ಅವಧಿಯ ಪೂರ್ವಭಾವಿ ಇತಿಹಾಸದ ಶಿಲಾ–ತಾಮ್ರಯುಗ ಸಂಸ್ಕೃತಿ ನೆಲೆಯನ್ನು ಎಡೆಬಿಡದೆ ವರ್ಷದ ಕೆಲವು ತಿಂಗಳುಗಳಲ್ಲಿ ಒಟ್ಟು ೧೨ ವರ್ಷಗಳ ಕಾಲ (೧೯೬೮–೭೧, ೧೯೭೨–೭೪, ೧೯೭೯–೮೩) ಅತ್ಯಂತ ವೈಜ್ಞಾನಿಕ ಉತ್ಖನನದಿಂದ ಆ ಗ್ರಾಮದ ವಿಸ್ತಾರ, ವಸತಿವಿನ್ಯಾಸ, ಕೃಷಿ, ಕೈಗಾರಿಕೆಗಳು, ಬೆಳೆಗಳು, ಕಾಲುವೆಗಳ ಮೂಲಕ ಹೊಲ–ಗದ್ದೆಗಳಿಗೆ ನೀರಿನ ಪೂರೈಕೆ ಕ್ರಮ, ಪಶು–ಸಂಗೋಪನೆ, ಸಮಾಜ ವ್ಯವಸ್ಥೆ ಹಾಗೂ ನಾಯಕತ್ವ, ಕರ ಸಂಗ್ರಹ, ಧಾರ್ಮಿಕ ಕಟ್ಟಳೆಗಳು, ಆಗಿನ ಪರಿಸರ, ವಾಯುಗುಣ, ಮೊದಲಾದ ಸ್ವಾರಸ್ಯಕರ ವಿಷಯಗಳು ಬೆಳಕಿಗೆ ಬಂದವು. ಈ ಉತ್ಖನನವು ದಕ್ಷಿಣ ಭಾರತದಲ್ಲಿ ಒಂದು ಮಾದರಿಯಾಗಿದೆ. ಅಂತಹ ಒಂದೇ ಒಂದು ಉತ್ಖನನವು ಕರ್ನಾಟಕದಲ್ಲಿ ಆಗಿಲ್ಲ.

ಇತಿಹಾಸ ಪುರಾತತ್ವ ಕ್ಷೇತ್ರದಲ್ಲಿ ಉತ್ತರ ಭಾರತದಲ್ಲಿ ಸ್ವಲ್ಪಮಟ್ಟಿನ ಪ್ರಮಾಣದಲ್ಲಿಯಾದರೂ ಮೌರ್ಯ–ಕುಷಾಣ–ಗುಪ್ತ ಕಾಲದ ಸಾಮಾನ್ಯ ಜನರ ನಿತ್ಯ ಜೀವನದ ಹಾಗೂ ವಿಶಿಷ್ಟ ಸಂಪ್ರದಾಯಗಳ ಕೆಲವು ಅಂಶಗಳು ತಿಳಿದಂತೆ ಕರ್ನಾಟಕದಲ್ಲಿ ಏಕೆ ದಕ್ಷಿಣ ಭಾರತದಲ್ಲಿಯೇ ಆದಿ ಚೋಳ, ಆದಿ ಕದಂಬ, ಚಾಲುಕ್ಯ–ಪಲ್ಲವ, ರಾಷ್ಟ್ರಕೂಟ ಮೊದಲಾದ ಸಾಂಸ್ಕೃತಿಕ ಘಟ್ಟಗಳ ನೆಲೆಗಳನ್ನು ಗುರುತಿಸಿ ಜನರ ನಿತ್ಯ ಜೀವನದ ಯಾವ ವಾಸ್ತವಿಕ ಅಂಶಗಳನ್ನು ತಿಳಿಯಲು ಪ್ರಯತ್ನಿಸಿಲ್ಲ. ಈ ದಿಶೆಯಲ್ಲಿ ನಾವು ಏನೂ ಯೋಜನೆ ಮಾಡಿದಂತೆ ತೋರುವುದಿಲ್ಲ.

ಇಂಥ ಸಮಸ್ಯೆಗಳ ದೃಷ್ಟಿಯಿಂದ ಹಲಶಿ ಮತ್ತು ಬನವಾಸಿ ಸ್ಪಷ್ಟವಾಗಿ ವಿಸ್ತಾರವಾದ ಆದಿ ಕದಂಬರ, ಬಾದಾಮಿ–ಪಟ್ಟದಕಲ್–ಐಹೊಳೆಯಲ್ಲಿ ಬಾದಾಮಿ ಚಾಲುಕ್ಯರ, ಅಳುಪುರ ಕಾಲದ ಉದ್ಯಾವರ, ರಾಷ್ಟ್ರಕೂಟ ಕಾಲದ ಮಳಖೇಡ ಹಾಗೂ ದಕ್ಷಿಣ ಕರ್ನಾಟಕದಲ್ಲಿ ಪುನ್ನಾಟ ರಾಜ್ಯದ ಕಿತ್ತೂರು, ಚಂಗಾಳ್ವರ ಪಿರಿಯಾಪಟ್ಟಣ, ಕೆಳದಿ ಅರಸರ ಇಕ್ಕೇರಿ, ಬಿದನೂರು, ಉತ್ತರ ಕರ್ನಾಟಕದ ಕಿತ್ತೂರು ಮೊದಲಾದ ಸ್ಥಳಗಳ ನೆಲೆಗಳನ್ನು ಸರಿಯಾಗಿ ಪರಿಶೀಲಿಸಿ ಉತ್ಖನನ ಮಾಡುವುದು ಅವಶ್ಯವಿದೆ. ಮೊದಲು ನಾವು ಆದಿ ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಗಂಗ ಕಾಲದ ನೆಲೆಗಳ ಉತ್ಖನನಕ್ಕೆ ಆದ್ಯತೆ ಕೊಡಬೇಕಾಗುತ್ತದೆ. ಕಾರಣ ಈ ಕಾಲದ ಅಂದರೆ ಕ್ರಿ. ಪೂ. ೨ನೇ ಶತಮಾನ – ಕ್ರಿ. ಶ. ೯ನೇ ಶತಮಾನ ಅವಧಿಯ ಸಾಹಿತ್ಯವೂ ದೊರಕದೇ ಜನರ ಸಾಮಾಜಿಕ ಜೀವನವನ್ನು ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗದೇ ಹೋಗಿದೆ. ಉತ್ತರ ಕರ್ನಾಟಕದಲ್ಲಿ ಶಾಸನಗಳ ಸಮೀಕ್ಷೆ ಮತ್ತು ಅಧ್ಯಯನವು ಬಹಳ ಆಗಬೇಕಾಗಿದೆ. ಈ ದಿಶೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ಸದ್ಯದಲ್ಲೇ ಹೊರ ತರಲಿರುವ ಡಾ। ಷಡಕ್ಷರಯ್ಯನವರ ಬೀದರ ಜಿಲ್ಲೆ ಶಾಸನ ಸಂಪುಟವು ಮುಂದಿನ ಇಂಥ ಕಾರ್ಯಕ್ಕೆ ಪೀಠಿಕೆಯಾಗಬಹುದು ಎಂದು ಆಶಿಸೋಣ. ಶ್ರೀ ತೋಂಟದಾರ್ಯ ಸಿದ್ಧಲಿಂಗ ಸ್ವಾಮಿಗಳ ಮಠವು ಇತ್ತೀಚೆಗೆ ಡಾ। ವೆಂಕಟೇಶ ಅವರ ಕೆಳದಿ ಅರಸರ ಕಾಲದ ಶಾಸನ ಸಂಪುಟವನ್ನು ಹೊರ ತಂದುದು ಇತಿಹಾಸ ಸಂಶೋಧನ ಕ್ಷೇತ್ರದಲ್ಲಿ ಪ್ರಶಂಸನೀಯ ಮಾದರಿಯಾಗಿದೆ.

ಇದಲ್ಲದೆ ಇನ್ನೂ ಮೂರು ಬೇರೆ ಬೇರೆ ಕ್ಷೇತ್ರಗಳಲ್ಲಿ ಅಧ್ಯಯನವನ್ನು ಮಾಡಬೇಕಾಗಿದೆ. ಗೋವಾ ಕದಂಬ, ಸಿಂಧರೇ ಮೊದಲಾದ ಪ್ರಾದೇಶಿಕ ಅರಸು ಮನೆತನಗಳ ವಾಸ್ತು–ಮೂರ್ತಿ ಶಿಲ್ಪ, ವಿಜಾಪುರ–ಗುಲ್ಬರ್ಗ–ಬೀದರ ಪ್ರದೇಶದ, ಶ್ರೀರಂಗಪಟ್ಟಣ–ಮೈಸೂರು ಪ್ರದೇಶದಲ್ಲಿಯ ಭಾರತೀಯ ಇಸ್ಲಾಂ ವಾಸ್ತುಶಿಲ್ಪ ಮತ್ತು ಶೈಲಿ ಇವುಗಳ ಅಧ್ಯಯನವನ್ನು ನಾವು ಏನೂ ಮಾಡಿಲ್ಲವೆಂದೇ ಹೇಳಬಹುದು. ಫರ್ಗುಸನ್, ಕಸೆನ್ಸನರ ಕೆಲವು ಪೀಠಿಕಾ ಸ್ವರೂಪದ ಸಂಪುಟಗಳನ್ನು ಬಿಟ್ಟರೆ ಉತ್ತರ ಕರ್ನಾಟಕದಲ್ಲಿಯೇ ಈ ಸಂಪ್ರದಾಯದ ನಿರ್ಮಿತಿಗಳನ್ನು ತಕ್ಕಮಟ್ಟಿಗೆ ಅಧ್ಯಯನ ಮಾಡಿ ಒಳ್ಳೆಯ ರೇಖಾ ಛಾಯಾಚಿತ್ರಗಳೊಂದಿಗೆ ಶ್ರೀಮತಿ ಎಲಿಜೆಬತ್ ಷ್ಕಾಟನ್ ಮರ್ಕ್ಲಿಂಜರ ಅವರು ಒದಗಿಸಿರುವ ಇಂಡಿಯನ್ ಇಸ್ಲಾಮಿಕ್ ಆರ್ಕಿಟೆಕ್ಚರ್ ಕೃತಿ ನಮ್ಮ ಮುಂದಿನ ಆಳವಾದ ಅಧ್ಯಯನಕ್ಕೆ ನೆಲೆಗಟ್ಟನ್ನು ಒದಗಿಸಿದೆ. ಇನ್ನು

ಆಧುನಿಕ ಯುಗದ ಭಾರತೀಯ ಐರೋಪ್ಯ ವಾಸ್ತುಶಿಲ್ಪ ಅಂದರೆ ಭಾರತೀಯ ಪೋರ್ಚುಗೀಸ, ಭಾರತೀಯ ಬ್ರಿಟಿಷ ನಿರ್ಮಿತಿಗಳು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಹೆಚ್ಚಾಗಿ ಉತ್ತರ ಕನ್ನಡ ಜಿಲ್ಲೆಯಲ್ಲಿಯ ಸುಮಾರು ನಾನೂರು ವರ್ಷಗಳಿಂದೀಚೆಗೆ ಕಟ್ಟಿದ ಕೆಲವು ದೇವಾಲಯಗಳು, ಹೆಚ್ಚಾಗಿ ಚರ್ಚುಗಳು ಭಾರತೀಯ ಪೋರ್ಚುಗೀಸ ಶೈಲಿಯಲ್ಲಿವೆ. ಉದಾ : ಕ್ಷೇತ್ರ ಗೋಕರ್ಣದಲ್ಲಿಯ ಮಹಾಸಿದ್ಧಿವಿನಾಯಕ, ಸಿದ್ಧೇಶ್ವರ ದೇವಾಲಯ ಮೊದಲಾದವು. ಕೆಲವು ವರ್ಷಗಳ ಹಿಂದೆ ಫಾದರ್ ಹೆರಾಸ್ ಅವರು ಈ ಪ್ರದೇಶದಲ್ಲಿಯ 'ಚರ್ಚುಗಳ ಮೇಲಿನ ಭಾರತೀಯ ದೇವಾಲಯಗಳ ಪ್ರಭಾವ' ಎಂಬ ಒಂದು ಸ್ವಾರಸ್ಯಕರ ಲೇಖನವನ್ನು ಪ್ರಕಟಿಸಿದ್ದಾರೆ. ಇತ್ತೀಚೆಗೆ ನಮ್ಮ ಘನ ಸರಕಾರದ ಮುಖ್ಯ ಕಾರ್ಯದರ್ಶಿಗಳಾಗಿ ನಿವೃತ್ತಿ ಹೊಂದಿದ ಟಿ. ಪಿ. ಇಸ್ಸಾರವರು ಮೈಸೂರು–ಬೆಂಗಳೂರು ಪ್ರದೇಶದಲ್ಲಿಯ ಹೆಚ್ಚಾಗಿ ಭಾರತೀಯ ಐರೋಪ್ಯ ಕಟ್ಟಡಗಳ ಬಗ್ಗೆ ಟಿಪ್ಪಣಿ ಮತ್ತು ಉತ್ತಮ ಛಾಯಾ ಚಿತ್ರಗಳೊಂದಿಗೆ ದಿ ಸಿಟಿ ಬ್ಯೂಟಿಫುಲ್ ಮತ್ತು ದಿ ರಾಯಲ್ ಸಿಟಿ ಎಂಬ ಎರಡು ಉಪಯುಕ್ತ ಗ್ರಂಥಗಳನ್ನು ಪ್ರಕಟಿಸಿ ಇತಿಹಾಸ ತಜ್ಞರ ಗಮನವನ್ನು ಸೆಳೆದಿದ್ದಾರೆ. ನಾನು ಮೈಸೂರಿನಲ್ಲಿದ್ದ ಸಮಯದಲ್ಲಿ ಆಕಸ್ಮಿಕವಾಗಿ ಮಂಗಳೂರಿನಲ್ಲಿಯ ಸೇಂಟ್ ಆಲೋಷಿಯಸ್ ಚರ್ಚನಲ್ಲಿಯ ಈ ಶತಮಾನದ ಆದಿಯಲ್ಲಿ ರಚಿಸಿದ ಬೈಬಲ್ ಕಥಾನಕ ಶ್ರೇಷ್ಠ ಮಟ್ಟದ ವರ್ಣ ಚಿತ್ರಗಳನ್ನು ಚರ್ಚಿನ ಗೋಡೆಗಳ ಮೇಲೆ ಮತ್ತು ಛತ್ತಿನಲ್ಲಿ ನೋಡಿದೆ. ಇದರಂತೆ ಇನ್ನೂ ಕೆಲವೆಡೆಗಳಲ್ಲಿ ಉತ್ತಮ ದರ್ಜೆಯ ಕ್ರೈಸ್ತ ವರ್ಣಚಿತ್ರಗಳೂ ಆಮೇಲೆ ನನ್ನ ಗಮನಕ್ಕೆ ಬಂದವು. ಹಾಗೆಯೇ ಹಲವಾರು ಪ್ರಕಾರದ ಕ್ರೈಸ್ತ ಗುರುಗಳ ಪ್ರವಾದಿಗಳ ವರ್ಣಾಲಂಕೃತ ಮರದ ಗೊಂಬೆಗಳು ಬಹಳ ಇವೆ. ಇವುಗಳದ್ದೇ ಅಲ್ಲಲ್ಲಿ ಪ್ರತ್ಯೇಕ ಸಂಗ್ರಹಾಲಯಗಳನ್ನು ಮಾಡಬಹುದು. ಆದರೆ ಒಟ್ಟಾರೆ ಕ್ರೈಸ್ತ ವಾಸ್ತು – ಮೂರ್ತಿ ಶಿಲ್ಪಕಲೆ ವರ್ಣಚಿತ್ರಕಲೆ ಅಧ್ಯಯನ ಯಥಾವತ್ತಾಗಿ ಆಗಿಲ್ಲ. ಇದರಂತೆಯೇ ವೀರಶೈವ ಉದ್ಧರಣೆ ವರ್ಣಚಿತ್ರಗಳು, ಶಿಲ್ಪಗಳು ಹೀಗೆ ಹಲವಾರು ಕ್ಷೇತ್ರಗಳಲ್ಲಿ ಅಲ್ಪ ಪ್ರಮಾಣದಲ್ಲಿಯೂ ಸಂಶೋಧನೆ ಅಧ್ಯಯನಗಳು ಆಗಿಲ್ಲ. ನಾನು ಆಗಲೇ ಹೇಳಿದಂತೆ ಹಲವಾರು ಸಾವಿರ ನಾಣ್ಯಗಳು ಕರ್ನಾಟಕದಲ್ಲಿ ಶೋಧವಾಗಿದ್ದರೂ ಕೂಡ ಅಧ್ಯಯನವು ತೀರ ಕಡಿಮೆ. ನರಸಿಂಹ ಮೂರ್ತಿಯವರಂಥ ವಿದ್ವಾಂಸರನ್ನೊಳಗೊಂಡು ರಾಜ್ಯ ಸರ್ಕಾರದ ಪುರಾತತ್ವ ಇಲಾಖೆ ಮತ್ತು ವಿಶ್ವವಿದ್ಯಾಲಯಗಳು ಕೂಡಲೇ ಗಂಭೀರವಾಗಿ ಸೂಕ್ತ ಕ್ರಮ ಕೈಕೊಳ್ಳಬೇಕು. ಕರ್ನಾಟಕ ಪುರಾತತ್ವದಲ್ಲಿ ಸ್ಪಷ್ಟವಾಗಿ ಏನೂ ಶೋಧನೆಯಾಗದ ಕ್ಷೇತ್ರವೆಂದರೆ ಲೋಹ ತಂತ್ರ ಜ್ಞಾನ ಮೊದಲಾದ ವೈಜ್ಞಾನಿಕ ಪ್ರಗತಿ. ಈ ದಿಶೆಯಲ್ಲಿ ಎಂ. ಎಸ್. ಮುಧೋಳ ಅವರ ಬೃಹತ್ ಶಿಲಾ ಸಂಸ್ಕೃತಿಯ ಕಬ್ಬಿಣ ಲೋಹ ತಂತ್ರಜ್ಞಾನದ ಬಗ್ಗೆಯ ಸಂಶೋಧನೆ ಆರಂಭದ ಹೆಜ್ಜೆ ಎಂದು ಹೇಳಬಹುದು.

ಕರ್ನಾಟಕದಲ್ಲಿ ಕೆಲವು ಪ್ರದೇಶಗಳು, ಸ್ಥಳಗಳು ಮತ್ತು ಅಲ್ಲಲ್ಲಿಯ ಪುರಾತತ್ವ ಕುರುಹುಗಳು ಇವುಗಳ ಬಗ್ಗೆ ಪೌರಾಣಿಕ ಇಲ್ಲವೇ ರಾಮಾಯಣ, ಮಹಾಭಾರತದ ಕಥೆಗಳನ್ನು ಹೇಳುವುದು ರೂಢಿಯಲ್ಲಿದೆ. ಉದಾ : ದಕ್ಷಿಣ–ಉತ್ತರ ಕನ್ನಡ ಜಿಲ್ಲೆ ಪರಶುರಾಮ ಕ್ಷೇತ್ರವೆಂದೂ ಹಂಪಿಯನ್ನು ಕಿಷ್ಕಿಂಧೆಯೆಂದೂ ವರ್ಣಿಸಲಾಗಿದೆ. ಈ ಪ್ರದೇಶಗಳಲ್ಲಿಯ ಈಚಿನ ತಜ್ಞರ ವೈಜ್ಞಾನಿಕ ಮತ್ತು ಪುರಾತತ್ವ ಶೋಧನೆಗಳಿಂದ, ಸಂಬಂಧಪಟ್ಟ ಕಥೆಗಳು ಬಹಳ ಪ್ರಾಚೀನವಾಗಿದ್ದು ಅವುಗಳಲ್ಲಿ ಅಲ್ಲಿಯ ಪರಿಸರ ಅಥವಾ ಪ್ರಾಚೀನ ಜನರ ಪರಂಪರೆಯನ್ನು ಸೂಚಿಸುತ್ತವೆಯೆಂದು ನನ್ನ ಅಧ್ಯಯನದಲ್ಲಿ ಮಸಕು ಮಸಕಾಗಿ ಕಾಣುತ್ತಿವೆ. ಆದ್ದರಿಂದ ಸ್ಥಳೀಯ ಸಾಂಸ್ಕೃತಿಕ ಪರಂಪರೆ ಮತ್ತು ಪುರಾತತ್ವ ಒಂದು ಕುತೂಹಲಕಾರಿಯಾದ ಕ್ಷೇತ್ರವಾಗಿದ್ದು ವ್ಯಾಪಕವಾಗಿ ಇಂಥ ಅಧ್ಯಯನದ ಅವಶ್ಯಕತೆಯಿದೆಯೆಂದು ತೋರುವುದು.

ಮಧ್ಯಯುಗೀನ–ಆಧುನಿಕ ಕಾಲದ ಎಲ್ಲ ಸಣ್ಣ ಸಣ್ಣ ಸಂಸ್ಥಾನಗಳ ವ್ಯವಸ್ಥಿತ ಸಮಗ್ರ ಇತಿಹಾಸ–ಸಂಸ್ಕೃತಿ ಅಧ್ಯಯನವು ಒಂದು ದೇಶದ ಪ್ರದೇಶ ಇತಿಹಾಸಕ್ಕೆ ಕೇವಲ ಪೂರಕ ಪ್ರಕರಣಗಳಲ್ಲ. ಸಾಮ್ರಾಜ್ಯಗಳ ಇತಿಹಾಸದಷ್ಟೇ ಮಹತ್ವವೂ ಆಗಿದೆಯೆಂಬುದು ಇತಿಹಾಸಜ್ಞರಿಗೆ ಮನವರಿಕೆಯಾಗಿದೆ. ಆಗಾಗ್ಗೆ ಅಲ್ಲೊಂದು ಇಲ್ಲೊಂದು ಗ್ರಂಥಗಳು

ಬಂದಿವೆ. ದಿನಕರ ದೇಸಾಯಿಯವರ ದಿ ಮಹಾಮಂಡಲೇಶ್ವರಾಸ್ ಅಂಡ್ ದಿ ಚಾಲುಕ್ಯಸ್ ಆಫ್ ಕಲ್ಯಾಣಿ, ವಿ. ಅರ್ನೆಸ್ಟ್ ಅವರ ದಿ ನಾಯಕ್ಸ್ ಆಫ್ ಇಕ್ಕೇರಿ (೧೯೮೦), ಎಂ. ಎಸ್. ಪುಟ್ಟಣ್ಣ ಅವರ ಚಿತ್ರದುರ್ಗದ ಪಾಳೆಗಾರರು (೧೯೨೪) ಹಾಗು ಇಕ್ಕೇರಿ ಸಂಸ್ಥಾನದ ಚರಿತ್ರೆ (೧೯೩೧) ಮೊದಲಾದವು. ಇವುಗಳ ಸಮಗ್ರ ಅಧ್ಯಯನವು ಇತ್ತೀಚೆಗೆ ಹೆಚ್ಚುತ್ತಿರುವುದು ಸಂತೋಷದ ಸಂಗತಿ. ಎಂ. ಎಸ್. ಕೃಷ್ಣಮೂರ್ತಿಯವರ ದಿ ನೊಳಂಬಾಸ್ (೧೯೮೦), ಬಿ. ಆರ್. ಗೋಪಾಲ ಅವರ ಮೈನರ್ ಡೈನಾಸ್ಟೀಸ್ ಆಫ್ ಸೌತ್ ಇಂಡಿಯ : ಕರ್ನಾಟಕ (೧೯೮೨) ಮೊದಲಾದ ಕೃತಿಗಳು ಗಮನಾರ್ಹ. ವಿಶೇಷವಾಗಿ ಕೆಳದಿ ಅರಸರ ಇತಿಹಾಸ ಮತ್ತು ಸಂಸ್ಕೃತಿ ಕ್ಷೇತ್ರಕ್ಕೆ ತಮ್ಮ ಸತತ ಅಮೂಲ್ಯ ಶೋಧನೆ ಮತ್ತು ಅಧ್ಯಯನದಿಂದ ಸೇವೆ ಸಲ್ಲಿಸಿದ ಕೆಳದಿ ಗುಂಡಾ ಜೋಯ್ಸರು ಪ್ರಶಂಸಾರ್ಹರು. ಈ ದಿಶೆಯಲ್ಲಿಯೂ ಶ್ರೀ ತೋಂಟದಾರ್ಯ ಸಿದ್ಧಲಿಂಗೇಶ್ವರ ಮಠದ ವೀರಶೈವ ಅಧ್ಯಯನ ಸಂಸ್ಥೆಯು ಸೋದೆ ಅರಸು ಮನೆತನ – ಒಂದು ಅಧ್ಯಯನ ಎಂಬ ಒಂದು ವಿಚಾರ ಸಂಕಿರಣವನ್ನು ನಡೆಸಿ ತನ್ನ ಹಿರಿಮೆಯನ್ನು ತೋರಿಸಿದೆ. ಅದರ ಹೊತ್ತಿಗೆಯನ್ನು ಪ್ರಕಟಣೆಗೆ ಸಿದ್ಧಮಾಡುತ್ತಲಿದೆ. ಈ ಸಂಸ್ಥೆಯು ಈಗಾಗಲೇ ಶಿರಸಂಗಿ ಸಂಸ್ಥಾನ ಒಂದು ಅಧ್ಯಯನ, ರಾಮದುರ್ಗ ವಿಮೋಚನಾ ಹೋರಾಟ ಎಂಬ ಇತಿಹಾಸದ ಹೊತ್ತಿಗೆಗಳನ್ನು ಪ್ರಟಿಸಿದೆ. ಇದರಂತೆಯೇ ಶಿವಮೊಗ್ಗಾದ ಶ್ರೀ ಬೆಕ್ಕಿನ ಕಲ್ಮಠ ಸಂಸ್ಥೆಯು ೧೯೯೧ ಅಕ್ಟೋಬರ್‌ನಲ್ಲಿ ಕೆಳದಿ ಅರಸು ಮನೆತನದ ಸಮಗ್ರ ಅಧ್ಯಯನ ಎಂಬ ವಿಷಯದ ಮೇಲೆ ವಿಚಾರ ಸಂಕಿರಣವನ್ನು ಏರ್ಪಡಿಸಿ ಇದರ ಗ್ರಂಥವನ್ನು ಅಚ್ಚು ಹಾಕಿಸುತ್ತಿದೆ. ಇನ್ನು ತಮ್ಮ ನಗರ ಮೈಸೂರಿನ ಶ್ರೀ ಸುತ್ತೂರು ಮಠದ ಸಂಸ್ಥೆಯವರು ಈ ಪ್ರದೇಶದ ಕಳಲೆ ದಳವಾಯಿಗಳು ವಿಷಯದಲ್ಲಿ ೧೯೯೨ರಲ್ಲಿ ವಿಚಾರ ಸಂಕಿರಣವನ್ನು ನಡೆಸಿ ಹೊತ್ತಿಗೆಯನ್ನು ಸಿದ್ಧಪಡಿಸುತ್ತಿದ್ದು ಸ್ತುತ್ಯಾರ್ಹರಾಗಿದ್ದಾರೆ. ಈಚೆಗೆ ಬೆಂಗಳೂರಿನ ಶ್ರೀ ಸರ್ಪಭೂಷಣ ಮಠದವರು ಹದಿನಾರು ಅರಸು ಮನೆತನ ದ ಮೇಲೆ, ತುಮಕೂರಿನಲ್ಲಿ ಶ್ರೀ ಸಿದ್ಧಗಂಗಾ ಮಠದವರು ಹಾಗಲವಾಡಿ ಅರಸು ಮನೆತನ ವಿಷಯದ ಮೇಲೆ ವಿಚಾರ ಸಂಕಿರಣಗಳನ್ನು ನಡೆಸಿದ್ದಾರೆ. ಇನ್ನು ಸಧ್ಯದಲ್ಲಿಯೇ ಬೆಂಗಳೂರಿನ ನೊಣಬ ಸಮಾಜದವರು ಬಿಜ್ಜಾವರದ ಪಾಳೆಗಾರ ರ ಬಗ್ಗೆ, ಕೊಡಗಿನ ವೀರಶೈವ ಮಠದವರು ಕೊಡಗಿನ ಅರಸು ಮನೆತನ ದ ಬಗ್ಗೆ ವಿಚಾರ ಸಂಕಿರಣಗಳನ್ನು ನಡೆಸಲು ಸನ್ನದ್ಧರಾಗುತ್ತಿದ್ದಾರೆ. ಇವೆಲ್ಲ ವಿಚಾರ ಸಂಕಿರಣಗಳು ನಡೆಯುವಂತೆ ಹಿಂದೆ ಎಲೆಮರೆ ಕಾಯಿಯಂತೆ ಸತತ ಪ್ರಯತ್ನ ಮಾಡುತ್ತಿರುವವರು ನನ್ನ ಅಚ್ಚುಮೆಚ್ಚಿನ ಸ್ನೇಹಿತರುಗಳಲ್ಲಿ ಒಬ್ಬರಾದ ಕನ್ನಡ ಭಾಷೆ ಮತ್ತು ಸಾಹಿತ್ಯ ಕ್ಷೇತ್ರದ ಘನ ವಿದ್ವಾಂಸರಾಗಿದ್ದರೂ ತಮ್ಮ ಹಾಗೂ ತಮ್ಮ ಮಾರ್ಗದರ್ಶನದಲ್ಲಿ ಪಿಎಚ್.ಡಿ. ವಿದ್ಯಾರ್ಥಿಗಳ ಗಣನೀಯ ಸಂಶೋಧನೆಗಳಿಂದ ಇತಿಹಾಸ ಕ್ಷೇತ್ರವನ್ನು ಶ್ರೀಮಂತಗೊಳಿಸಿದ ಮಾನ್ಯ ಶ್ರೀ ಎಂ. ಎಂ. ಕಲಬುರ್ಗಿಯವರು. ಈ ಕ್ಷೇತ್ರದಲ್ಲಿ ಅಧ್ಯಯನಗಳಾಗುತ್ತಿದ್ದರೂ ಈ ಮನೆತನಗಳ ಇತರ ಸಾಂಸ್ಕೃತಿಕ ವಿಷಯಗಳು, ಸಿಂಧರು, ಸಾಂತರಸರು ಮೊದಲಾದ ಹಲವಾರು ಅರಸು ಮನೆತನಗಳ ಅಧ್ಯಯನವಾಗಬೇಕಾಗಿದೆ.

ಈ ಕ್ಷೇತ್ರಕ್ಕೆ ಸಂಬಂಧಿಸಿದ ಹಾಗೆ ಇನ್ನೊಂದು ಕಾರ್ಯವೆಂದರೆ ವಿಶೇಷವಾಗಿ ವಿಜಯನಗರ ಹಾಗೂ ಅನಂತರ ಕಾಲದ ಇತಿಹಾಸಕ್ಕೆ ಮುಖ್ಯವಾಗಿ ಸಂಬಂಧಿಸಿದ ಅಮೂಲ್ಯವಾದ ಕೈಫಿಯತ್ತುಗಳು, ಸಾಂಗತ್ಯಗಳು, ತಿಗಳಾರಿ ಗ್ರಂಥಗಳು, ಕಡತಗಳು ಮೊದಲಾದವುಗಳ ಸಂಗ್ರಹ ಮತ್ತು ಪ್ರಕಟಣೆ. ಕಲಬುರ್ಗಿಯವರು ಸಂಪಾದಿಸಿದ ಕೈಫಿಯತ್ತುಗಳ ಸುಮಾರು ೮೦೦ ಪುಟಗಳವರೆಗಿನ ಒಂದು ಸಂಪುಟವನ್ನು ಕನ್ನಡ ವಿಶ್ವವಿದ್ಯಾಲಯವು ಸಧ್ಯದಲ್ಲೇ ಪ್ರಕಟಿಸಲಿದೆ ಎಂಬುದು ಹರ್ಷದಾಯಕವಾದುದು. ಈ ವಿದ್ವಾಂಸರೇ ಸಂಪಾದಿಸಿದ ಇಬ್ಬರು ಕವಿಗಳ ಶಿರುಮನ ಸಾಂಗತ್ಯವನ್ನು ಗದುಗಿನ ಶ್ರೀ ತೋಂಟದಾರ್ಯ ಮಠವು ಮತ್ತು ಮೈಸೂರಿನ ಶ್ರೀ ಸುತ್ತೂರು ಮಠವು ನಿಂಬ ಸಾಮಂತ ಚರಿತೆ ಮತ್ತು ಇಮ್ಮಡಿ ಚಿಕ್ಕ ಭೂಪಾಲ ಸಾಗಂತ್ಯಗಳನ್ನು ಕ್ರಮವಾಗಿ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಧಾರವಾಡದ ಶ್ರೀ ಮುರುಘಾ ಮಠವು ಪ್ರಕಟಿಸಿವೆ. ಈ ಪ್ರಕಾರದ ಕೆಲವೇ ಪ್ರಕಟಣೆಗಳು ಈ ಕ್ಷೇತ್ರದಲ್ಲಿಯ ಮುಂದಿನ ಬೃಹತ್ ಕಾರ್ಯಕ್ಕೆ ಸ್ಫೂರ್ತಿದಾಯಕ ಪೀಠಿಕೆಯಾಗಬಹುದೆಂದು ಆಶಿಸೋಣ. ತಿಗಳಾರಿ ಗ್ರಂಥಗಳ ಅಧ್ಯಯನಕ್ಕೆ ಗುಂಡಾಜೋಯ್ಸರು ಈಗಾಗಲೇ ಒಂದು ಯೋಜನೆಯನ್ನು ಹಾಕಿಕೊಂಡಿರುವುದು ಇಲ್ಲಿ ಗಮನಿಸಬಹುದು.

ಹೀಗೆ ಶ್ರೀ ಸುತ್ತೂರು ಮಠವೂ ಸೇರಿದಂತೆ ವಿದ್ಯಾ ಪ್ರಸಾರದ ಪವಿತ್ರ ಕಾರ್ಯದಲ್ಲಿ ವಿಶಿಷ್ಟ ಹಾಗೂ ಗಣನೀಯ ಸೇವೆಯನ್ನು ಸಲ್ಲಿಸುತ್ತಿರುವ ವೀರಶೈವ ಮಠಗಳು ಈಗ ಇತಿಹಾಸ ಸಂಶೋಧನಾ ಕ್ಷೇತ್ರದಲ್ಲೂ ಸಂಶೋಧನಾ ಹಾಗೂ ಇತರ ಸಂಸ್ಥೆಗಳಿಗೆ ಮಾದರಿಯಾಗಿ ಸ್ಫೂರ್ತಿಯನ್ನು ಒದಗಿಸಿ ಸಮಾಜದ ಕೃತಜ್ಞತೆಗೆ ಪಾತ್ರವಾಗಿವೆ.

ಬೇರೆಡೆಗಳಲ್ಲಿಯ ದೆಹಲಿಯ ಭೋಗಿಲಾಲ್ ಇಂಡಲಾಜಿಕಲ್ ರಿಸರ್ಚ ಇನ್‌ಸ್ಟಿಟ್ಯೂಟ್, ಇಂದೋರಿನ ಕುಂದ ಕುಂದ ಜ್ಞಾನಪೀಠ, ಸೋಲಾಪುರುದ ಜೈನ ಸಂಸ್ಕೃತಿ ಸಂರಕ್ಷಕ ಸಂಘ ಮೊದಲಾದ ಜೈನ ಸಂಸ್ಥೆಗಳು ಭಾರತದಲ್ಲಿಯ ಎಲ್ಲ ಪ್ರಕಾರದ ಜೈನ ನಿರ್ಮಿತಿಗಳ, ಶಾಸನಗಳ, ಶಾಸ್ತ್ರಗಳ ಅಧ್ಯಯನ ಸಂಶೋಧನೆಗಳನ್ನು ದೊಡ್ಡ ಪ್ರಮಾಣದಲ್ಲಿಯೇ ನಡೆಸುತ್ತಿವೆ. ಕರ್ನಾಟಕದಲ್ಲಿಯೂ ನನಗೆ ತಿಳಿದಂತೆ ಮೂಡಬಿದಿರೆಯ ಶ್ರೀ ಜೈನ ಮಠವು ಎಲ್ಲ ಜೈನ ಬಸದಿ ಮೂರ್ತಿಶಿಲ್ಪ ಅಧ್ಯಯನ ಕಾರ್ಯವನ್ನು ಡಿ. ಗುರುರಾಜ ಭಟ್ಟರಿಗೆ ವಹಿಸಿತ್ತು. ದುರದೃಷ್ಟವಶಾತ್ ಅವರ ಅನಿರೀಕ್ಷಿತ ಮರಣದಿಂದ ಅದು ಅಲ್ಲಿಗೆ ನಿಂತಿದೆಯೆಂದು ಕಾಣಿಸುವುದು.

ಅಧ್ಯಯನವನ್ನು ಕಟ್ಟುನಿಟ್ಟಾಗಿ ಧಾರ್ಮಿಕ ಸಾಹಿತ್ಯಕ್ಕೆ ಸೀಮಿತಗೊಳಿಸಿದಂಥ ವೈದಿಕ ಮಠಗಳೂ ಇತಿಹಾಸ ಅಧ್ಯಯನದಲ್ಲಿ ಇತ್ತೀಚೆಗೆ ಆಸಕ್ತಿಯನ್ನು ತೋರಿಸಲು ಆರಂಭಿಸಿವೆ. ಕಂಚಿ ಕಾಮಕೋಟಿ ಶ್ರೀ ಶಂಕರಚಾರ್ಯ ಮಠದ ಉಟ್ಟಂಕಿತ ವಿದ್ಯಾ ಅರಣ್ಯ ಟ್ರಸ್ಟ್ ಕರ್ನಾಟಕವೂ ಸೇರಿದಂತೆ ಭಾರತದ ಹಾಗೂ ಬೃಹತ್ ಭಾರತದ ಸಂಸ್ಕೃತ ಮತ್ತು ಪ್ರಾಕೃತ ಶಾಸನಗಳ ಅಧ್ಯಯನವನ್ನು ಶುರು ಮಾಡಿ, ಮೌರ್ಯರ ಕಾಲದಿಂದ ಕ್ರಿ. ಶ. ೩ನೇ ಶತಮಾನಗಳವರೆಗಿನ ಹಿಂದೆ ಸಂಪಾದಿಸಿದ ಶಾಸನಗಳನ್ನೂ ಪರಿಷ್ಕರಿಸಿ ಉಟ್ಟಂಕಿತ ವಿದ್ಯಾ ಅರಣ್ಯ ಸಂಸ್ಕೃತ ಶಾಸನಗಳು ಎಂಬ ಎರಡು ಸಂಪುಟಗಳಲ್ಲಿ ಪ್ರಕಟಿಸಿದೆ. ಶೃಂಗೇರಿ ಶ್ರೀ ಶಾರದಾ ಪೀಠದ ಮಠದಲ್ಲಿಯ ಐತಿಹಾಸಿಕ ಮಹತ್ವದ ಕಡತಗಳ ಅಧ್ಯಯನಕ್ಕೆ ಶ್ರೀ ಮಠವು ವಿದ್ವಾಸಂರುಗಳಿಗೆ ಎಡೆಮಾಡಿ ಕೊಟ್ಟಿದೆ. ಶಿರಸಿಯ ಎ. ಕೆ. ಶಾಸ್ತ್ರಿಯವರು ಈ ಕ್ಷೇತ್ರದಲ್ಲಿ ಶೃಂಗೇರಿಯ ಕಡತಗಳು ಎಂಬ ತಮ್ಮ ಪ್ರಕಟಣೆಗಳಿಂದ ಉತ್ತಮ ಸೇವೆಯನ್ನೂ ಸಲ್ಲಿಸುತ್ತಿದ್ದಾರೆ. ಈ ಮಠಗಳ ಅಧ್ಯಯನ ಸಂಸ್ಥೆಗಳು ಕೂಡ ಇತಿಹಾಸ ಕ್ಷೇತ್ರದಲ್ಲಿ ಸಂಶೋಧನೆ ಮತ್ತು ಅಧ್ಯಯನವನ್ನೂ ವಿಸ್ತಾರಗೊಳಿಸಿ ಹೆಚ್ಚಿನ ಪ್ರಮಾಣದಲ್ಲಿ ಅವಕಾಶ ಕೊಡುವುದೆಂದು ನಿರೀಕ್ಷಿಸಬಹುದು.

**ಕೆಲವು ಸಲಹೆಗಳು**

ನಾನು ಸುಮಾರು ೧೦೦೦ಕ್ಕೂ ಹೆಚ್ಚು ಹಳ್ಳಿಗಳಲ್ಲಿ ನನ್ನ ಪುರಾತತ್ವ ಅನ್ವೇಷಣೆಯನ್ನು ನಡೆಸಿದ್ದೇನೆ. ಪ್ರತ್ಯಕ್ಷ ಅನ್ವೇಷಣೆ ಆಧಾರದ ಮೇಲೆ ಹೇಳುವುದಾದರೆ ಕರ್ನಾಟಕದ ಪ್ರತಿಯೊಂದು ಹಳ್ಳಿಯಲ್ಲಿ ಕನಿಷ್ಠ ಒಂದೆರಡು ಶಾಸನಗಳು, ವೀರಗಲ್ಲುಗಳಾದರೂ ಇವೆ. ಇವೆಲ್ಲವನ್ನು ಗಮನಿಸಿ ಸ್ಥೂಲವಾಗಿ ಲೆಕ್ಕ ಮಾಡಿ ಹೇಳುವುದಾದರೆ ಇದುವರೆಗೆ ಶೇ. ೨೦ಕ್ಕಿಂತಲೂ ಕಡಿಮೆ ಕರ್ನಾಟಕದಲ್ಲಿಯ ಪುರಾತತ್ವ ಅವಶೇಷಗಳು ಶೋಧನೆಯಾಗಿವೆಯೆಂದು ಅಂದಾಜು ಮಾಡಬಹುದು, ಅಂದರೆ ಇನ್ನು ಮುಂದೆ ಮಾಡಬೇಕಾದ ಕೆಲಸ ಪ್ರಮಾಣ, ವಿಸ್ತಾರ ಮತ್ತು ಮಹತ್ವ ಸ್ವಲ್ಪ ಮಟ್ಟಿಗೆ ನಮ್ಮ ಗಮನಕ್ಕೆ ಬರಬಹುದು. ಆದರೆ ಸಧ್ಯ ನಡೆಯುತ್ತಿರುವ ಸಂಶೋಧನೆಯ ಪ್ರಮಾಣ ಮತ್ತು ವೇಗ ತೀರ ನಿಧಾನ ಮತ್ತು ಅಲ್ಪ. ಸಾಲದುದಕ್ಕೆ ಈ ಪ್ರತ್ಯಕ್ಷ ಪ್ರಮಾಣಗಳು ದಿನೇ ದಿನೇ ಹಲವಾರು ಕಾರಣಗಳಿಂದ ಹಾಳಾಗುತ್ತಿವೆ. ಸಾಧ್ಯವಾದಷ್ಟು ಮಟ್ಟಿಗಾದರೂ ಉಳಿಸಿ ಅವುಗಳ ಸಂಶೋಧನೆಯಲ್ಲಿ ತೊಡಗಬೇಕಾದರೆ ಜನ ಜಾಗೃತಿ ಮತ್ತು ಯುವಕರಲ್ಲಿ ಇತಿಹಾಸ ಪ್ರಜ್ಞೆ ಮತ್ತು ಕಾರ್ಯೋನ್ಮುಖತೆ ಬೆಳೆಸಬೇಕಾಗಿದೆ. ಕೇವಲ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರಜ್ಞರಿಂದ ಈ ಬೃಹತ್ ಅನ್ವೇಷಣೆ ಕಾರ್ಯವನ್ನು ಪೂರೈಸಲು ಸಾಧ್ಯವಿಲ್ಲ. ಈ ಸಾಂಸ್ಕೃತಿಕ ಸಂಪತ್ತನ್ನು ಉಳಿಸಿ, ರಕ್ಷಿಸುವುದಕ್ಕೆ, ಅಧ್ಯಯನಕ್ಕೆ ಬೇಕಾದ ವ್ಯವಸ್ಥಿತ ವೈಜ್ಞಾನಿಕ ಚಳುವಳಿಯ ಮನೋಭಾವವನ್ನೇ ಯುವಕರಲ್ಲಿ ಮೂಡಿಸಬೇಕಾಗಿದೆ. ನನಗೆ ತಿಳಿದ ಮಟ್ಟಿಗೆ ಇಂಥ ಚಳುವಳಿಯನ್ನು ಎರಡು ಹಂತದಲ್ಲಿ ಮಾಡಬೇಕಾಗಿದೆ. ಹೈಸ್ಕೂಲ ಮತ್ತು ಪದವಿಪೂರ್ವ ಮಟ್ಟದಲ್ಲಿ ವಿದ್ಯಾರ್ಥಿಗಳಿಗೆ ಇತಿಹಾಸದಲ್ಲಿ ಆಸಕ್ತಿ ಬರುವಂತೆ

ಇತಿಹಾಸ ಬೋಧನಾ ಕ್ರಮದಲ್ಲಿ ಸುಧಾರಣೆಯಾಗಬೇಕಾಗಿದೆ. ಇದನ್ನು ನಾನು ಒಂದೆರಡು ಉದಾಹರಣೆಗಳಿಂದ ಪ್ರಯತ್ನಿಸುತ್ತೇನೆ. ಬಾದಾಮಿ ಚಾಲುಕ್ಯರ ಇತಿಹಾಸದ ಒಂದೆರಡು ನಿದರ್ಶನಗಳು. ಮಂಗಳೇಶನು ತನ್ನ ಅಣ್ಣ ಮೊದಲನೇ ಕೀರ್ತಿವರ್ಮನ ಕಾಲದಲ್ಲಿ ಅತ್ಯಂತ ಸ್ವಾಮಿನಿಷ್ಠೆಯಿಂದ ಅಣ್ಣನ ಪರವಾಗಿ ರಾಜ್ಯ ವಿಸ್ತಾರವನ್ನು ಸಂಪತ್ತನ್ನು ಹೆಚ್ಚಿಸಿದನು. ಇವನು ಬಾದಾಮಿಯಲ್ಲಿ ಒಂದು ವಿಷ್ಣು ದೇವಾಲಯವನ್ನು ಬಂಡೆಯಲ್ಲಿ ಕೊರೆಯಿಸಿ ನಿರ್ಮಿಸಿದ್ದು ಜಗತ್ಪ್ರಸಿದ್ಧ. ಇದರಲ್ಲಿಯ ಇವನ ಶಾಸನದಲ್ಲಿ ಈ ದೇವಾಲಯವನ್ನು ನಿರ್ಮಾಣ ಮಾಡಿದ ಪುಣ್ಯ ತನ್ನ ಅಣ್ಣನಿಗೆ ಸೇರಲಿಯೆಂದು ಅವನ ಸೇವೆ ಮಾಡುವ ಅವಕಾಶ ತನಗಿರಲಿ ಎಂದು ಹೇಳಿಕೊಂಡಿದ್ದಾನೆ. ಮಂಗಳೇಶನ ಬಗ್ಗೆ ಹೇಳುವಾಗ ಅವನು ಈ ಸುಂದರ ದೇವಾಲಯವನ್ನು ನಿರ್ಮಾಣ ಮಾಡಿದ್ದ ಅನಂತರ ನ್ಯಾಯವಾಗಿ ಇಮ್ಮಡಿ ಪುಲಿಕೇಶಿಗೆ ಹೋಗಬೇಕಾದ ರಾಜ್ಯವನ್ನು ತನ್ನ ಮಗನಿಗೆ ದಕ್ಕುವಂತೆ ಮಾಡಿದ್ದರ ಬಗ್ಗೆ ಮಾತ್ರ ಓದುತ್ತೇವೆ. ರಾಮಾಯಣದ ಭರತನಂತಿದ್ದ ಇವನ ಈ ಘನ ವ್ಯಕ್ತಿತ್ವದ ಬಗ್ಗೆ ಇತಿಹಾಸ ಪುಸ್ತಕದಲ್ಲಿ ಛಾಯೆಯು ಇಲ್ಲ. ಹಾಗೆ ರಾಜ್ಯವನ್ನು ಆಶಿಸಿದ್ದು ತಂದೆಯ ಸಹಜ ಪುತ್ರವಾತ್ಸಲ್ಯ ಪ್ರವೃತ್ತಿ. ಇದು ಘನ ಇಕ್ಷ್ವಾಕುವಂಶದಲ್ಲಿ ಹುಟ್ಟಿ ಅತ್ಯುತ್ತಮ ಪರಂಪರೆ, ಸಂಸ್ಕಾರ ವಿದ್ಯಾಭ್ಯಾಸದಿಂದ ಬೆಳೆದ ಹಾಗೂ ಕೈಕೆಯಿಯನ್ನು ಮದುವೆಯಾಗುವ ಕಾಲದ ಅವಳ ತಂದೆ ಕೊಟ್ಟ ಭಾಷೆಯಿಂದ ಬಂಧಿತನಾಗಿದ್ದ, ಜನರಿಗೆ ಆದರ್ಶಪ್ರಾಯನಾಗಿದ್ದ ದಶರಥನನ್ನೂ ಈ ಪುತ್ರವಾತ್ಸಲ್ಯವು ದಾರಿತಪ್ಪುವ ಹಾಗೆ ಮಾಡಿತು. ಇನ್ನೊಂದು ಉದಾ : ಬಾದಾಮಿ ಊರೊಳಗೆ ಒಂದು ಬಂಡೆಯ ಮೇಲೆ ಪಲ್ಲವ ನರಸಿಂಹ ವರ್ಮನ ಶಾಸನ ಇರುವುದು ಇತಿಹಾಸ ತಜ್ಞರಿಗೆ ತಿಳಿದ ವಿಷಯ. ಸುಮಾರು ಕ್ರಿ. ಶ. ೬೪೨ರ ಈ ಶಾಸನದ ಕೊನೆಯ ಸಾಲಿನ ಕೆಳಗೆಯೇ ಮೊದಲನೇ ಪುಲಿಕೇಶಿಯ ಕ್ರಿ. ಶ. ೫೪೩ ಶಾಸನದ ಒಂದು ಪ್ರತಿ ಇರುವುದು ಅಷ್ಟಾಗಿ ಪ್ರಚಾರವಿಲ್ಲದ ವಿಷಯ. ಪುಲಿಕೇಶಿಯು ತನ್ನ ಶಾಸನದಲ್ಲಿ ಬಾದಾಮಿಯಲ್ಲಿ ಯಾವ ದಿಕ್ಕಿನಿಂದಲೂ ಭೇದಿಸಲಾಗದ ಬಲವಾದ ಕೋಟೆಯನ್ನು ಕಟ್ಟಿದನೆಂದು ಹೇಳಿಕೊಂಡಿದ್ದಾನೆ. ಇವೆರಡು ಶಾಸನಗಳ ಕಾಲಮಾನದ ಅಂತರ ಕೇವಲ ೧೦೦ ವರ್ಷ. ಅಷ್ಟರಲ್ಲಿಯೇ ಈ ಅಭೇದ್ಯ ಕೋಟೆ ಶತ್ರುವಿನ ಕೈವಶವಾಗಿ 'ವಾತಾಪಿಕೊಂಡ' ಎಂಬ ತನ್ನ ಹೆಗ್ಗಳಿಕೆಯ ಬಾವುಟವನ್ನು ಕೋಟೆಯ ಮೇಲೆ ಹಾರಿಸಿದನೆಂಬಂತೆ ಈ ಶಾಸನದ ಹೃದಯಲ್ಲಿ ನೆಟ್ಟಿದ್ದಾನೆ. ತನ್ನ ಶಾಸನವನ್ನು ಪಲ್ಲವ ನರಸಿಂಹವರ್ಮ, ಎಂಥ ಐತಿಹಾಸಿಕ ವಿಪರ್ಯಾಸ !

ಪ್ರಬಲ ಸೈನಿಕ ರಾಷ್ಟ್ರಗಳಾದ ಹಿಂದಿನ ರಷ್ಯಾ ಸಂಯುಕ್ತ ಸಂಸ್ಥಾನದ ಇಂದಿನ ಪರಿಸ್ಥಿತಿ, ಒಂದರ ಮೇಲೊಂದು ಪೈಪೋಟಿಯಲ್ಲಿ ಆಗುತ್ತಿರುವ ಇರಾಕ್–ಅಮೇರಿಕೆ ಯುದ್ಧ ಇವೆಲ್ಲವನ್ನು ಗಮನಿಸಿದಾಗ ಈ ಶಾಸನದಿಂದ ನಾವು ಕಲಿಯುವ ಪಾಠ ಇಂದಿಗೂ ಪ್ರಸ್ತುತವಾಗಿದೆ ಎಂಬ ಸತ್ಯ ಕಾಣುತ್ತದೆ. ಇಂಥ ನೂರಾರು ಉದಾಹರಣೆಗಳು ನಮ್ಮ ಇತಿಹಾಸದಲ್ಲಿವೆ. ಹಾಗೆಯೇ ಗಣಿತ ಶಾಸ್ತ್ರ, ಖಗೋಳ ಶಾಸ್ತ್ರ ಮೊದಲಾದ ಉಪಯುಕ್ತ ಕ್ಷೇತ್ರಗಳಲ್ಲಿಯ ಸಾಧನೆಗಳ ಬಗ್ಗೆ ನಮ್ಮ ಇತಿಹಾಸದಲ್ಲಿ ತೀರ ತೀರ ಗೌಣಸ್ಥಾನ ಇಂಥ ಮೌಲಿಕ ಅಂಶಗಳು ಸಾಧನೆಗಳು ಕರ್ನಾಟಕದ ಏಕೆ, ಇಡೀ ಭಾರತದ ಇತಿಹಾಸದುದ್ದಕ್ಕೂ ಇವೆ. ಇಂಥ ಮೌಲಿಕ ಅಂಶಗಳಿಗೆ ಮತ್ತು ಇವುಗಳ ಇತಿಹಾಸ ವಿಭಾಗಕ್ಕೆ ತುಂಬ ಅವಶ್ಯ ಮತ್ತು ಪರಸ್ಪರ ಲಾಭದಾಯಕ. ಉದಾಹರಣೆಗೆ ಪ್ರಾಣಿ, ಸಸ್ಯ, ಲೋಹ, ತಂತ್ರ ವಿಜ್ಞಾನಿಗಳಿಗೆ ಪ್ರಾಗಿತಿಹಾಸ ನೆಲೆಗಳ ಪುರಾತತ್ವ ಉತ್ಖನನಗಳಲ್ಲಿ ದೊರೆಯುವ ಧಾನ್ಯಗಳು, ಪ್ರಾಣಿ ಎಲುಬುಗಳು, ಲೋಹ ಕುಲುಮೆ ಉಪಕರಣಗಳಿಂದ ಕ್ರಮವಾಗಿ ಆ ಕಾಲದ ಸಸ್ಯ, ಪ್ರಾಣಿ ವರ್ಗ, ಲೋಹ ತಂತ್ರ, ವಿಜ್ಞಾನ ತಿಳಿಯಲು ಸಾಧ್ಯ. ಇತಿಹಾಸಕ್ಕೆ ಈ ವಿಜ್ಞಾನಿಗಳ ಉಪಯೋಗ ಗೊತ್ತೇ ಇದೆ.

ಇತ್ತೀಚಿನವರೆಗಿನ ಸಂಶೋಧನೆಗಳಿಂದ ಫಲಿತಾಂಶಗಳನ್ನೊಳಗೊಂಡ ಇತಿಹಾಸದ ಎಲ್ಲ ವಿಷಯಗಳಿಗೆ ಸಂಬಂಧಿಸಿದ ಪುಸ್ತಕಗಳು ಕನ್ನಡದಲ್ಲಿ ದೊಡ್ಡ ಪ್ರಮಾಣದ ರಚನೆ ಇತರ ಭಾಷೆಗಳಲ್ಲಿಯ ಉತ್ತಮ ಪುಸ್ತಕಗಳ ಭಾಷಾಂತರಗಳು ಪದವಿ ಮತ್ತು ಸ್ನಾತಕೋತ್ತರ ಪದವಿ ತರಗತಿಗಳ ವಿದ್ಯಾರ್ಥಿಗಳಿಗೋಸ್ಕರ ಸಿದ್ಧವಾಗಬೇಕು. ಈ ಕಾರ್ಯಕ್ರಮಕ್ಕೆ ವಿಶೇಷ ಆದ್ಯತೆಯನ್ನು ಕೊಡಬೇಕು. ಏಕೆಂದರೆ ಇಂದಿನ ವಿದ್ಯಾರ್ಥಿಗಳ ಅಸಮರ್ಪಕ ಅಧ್ಯಯನ ಮತ್ತು

ಸಂಶೋಧನೆ ಮಟ್ಟಕ್ಕೆ ಅವಶ್ಯ ಕನ್ನಡ ಪುಸ್ತಕಗಳ ಕೊರತೆಯು ಮುಖ್ಯ ಕಾರಣಗಳಲ್ಲೊಂದು. ಇಂದು ನಮಗೆ ಸರ್ವತೋಮುಖವಾಗಿ ಇಂಥ ಎಲ್ಲ ಕಾರ್ಯಕ್ರಮಗಳನ್ನು ಸಮಗ್ರವಾಗಿ ನಡೆಸಲು, ಪ್ರತ್ಯೇಕ ಆಶಾದಾಯಕ ಕನ್ನಡ ವಿಶ್ವವಿದ್ಯಾಲಯವಿದೆ. ಇಲ್ಲಿ ಎಲ್ಲ ಪ್ರಕಾರಗಳ ಸಂಶೋಧನೆಗಳಿಗೆ ಅವಶ್ಯ ಸ್ವಾತಂತ್ರ್ಯ, ಸೌಲಭ್ಯಗಳನ್ನೂ ಒದಗಿಸಿಕೊಟ್ಟು ಮತ್ತು ಸಂಶೋಧನೆಗಳ ಹಾಗೂ ಪುಸ್ತಕಗಳ ಪ್ರಕಟಣೆಯೂ ಆಗಿಂದಾಗ್ಯೆ ಆಗುವ ಹಾಗಿದ್ದಲ್ಲಿ ಹಲವಾರು ಕಿರಿಯ ಹಾಗೂ ಹಿರಿಯ ವಿದ್ವಾಂಸರುಗಳು ಆಕರ್ಷಿತರಾಗಿ ಉದ್ದೇಶಿತ ಗುರಿಯನ್ನು ಸಕಾಲದಲ್ಲಿಯೇ ಮುಟ್ಟಲು ಸಾಧ್ಯವಾಗಬಹುದು.

ಇಂದು ಅಲ್ಲಲ್ಲಿ ಇತಿಹಾಸದ ಆಗು ಹೋಗುಗಳನ್ನು ಅವುಗಳಿಗೆ ಸಂಬಂಧಿಸಿದ ರಾಜಕೀಯ, ಸಾಮಾಜಿಕ, ಪ್ರಾದೇಶಿಕ ಮೊದಲಾದ ಸಂದರ್ಭಗಳನ್ನು ಯಥಾರ್ಥವಾಗಿ ಗಣನೆಗೆ ತೆಗೆದುಕೊಳ್ಳದೇ ಸಂಕುಚಿತವಾಗಿ ಜಾತೀಯತೆ, ವರ್ಗದ್ವೇಷ, ಅಸಮಾನತೆ, ಶೋಷಣೆ ವಿಷಯಗಳಿಗೆ ಹೆಚ್ಚು ಒತ್ತು ಕೊಟ್ಟು ನಮ್ಮ ಸಮಾಜದಲ್ಲಿ ಸುಮಾರು ೫೦೦೦ ವರ್ಷಗಳಿಂದಲೂ ಇವೆಲ್ಲ ಇದ್ದವು ಎನ್ನುವ ಹಾಗೆ ಹೇಳುವ ಮತ್ತು ಬರೆಯುವ ಒಂದು ಧಾಟಿ ಕಾಣುತ್ತದೆ. ಇದರಿಂದ ಇತಿಹಾಸದ ಯಾವ ಮುಖವನ್ನು ಅಷ್ಟಾಗಿ ತಿಳಿಯದ ಜನಸಾಮಾನ್ಯರಲ್ಲಿ ಮತ್ತು ಮುಗ್ಧಯುವಕರಲ್ಲಿ ನಮ್ಮ ಇತಿಹಾಸದ ಬಗ್ಗೆ ಅಭಿಮಾನ ಶೂನ್ಯತೆ ಅಸಹ್ಯ ಉಂಟಾಗುವ ಸಾಧ್ಯತೆ ಇದೆ. ಇದು ಶೋಚನೀಯಕರವಷ್ಟೇ ಅಲ್ಲ, ಅಪಾಯಕರವೂ ಹೌದು. ಇವೆಲ್ಲವೂ ಹಿಂದೂ ಇದ್ದವು ಇಂದೂ ನಮ್ಮ 'ಸುಧಾರಿತ' ಸಮಾಜದಲ್ಲೂ ಅಷ್ಟೇ ಅಲ್ಲ ಪ್ರಪಂಚದ ಇತರ ಅತ್ಯಂತ ಮುಂದುವರೆದ ರಾಷ್ಟ್ರಗಳಲ್ಲಿಯೂ ಬೇರೆ ಬೇರೆ ರೀತಿಗಳಲ್ಲಿ ಇವೆ. ನಾವು ಇತಿಹಾಸದ ಪಾಠಗಳನ್ನು ಸರಿಯಾಗಿ ಅರಿಯದೆ ಇದ್ದುದರಿಂದ ೫ ಲಕ್ಷ ವರ್ಷಗಳ ಹಿಂದಿನ ಹಳೆಶಿಲಾಯುಗದಿಂದ ಇಡೀ ಇತಿಹಾಸವನ್ನೇ ಅವಲೋಕಿಸಿದರೆ ಮಾನವನು ತನ್ನ ಜೀವನ ಕ್ರಮದ ಪ್ರಗತಿಯ ಒಂದು ಹಂತದಲ್ಲಿ ತನ್ನ ಲೌಕಿಕ ಜೀವನದ ಸುಧಾರಣೆಗಳೊಂದಿಗೆ ವಿಶ್ವದ ಭೌತಿಕ ಮಾತ್ರವಲ್ಲ ಆಧ್ಯಾತ್ಮಿಕ ರಹಸ್ಯವನ್ನೂ ಹಾಗೂ ತನ್ನನ್ನೂ ಅರಿಯುವುದೇ ಮಾನವ ಜೀವನದ ಗುರಿಯೆಂದು ಅರಿತು ಅಂದಿನಿಂದ ಆಧ್ಯಾತ್ಮಿಕ ಜೀವನವನ್ನೂ ಬೆಳೆಸುತ್ತಾ ಬಂದಿದ್ದಾನೆ. ಈ ಹಂತವನ್ನು ಲಭ್ಯವಿರುವ ವಿಶ್ವದ ಒಂದೇ ಒಂದು ಅತ್ಯಂತ ಪ್ರಾಚೀನ ಸಾಹಿತ್ಯವಾದ ಯಾವುದೇ ಒಂದು ವರ್ಗದ, ಧರ್ಮದ ದೇಶದ ಆಸ್ತಿಯೆಂದು ಪರಿಗಣಿಸಬಾರದೆಂದು ವೇದಗಳಲ್ಲಿ ಕಾಣುತ್ತೇವೆ. ಕಾಲ ಕಾಲಕ್ಕೂ ವಿಶ್ವದ ನಾನಾ ಜನವರ್ಗಗಳಿಂದ ಘನ ವ್ಯಕ್ತಿಗಳಿಂದ ಸುಧಾರಣೆಯಾಗುತ್ತಲಿರುವ ಹಾಗೂ ಇಂಥ ಪ್ರಯತ್ನಗಳಿಂದ ಮಾನವನು ಮುಂದೆ ದೇವ ಮಾನವನಾಗಲೂ ಸಾಧ್ಯ ಎಂಬ ಸೂಚನೆಗಳುಳ್ಳ ಯಥಾರ್ಥ ಇತಿಹಾಸವನ್ನು ಅರಿಯಲು ಪ್ರಯತ್ನಿಸೋಣ. ಇದರಿಂದ ನಮ್ಮ ಸಮಾಜದಲ್ಲಿ ಪರಸ್ಪರ ಪ್ರೀತಿ, ಸಮಾನತೆ ಮತ್ತು ಶಾಂತಿ ಬೆಳೆಯುವಂತೆ ಆಗಲಿ. "ತಮಸೋ ಮಾ ಜ್ಯೋತಿರ್ಗಮಯ"

ಕೆ. ಬಿ. ಶಿವತಾರಕ್*

# ಶಿಲಾಯುಗದ ನೆಲೆ-ಮೂಗನಾಯಕನಕೋಟೆ

ತುಮಕೂರು ಜಿಲ್ಲೆಯಲ್ಲಿ ಈಗಾಗಲೇ ಶಿಲಾಯುಗದ ನೆಲೆಗಳಿರುವುದು ತಿಳಿದು ಬಂದಿದೆ. ಹಳೇ ಶಿಲಾಯುಗಕ್ಕೆ ಕಿಬ್ಬನಹಳ್ಳಿ, ಬಿಳಿಗೆರೆ, ನಾಗಲಾಪುರ ಮತ್ತು ನಿಡುಗಲ್ಲು; ಸೂಕ್ಷ್ಮಶಿಲಾಯುಗಕ್ಕೆ ಕಿಬ್ಬನಹಳ್ಳಿ, ಮೀನಾಕ್ಷಯ್ಯ ಎಸ್ಟೇಟ್, ಹೊಳಕಲ್ಲು ಬೆಟ್ಟ, ಹಿರೇಗುಂಡಗಲ್ಲು, ನಾಗಲಾಪುರ; ನೂತನಶಿಲಾಯುಗಕ್ಕೆ ವೈ.ಎನ್. ಹೊಸಕೋಟೆ, ನಿಡುಗಲ್ಲು, ಗಂಗ್ಡಾಹಳ್ಳಿ, ಜಲಗಾರದಿಬ್ಬ, ನಾಗಲಾಪುರ, ವೈ. ಎನ್. ಹಳ್ಳಿ, ರಂಗಸಮುದ್ರ, ಸಿದ್ಧರಬೆಟ್ಟ, ಬೆಳ್ಳಿಬಟ್ಟಲಹಳ್ಳಿ, ಬೂದಿಬೆಟ್ಟ, ಸಿದ್ಧಗಂಗಾಬೆಟ್ಟ; ಮತ್ತು ಬೃಹತ್ ಶಿಲಾಯುಗಕ್ಕೆ ಕೇರಳಕಟ್ಟೆ, ಜಕ್ಕನಹಳ್ಳಿ, ನಿಡುಗಲ್ಲು, ವೈ. ಎನ್. ಹೊಸಕೋಟೆ, ವೈ. ಎನ್. ಹಳ್ಳಿ, ಬೂದಿಬೆಟ್ಟ, ರಾಚಮಾರನಹಳ್ಳಿ, ಮರಿದಾಸನಹಳ್ಳಿ, ಹಿರೇಗುಂಡಗಲ್, ಸಿದ್ಧಗಂಗಾಬೆಟ್ಟ, ಸಿದ್ಧರಬೆಟ್ಟ ಸೇರಿವೆ.

ಮೂಗನಾಯಕನಕೋಟೆಯು ಗುಬ್ಬಿಯಿಂದ ೧೧ ಕಿ.ಮೀ. ವಾಯುವ್ಯಕ್ಕಿದ್ದು, ನಿಟ್ಟೂರು ಹೋಬಳಿಗೆ ಸೇರಿದೆ. ಈ ಪ್ರದೇಶದಲ್ಲಿ ಆದಿಮಾನವನು ನೆಲೆಸಿ ತನಗೆ ಅವಶ್ಯವಾಗಿ ಬೇಕಾದ ಶಿಲಾಯುಧಗಳನ್ನು ತಯಾರಿಸಿಕೊಂಡಿರುವುದನ್ನು ಕಾಣಬಹುದು.

ಮೂಗನಾಯಕನ ಕೋಟೆ ಪ್ರದೇಶದಲ್ಲಿ ೧೯೯೨ ಮತ್ತು ೯೩ರಲ್ಲಿ ನಡೆಸಿದ ಪುರಾತತ್ವ ಸರ್ವೇಕ್ಷಣೆಯ ಫಲವಾಗಿ ಅಂತ್ಯ ಹಳೆಶಿಲಾಯುಗದ ಮತ್ತು ಸೂಕ್ಷ್ಮಶಿಲಾಯುಗದ ಅವಶೇಷಗಳು ದೊರೆತಿದ್ದು, ಈ ಪ್ರದೇಶವು ಆದಿಮಾನವನ ನಿವಾಸ ಸ್ಥಾನವಾಗಿದ್ದಿತೆಂದೂ ಮತ್ತು ಆಯುಧ ಉದ್ಯಮ ಕೇಂದ್ರವಾಗಿದ್ದಿತೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ.

ಹದಿನಾರನೆಯ ಶತಮಾನದಲ್ಲಿ ಬಿದರೆ ಸೀಮೆಯ ಒಂದು ಗ್ರಾಮವಾಗಿದ್ದ ಮೂಗನಾಯಕನಕೋಟೆ (ಎ.ಕ. XII ಗುಬ್ಬಿ ೧೭) ಹದಿನೆಳನೇಯ ಶತಮಾನದಲ್ಲಿ 'ಮೂಗನಾಯಕ' ಎಂಬ ಪಾಳೆಯಗಾರನ ಪಾಳೆಯಪಟ್ಟಾಗಿದ್ದಿತು. ಸಿರಾದಲ್ಲಿ ಶಿಬಿರ ಹೂಡಿದ್ದ ಮರಾಠ ಸರದಾರ ಪರಶುರಾಮಭಾಹುವಿನ ಸೈನ್ಯದೊಂದಿಗೆ ಇವನು ಹೋರಾಡಿದ್ದನೆಂದು ತಿಳಿದು ಬರುತ್ತದೆ (ಅಭಿಶಂಕರ್ ಕೆ. ೧೯೬೯ : ೫೯೨-೩). ಇದು ಒಂದು ಪ್ರಮುಖ ವ್ಯಾಪಾರೀ ಕೇಂದ್ರವಾಗಿದ್ದು, ಕೋಟೆಯನ್ನು ಹೊಂದಿದ್ದಂತೆ ತಿಳಿದು ಬರುತ್ತದೆ. ಆದರೆ ಈಗ ಯಾವುದೇ ಅವಶೇಷ ಉಳಿದಿಲ್ಲ.

ಡಾ. ಎಂ. ಶೇಷಾದ್ರಿಯವರು ಕಿಬ್ಬನಹಳ್ಳಿಯಲ್ಲಿ ಅಂತ್ಯ ಹಳೆ ಶಿಲಾಯುಗದ ಬಗ್ಗೆ ಸ್ಪಷ್ಟ ಅಭಿಪ್ರಾಯ ಸಲ್ಲಿಸದಿದ್ದರೂ ಅಲ್ಲಿ ದೊರೆತ ಕೆಲವು ಆಯುಧಗಳ ರೂಪುರೇಷೆಯು ಅಂತ್ಯ ಹಳೆ ಶಿಲಾಯುಗದ್ದೆಂದು ಅವರೇ ಕೊಟ್ಟಿರುವ ವಿವರಣೆಯಿಂದ ತಿಳಿಯಬಹುದು. ಆದರೆ ಈ ಆಯುಧಗಳನ್ನು ಅವರೇ ಸೂಕ್ಷ್ಮಶಿಲಾಯುಗದ್ದೆಂದು ಸೂಚಿಸುತ್ತಾರೆ.

---

* ಇತಿಹಾಸ ಉಪನ್ಯಾಸಕರು, ಸೇಂಟ್ ಮೇರೀಸ್ ಸಿರಿಯನ್ ಕಾಲೇಜು, ಬ್ರಹ್ಮಾವರ-೫೭೬೨೧೩.

ಮೂಗನಾಯಕನ ಕೋಟೆಯ ಸುತ್ತ ಮುತ್ತ ದೊರೆತಿರುವ ಅಂತ್ಯ ಹಳೆ ಶಿಲಾಯುಗದ ಆಯುಧಗಳು ಬೆಣಚುಕಲ್ಲು (Quartz) ಮತ್ತು ಸ್ಫಟಿಕ ಶಿಲೆ (Chert) ಯಲ್ಲಿ ರೂಪಿತವಾಗಿದ್ದು ಅವುಗಳಲ್ಲಿ ಮಚ್ಚುಗತ್ತಿ, ಕೊರೆಯುವ ಉಳಿ, ಹೆರೆಗತ್ತಿ, ಇತ್ಯಾದಿ ಪ್ರಮುಖವಾದ ಆಯುಧಗಳಾಗಿವೆ.

**ಸೂಕ್ಷ್ಮ ಶಿಲಾಯುಗ ಸಂಸ್ಕೃತಿ :** ತುಮಕೂರು ಜಿಲ್ಲೆಯಲ್ಲಿ ಇದುವರೆಗೂ ದೊರೆತಿರುವ ಒಂದೇ ಒಂದು ಪ್ರಮುಖ ನೆಲೆ–ಕಿಬ್ಬನಹಳ್ಳಿ. ಇಲ್ಲಿ ದೊರೆತಿರುವ ಆಯುಧಗಳನ್ನು ಡಾ. ಎಂ. ಶೇಷಾದ್ರಿ ಯವರು ವಿಸ್ತೃತವಾಗಿ ಅಭ್ಯಸಿಸಿದ್ದಾರೆ. ಅದೇ ರೀತಿ ಪ್ರಮುಖವಾದ ಇನ್ನೊಂದು ನೆಲೆಯೇ ಮೂಗನಾಯಕನ ಕೋಟೆ. ಗುಡ್ಡದ ಸುತ್ತ ಮುತ್ತ ಹಲವು ಸ್ಥಳಗಳಲ್ಲಿ ಸೂಕ್ಷ್ಮ ಶಿಲಾಯುಗದ ಆಯುಧಗಳು ದೊರೆತಿವೆ. ಇವುಗಳನ್ನು ಪ್ರಮುಖವಾಗಿ ಬೆಣಚುಕಲ್ಲು, ಸ್ಪಟಿಕ ಶಿಲೆ ಮತ್ತು ಹಾಲು ಬಣ್ಣದ ಬೆಣಚುಕಲ್ಲುಗಳಲ್ಲಿ ತಯಾರಿಸ ಲಾಗಿದೆ. ಇದೇ ಸ್ಥಳದಲ್ಲಿ ಈ ಕಲ್ಲುಗಳು ದೊರೆತಿವೆ. ಇಲ್ಲಿ ಬಹು ಸಂಖ್ಯೆಯಲ್ಲಿ ನಿರುಪಯುಕ್ತ ಕಲ್ಲುಗಳು ದೊರೆಯುವುದರಿಂದ ಈ ನೆಲೆಯು ಆಯುಧ ಉದ್ಯಮದ ನೆಲೆಯೆಂದು ಸ್ಪಷ್ಟವಾಗಿ ತಿಳಿಯುತ್ತದೆ.

ಒರೆಯುವ ಆಯುಧಗಳು, ಕೂರಲಗು ಫಲಕ ಗಳು, ಅರ್ಧಚಂದ್ರಾಕೃತಿಯ ಆಯುಧಗಳು, ಕೊರೆಯುವ ಆಯುಧಗಳು, ಬಾಣದ ಮೊನೆಗಳು, ಒಂದು ಬದಿ ನೊಂಡಾದ ತೆಳು ಚಕ್ಕೆಗಳು, ಎರಡೂ ಬದಿ ಮೊನಚಾದ ತೆಳು ಚಕ್ಕೆಗಳು, ಹೆರೆಯುವ ಸಣ್ಣ ಚಕ್ಕೆಗಳು ಮುಂತಾದ ಅತಿಮುಖ್ಯ ಮಾದರಿಯ ಆಯುಧಗಳು ಇಲ್ಲಿ ದೊರೆತಿವೆ.

ಇಲ್ಲಿ ದೊರೆತಿರುವ ಆಯುಧಗಳಿಂದ ಈ ಜನರ ಆಯುಧತಯಾರಿಕಾ ತಾಂತ್ರಿಕತೆಯು ವಿಶಿಷ್ಟ ಪೂರ್ಣ ವಾದುದೆಂದು ತಿಳಿದು ಬರುತ್ತದೆ. ಅಲ್ಲದೆ ಕರ್ನಾಟಕದ ಆಗ್ನೇಯ ಭಾಗವು ಶಿಲಾಯುಗದ ಮಾನವನ ಸಂಸ್ಕೃತಿಗೆ ಆಯಕಟ್ಟಿನ ಸ್ಥಳವಾಗಿದ್ದಿತೆಂಬ ಅಂಶ ಸ್ಪಷ್ಟವಾಗುತ್ತದೆ.

## ಗ್ರಂಥ ಋಣ


Abhishankar K. Tumkur District Gazetteer : Government of Karnataka ; Bangalore 1969

Bruce-Foote R. The Foote collection of Indian Prehistoric and Proto historic Antiquities Notes on their ages and Distribution. Madras. 1916

Sharma I. K. "Ash-Mounds and Hero Stones. Dist. Tumkur" : Indian Archaeology/A Review-1980–81 : Archaeological Survey of India, New Delhi, 1980-81

ಶಿವತಾರಕ್ ಕೆ. ಬಿ. "Neolithic Sites of Tumkur Region" ಎಂಬ ಸಂಪ್ರಬಂಧವನ್ನು ಕನ್ನಡ ಅಧ್ಯಯನ ಸಂಸ್ಥೆ. ಧಾರವಾಡ, ಇವರ ಆಶ್ರಯದಲ್ಲಿ ನಡೆದ U. G. C. National Seminar on recent Studies in Proto-Historic Cultures of South India ದಲ್ಲಿ ಮಂಡಿಸಿದ ಸಂಪ್ರಬಂಧ (ಅಪ್ರಕಟಿತ) 1991

ಶಿವತಾರಕ್ ಕೆ. ಬಿ. "ತುಮಕೂರು ಜಿಲ್ಲೆಯಲ್ಲಿ ಇತ್ತೀಚೆಗೆ ದೊರೆತ ಕೆಲವು ಪ್ರಾಗೈತಿಹಾಸಿಕ ನೆಲೆಗಳು" ಇತಿಹಾಸ ದರ್ಶನ-೭ ; ಬೆಂಗಳೂರು-1991

ಶಿವತಾರಕ್ ಕೆ. ಬಿ. "ತುಮಕೂರು ಜಿಲ್ಲೆಯ ಪ್ರಾಗಿತಿಹಾಸ" (ಪಿ ಎಚ್. ಡಿ. ಸಂಶೋಧನೆಯ ನೋಂದಣಿಗಾಗಿ ಒಪ್ಪಿಸಿದ ಸಂಪ್ರಬಂಧ) ಕನ್ನಡ ವಿಶ್ವವಿದ್ಯಾಲಯ : ಹಂಪಿ. ೧೯೯೨

Sheshadri M. "Microlithic Industry of Kibbanahalli, Mysore State" Current Science-23 ; Bangalore, 1954

Sheshadri M. The Stone-Using Cultures of Prehistoric and Protohistoric Mysore, London 1956

Sheshadri M. "Stone Age Tools from Salvadgi, Bijapura Dist. Mysore State". Mysore University Journal, Mysore. 1961 :

Sletar H. K. "Mysore Geological Department Records-8" Bangalore, 1906

ಡಾ|| ಎಚ್.ಎಸ್. ಗೋಪಾಲರಾವ್*

# ಬೃಹತ್ ಶಿಲಾಯುಗದಿಂದ ೧೬ನೆಯ ಶತಮಾನದವರೆಗೆ ಹೂಜಿಗಲ್ಲು : ಒಂದು ಶೋಧ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಕಲ್ಯವು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಪ್ರಾಮುಖ್ಯತೆ ಪಡೆದಿರುವುದು ಈಗಾಗಲೇ ತಿಳಿದಿರುವ ವಿಷಯ. ತುಮಕೂರು ಜಿಲ್ಲೆಯ ಶಾಸನವೊಂದರಲ್ಲಿನ ಉಲ್ಲೇಖವನ್ನನುಸರಿಸಿ ಕಲ್ಯದ ಗಡಿಯ ಊರುಗಳನ್ನು ಪತ್ತೆ ಹಚ್ಚಲು ಕ್ಷೇತ್ರಕಾರ್ಯ ಕೈಗೊಂಡಾಗ ಪತ್ತೆಯಾದದ್ದು ಹೂಜಿಗಲ್ಲಿನ ಬೃಹತ್ ಶಿಲಾಯುಗದ ನೆಲೆಗಳು ಮತ್ತು ಜೈನ ನಿಸಿಧಿ ಬಂಡೆ. ಆ ಕ್ಷೇತ್ರ ಕಾರ್ಯದಲ್ಲಿ ಡಾ|| ಎಂ. ಚಿದಾನಂದಮೂರ್ತಿ ಅವರ ಜೊತೆಗೆ ನಾನು ಮತ್ತು ನನ್ನ ಇನ್ನೂ ಹಲವರು ಗೆಳೆಯರಿದ್ದೆವು. ಎರಡು ಬಾರಿ ನಾವು ಕ್ಷೇತ್ರ ಕಾರ್ಯ ನಡೆಸುವ ವೇಳೆಗೆ ಹೂಜಿಗಲ್ಲಿನ ಪ್ರಾಗಿತಿಹಾಸ ಕಾಲದ ಮಹತ್ವ ಅರಿವಿಗೆ ಬಂದಿತ್ತು.

ಜೈನ-ವೈಷ್ಣವ ಸಮನ್ವಯದ ಬುಕ್ಕರಾಯನ ಮೂಲ ಶಾಸನವಿರುವ ಕಲ್ಯದ ಸಮೀಪವೇ ಹೂಜಿಗಲ್ಲಿರುವುದು ; ಹೂಜಿಗಲ್ಲಿನ ಎರಡು ಶಾಸನಗಳು ಬೆಂಗಳೂರು ಜಿಲ್ಲೆಯ ಎಪಿಗ್ರಾಫಿಯಾ ಕರ್ನಾಟಕ ಸಂಪುಟದಲ್ಲಿ ಪ್ರಕಟವಾಗಿದ್ದರೂ, ಅವುಗಳ ಅಸ್ಪಷ್ಟತೆಯಿಂದಾಗಿ ಪೂರ್ಣಾರ್ಥ ಲಭ್ಯವಿಲ್ಲ. ಆದರೆ ಅವು ಜೈನಪರ ಶಾಸನಗಳು ಎಂಬುದರಲ್ಲಿ ಅನುಮಾನವಿಲ್ಲ. ಅವುಗಳಲ್ಲದೆ ಮಜ್ಜನಭಾವಿ ಎಂದು ಕರೆಯಲಾಗುವ ಸ್ಥಳದ ಒಂದು ಬಂಡೆಯ ಮೇಲೆ ಸುತ್ತಲೂ ೧೬ನೆಯ ಶತಮಾನದ ಕನ್ನಡಲಿಪಿ ಸ್ವರೂಪದ ಏಳು ಶಾಸನಗಳಿವೆ. ಅವುಗಳೂ ಅಸ್ಪಷ್ಟ. ಆದರೆ ಎಲ್ಲ ಶಾಸನಗಳೂ 'ನಿಸಿದಿ' ಎಂದು ಕೊನೆಗೊಳ್ಳುತ್ತವೆ. ಆದ್ದರಿಂದ ೧೬ನೆಯ ಶತಮಾನದ ಸುಮಾರಿನಲ್ಲಿ ಹೂಜಿಗಲ್ಲು ಬಹಳ ಪ್ರಸಿದ್ಧ ಜೈನಕೇಂದ್ರವಾಗಿತ್ತೆಂದು ಊಹಿಸಬಹುದು. ಕಲ್ಯ ಮತ್ತು ಹೂಜಿಗಲ್ಲುಗಳು ೧೩ ರಿಂದ ೧೬ನೆಯ ಶತಮಾನದವರೆಗೆ ಎಲ್ಲ ರೀತಿಗಳಲ್ಲೂ ಸಾಮೀಪ್ಯತೆ ಪಡೆದಿದ್ದ ಗ್ರಾಮಗಳು ಎಂದು ಭಾವಿಸಬಹುದಾಗಿದೆ.

ಮೇಲೆ ಪ್ರಸ್ತಾಪಿಸಿದ ನಿಸಿದಿ ಶಾಸನಗಳಿರುವ ಬಂಡೆಯ ಮೇಲಿನ ಒಂದು ಶಾಸನದ ಪಾಠ ಹೀಗಿದೆ.

ಭಾನು ಸಂವತ್ಸರದ
ಬ. ಚನ್ದ್ರಕೀರ್ತಿಸೇನ
ಗಳ ಗುಡ ಮಾಯಪ್ಪನ
ನಿಸಿಧಿ.

ಬಂಡೆಯ ಸುತ್ತಲೂ ಇಂತಹುದೇ ನಿಸಿದಿಶಾಸನಗಳು ಮತ್ತು ಅವುಗಳಿಗೆ ಸಂಬಂಧಿಸಿದಂತೆ ಜೈನ ಗುರು ಮತ್ತು ಶಿಷ್ಯರ ಚಿತ್ರಗಳ ಕೆತ್ತನೆಯಿದೆ. ಜಿನಭಕ್ತರ ಮರಣದ ಸ್ವರೂಪವನ್ನು ಇಲ್ಲಿ ತಿಳಿಸಿಲ್ಲ. ಆದರೆ ಅನೇಕ ಜಿನಭಕ್ತರ ಸ್ಮಾರಕವಾಗಿರುವ ಈ ಬಂಡೆಯು ಹೂಜಿಗಲ್ಲು ಮತ್ತು ಜೈನ ಸಂಬಂಧದ ಸ್ಪಷ್ಟಪರಿಚಯ ಮಾಡಿಕೊಡುತ್ತದೆ. ಈ ಸ್ಥಳವನ್ನು ಮಜ್ಜನ ಭಾವಿ ಎಂದು ಕರೆಯುವುದೂ ಕುತೂಹಲಕಾರಿಯಾಗಿದೆ. ಉಲ್ಲೇಖಿತ ನಿಸಿಧಿ ಶಾಸನಗಳ ಬಂಡೆಯ ಹಿಂಭಾಗದ ಬಂಡೆಯ

* 'ಸ್ವಸ್ತಿಶ್ರೀ ಸ್ಕಂದ' ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು-೫೬೨ ೧೨೩

ಮೇಲೆ ಮತ್ತು ಈ ಸ್ಥಳಕ್ಕೆ ಹಾದು ಬರುವಲ್ಲಿ ದಾರಿಯಲ್ಲೊಂದು ಬಂಡೆಯ ಮೇಲೆ ಕೂಡಾ ಕೊರೆದ ಭಕ್ತರ ಚಿತ್ರಗಳ ಸಹಿತ ನಿಸಿಧಿ ಶಾಸನಗಳಿವೆ. ಆದರೆ ಎಲ್ಲಾ ಶಾಸನಗಳೂ ಸವೆದಿರುವ ಕಾರಣ ಅಸ್ಪಷ್ಟ ವಾಗಿವೆ.

ನಮ್ಮ ಮೊದಲ ಬಾರಿಯ ಕ್ಷೇತ್ರಕಾರ್ಯದ ಸಂದರ್ಭದಲ್ಲೇ ನಿಸಿಧಿ ಶಾಸನಗಳ ಬಂಡೆಯಿಂದ ಸ್ವಲ್ಪ ಮೇಲೆ ಉತ್ತರಕ್ಕೆ ಗುಡ್ಡದ ಮೇಲೆ ಕಂಡ ಒಂದು ಸ್ವಾಭಾವಿಕ ಶಿಲಾಶ್ರಯ ಈಗ ಬಸವಣ್ಣನ ಗುಡಿಯಾಗಿದೆ. ಅದರ ಸಮೀಪ ಶಿಲಾಯುಗದ ಕಲ್ಲಿನ ಕೊಡಲಿಯಂತಹ ಆಯುಧವೊಂದು ದೊರೆತಿತ್ತು. ಹೊಜಿಗಲ್ಲಿನ ಸುತ್ತಲೂ ಹಲವಾರು ಬೃಹತ್ ಶಿಲಾಯುಗದ ಶಿಲಾಗೋರಿಗಳನ್ನು ಕಂಡ ನಮ್ಮ ಕುತೂಹಲ ಹೆಚ್ಚಿ ಆ ನಂತರ ಮತ್ತೆ ಎರಡು ಬಾರಿ ಕ್ಷೇತ್ರಕಾರ್ಯ ಮಾಡಲಾಯಿತು.

ಎಲ್ಲ ಊರುಗಳಂತೆ ಇಲ್ಲಿಯೂ ಜನರು ಬೃಹತ್ ಶಿಲಾಯುಗದ ಕಲ್ಲು ಗೋರಿಗಳನ್ನು ಪಾಂಡವರ ಗುಡಿ ಗಳು ಎಂದೇ ಕರೆಯುತ್ತಾರೆ. ಅವುಗಳೊಳಗೆ ನಿಧಿ ಇರಬೇಕೆಂಬ ಕಲ್ಪನೆಯೂ ಇತ್ತಂತೆ. ಆದರೆ ಯಾವುದೋ ಒಂದು ಸಮಾಧಿಯನ್ನು ತೆರೆದ ನಂತರ ಒಂದು ಕುಟುಂಬಕ್ಕೆ ಹಲವಾರು ತೊಂದರೆಗಳು ಸಂಭವಿಸಿದುವು ಎಂಬ ನಂಬಿಕೆಯ ಕಾರಣದಿಂದಾಗಿಯೋ ಏನೋ ಈಗ ಯಾರೂ ಅವುಗಳ ತಂಟೆಗೆ ಹೋಗುವುದಿಲ್ಲ. ಯಾವುದೋ ಒಂದು ಭ್ರಮಾತ್ಮಕ ಭಯ ಶಿಲಾಗೋರಿಗಳನ್ನು ರಕ್ಷಿಸಿರುವುದು ಸಮಾಧಾನಕರ. ಹಿಂದೆ ತೆರೆಯಲಾಗಿದ್ದ (ಆನಂತರ ಮುಚ್ಚಲಾದ) ಶಿಲಾಗೋರಿಯ ಒಳಗೆ ಹಲವು ಕಬ್ಬಿಣದ ಆಯುಧಗಳು ದೊರೆತಿದ್ದು, ಅವುಗಳಲ್ಲಿ ಸದ್ಯ ತ್ರಿಶೂಲದ ರೀತಿಯ ಆಯುಧವೊಂದನ್ನು ಶಿಲಾಗೋರಿಗಳ ನಡುವೆ ನಿರ್ಮಿತವಾಗಿರುವ ಸಣ್ಣ ಮಂಟಪದಾಕೃತಿಯ ದೇವಸ್ಥಾನದಲ್ಲಿ ಪ್ರತಿಷ್ಠಿಸಿ ಪೂಜಿಸಲಾಗುತ್ತಿದೆ.

ಹೊಜಿಗಲ್ಲಿನ ಸುತ್ತ ಮೂರು ಪ್ರತ್ಯೇಕ ನೆಲೆಗಳಲ್ಲಿ ಸುಮಾರು ಎಪ್ಪತ್ತಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳು ಪತ್ತೆಯಾಗಿವೆ. ನಿಸಿಧಿ ಶಾಸನಗಳಿರುವ ಬಂಡೆಯ ಪೂರ್ವಕ್ಕಿರುವ ಗುಡ್ಡದ ಒಂದು ಪಕ್ಕದಲ್ಲಿ ಸುಮಾರು ನಲವತ್ತಕ್ಕೂ ಹೆಚ್ಚು ಶಿಲಾಗೋರಿಗಳಿವೆ. ಇವುಗಳಲ್ಲಿ ಕೆಲವಕ್ಕೆ ಮಾತ್ರ ಮುಚ್ಚು ಚಪ್ಪಡಿಯ ಸುತ್ತ ವೃತ್ತಾಕಾರದಲ್ಲಿ ಜೋಡಿಸಿರುವ ಕಲ್ಲು ಚಪ್ಪಡಿ ಗಳಿವೆ. ಇವುಗಳ ವ್ಯಾಸ ಸುಮಾರು ೨೦ ರಿಂದ ೨೫ ಅಡಿಗಳವರೆಗೂ ಇದ್ದು, ಕೆಲವದರಲ್ಲಿ ಚಪ್ಪಡಿಯ ಎರಡು ವೃತ್ತಗಳೂ ಸ್ಪಷ್ಟವಾಗಿ ಉಳಿದಿವೆ. ಕೆಲವದರಲ್ಲಿ ಒಂದು ವೃತ್ತ ಮಾತ್ರ ಉಳಿದಿದೆ. ಕೆಲವು ಶಿಲಾಗೋರಿ ಗಳ ಮೇಲೆ ಮುಚ್ಚು ಚಪ್ಪಡಿಗಳು ಮಾತ್ರ ಉಳಿದಿದ್ದು ಸುತ್ತಣ ಚಪ್ಪಡಿಯ ವೃತ್ತ ಕಾಣೆಯಾಗಿದೆ. ಶಿಲಾ ಗೋರಿಗಳಿರುವ ಭೂಮಿಯನ್ನು ಈಗ ಕೃಷಿಗೆ ಬಳಸು ತ್ತಿರುವುದರಿಂದ ಬಹುತೇಕ ಈ ಬದಲಾವಣೆ ಅಥವಾ ವ್ಯತ್ಯಾಸಗಳು ಆಗಿರುವ ಸಂಭವ ಹೆಚ್ಚು. ಮುಚ್ಚು ಚಪ್ಪಡಿಗಳು ೧೫ ರಿಂದ ೨೦ ಅಡಿ ಉದ್ದ, ೧೦ ರಿಂದ ೧೨ ಅಡಿ ಅಗಲ ಮತ್ತು ೧ ರಿಂದ ಒಂದೂವರೆ ಅಡಿ ದಪ್ಪ ವಾಗಿವೆ. ಈ ಪ್ರದೇಶದಲ್ಲೇ ಎರಡು ಶಿಲಾಗೋರಿಗಳ ಒಳಭಾಗದ ಕಲ್ಲು ಚಪ್ಪಡಿಗಳು ಮೇಲಿಯೇ ಕಾಣುತ್ತವೆ. ಇವು ಸಹಜವಾಗಿಯೇ ಭೂಮಿಯ ಮೇಲ್ಭಾಗದಲ್ಲಿ ನಿರ್ಮಾಣವಾದ ಡಾಲ್ಮೆನ್‌ಗಳಾಗಿರಬೇಕು ಅಥವಾ ಸ್ಥಳಾಂತರಿತ ಶಿಲಾಗೋರಿಗಳಾಗಿರಬೇಕು. ಇವು ಗಳಲ್ಲೊಂದರಲ್ಲಿ ಸುಮಾರು ಒಂದೂವರೆ ಅಡಿ ವ್ಯಾಸದ ಹೊಜಿ ರಂಧ್ರವಿದೆ. ಈ ಬೃಹತ್ ಶಿಲಾಗೋರಿಗಳಿರುವ ಪ್ರದೇಶದ ಪಶ್ಚಿಮಕ್ಕಿರುವ ಗುಡ್ಡದ ಮತ್ತೊಂದು ಸ್ಥಳವನ್ನು ಸ್ಥಳೀಯರು 'ಇಲ್ಲಿಗರಮನೆ' ಎನ್ನುತ್ತಾರೆ.

ಮೊದಲ ಬೃಹತ್‌ಶಿಲಾಯುಗದ ಸಮಾಧಿಗಳಿರುವ ಸ್ಥಳದಿಂದ ಈಶಾನ್ಯಕ್ಕೆ ದುಬ್ಬಗೊಟ್ಟಿಗೆ ಬೆಟ್ಟ ಎಂದು ಕರೆಯಲಾಗುವ ಗುಡ್ಡದ ಪಶ್ಚಿಮಕ್ಕೆ ಮತ್ತೊಂದು ಬೃಹತ್ ಶಿಲಾಯುಗದ ಸಮಾಧಿಗಳ ಗುಂಪಿದೆ. ಇಲ್ಲಿಯೂ ಮೊದಲಿನಂತೆಯೇ ವೃತ್ತಾಕಾರದಲ್ಲಿ ಜೋಡಿಸಿದ ಕಲ್ಲು ಚಪ್ಪಡಿಗಳು ಮತ್ತು ಕೆಲವು ಸಮಾಧಿ ಗಳ ಮೇಲಿನ ಮುಚ್ಚು ಚಪ್ಪಡಿಗಳು ಉಳಿದಿವೆ. ಸುಮಾರು ಇಪ್ಪತ್ತು ಇಂತಹ ಶಿಲಾಗೋರಿಗಳನ್ನು ಈ ನೆಲೆಯಲ್ಲಿ ಕಾಣಬಹುದಾಗಿದೆ.

ಮತ್ತೊಂದು ನೆಲೆ ಹೊಜಿಗಲ್ಲಿನ ದಕ್ಷಿಣಕ್ಕೆ ಇದ್ದು, ಅಲ್ಲಿಯೂ ಹತ್ತಕ್ಕೂ ಹೆಚ್ಚು ಶಿಲಾಗೋರಿ ಗಳಿವೆ

ಮುಚ್ಚು ಚಪ್ಪಡಿಯ ಸುತ್ತಲೂ ವೃತ್ತಾಕಾರದಲ್ಲಿ ಕಲ್ಲು ಚಪ್ಪಡಿಗಳನ್ನು (ಒಂದು ಅಥವಾ ಎರಡು ವೃತ್ತಗಳು) ಜೋಡಿಸಲಾಗಿದೆ. ಕೆಲವೆಡೆ ಕೇವಲ ಮುಚ್ಚು ಚಪ್ಪಡಿಗಳು ಮಾತ್ರ ಉಳಿದಿವೆ.

ಮೊದಲ ಗುಂಪಿನ ಸಮಾಧಿಗಳಿರುವ ಪ್ರದೇಶದಲ್ಲಿ ಹರಿಯುವ ನೀರಿನ ಕಾರಣ ಕುಸಿದಿರುವ ಹಳ್ಳದಲ್ಲಿ ಶಿಲಾಗೋರಿಯೊಂದರ ಒಳಭಾಗವನ್ನು ಕಾಣಬಹುದು. ನಾವು ಮೊದಲ ಬಾರಿಗೆ ಹೋಗಿದ್ದಾಗ ಆ ಹಾಳಾದ ಸಮಾಧಿಯಲ್ಲಿ ಕೆಂಪುಬಣ್ಣದ ಮಣ್ಣಿನ ಹೂಜಿಗಳು, ಮಡಕೆಯ ಚೂರುಗಳು ದೊರೆತವು. ಅಲ್ಲೀ ತುಕ್ಕು ಹಿಡಿದ ಕಬ್ಬಿಣದ ಚೂರುಗಳು ದೊರೆತಿವೆ. ಸ್ಥಳೀಯರ ಹೇಳಿಕೆಯಂತೆ, ನಿಧಿಯ ಆಸೆಯಿಂದ ತೆರೆಯಲಾದ ಸಮಾಧಿಯೊಂದರಲ್ಲಿ ಕೆಂಪು ಮಣ್ಣಿನ ಮಡಕೆ, ಕುಡಿಕೆಗಳ ಜೊತೆಗೇ ಭರ್ಜಿಯಂತಹ ಮೂರು ಕಬ್ಬಿಣದ ಆಯುಧಗಳು ದೊರೆತುವಂತೆ. ಅದೇ ಸ್ಥಳದಲ್ಲಿ ನಿರ್ಮಾಣ ಮಾಡಿರುವ ಮುನೇಶ್ವರನ ಗುಡಿಯಲ್ಲಿ ಒಂದು ಆಯುಧವನ್ನಿಟ್ಟು ಪೂಜೆ ಮಾಡಲಾಗುತ್ತಿದೆ. ಉಳಿದ ಆಯುಧ ಮತ್ತು ವಸ್ತುಗಳನ್ನೆಲ್ಲಾ ಮತ್ತೆ ಸಮಾಧಿಗೇ ಹಾಕಿ ಮುಚ್ಚಲಾಯಿತಂತೆ.

ಹೂಜಿಗಲ್ಲಿನ ಬೃಹತ್ ಶಿಲಾ ಸಮಾಧಿಗಳ ಒಳಗೆ ಕಬ್ಬಿಣದ ಆಯುಧಗಳು ದೊರೆತಿರುವುದು ಸಹಜವೇ ; ಸಮಾಧಿಗಳ ಗುಂಪಿನ ಪಶ್ಚಿಮ ಬದಿಯ ಗುಡ್ಡದ ಇನ್ನೊಂದು ಬದಿಯಲ್ಲಿ ತುಕ್ಕು ಹಿಡಿದ ಹೆಂಟೆಗಳು ಸಿಕ್ಕಿವೆ. ಮೇಲ್ನೋಟಕ್ಕೆ ತುಕ್ಕು ಹಿಡಿದ ಕಬ್ಬಿಣದ ಉಂಡೆಗಳಂತೆ ಕಾಣುವ ಅವುಗಳನ್ನು ಒಡೆದಾಗ ಅವು ಮಣ್ಣಿನ ಹೆಂಟೆಗಳೆನ್ನುವುದು ತಿಳಿಯುತ್ತದೆ. ಹೂಜಿಗಲ್ಲಿನ ಆಸುಪಾಸಿನಲ್ಲಿ ಕಬ್ಬಿಣದ ಅದಿರು ಹೇರಳವಾಗಿ ದೊರೆಯುತ್ತಿದ್ದು ಬೃಹತ್ ಶಿಲಾಯುಗದ ಜನ ಅದನ್ನು ಬಳಸಿಕೊಂಡು ಆಯುಧಗಳನ್ನು ತಯಾರಿಸಿಕೊಳ್ಳುತ್ತಿದ್ದರು ಎಂದು ಭಾವಿಸಬಹುದಾಗಿದೆ.

ಬೃಹತ್ ಶಿಲಾಯುಗದ ಸಂಸ್ಕೃತಿಯ ಜನವಸತಿಯ ಹೂಜಿಗಲ್ಲಿನ ಸುತ್ತ ಪ್ರತ್ಯೇಕ ಮೂರು ನಿವೇಶನಗಳಲ್ಲಿ ಶಿಲಾಗೋರಿಗಳು ಕಾಣುವುದರಿಂದ ಪ್ರತ್ಯೇಕ ಮೂರು ಗುಂಪಿನ ಜನ ಇಲ್ಲಿ ವಾಸಿಸುತ್ತಿದ್ದರು ಎಂದು ತಿಳಿಯಬಹುದಾಗಿದೆ.

೧೬ನೆಯ ಶತಮಾನದ ನಿಸಿಧಿ ಶಾಸನಗಳೂ ಹೂಜಿಗಲ್ಲಿನಲ್ಲಿ ದೊರೆತಿರುವುದರಿಂದ, ೧೪ನೆಯ ಶತಮಾನದಲ್ಲಿ ಕಲ್ಯದಲ್ಲಿ ಶ್ರೀ ವೈಷ್ಣವರಿಂದ ತೊಂದರೆಗೊಳಗಾದ ಜೈನರು ಇಲ್ಲಿಗೆ ಬಂದು ನೆಲೆಸಿರಬಹುದೆಂದು ಊಹಿಸಬಹುದಾಗಿದೆ.

ಕ್ರಿ.ಪೂ. ೩ನೆಯ ಶತಮಾನದಿಂದ ಕ್ರಿ.ಶ. ೧೬ನೆಯ ಶತಮಾನದವರೆಗೆ ನಿರಂತರವಾಗಿ ಮಾನವನ ವಾಸದ ನೆಲೆಯಾಗಿದ್ದ ಹೂಜಿಗಲ್ಲಿನ ಬೃಹತ್ ಶಿಲಾಯುಗದ ಸಮಾಧಿಗಳ ಉತ್ಖನನ ನಡೆದರೆ ಮತ್ತಷ್ಟು ವಿಶೇಷವಾದ ಮತ್ತು ವಿವರವಾದ ವಿವರಗಳು ದೊರೆಯುವ ಸಾಧ್ಯತೆಗಳಿವೆ.

ಹೂಜಿಗಲ್ಲಿಗೆ ಸಮೀಪ ಸಾವನದುರ್ಗದ ಇಟ್ಟಿಗೆ ಬೈಲಿನಲ್ಲಿ ಈಗಾಗಲೇ ಬೃಹತ್ ಶಿಲಾಯುಗದ ಶಿಲಾಗೋರಿಗಳು ಪತ್ತೆಯಾಗಿರುವುದನ್ನು ಗಮನಿಸಿದಾಗ ಮಾಗಡಿ ತಾಲ್ಲೂಕು ಬೃಹತ್ ಶಿಲಾಯುಗದ ಜನರ ಬಹುಮುಖ್ಯ ನೆಲೆಯಾಗಿತ್ತು ಎಂದು ತಿಳಿಯುತ್ತದೆ.

ಹನುಮನಾಯಕ*

# ಚೆಲುವನಹಳ್ಳಿಯ ಗವಿಮಠ : ಒಂದು ಪ್ರಾಗೈತಿಹಾಸಿಕ ನೆಲೆ

ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕು ಬಾಣಾವರ ಹೋಬಳಿಯ ಚೆಲುವನಹಳ್ಳಿಯ ಗ್ರಾಮವು ಬಿ. ಎಚ್. ರಸ್ತೆಯಿಂದ ಸುಮಾರು ಎರಡು ಕಿ. ಮೀ. ದೂರದಲ್ಲಿದ್ದು, ಈ ಊರಿನ ಪಶ್ಚಿಮಕ್ಕೆ ಅರ್ಧ ಕಿ. ಮೀ. ದೂರದಲ್ಲಿ ಗವಿಮಠವಿದೆ. ಇಲ್ಲಿ ಕಲ್ಲುಬಂಡೆಗಳಿಂದ ಕೂಡಿದ ಮೂರು ಚಿಕ್ಕ ಗುಡ್ಡಗಳಿವೆ. ಈ ಗುಡ್ಡಗಳಲ್ಲಿ ಹಲವಾರು ನೈಸರ್ಗಿಕ ಗವಿಗಳು ಮತ್ತು ಕಲ್ಲಾಸರೆಗಳು ಇವೆ.

ಇಲ್ಲಿಯ ಅತಿ ದೊಡ್ಡ ಗುಡ್ಡದ ತಪ್ಪಲಿನಲ್ಲಿ ಸುಮಾರು ನಾಲ್ಕು ಎಕರೆ ಭೂಮಿಯು ಬೂದಿ ಬಣ್ಣದಲ್ಲಿದ್ದು ಹಲವಾರು ರೀತಿಯ ಮಡಕೆ ಚೂರುಗಳನ್ನು ಹೆಜ್ಜೆ ಹೆಜ್ಜೆಗೂ ಕಾಣಬಹುದು. ಈ ಮಡಕೆಯ ಚೂರುಗಳು ಹೆಚ್ಚಾಗಿ ಕೆಂಪು ಬಣ್ಣದಲ್ಲಿವೆ. ಕಪ್ಪು ಮಡಕೆಯ ಚೂರುಗಳು ವಿರಳ. ಮಡಕೆಯ ಚೂರುಗಳ ಮೇಲೆ ವಿವಿಧ ರೀತಿಯ ವಿನ್ಯಾಸಗಳು ಇವೆ. ಇವುಗಳಲ್ಲಿ ಪ್ರಮುಖವಾದವುಗಳೆಂದರೆ ಜಿಗ್–ಜಾಗ್ ಮತ್ತು ರೇಖಾ ವಿನ್ಯಾಸಗಳು.

ಬ್ರೂಸ್ ಫೂಟ್ ಪ್ರಕಾರ ಕಂದು, ಕೆಂಪು ಬಣ್ಣದ ಮಡಕೆಗಳು ನವ ಶಿಲಾಯುಗದ ಆದಿ ಭಾಗದಲ್ಲಿ ತಯಾರಾದವು. ಅಂದರೆ ಸುಮಾರು ಕ್ರಿ ಪೂ. ೮೦೦೦ ದಿಂದ ೬೦೦೦ ವರ್ಷಗಳ ಹಿಂದೆ ಕೆಲವು ಕಪ್ಪು ಮಡಕೆಯ ಚೂರುಗಳು ಇಲ್ಲಿ ದೊರಕಿರುವುದರಿಂದ ಇದನ್ನು ಹೊಸ ಶಿಲಾಯುಗದ ಅಂತ್ಯ ಭಾಗ ಮತ್ತು ಲೋಹಯುಗದ ಕಾಲಕ್ಕೂ ಸೇರಿಸಬಹುದು.[1] ಇದು ಕ್ರಿ. ಪೂ. ಸುಮಾರು ೪೦೦೦ ದಿಂದ ೩೦೦೦. ಈ ಪ್ರದೇಶದಲ್ಲಿ ಈಗ ಸಾಗುವಳಿ ನಡೆಯುತ್ತಿರುವುದರಿಂದ ಈ ಮಡಕೆ ಚೂರುಗಳು ನೆಲದ ಮೇಲೆ ಎದ್ದು ಕಾಣುತ್ತವೆ. ಇಲ್ಲಿಯೇ ಒಮ್ಮೆ ರೈತರು ತಮ್ಮ ವ್ಯವಸಾಯ ಕ್ಕೋಸ್ಕರ ಸುಮಾರು ಐದು ಅಡಿ ಆಳದ ಗುಂಡಿಯನ್ನು ತೋಡಿದಾಗ ಅಲ್ಲಿಯೂ ಸಹ ಅದರ–ಪದರಗಳಲ್ಲಿ ಕ್ರಮವಾಗಿ ಸ್ವಲ್ಪ ಕಪ್ಪು ಮತ್ತು ಹೇರಳವಾಗಿ ನಯ ಮಾಡಿದ ಕೆಂಪು ಬಣ್ಣದ ಮಡಕೆಯ ಕುಡಿಕೆಗಳು ಕಂಡು ಬಂದಿದೆ. ಇಲ್ಲಿ ವೈಜ್ಞಾನಿಕ ವಿಧಿ–ವಿಧಾನಗಳನ್ನು ಅಳವಡಿಸಿ ಭೂಸಂಶೋಧನೆ ಮಾಡಿದರೆ ಮತ್ತಷ್ಟು ಮಾಹಿತಿ ಸಿಗಬಹುದು.

ಮಡಕೆ ಕುಡಿಕೆ ಚೂರುಗಳು ಸಿಕ್ಕಿರುವ ಪ್ರದೇಶದ ಸರಿಯಾಗಿ ಮಧ್ಯಭಾಗದಲ್ಲಿ ಸುಮಾರು ೪ ಮತ್ತು ೩ ಅಡಿ ಎತ್ತರದ ಎರಡು ನಿಲುಗಲ್ಲುಗಳಿವೆ. ನಾಲ್ಕು ಅಡಿ ಎತ್ತರವಿರುವ ನಿಲುಗಲ್ಲು ನೇರವಾಗಿ ನಿಂತಿದೆ. ೩ ಅಡಿ ಎತ್ತರವಿರುವ ನಿಲುಗಲ್ಲನ್ನು ಅಡ್ಡವಾಗಿ ನಿಲ್ಲಿಸಲಾಗಿದೆ. ಇದರ ಮೇಲೆ ಯಾವುದೇ ರೀತಿಯ ಕೆತ್ತನೆ ಇಲ್ಲದೆ ಸ್ವಾಭಾವಿಕ ರೂಪದಲ್ಲಿದೆ. ಇಲ್ಲಿಂದ ಒಂದು ಫರ್ಲಾಂಗ್

* ಇತಿಹಾಸ ಉಪನ್ಯಾಸಕರು, ವಿ.ವಿ.ಎಸ್. ಪದವಿಪೂರ್ವ ಮಹಿಳಾ ಕಾಲೇಜು, ಒಂದನೇ 'ಎನ್' ಬ್ಲಾಕ್, ರಾಜಾಜಿನಗರ, ಬೆಂಗಳೂರು–೫೬೦೦೧೦

1 M.A.R. 1942, P. 107

ಪೂರ್ವ ದಿಕ್ಕಿನಲ್ಲಿ ಇದೇ ರೀತಿಯ ಇನ್ನೆರಡು ನಿಲುಗಲ್ಲು ಗಳಿವೆ. ಬ್ರೂಸ್ ಫೂಟ್‌ರ ಪ್ರಕಾರ ಈ ನಿಲುಗಲ್ಲು ಗಳು ಸಮೂಹ ಸಮಾಧಿಗಳನ್ನು ಗುರುತಿಸಲು ನೆಟ್ಟಿರುವ ಕಲ್ಲುಗಳು.[2] ದಕ್ಷಿಣ ಭಾರತದ ಹಲವಾರು ಪ್ರದೇಶ ಗಳಲ್ಲಿ ಕಂಡುಬಂದಿರುವಂತೆ ಎಲ್ಲಿ ನಿಲುಗಲ್ಲುಗಳು ಇರು ತ್ತವೆಯೋ ಅಲ್ಲಿ ಖಂಡಿತವಾಗಿಯೂ ಪ್ರಾಗೈತಿಹಾಸಿಕ ವಾಸಸ್ಥಳಗಳು ಇರಲೇಬೇಕು. ಇದು ಭೂಸಂಶೋಧನೆ ಯಿಂದ ಮೂಡಿಬಂದಿರುವ ಸತ್ಯಸಂಗತಿ.[3]

ಪ್ರಾಗೈತಿಹಾಸಿಕ ಸ್ಥಳವೆಂದು ನಿರ್ಧರಿಸಿದ ಮೇಲೆ ಅದನ್ನು ಪ್ರತಿಪಾದಿಸಲು ಆಧಾರಗಳು ಇರಲೇಬೇಕು. ಈ ಆಧಾರಗಳೆಂದರೆ ಕಲ್ಲಿನ ಆಯುಧಗಳು. ಆದರೆ ಈ ಪ್ರದೇಶದಲ್ಲಿ ಸ್ವಾಭಾವಿಕ ಸ್ವರೂಪದ್ದಾಗಲೀ ಅಥವಾ ನೆಯ ಮಾಡಿದ ಶಿಲಾಯುಧವಾಗಲೀ ಸಿಕ್ಕಿಲ್ಲ. ತೀವ್ರ ಶೋಧನೆಯ ನಂತರ ಒಂದೇ ಒಂದು ಶಿಲಾಯುಧ ಸಿಕ್ಕಿತು. ಇದನ್ನು ಉಜ್ಜುವ ಅಥವಾ ಮಸೆಯುವ ಕಲ್ಲೆಂದು ನಿರ್ಧರಿಸಲಾಗಿದೆ. ಈ ಪ್ರದೇಶವು ಫಲವತ್ತಾ ಗಿರುವುದರಿಂದ ವ್ಯವಸಾಯ ಇಲ್ಲಿ ನಡೆಯುತ್ತಿದೆ.

ಗವಿಮಠವು ಪ್ರಾಗೈತಿಹಾಸಿಕ ನೆಲೆಯಾಗಿತ್ತೆಂದು ಹೇಳುವುದಕ್ಕೆ ಬೇರೆ ಆಧಾರಗಳೂ ಸಹ ಇವೆ. ಅವು ಗಳೆಂದರೆ ವರ್ಣ ಚಿತ್ರಗಳು. ಈ ಪ್ರದೇಶದ ಕಲ್ಲಾಸರೆ ಗಳಲ್ಲಿ ಎರಡು ರೀತಿಯ ವರ್ಣ ಚಿತ್ರಗಳಿವೆ. ಅವು ಗಳೆಂದರೆ ಕಡುಕೆಂಪು ಬಣ್ಣ ಮತ್ತು ಬಿಳಿಯ ಬಣ್ಣದ ಚಿತ್ರಗಳು.

ಇಲ್ಲಿಯ ಒಂದು ಕಲ್ಲಾಸರೆಯಲ್ಲಿ ಒಂದು ಬಹಳ ಸುಂದರವಾದ ಕಡು ಕೆಂಪುಬಣ್ಣದ ಚಿತ್ರವಿದೆ. ಈ ಕಲ್ಲಾಸರೆಯು ಸುಮಾರು ಇಪ್ಪತ್ತು ಅಡಿ ಉದ್ದ ಮತ್ತು ಹತ್ತು ಅಡಿ ಅಗಲ ವಿಸ್ತೀರ್ಣದಲ್ಲಿದ್ದು ದಕ್ಷಿಣಾಭಿಮುಖ ವಾಗಿದೆ. ಈ ಚಿತ್ರದಲ್ಲಿರುವ ವಿವರವನ್ನು ತಿಳಿಯು ವುದು ತುಂಬಾ ಕ್ಲಿಷ್ಟಕರ. ಆದರೆ ಮಾನವನ ಚಿತ್ರ ಗಳನ್ನು ಸೂಕ್ಷ್ಮವಾಗಿ ವೀಕ್ಷಿಸಿದರೆ ನಾಲ್ಕರಿಂದ ಐದು ಮಾನವ ವರ್ಣಚಿತ್ರಗಳನ್ನು ಗಮನಿಸಬಹುದು. ಇಲ್ಲಿಯ ಬಹು ಆಕರ್ಷಣೀಯವಾದ ಚಿತ್ರಗಳೆಂದರೆ ಹಾವುಗಳನ್ನು ಬಿಡಿಸಿರುವುದು. ಇವುಗಳನ್ನು ವಿವಿಧ ಕೋನ ಗಳಿಂದ ಬಿಡಿಸಲಾಗಿದೆ. ಹಾವುಗಳ ತಲೆಗಳು ಕೇಂದ್ರ ದಲ್ಲಿ ಬರುವಂತೆಯೂ ಹಾಗೂ ಅವುಗಳ ಬಾಲಗಳು ವೃತ್ತಾಕಾರದಲ್ಲಿರುವಂತೆ ಬಿಡಿಸಲಾಗಿದೆ. ಬಹುಶಃ ಇಡೀ ದಕ್ಷಿಣ ಭಾರತದಲ್ಲಿ ಇದು ಪ್ರಥಮ ಹಾವುಗಳ ವರ್ಣ ಚಿತ್ರವಿರಬಹುದು.

ಈ ವರ್ಣಚಿತ್ರವಿರುವ ಕಲ್ಲಾಸರೆಯು ಎದುರಿಗೆ ಇನ್ನೊಂದು ಚಿಕ್ಕ ಗುಡ್ಡವಿದೆ. ಇಲ್ಲಿಯೂ ಸಹ ಕಲ್ಲಾಸರೆಯು ದಕ್ಷಿಣಾಭಿಮುಖವಾಗಿದ್ದು ಇಲ್ಲಿ ಬಿಳಿಯ ವರ್ಣಚಿತ್ರಗಳಿವೆ. ಈ ಚಿತ್ರಗಳಲ್ಲಿ ಪ್ರಮುಖವಾಗಿ ಮನುಷ್ಯ, ಜಿಂಕೆ, ನವಿಲು, ನಾಯಿ ಮತ್ತು ಬಲೆ ಎದ್ದುಕಾಣುತ್ತದೆ. ಒಟ್ಟಾರೆ ಇಲ್ಲಿ ಬೇಟೆಯ ದೃಶ್ಯ ವನ್ನು ಚೆನ್ನಾಗಿ ಚಿತ್ರಿಸಿದ್ದಾರೆ.

ಗವಿಮಠದಿಂದ ಸುಮಾರು ಎರಡು ಕಿ. ಮೀ. ದೂರದಲ್ಲಿ ಚಿಕ್ಕ ಚಿಕ್ಕ ಬಂಡೆಗಳಿಂದ ಕೂಡಿದ ಒಂದು ಗುಡ್ಡದಲ್ಲಿಯೂ ಸಹ ಶ್ವೇತವರ್ಣ ಚಿತ್ರಗಳಿವೆ. ಇದರಲ್ಲಿ ಹೆಚ್ಚಾಗಿ ಮನುಷ್ಯ, ಪ್ರಾಣಿ ಮತ್ತು ಏಣಿಯ ಚಿತ್ರ ಗಳಿವೆ. ಇಲ್ಲಿಯೂ ಸಹ ಬೇಟೆಯ ದೃಶ್ಯವನ್ನು ಗಮ ನಿಸಬಹುದು. ಇತಿಹಾಸ ಪುರಾತತ್ವಜ್ಞರು ಈ ವರ್ಣ ಚಿತ್ರಗಳನ್ನು ಕ್ರಮವಾಗಿ ಹಳೆ ಶಿಲಾಯುಗ ಮತ್ತು ನವ ಶಿಲಾಯುಗದ ಕಾಲಕ್ಕೆ ಸೇರಿಸುತ್ತಾರೆ. ಆದರೆ ಇರ್ವಿನ್ ನ್ಯೂಮೇಯರ್ ಅವರು ಕೆಂಪು ವರ್ಣಚಿತ್ರಗಳನ್ನು ನವ ಶಿಲಾಯುಗದ ಆದಿಭಾಗಕ್ಕೆ ಮತ್ತು ಬಿಳಿಯ ವರ್ಣಚಿತ್ರ ಗಳನ್ನು ಲೋಹಯುಗಕ್ಕೂ ಸೇರಿಸುತ್ತಾರೆ.[4] ಈ ರೀತಿಯ ವರ್ಣಚಿತ್ರಗಳಿರುವ ಪ್ರಾಗೈತಿಹಾಸಿಕ ಸ್ಥಳ ಹಾಸನ ಜಿಲ್ಲೆಯಲ್ಲೇ ಪ್ರಥಮದ್ದಾಗಿದ್ದು ವಿಶೇಷ ವಾಗಿದೆ.

ಕೆಂಪು ವರ್ಣಚಿತ್ರವಿರುವ ಕಲ್ಲಾಸರೆಯ ಪಕ್ಕ

---

2 M.A.R. 1942, P. 107

3 ,,

4 Erwin Neumayer, *Pre-Historic Rock paintings*

ದಲ್ಲಿಯೇ ಒಂದು ಗವಿ ಇದ್ದು ಇದರೊಳಗೆ ನೀರಿನ ಆಸರೆ ಯಿದೆ. ಈ ಗವಿಯ ಎದುರಿಗೆ ಒಂದು ಚಿಕ್ಕ ಬಂಡೆಯ ಮೇಲೆ ಮಿಥುನ ರೇಖಾ ಚಿತ್ರಗಳಿವೆ. ಇದೊಂದು ಇಲ್ಲಿಯ ವೈಶಿಷ್ಟ್ಯವಾಗಿದೆ. ಇರ್ವಿನ್ ನ್ಯೂಮೇಯರ್ ಅವರು ಈ ರೀತಿಯ ರೇಖಾ ಚಿತ್ರಗಳು ಚಾಲ್ಕೋಲಿಥಿಕ್ ಕಾಲಕ್ಕೆ ಸೇರಿದವೆಂದು ಅಭಿಪ್ರಾಯ ಪಡುತ್ತಾರೆ.[5]

ಈ ರೀತಿಯಲ್ಲಿ ಚೆಲುವನಹಳ್ಳಿಯ ಗವಿಮಠವು ಹಾಸನ ಜಿಲ್ಲೆಯ ಅತ್ಯಂತ ಪ್ರಮುಖ ಪ್ರಾಗೈತಿಹಾಸಿಕ ಕೇಂದ್ರವಾಗಿದ್ದು ವೈಜ್ಞಾನಿಕ ವಿಧಾನಗಳನ್ನು ಅಳವಡಿಸಿ ಸಂಶೋಧನೆ ನಡೆಸಿದರೆ ಇನ್ನೂ ಹೊಸ ವಿಷಯಗಳು ಬೆಳಕಿಗೆ ಬರಬಹುದು.

[ಈ ಪ್ರಬಂಧವನ್ನು ರಚಿಸಲು ಕ್ಷೇತ್ರ ಕಾರ್ಯದಲ್ಲಿ ಸರ್ವ ರೀತಿಯಲ್ಲೂ ಸಹಕರಿಸಿದ ಗೆಳೆಯ ಶ್ರೀ ಜೆ. ಟಿ. ಜಯರಾಮಯ್ಯ ಮತ್ತು ಇದನ್ನು ರಚಿಸಲು ಸಲಹೆಗಳನ್ನು ನೀಡಿದ ಗುರುಗಳಾದ ಡಾ. ದೇವರಕೊಂಡಾರೆಡ್ಡಿ ಮತ್ತು ಶ್ರೀ ಲಕ್ಷ್ಮಣ್ ತೆಲಗಾವಿಯವರಿಗೆ ನಾನು ಆಭಾರಿಯಾಗಿದ್ದೇನೆ.]

---

5 Erwin Neumayer, *Pre-Historic Rock paintings*

ಡಾ|| ಎಂ. ಎಸ್. ಕೃಷ್ಣಮೂರ್ತಿ*

# ತಲಕಾಡಿನಲ್ಲಿ ಪ್ರಾಕ್ತನ ಉತ್ಖನನ-ಒಂದು ಸಂಕ್ಷಿಪ್ತ ವರದಿ

ತಲಕಾಡು ('ತಲವನಪುರ') ಮೈಸೂರಿಗೆ ೬೦ ಕಿ. ಮೀ. ಆಗ್ನೇಯದಲ್ಲಿ ಕಾವೇರಿ ನದಿಯ ಉತ್ತರ ದಂಡೆಯ ಮೇಲೆ ಇರುವ ಇತಿಹಾಸ ಪ್ರಸಿದ್ಧವಾದ ಪುಣ್ಯಕ್ಷೇತ್ರ. ಪಶ್ಚಿಮ ಗಂಗರು ತಲಕಾಡನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ. ಶ. ಸು. ೫೦೦ ರಿಂದ ೧೦೦೦ದ ವರೆಗೆ ಆಳಿದರು. ಇಲ್ಲಿಯ ದ್ರಾವಿಡ ಶೈಲಿಯ ಪಾತಾಳೇಶ್ವರ ಮತ್ತು ಮರಳೇಶ್ವರ ಗುಡಿಗಳು ಗಂಗರ ಕಾಲದ ವಾಸ್ತುಗಳು. ಗಂಗರ ನಂತರ ಕ್ರಮವಾಗಿ ಚೋಳರು, ಹೊಯ್ಸಳರು ಈ ಪ್ರದೇಶದ ಮೇಲೆ ಆಧಿಪತ್ಯ ನಡೆಸಿದರು. ಹೊಯ್ಸಳರ ಕಾಲದಲ್ಲಿ ತಲಕಾಡು ಆಗ್ನೇಯ ಕರ್ನಾಟಕದ ಪ್ರಸಿದ್ಧ ಪಟ್ಟಣವಾಗಿತ್ತು. ಇಲ್ಲಿಯ ಕೀರ್ತಿನಾರಾಯಣ ದೇವಾಲಯ ಹೊಯ್ಸಳ ವಿಷ್ಣುವರ್ಧನನು ತನ್ನ ಚೋಳರ ಮೇಲಿನ ವಿಜಯದ ಸ್ಮಾರಕವಾಗಿ ೧೧೧೭ ರಲ್ಲಿ ಪ್ರತಿಷ್ಠಾಪಿಸಿದನು. ಕಣಶಿಲೆಯಲ್ಲಿರುವ ಈ ದೇವಾಲಯ ಸಂಪೂರ್ಣ ಹೊಯ್ಸಳ ಶೈಲಿಯಲ್ಲಿದೆ. ವಿಜಯ ನಗರದ ಕಾಲದಲ್ಲಿ ಈ ಊರಿನವನೇ ಎಂದು ಹೇಳಲಾದ ಮಾಧವ ಮಂತ್ರಿ ೧೪ ನೇ ಶತಮಾನದಲ್ಲಿ ಕಣಶಿಲೆಯಲ್ಲಿರುವ ವೈದ್ಯೇಶ್ವರ ದೇವಾಲಯುವನ್ನು ನಿರ್ಮಿಸಿದನು. ಈತನು ತಲಕಾಡಿನ ವಾಯುವ್ಯಕ್ಕೆ, ಸ್ವಲ್ಪ ದೂರದಲ್ಲಿ ಕಾವೇರಿ ನದಿಗೆ ಅಡ್ಡಲಾಗಿ ಒಂದು ಅಣೆಕಟ್ಟೆಯನ್ನು ನಿರ್ಮಿಸಿದನು.

ತಲಕಾಡಿನ ಬಹುತೇಕ ಪ್ರಾಚೀನ ನಿವೇಶನ ಇಂದು ಮರಳಿನ ರಾಶಿಯಲ್ಲಿ ಇದೆ. ಇಷ್ಟು ಅಗಾಧ ಪ್ರಮಾಣದಲ್ಲಿ ಮರಳಿನ ರಾಶಿ ಈ ಊರಿನ ಮೇಲೆ ಯಾವಾಗ ಬೆಳೆಯಿತು. ತಲಕಾಡು ನಗರ ಈ ಮುಂಚೆ ಯಾವ ರೀತಿಯಲ್ಲಿತ್ತು. ತಲಕಾಡಿನ ಪ್ರಾಚೀನತೆ ಏನು ಎಂಬ ವಿಷಯಗಳನ್ನು ತಿಳಿಯುವ ದೃಷ್ಟಿಯಿಂದ ಇತ್ತೀಚೆಗೆ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯ ಮತ್ತು ಮೈಸೂರು ವಿಶ್ವವಿದ್ಯಾಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗಗಳು ಒಗ್ಗೂಡಿ ತಲಕಾಡಿನಲ್ಲಿ ಪ್ರಾಚ್ಯ ಉತ್ಖನನಗಳನ್ನು ನಡೆಸಿದವು.[1]

ತಲಕಾಡಿನ ವಿವಿಧ ಭಾಗಗಳಲ್ಲಿ ಸೂಕ್ತ ಸ್ಥಳವನ್ನು ಆರಿಸಿ ೭ ಉತ್ಖನನದ ಗುಂಡಿಗಳನ್ನು ತೋಡಲಾಯಿತು. ಇವುಗಳಲ್ಲಿ ನಾಲ್ಕು ಗುಂಡಿಗಳು ಚಾರಿತ್ರಿಕವಾಗಿ ಬಹಳ ಮಹತ್ವವಾದ ಫಲಿತಾಂಶಗಳನ್ನು ನೀಡಿದವು. ಅವುಗಳಲ್ಲಿ ಆರು ತಿಂಗಳ ಕಾಲ ನಡೆದ ಈ ಉತ್ಖನನದ ಬಹಳ ಮುಖ್ಯವಾದ ಮತ್ತು ಕುತೂಹಲಕಾರಿಯಾದ ಅಂಶಗಳನ್ನು ಮಾತ್ರ ಈಗ ಗಮನಿಸೋಣ.

ತಲಕಾಡಿನ ಇತಿಹಾಸ ಪ್ರಾರಂಭವಾಗುವುದೇ ಗಂಗರ ಕಾಲದಿಂದ. ಆದರೆ ತಲಕಾಡು ಗಂಗರಿಗಿಂತ

---

* ರೀಡರ್ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ ವಿಭಾಗ ಮೈಸೂರು ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು-570 006.

1) ಉತ್ಖನನದ ಫಲಿತಾಂಶದ ಸಾರಾಂಶವನ್ನು ಪ್ರಕಟಿಸಲು ಅನುಮತಿ ನೀಡಿದ ಈ ಎರಡು ಸಂಸ್ಥೆಗಳಿಗೆ ನಾನು ಆಭಾರಿಯಾಗಿದ್ದೇನೆ.

ಮುಂಚೆ ಯಾವ ಸ್ಥಿತಿಯಲ್ಲಿತ್ತು ಎಂಬುದು ಪ್ರಶ್ನೆ. ಇದನ್ನರಿಯಲು ಹೊರಟ ಪ್ರಾಚ್ಯ ವಸ್ತುಜ್ಞರಿಗೆ ದೊರೆತ ಉತ್ತರ ಬಹಳ ಕೌತುಕಪೂರ್ಣವಾಗಿದೆ. ಬ್ರಹ್ಮಗಿರಿ, ಚಂದ್ರವಳ್ಳಿ, ಟಿ. ನರಸೀಪುರ ಇತ್ಯಾದಿ ಈ ಸ್ಥಳಗಳಲ್ಲಿ ನಡೆದಿರುವ ಉತ್ಪನನದಿಂದ ಕರ್ನಾಟಕದಲ್ಲಿ ನವಶಿಲಾ ಯುಗ, ಬೃಹತ್ ಶಿಲಾಯುಗ ಸಂಸ್ಕೃತಿಗಳು ಕ್ರಮೇಣ ವಾಗಿ ನೆಲಸಿದ್ದವೆಂದು ತಿಳಿದುಬರುತ್ತದೆ. ಉತ್ತರ ಕರ್ನಾಟಕದಲ್ಲಿ ತದನಂತರ ಮೌರ್ಯರ ಕಾಲ, ನಂತರ ಶಾತವಾಹನರ ಕಾಲಗಳು ಬರುತ್ತವೆ. ಈ ಕಾಲಗಳಿಗೆ ನಾವು ಆದಿ ಚಾರಿತ್ರಿಕ ಕಾಲ ಎಂದು ಕರೆಯುತ್ತೇವೆ. ಬೃಹತ್ ಶಿಲಾಯುಗ ಸಂಸ್ಕೃತಿಯು ಕರ್ನಾಟಕದಲ್ಲಿ ಕ್ರಿ. ಪೂ. ೭-೬ನೇ ಶತಮಾನಗಳಷ್ಟು ಪ್ರಾಚೀನ ವಾದದ್ದು. ಈ ಸಂಸ್ಕೃತಿಯಲ್ಲಿ ಕಬ್ಬಿಣದ ಉಪಯೋಗದ ಜೊತೆಗೆ ಕಪ್ಪು ಬಣ್ಣದ, ಕೆಂಪು ಬಣ್ಣದ, ಕಪ್ಪು-ಕೆಂಪು ಬಣ್ಣದ ಮಡಿಕೆಗಳು ಹಾಗೂ ಹೊಳಪಿರುವ ತೆಳುವಾದ ಅಲೆಯಂತಹ ಗುರುತುಗಳನ್ನುಳ್ಳ ಮಡಿಕೆಗಳು ಬಳಕೆ ಯಲ್ಲಿದ್ದವು. ಇವುಗಳ ಮೇಲೆ 'ಗ್ರಾಫಿಟ್ಟಿ' ಕಲೆಗಳು ಸಹ ಇರುವುದು ಈ ಪಾತ್ರೆಗಳ ವಿಶೇಷ. ತಲಕಾಡಿನ ಉತ್ಪನನ ಗುಂಡಿಯ ಅತ್ಯಂತ ಕೆಳಗಿನ ಪದರಗಳಲ್ಲಿ ಈ ರೀತಿಯ ಬೃಹತ್ ಶಿಲಾ ಸಂಸ್ಕೃತಿಯ ಮಡಿಕೆಗಳು ದೊರೆತಿದ್ದು, ತಲಕಾಡಿನ ಪ್ರಾಚೀನತೆಯನ್ನು ಸದ್ಯಕ್ಕೆ ಕ್ರಿಸ್ತಪೂರ್ವದಲ್ಲಿ ಕೆಲವು ಶತಮಾನಗಳಷ್ಟು ಹಿಂದಕ್ಕೆ ಕೊಂಡೊಯ್ಯುತ್ತವೆ.

ಬೃಹತ್ ಶಿಲಾ ಸಂಸ್ಕೃತಿಯ ನಂತರ ಬೆಳೆದದ್ದು ಆದಿ ಚಾರಿತ್ರಿಕ ಯುಗ. ಈ ಕಾಲದ ಮಣ್ಣಿನ ಪಾತ್ರೆಗಳ ತಯಾರಿಕೆಯಲ್ಲಿ, ಅಲಂಕರಣದಲ್ಲಿ, ಹೊಳ ಪಿನಲ್ಲಿ ವಿಶೇಷತೆ ಇದೆ. ಕಪ್ಪು ಬಣ್ಣದ, ಕೆಂಪು ಬಣ್ಣದ ಕಪ್ಪು ಕೆಂಪು ಬಣ್ಣದ ವಿಶೇಷವಾದ ಹೊಳಪುಳ್ಳ ಮಣ್ಣಿನ ಪಾತ್ರೆಗಳು ಮತ್ತು ಅವುಗಳ ಮೇಲೆ ಬಿಳಿಯ ಮಣ್ಣಿನಲ್ಲಿ ಚಿತ್ರ ಬರೆದು ಸುಟ್ಟಿರುವ ಮಡಿಕೆಗಳು ಈ ಸಂಸ್ಕೃತಿಯ ವಿಶೇಷ ಲಕ್ಷಣ ಜೊತೆಗೆ ಆನೆಯ ದಂತದ, ಶಂಖದ ಆಭರಣಗಳು, ಬಳೆಗಳು, ಮಣಿಗಳು ವಿವಿಧ ವರ್ಣದ ಕಲ್ಲಿನ ಮಣಿಗಳು ಇತ್ಯಾದಿ ಈ ಸಂಸ್ಕೃತಿಯ ಇತರ ಭೋಗವಸ್ತುಗಳು, ಇವೆಲ್ಲವೂ ತಲಕಾಡಿನ ಉತ್ಪನನದ ವಿವಿಧ ಪದರಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ದೊರೆತಿದ್ದು, ಪ್ರವರ್ಧಮಾನವಾದ, ಆರ್ಥಿಕವಾಗಿ ಮುಂದುವರೆದ, ಆದಿ ಚಾರಿತ್ರಿಕ ಕಾಲದ ಸಂಸ್ಕೃತಿ ಇಲ್ಲಿ ಇತ್ತೆಂಬುದನ್ನು ನಿರೂಪಿಸುತ್ತವೆ.

ಈ ಸಂಸ್ಕೃತಿಯ ಕಾಲದ, ಕರ್ನಾಟಕದಲ್ಲಿ ಬೇರೆಲ್ಲೂ ಕಂಡುಬರದಿರುವ ಒಂದು ವಿಶೇಷವಾದ ಶೋಧನೆ ಎಂದರೆ ತಲಕಾಡಿನಲ್ಲಿ ಇದ್ದ ಕುಲುಮೆಯ ಕಾರ್ಯಗಾರ. ಸುಮಾರು ೩೦ ಅಡಿ ಚದರಕ್ಕೂ ಹೆಚ್ಚಿನ ವಿಸ್ತೀರ್ಣವನ್ನು ಹೊಂದಿದ್ದ ಕುಲುಮೆ ಕಾರ್ಯ ಗಾರವನ್ನು ಬಿಡಿಸಿ ತೆಗೆಯಲಾಗಿದೆ. ಇಡೀ ಕಾರ್ಯ ಗಾರದ ನೆಲದ ಮೇಲೆ ಬೂದಿ, ಇದ್ದಿಲು, 'ರಿಫ್ರಾಕ್ಟರಿ' ಮಣ್ಣು, ಮಣ್ಣಿನ ತಂಬಿಗೆ, ವಾಟೆಗಳು, ವಿವಿಧ ಗಾತ್ರದ ಲೋಹ ಕರಗಿಸುವ ಮೂಸೆಗಳು, ಕೆಲವು ಲೋಹದ ವಸ್ತುಗಳು, ಕಬ್ಬಿಣದ ಕಿಟ್ಟದ ಉಂಡೆಗಳು ಇವೆಲ್ಲವೂ ಚೆಲ್ಲಾಪಿಲ್ಲಿಯಾಗಿ ಬಿದ್ದಿವೆ. ಇವೆಲ್ಲಕ್ಕೂ ಮುಖ್ಯವಾಗಿ ಒಂದು ಕಡೆ ಒಂದು ಸಣ್ಣ ಕುಲುಮೆ. ಈ ಕುಲುಮೆ, ಗುಂಡಗೆ, ಸುತ್ತಲೂ ಗುಪ್ಪೆಯ ರೀತಿ ಯಲ್ಲಿದೆ. ಮಧ್ಯದಲ್ಲಿ ೬" ಆಳವಾಗಿ ಇದೆ. ಇದರ ಭರ್ತಿ ನುಣ್ಣನೆಯ ಶುದ್ಧ ಬಿಳೀ ಬೂದಿ ತುಂಬಿದೆ. ಇದಕ್ಕೆ ಒಂದು ಪಾರ್ಶ್ವದಲ್ಲಿ ಕೆಳಗಿನಿಂದ ಗಾಳಿಯನ್ನು ಒತ್ತಲು ಮಾಡಿರುವ ರಂಧ್ರ ಇದೆ. ಒಲೆಯ ಅಕ್ಕಪಕ್ಕಗಳಲ್ಲಿ ಬೂದಿ ಗುಪ್ಪೆಗಳಿವೆ. ಒಂದು ಪಾರ್ಶ್ವದಲ್ಲಿ ಮೂರು ಸಣ್ಣ ಮಣ್ಣಿನ ಬೋಗುಣಿಗಳು ಬೋರಲಾಗಿ ಬಿದ್ದಿವೆ. ಬಳಿಯಲ್ಲಿಯೇ ಇದ್ದಿಲಿನ ಮತ್ತು 'ರಿಫ್ರಾಕ್ಟರಿ'ಯ ಗುಪ್ಪೆಯೊಂದು ಇದೆ. ಸುಟ್ಟ ಗಟ್ಟಿಯಾದ ನೆಲದ ಮೇಲೆ, ಕುಳಿತು ಕೆಲಸ ಮಾಡಲು, ಸುಟ್ಟ ಮಣ್ಣಿನ ಮಣೆಯೊಂದು ಬಳಿಯಲ್ಲಿಯೇ ಇದೆ. ಇವೆಲ್ಲವೂ ಆ ಕಾಲದ ಲೋಹ ಕೆಲಸಗಾರನ ಕಾರ್ಯಗಾರದ ಒಂದು ಸುಂದರ ಚಿತ್ರಣವನ್ನು ನೀಡುತ್ತವೆ. ಇವೆಲ್ಲಕ್ಕಿಂತ ಹೆಚ್ಚಿನದಾಗಿ ಮತ್ತು ಈ ಎಲ್ಲದರ ಉದ್ದೇಶವನ್ನು ನಿರೂ ಪಿಸುವ ಅಲ್ಲಿ ದೊರಕಿದ ಮುಖ್ಯ ವಸ್ತುವೆಂದರೆ ರೋಮನ್ ನಾಣ್ಯದ ಹಿಂಭಾಗದ ಚಿತ್ರವನ್ನು ಹೊಂದಿ ರುವ ಸುಟ್ಟ ಮಣ್ಣಿನ ಮುದ್ರೆ, ಈ ರೀತಿಯ ಮುದ್ರೆ ಪ್ರಾಚ್ಯ ಉತ್ಪನನವೊಂದರಲ್ಲಿ ದೊರೆತಿರುವುದು ಇಡೀ

ಭಾರತದಲ್ಲಿಯೇ ಪ್ರಪ್ರಥಮ[2]. ಕುಲುಮೆಯ ಕಾರ್ಯಗಾರದಲ್ಲಿ ರೋಮನ್ ನಾಣ್ಯದ ಮುದ್ರೆ ದೊರೆತಿರುವುದು ಈ ಸ್ಥಳದಲ್ಲಿ ಸಮಕಾಲೀನವಾಗಿ ರೋಮನ್ ನಾಣ್ಯದ ನಕಲನ್ನು ತಯಾರಿಸುತ್ತಿದ್ದರೆಂಬುದನ್ನು ರುಜುವಾತು ಪಡಿಸುತ್ತದೆ. ಈ ಕಾರ್ಯಗಾರದಲ್ಲಿ ಚೆಲ್ಲಾಪಿಲ್ಲಿಯಾಗಿ ಯಥಾ ಯಥಾಬಿದ್ದಿರುವ ವಸ್ತುಗಳನ್ನು ಕುಲುಮೆಯ ಬೂದಿಯ ಶುದ್ಧತೆ ಇತ್ಯಾದಿಗಳನ್ನು ನೋಡಿದರೆ, ಯಾವುದೋ ಕಾರಣಕ್ಕಾಗಿ ಇದ್ದಕ್ಕಿದ್ದಂತೆ ಈ ಸ್ಥಳವನ್ನು ತೊರೆದು ಓಡಿ ಹೋಗಿರುವಂತೆ ಕಾಣಬರುದಲ್ಲದೆ, ಕಾರ್ಯಗಾರವನ್ನು ಸಹ ಉದ್ದೇಶಪೂರ್ವಕವಾಗಿ ನಾಶಪಡಿಸಿರುವಂತೆ ತೋರುತ್ತದೆ.

ಆದಿ ಚಾರಿತ್ರಿಕ ಯುಗದ ನಂತರದ ಕೆಲವು ಶತಮಾನಗಳಲ್ಲಿ ಗಂಗರು ಈ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಸುಮಾರು ೫೦೦ ವರ್ಷಗಳ ಕಾಲ ಆಳಿದರು. ಅವರ ಕಾಲದ ಸ್ಮಶಾನವೊಂದು ಉತ್ಖನನದಲ್ಲಿ ದೊರೆತಿದೆ. ಸಂಪೂರ್ಣ ಅಸ್ಥಿಪಂಜರಗಳು ಇಲ್ಲಿ ದೊರೆತಿಲ್ಲ. ಆದರೆ ಮಡಿಕೆಯಲ್ಲಿ ಕಂಡುಬಂದಿರುವ ಅಸ್ಥಿಯ ಚೂರುಗಳು, ಬೂದಿ, ಕಬ್ಬಿಣದ ಚೂರುಗಳು, ಸುಂದರಾಕೃತಿಯ ಹೊಳಪಿನಿಂದ ಕೂಡಿದ ಮಡಿಕೆಗಳು, ಕರಕಲಾದ ಧಾನ್ಯಗಳು, ಅಮೂಲ್ಯ ಕಲ್ಲಿನ ಮಣಿಗಳು ದಂತದ, ಶಂಖದ ಬಳೆಯ ಚೂರುಗಳು ಇತ್ಯಾದಿಗಳೆಲ್ಲವೂ ಈ ಸಮಾಧಿಗಳಲ್ಲಿ ದೊರೆತಿವೆ. ಗಂಗರ ಕಾಲದ ಕೇವಲ ರಾಜಕೀಯ ಸಾಂಸ್ಕೃತಿಕ ಇತಿಹಾಸವನ್ನು ಮಾತ್ರ ಅಭ್ಯಾಸ ಮಾಡುತ್ತಿದ್ದ ನಮಗೆ ಅವರ ಕಾಲದ ಶವಸಂಸ್ಕಾರ, ಪದ್ಧತಿಯ ಮೇಲೆ ಈ ಉತ್ಖನನವು ಅಪೂರ್ವ ಮಾಹಿತಿಯನ್ನು ನೀಡುತ್ತದೆ.

**ಗಂಗರ ಕಾಲದ ಅವಶೇಷಗಳು :**

ಗಂಗರು ಜೈನಧರ್ಮಕ್ಕೆ ನೀಡಿದ ಪ್ರೋತ್ಸಾಹ, ರಕ್ಷಣೆ ಎಲ್ಲಾ ಕಾಲಕ್ಕೂ ಅನುಕರಣೀಯವಾದದ್ದು ಅವರ ಕಾಲದಲ್ಲಿ ರಾಜ್ಯದ ಎಲ್ಲೆಡೆ ಜೈನ ಬಸದಿಗಳು ನಿರ್ಮಾಣಗೊಂಡವು. ಆದರೆ ಅವರ ರಾಜಧಾನಿ ತಲಕಾಡಿನಲ್ಲೇ ಇದುವರೆಗೂ ಒಂದೇ ಒಂದು ಜೈನ ಬಸದಿ ಕೂಡಾ ಕಂಡುಬರದಿದ್ದುದು ನಿಜಕ್ಕೂ ಆಶ್ಚರ್ಯಕರ ಸಂಗತಿ, ಪ್ರಸ್ತುತ ಉತ್ಖನನದಲ್ಲಿ ಜೈನ ಬಸದಿಯ ಕಟ್ಟಡವೊಂದು ಪತ್ತೆಯಾಗಿದೆ. ಒಟ್ಟು ವಿಸ್ತೀರ್ಣ ೨೧.೭ × ೧೬.೭ ಮೀಟರ್. ಇಟ್ಟಿಗೆ, ಮರ ಮುಂತಾದವುಗಳಿಂದ ನಿರ್ಮಿತವಾದ ಈ ಬಸದಿಯಲ್ಲಿ ಪೂರ್ವಾಭಿಮುಖವಾಗಿ ಕಟ್ಟಿರುವ ಮೂರು ಗರ್ಭಗೃಹಗಳು, (೩.೨೫ × ೩.೫೦, ೩.೨೫ × ೧.೮೦ ಮೀಟರ್) ಕೈಸಾಲೆ (೨.೮೦ × ೧೧.೦೦ ಮೀಟರ್) ಪ್ರತ್ಯೇಕ ಮಂಟಪ (೫.೬೦ × ೫.೪೫ ಮೀಟರ್) ಇನಿಷ್ಟೂ ಇವೆ. ಶೈಲಿಯ ಆಧಾರದ ಮೇಲೆ ಬಸದಿಯ ಈ ಭಾಗಗಳನ್ನು ಕ್ರಿ.ಶ. ಸು. ೭-೮ನೇ ಶತಮಾನಗಳಿಗೆ ಸೇರಿಸಬಹುದು. (ನೋಡಿ ತಳವಿನ್ಯಾಸ–I) ಉತ್ಖನನದಲ್ಲಿ ದೊರೆತಿರುವ ಆಧಾರಗಳು ಮತ್ತು ಕಟ್ಟಡದ ನಿರ್ಮಾಣ ತಂತ್ರವನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ ಈ ಬಸದಿಯು ಎರಡು ಹಂತಗಳಲ್ಲಿ ನಿರ್ಮಾಣಗೊಂಡಿದೆ ಎಂದು ತಿಳಿದುಬರುತ್ತದೆ. ಮೊದಲನೆಯ ಹಂತದಲ್ಲಿ ಮೂರು ಗರ್ಭಗೃಹಗಳು ಇದ್ದು ಇದು ತಳವಿನ್ಯಾಸದಲ್ಲಿ ತ್ರಿಕೂಟಾಚಲವನ್ನು ನಿರೂಪಿಸುವ ಅತ್ಯಂತ ಪ್ರಾಚೀನ ಮಾದರಿ ಎನ್ನಬಹುದು. ಈ ಗರ್ಭಗೃಹಗಳಿಗೆ ಮುಂಭಾಗದಲ್ಲಿ ಏಕವಾದ, ಕಿರಿದಾದ ಒಂದು ಕೈಸಾಲೆ ಇದೆ. ಎರಡೂ ಪಾರ್ಶ್ವಗಳಲ್ಲಿ ಇದನ್ನು ಮುಚ್ಚಿ ಮುಂಭಾಗದಲ್ಲಿ ದ್ವಾರ ಅಥವಾ ಸಂಪೂರ್ಣ ತೆರವಾಗಿ ಇಟ್ಟಿದ್ದಂತೆ ತೋರುತ್ತದೆ. ಇದರ ಮುಂಭಾಗದಲ್ಲಿ ಸ್ವಲ್ಪ ಅಂತರದಲ್ಲಿ (೩.೫೦ ಮೀಟರ್) ಪ್ರತ್ಯೇಕವಾಗಿ ಒಂದು ಚೌಕಾಕಾರದ ಮಂಟಪವಿದೆ. ಮಂಟಪವನ್ನು ಗುಡಿಯ ಮುಂದೆ ಪ್ರತ್ಯೇಕವಾಗಿ ನಿರ್ಮಿಸುವುದು, ಪ್ರಾಚೀನ ಪಲ್ಲವ ದೇಗುಲಗಳ ಒಂದು ಲಕ್ಷಣವಾಗಿತ್ತು ಎಂಬುದನ್ನು ಇಲ್ಲಿ ಸ್ಮರಿಸಬಹುದು. ಮಹಾಬಲಿಪುರಂನಲ್ಲಿರುವ ಕಡಲ ತೀರದ ದೇವಾಲಯ ಮತ್ತು ಕಂಚಿಯ

2 ಪೀಠದ ಮೇಲೆ ಕುಳಿತಿರುವ ಸ್ತ್ರೀಯೊಬ್ಬಳ ಚಿತ್ರವನ್ನು ಈ ಮುದ್ರೆ ಹೊಂದಿದೆ. ಈಕೆಯು ಒಂದು ಕೈಯಲ್ಲಿ ಪೈರಿನ ಗೊಂಚಲು, ಮತ್ತೊಂದು ಕೈಯಲ್ಲಿ ರಾಜದಂಡವಿದೆ. ಚಿತ್ರದ ಮುಂಭಾಗ ಮತ್ತು ಹಿಂಭಾಗದಲ್ಲಿ ಲ್ಯಾಟಿನ್ ಲಿಪಿಯಲ್ಲಿ 'ಮ್ಯಾಕ್ಸಿಮಸ್ ಪಾಂಟಿಫ್' ಅಂದರೆ 'ಪ್ರಧಾನ ಪುರೋಹಿತ' ಎಂಬ ಲಿಖಿತವಿದೆ. ರೋಮನ್ ಚಕ್ರವರ್ತಿ ಅವರ ಧರ್ಮದ ಪರಮೋಚ್ಚ ಪೀಠವನ್ನು ಸಹ ಜೊತೆಯಲ್ಲಿಯೇ ಅಲಂಕರಿಸುತ್ತಿದ್ದುದರಿಂದ ಅವರಿಗ ಈ ಬಿರುದಿತ್ತು. ಈ ಸ್ತ್ರೀ ಪ್ರಾಯಶಃ ಲಿವಿಯಾ ಇರಬಹುದು. ಈಕೆ ಚಕ್ರವರ್ತಿ ಅಗಸ್ಟಸ್‌ನ (ಕ್ರಿ.ಪೂ. ೨೯-ಕ್ರಿ.ಶ. ೧೪) ಮೊದಲನೆಯ ಹೆಂಡತಿ ಮತ್ತು ಟೈಬೀರಿಯಸ್ಸನ ತಾಯಿ. ಆದ್ದರಿಂದ ಈ ನಾಣ್ಯಮುದ್ರೆ ಅಗಸ್ಟಸ್‌ನ ನಾಣ್ಯದ ನಕಲಿ ಮುದ್ರೆ ಎಂದು ಹೇಳಬಹುದು.

ಕೈಲಾಸನಾಥ ದೇವಾಲಯಗಳು ಈ ಮಾದರಿಗೆ ಉದಾಹರಣೆಗಳಾಗಿವೆ.[3] ಇವಿಷ್ಟೂ ಭಾಗಗಳು ಕ್ರಿ. ಶ. ೭-೮ ನೇ ಶತಮಾನ ಮತ್ತು ಅದಕ್ಕೂ ಮುಂಚಿನ ಕಾಲದ್ದಾಗಿರಬೇಕು. ಇವುಗಳೆಲ್ಲವೂ ನೆಲ ಮಟ್ಟದವರೆಗೆ ನಾಶವಾಗಿವೆ. ಗರ್ಭಗೃಹಗಳ ಮಧ್ಯದ ಗೋಡೆಗಳ ಬುಡ ಭಾಗಗಳು, ಕಂಬದ ಕಲ್ಲು ಪೀಠಗಳು, ಗರ್ಭಗೃಹ, ಕೈಸಾಲೆಯ ಇಟ್ಟಿಗೆ ಹಾಸಿರುವ ನೆಲದ ಭಾಗ ಮತ್ತು ಇವುಗಳ ಕೆಳಭಾಗದ ಸಂಪೂರ್ಣ ಬಸದಿಯ ತಳಪಾಯದ ಕಟ್ಟಡ ಇವಿಷ್ಟೂ ನಾಶವಾಗದೆ ಉಳಿದಿವೆ. ಪ್ರಾಯಶಃ ಈ ಬಸದಿಗೆ ಮೇಲ್ಭಾಗದಲ್ಲಿ ಮರದ ಛಾವಣಿ ಇದ್ದಿರಬೇಕು. ಹಾಗೆಯೇ ಮುಂದಿನ ಮಂಡಪವೂ ಸಹ ಸುತ್ತಲೂ ತೆರವಾಗಿದ್ದು ಮೇಲ್ಗಡೆ ಮರದ ಛಾವಣಿಯನ್ನು ಹೊಂದಿತ್ತೆಂದು ತೋರುತ್ತದೆ. ಮಂಟಪದ ನೆಲದಲ್ಲಿ ಕಂಡು ಬಂದಿರುವ ಒಂಭತ್ತು 'ಕಂಬದ ಕುಣಿ'ಗಳು ಈ ಮಂಟಪಕ್ಕೆ ಮರದ ಕಂಬಗಳು ಇದ್ದವೆಂಬುದನ್ನು ಸೂಚಿಸುತ್ತವೆ. ಬಸದಿ ಪ್ರಾಯಶಃ ಅಗ್ನಿ ಆಕಸ್ಮಿಕವೊಂದರಲ್ಲಿ ಭಸ್ಮವಾಗಿರಬೇಕು. ಏಕೆಂದರೆ ಉತ್ಖನನದಲ್ಲಿ ಕೆಲವು ಕಡೆ. ನೆಲದ ಮೇಲೆ ಬೂದಿ ಇಜ್ಜಲುಗಳ ಅವಶೇಷಗಳು ದೊರೆತಿವೆ. ಈ ಬಸದಿಗೆ ಹೆಂಚಿನ ಛಾವಣಿ ಇದ್ದಿರಲಾರದು. ಕಾರಣ, ಉತ್ಖನನದಲ್ಲಿ ಹೆಂಚಿನ ಚೂರುಗಳು ಮಾತ್ರ ಸಿಕ್ಕಿಲ್ಲ. ಪ್ರಾಯಶಃ ಮರದ ಕಂಬಗಳು, ಮರದ ತೊಲೆ, ಹಲಗೆಗಳಿಂದ ಛಾವಣಿಯನ್ನು ಮಾಡಿದ್ದಿರಬೇಕು.

ಮೇಲೆ ಊಹಿಸಿದಂತೆ ಕೆಲವು ಶತಮಾನಗಳ ನಂತರ ಅಗ್ನಿ ಆಕಸ್ಮಿಕದಲ್ಲಿ ಭಸ್ಮವಾದ ನಂತರ ಈ ಬಸದಿಯನ್ನು ಪುನರ್ನಿರ್ಮಾಣ ಮಾಡಿದ್ದಾರೆ. ಹೀಗೆ ಮಾಡುವಾಗ ಸಮಕಾಲೀನವಾಗಿ ಪ್ರಚಲಿತವಿದ್ದಂತಹ ವಾಸ್ತು ವಿಧಾನಗಳನ್ನು ಅನುಕರಿಸಿರುವುದನ್ನು ನಾವು ಕಾಣುತ್ತೇವೆ. ಮುಂಚಿನ ಬಸದಿಗೆ ಸುತ್ತಲೂ ಸುಮಾರು ಒಂದು ಮೀಟರ್‌ನಷ್ಟು ಅಂತರವಿರಿಸಿ ಮತ್ತೊಂದು ಗೋಡೆಯನ್ನು ನಿರ್ಮಿಸಿದರು. ಮುಂಚಿನ ಬಸದಿಯ ಒಳ ನೆಲ ಎತ್ತರದಲ್ಲಿದ್ದುದರಿಂದ ಆ ಮಟ್ಟಕ್ಕೆ ಅಧಿಷ್ಠಾನವನ್ನು ಏರಿಸಲು, ಅಧಿಷ್ಠಾನಕ್ಕೆ ಒಂದು ತಳಪಾಯವನ್ನು ನಿರ್ಮಿಸಿದ್ದಾರೆ. ಒರಟು ಕಲ್ಲಿನ ಚಪ್ಪಡಿಗಳನ್ನು ಹಾಸಿ ಅದರ ಮೇಲೆ ಇಟ್ಟಿಗೆ ಗಾರೆಯಲ್ಲಿ ಗಟ್ಟಿಯಾದ, ದಪ್ಪನಾದ, ಕ್ರಮವಾಗಿಲ್ಲದ ಗೋಡೆಯನ್ನು ನಿರ್ಮಿಸಿದ್ದಾರೆ. ಈ ಗೋಡೆ ಸಾಕಷ್ಟು ಎತ್ತರ ತಲಪಿದ ನಂತರ ಅದರ ಮೇಲೆ ನಾಜೂಕಾಗಿ ಕತ್ತರಿಸಿದ ಕಲ್ಲಿನ ದಿಂಡುಗಳಲ್ಲಿ ಅಧಿಷ್ಠಾನವನ್ನು ಕಟ್ಟಿದ್ದಾರೆ. ಈ ಅಧಿಷ್ಠಾನ ಸಂಪೂರ್ಣವಾಗಿ ನಾಶಮಾಡಲ್ಪಟ್ಟಿದೆ. ಆದರೂ ಅಳಿದುಳಿದಿರುವ ಅವಶೇಷಗಳಿಂದ ಇದರಲ್ಲಿ ಉಪಾನ, ಜಗತಿ, ದುಂಡಾದ ಕುಮುದ, ಕಂಪ, ಪ್ರತಿ, ಈ ಎಲ್ಲಾ ದಿಂಡೂಗಳೂ ಇದ್ದುವೆಂದೂ ತಿಳಿದು ಬರುತ್ತದೆ. ಭಿತ್ತಿಯ ಭಾಗ ಇಟ್ಟಿಗೆಯದಾಗಿರಬಹುದು ಅಥವಾ ಕಲ್ಲಿನದ್ದಾಗಿರಬಹುದು ಸಂಪೂರ್ಣ ನಾಶವಾಗಿರುವುದರಿಂದ ಅದರ ಬಗ್ಗೆ ನಿಖರವಾಗಿ ಹೇಳುವುದು ಸಾಧ್ಯವಿಲ್ಲ. ಉತ್ಖನನದಲ್ಲಿ ಸಿಕ್ಕಿರುವ ಗಾರೆಗಚ್ಚಿನ ಕೂಡು, ಕೀರ್ತಿ ಮುಖ, ಇತರೆ ಬಳ್ಳಿ ಸುರುಳಿ ಅಲಂಕರಣಗಳ ಭಾಗಗಳು. ವಿವಿಧಾಕಾರದ ಗಾತ್ರದ ಇಟ್ಟಿಗೆಗಳು, ಮಧ್ಯದಲ್ಲಿ ರಂಧ್ರವಿರುವ ಬೆಲ್ಲದಚ್ಚಿನಾಕಾರದ ಸುಟ್ಟ ಇಟ್ಟಿಗೆಗಳು ಇತ್ಯಾದಿ, ಈ ಬಸದಿಯ ಗೋಡೆ ಪ್ರಸ್ತರ ಮತ್ತು ವಿಮಾನಗಳ ನಿರ್ಮಾಣದಲ್ಲಿ ಹೇರಳವಾಗಿ ಇಟ್ಟಿಗೆ ಗಾರೆಯನ್ನು ಬಳಸಿದ್ದಾರೆಂಬುದನ್ನು ಸೂಚಿಸುತ್ತದೆ.

ಬಸದಿಯನ್ನು ವಿಸ್ತರಿಸಿದ್ದುದರಿಂದ ಗರ್ಭಗೃಹದ ಮತ್ತು ಕೈಸಾಲೆಯನ್ನು ಬಳಸಿದಂತೆ ಪ್ರದಕ್ಷಿಣ ಪಥ ವೇರ್ಪಟ್ಟಿತು. ಕೈಸಾಲೆಯ ಮುಂಭಾಗದಲ್ಲಿ ಮಧ್ಯದಲ್ಲಿ ದ್ವಾರವನ್ನು ನಿರ್ಮಿಸಿದ್ದುದರಿಂದ ಕೈಸಾಲೆ ಒಂದು ರೀತಿಯ ಅಂತರಾಳದಂತಾಯಿತು ಅಂತರಾಳದ ಮೂಲಕ ಪ್ರದಕ್ಷಿಣ ಪಥಕ್ಕೆ ದಾರಿಯಾಯಿತು. ಮುಂಭಾಗದ ಮಂಟಪ ಸುತ್ತಲೂ ಒಂದು ಮೀಟರಿನಷ್ಟು ಅಗಲವಾದ ವಿಶಾಲವಾದ ನವರಂಗವಾಗಿ ಎರಡು ಭಾಗಗಳಲ್ಲಿದ್ದ ಒಂದೇ ಕಟ್ಟಡವಾಯಿತು. (ನೋಡಿ ತಳವಿನ್ಯಾಸ-II) ಬಸದಿಗೆ ಮುಖ ಮಂಟಪವಿದ್ದ ಸೂಚನೆಗಳಾವುವೂ ದೊರೆತಿಲ್ಲ. ಆದರೆ ಬಸದಿಯ ಸುತ್ತಲೂ ಚಪ್ಪಡಿ ಹಾಸಿದ್ದ ವಿಶಾಲವಾದ ಅಂಗಳ ಮತ್ತು ಸುತ್ತಲೂ ಇಟ್ಟಿಗೆಯ ಪ್ರಾಕಾರವಿದ್ದದಕ್ಕೆ ಆಧಾರಗಳು ಸಿಕ್ಕಿವೆ.

ಮೇಲೆ ಹೇಳಿದ್ದ ಎಲ್ಲಾ ಅಂಶಗಳ ಆಧಾರದ

---

3 ಪರ್ಸಿ ಬ್ರೌನ್, ಇಂಡಿಯನ್ ಆರ್ಕಿಟೆಕ್ಚರ್, ಸಂ. ೧, ಬೊಂಬಾಯಿ, ೧೯೭೧ ಪುಟ ೮೧-೮೨

ಮೇಲೆ ಬಸದಿಯು ಕ್ರಿ. ಶ.೯-೧೦ನೇ ಶತಮಾನಗಳಲ್ಲಿ ಪುನರ್ನಿರ್ಮಾಣಗೊಂಡಿರಬೇಕು ಎಂದು ಹೇಳಬಹುದು. ಆದರೆ ಮೂಲ ಬಸದಿಯನ್ನಾಗಲೀ ಅಥವಾ ಅದರ ವಿಸ್ತರಣೆಯ ಭಾಗವನ್ನಾಗಲೀ ನಿಖರವಾಗಿ ಕಾಲ ನಿರ್ಣಯ ಮಾಡುವುದಕ್ಕೆ ಉತ್ಖನನದಲ್ಲಿ ಯಾವ ರೀತಿಯ ಕುರುಹಾಗಲೀ ದೊರೆತಿಲ್ಲ. ಆದರೂ ಸಹ ಈ ಬಸದಿಯನ್ನು ಸಮಕಾಲೀನ, ಕಾಲ ತಿಳಿದಿರುವ ಇತರ ಬಸದಿಯೊಂದಿಗೆ ಹೋಲಿಸಿ ನೋಡಿದಾಗ ಮೇಲೆ ಊಹಿಸಿರುವ ಕಾಲಮಾನವು ಸರಿಯಾದದ್ದೆಂದು ತೀರ್ಮಾನಿಸಬಹುದು. ಶ್ರವಣಬೆಳಗೊಳದ ಚಂದ್ರಗಿರಿ (ಚಿಕ್ಕಬೆಟ್ಟ) ಮೇಲಿರುವ ಚಂದ್ರಗುಪ್ತ ಬಸದಿ ಈ ದಿಸೆಯಲ್ಲಿ ನಮಗೆ ಬಹಳ ಅನುಕೂಲಕರವಾದ ಸುಳಿವುಗಳನ್ನು ದೊರಕಿಸಿ ಕೊಡುತ್ತವೆ. ಈ ಬಸದಿಯನ್ನು ಅದರ ಶೈಲಿಯ ಆಧಾರದ ಮೇಲೆ ಕ್ರಿ.ಶ. ೯ನೇ ಶತಮಾನದ್ದೆಂದು ಹೇಳಬಹುದು. ಈ ಬಸದಿಯಲ್ಲಿ ತಲಕಾಡಿನ ಬಸದಿಯ ತಳವಿನ್ಯಾಸದ ರೀತಿಯಲ್ಲಿಯೇ ಸಾಲಾಗಿ ಮೂರು ಗರ್ಭಗೃಹಗಳು, ಮಧ್ಯದ ಗರ್ಭಗೃಹ ಪಕ್ಕದವುಗಳಿಗಿಂತ ಸ್ವಲ್ಪ ವಿಶಾಲ (ತಲಕಾಡಿನಲ್ಲಿಯೂ ಇದೇ ರೀತಿ ಇದೆ) ಮುಂದೆ ಆಳವಿಲ್ಲದ, ಅಗಲವಾದ ಪಾರ್ಶ್ವಗಳಲ್ಲಿ ಮಾತ್ರ ಮುಚ್ಚಿರುವ ಕೈ ಸಾಲೆ ಇವೆಲ್ಲವೂ ಇದೆ. ಬಸದಿಯನ್ನು ಸಂಪೂರ್ಣವಾಗಿ ಗ್ರ್ಯಾನೈಟ್ ಶಿಲೆಯಲ್ಲಿ ಕಟ್ಟಲಾಗಿದೆ. ಅದಿಷ್ಠಾನದ ದಿಂಡುಗಳೆಂದರೆ ಉಪಾನ, ಜಗತಿ, ತ್ರಿಪಟ್ಟಕುಮುದ, ಕಂಪ, ಪ್ರತಿ. ಭಿತ್ತಿಯಲ್ಲಿ ಸ್ಥಂಬಿಕೆಗಳು, ಕೋಷ್ಠಗಳು, ಮೇಲೆ ಕಪೋತ ಮತ್ತು ವ್ಯಾಳವಾರಿಯಿರುವ ಪಿಂಡಿ (ಗರ್ಭಗೃಹದ ಛಾವಣಿಯ ಚಪ್ಪಡಿ) ಮತ್ತು ಏಕತಲ ವಿಮಾನ ಇವಿಷ್ಟೂ ಇವೆ. ಪಾರ್ಶ್ವದ ಗರ್ಭ ಗುಡಿಗಳ ಮೇಲೆ ವಿಮಾನಗಳಿವೆ. ಮಧ್ಯದ ಗರ್ಭಗುಡಿಯ ವಿಮಾನ ಈಗ ಇಲ್ಲ. ಮಧ್ಯದ ಗರ್ಭಗುಡಿಯಲ್ಲಿ ಪಾರ್ಶ್ವನಾಥನ ವಿಗ್ರಹ ಮತ್ತು ಇಕ್ಕೆಲಗಳ ಗುಡಿಗಳಲ್ಲಿ ಪದ್ಮಾವತಿ ಮತ್ತು ಕೂಷ್ಮಾಂಡಿನಿ ಯಕ್ಷಿಯರ ವಿಗ್ರಹಗಳಿವೆ.[4]

ಪ್ರಾಯಶಃ ಈ ಚಂದ್ರಗುಪ್ತ ಬಸದಿಯನ್ನು ಶಿಲ್ಪಿಯು ತಲಕಾಡಿನ ಮೂಲ ಬಸದಿಯನ್ನು ಮಾದರಿಯನ್ನಾಗಿ ಆರಿಸಿಕೊಂಡಿರಬೇಕು. ಏಕೆಂದರೆ ತಲವಿನ್ಯಾಸದಲ್ಲಿ ಇವೆರಡೂ ಒಂದೇ ರೀತಿಯದಾಗಿವೆ. ಈ ರೀತಿ ಒಂದು ಸುಂದರವಾದ ಅಥವಾ ಪ್ರಾಮುಖ್ಯವಾದ ವಾಸ್ತು ಕೃತಿ ಮತ್ತೊಂದು ನಂತರದ ವಾಸ್ತು ಕೃತಿಯ ವಿನ್ಯಾಸದ ಮೇಲೆ ಪ್ರಭಾವ ಬೀರಿರುವ ಉದಾಹರಣೆಗಳು ನಮ್ಮಲ್ಲಿ ಅನೇಕವುಂಟು. ತಲಕಾಡಿನ, ಪ್ರಾಚೀನ ಲಕ್ಷಣಗಳನ್ನು ಹೊಂದಿರುವ, ಇಟ್ಟಿಗೆ ಮರದ ಬಸದಿಯನ್ನು ಅನುಸರಿಸಿ ಕಲ್ಲಿನಲ್ಲಿ ಚಂದ್ರಗುಪ್ತ ಬಸದಿಯನ್ನು ನಿರ್ಮಿಸಿರುವ ಸಾಧ್ಯತೆಗಳೂ ಇಲ್ಲದಿಲ್ಲ. ಸಮಕಾಲೀನ ಅಂದರೆ ೯ನೇ ಶತಮಾನದಲ್ಲಿ ಬಳಕೆಯಲ್ಲಿದ್ದ ರೀತಿಯಲ್ಲಿ ಸರಳವಾದ ಅಲಂಕರಣವನ್ನು ಈ ಬಸದಿಯ ಹೊರಮೈಯಲ್ಲಿ ಮೂಡಿಸಲಾಯಿತು. ಕೆಲವು ಕಾಲದ ನಂತರ ತಲಕಾಡಿನ ಬಸದಿ ಅಗ್ನಿಗಾಹುತಿಗೊಳಗಾದಾಗ ಅದನ್ನು ಪುನರ್ನಿರ್ಮಾಣ ಮಾಡಿದ ವಿಚಾರ ಆಗಲೇ ಚರ್ಚಿಸಲಾಗಿದೆ. ಹೀಗೆ ಪುನರ್ನಿರ್ಮಿಸಿದಾಗ ಸಮಕಾಲೀನ ಪದ್ಧತಿಯಂತೆ ಬಸದಿಗೆ ಪ್ರದಕ್ಷಿಣ ಪಥವನ್ನು ಸೇರಿಸಿ ಬೇರೆಯಾಗಿದ್ದ ಮಂಟಪವನ್ನು ಮೂಲ ಕಟ್ಟಡದೊಂದಿಗೆ ಒಂದುಗೂಡಿಸಲಾಯಿತು. ಹೊರ ಅಲಂಕರಣಕ್ಕೆ ಶ್ರವಣಬೆಳ್ಗೊಳದ ಚಂದ್ರಗುಪ್ತ ಬಸದಿಯೇ ಮತ್ತೆ ಈ ಬಸದಿಗೆ ಮಾದರಿಯಾಗಿರಬೇಕು. ಏಕೆಂದರೆ ಚಂದ್ರಗುಪ್ತ ಬಸದಿಯಲ್ಲಿ ಕಾಣಬರುವ ಎಲ್ಲಾ ಅಧಿಷ್ಠಾನದ ದಿಂಡುಗಳೂ, ಬಿತ್ತಿಯ ಅಲಂಕರಣಗಳೂ ಹಾಗೂ ಪಿಂಡಿಯ ವ್ಯಾಳ ಮಾಲೆ ಇತ್ಯಾದಿ ಎಲ್ಲವನ್ನೂ ತಲಕಾಡಿನ ಬಸದಿಯಲ್ಲಿ ಯಥಾವತ್ತಾಗಿ ಅನುಕರಿಸಲಾಗಿದೆ. ತಲಕಾಡಿನ ಬಸದಿಯ ಅವಶೇಷಗಳನ್ನು ಆಧಾರವಾಗಿಟ್ಟುಕೊಂಡು ಬಸದಿಯ ಪುನರ್ನಿರ್ಮಾಣ ಚಿತ್ರಣವನ್ನು ಮಾಡಿದರೆ ಚಂದ್ರಗುಪ್ತ ಬಸದಿಯ ಯಥಾವತ್ ಮಾದರಿಯೇ ಪುನ ಸೃಷ್ಟಿಯಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಚಂದ್ರಗುಪ್ತ ಬಸದಿ ತಲಕಾಡಿನ ಬಸದಿಯ ಪುನರ್ನಿರ್ಮಾಣ ಕಾರ್ಯದಲ್ಲಿ ಪ್ರಬಲವಾದ ಪ್ರಭಾವವನ್ನು ಬೀರಿದೆ ಎನ್ನಬಹುದು. ಆದ್ದರಿಂದ ತಲಕಾಡಿನಲ್ಲಿ ಮೂಲ ಬಸದಿಯು ಕ್ರಿ.ಶ. ೭-೮ನೇ ಶತಮಾನದಲ್ಲಿ ನಿರ್ಮಾಣಗೊಂಡು ಕ್ರಿ.ಶ. ೯-೧೦ನೇ ಶತಮಾನಗಳಲ್ಲಿ ಪುನರ್ನಿರ್ಮಾಣಗೊಂಡಿರಬೇಕು.

---

4 ಹೆಚ್ಚಿನ ವಿವರಗಳಿಗೆ ನೋಡಿ: ಐ.ಕೆ. ಶರ್ಮ, 'ಟೆಂಪಲ್ಸ್ ಆಫ್ ದಿ ಗಂಗಾಸ್ ಆಫ್ ಕರ್ನಾಟಕ' ನವದೆಹಲಿ, ೧೯೯೨, ಪುಟ ೧೪೨-೪೪

ಬಸದಿಯ ನಿವೇಶನದ ಬಳಿಯಲ್ಲಿಯೇ ಮರವೊಂದರ ಕೆಳಗೆ ಇರುವ ಪ್ರಾಚೀನ ಶಿಲ್ಪ ಲಕ್ಷಣಗಳನ್ನು ಹೊಂದಿರುವ ಪಾರ್ಶ್ವನಾಥನ ನಿಂತಿರುವ ವಿಗ್ರಹ ದೊರತಿದೆ. ಈ ಶಿಲ್ಪವು ಮೂಲತಃ ಈ ಬಸದಿಯದ್ದಾಗಿತ್ತೆಂದು ಉತ್ಖನನದಲ್ಲಿ ದೊರೆತ ವಿಗ್ರಹಕ್ಕೆ ಸರಿಹೊಂದುವ, ಕಲ್ಲಿನ ಪೀಠವು ನಿರೂಪಿಸುತ್ತದೆ. ಗಂಗರ ಶಾಸನಗಳಿಂದ ತಲಕಾಡಿನಲ್ಲಿ ೬ನೆಯ ಶತಮಾನದಲ್ಲಿ ವಿಜಯ ಜಿನಾಲಯವೊಂದಿತ್ತೆಂದು ತಿಳಿದು ಬರುತ್ತದೆ.[5] ಪ್ರಾಯಶಃ ಪ್ರಸ್ತುತ ಬಸದಿಯೇ ಈ ವಿಜಯ ಜಿನಾಲಯವಾಗಿದ್ದಿರಬಹುದು.

ತಲಕಾಡಿನ ಉತ್ಖನನದ ಮತ್ತೊಂದು ಗುಂಡಿಯಲ್ಲಿ ಸುಮಾರು ೨ ಮೀಟರ್ ಅಗಲ, ೨ ಮೀಟರ್ ಎತ್ತರ ಮತ್ತು ೨೦ ಮೀಟರ್‌ಗೂ ಮೀರಿ ಉದ್ದವಾದ ದೊಡ್ಡ ಗೋಡೆಯನ್ನು ಬಿಡಿಸಲಾಗಿದೆ. ಈ ಗೋಡೆ ಇನ್ನೂ ಮುಂದುವರೆಯುತ್ತದೆ. ಈ ಗೋಡೆಯ ಒಳಭಾಗದಲ್ಲಿ ಅನೇಕ ಸಣ್ಣ ಸಣ್ಣ ಗೋಡೆಗಳು ಕಂಡು ಬಂದಿವೆ. ಈ ದಪ್ಪನಾದ ಗೋಡೆ ಕೋಟೆಯ ಗೋಡೆಯಾಗಿರಲು ಸಾಧ್ಯವಿಲ್ಲ. ಪ್ರಾಯಶಃ ಅರಮನೆಯ ಪ್ರಕಾರದ ಗೋಡೆಯಾಗಿರುವ ಸಾಧ್ಯತೆ ಹೆಚ್ಚು. ಈ ಸ್ಥಳದಲ್ಲಿ ಇನ್ನೂ ಉತ್ಖನನ ನಡೆಯಬೇಕಾಗಿರುವುದರಿಂದ ಈ ವಿಷಯದ ಬಗ್ಗೆ ಈಗಲೇ ತೀರ್ಮಾನ ಮಾಡುವುದು ಸಮಂಜಸವಲ್ಲ.

**ಹೊಯ್ಸಳ ಸ್ಮಾರಕಗಳು :**

ತಲಕಾಡಿನ ಕೀರ್ತಿ ನಾರಾಯಣ ದೇವಾಲಯದ ಮುಂದೆ, ಸ್ವಲ್ಪ ದೂರದಲ್ಲಿ ನಡೆಸಿದ ಉತ್ಖನನದಲ್ಲಿ ಪ್ರಾಯಶಃ ಹೊಯ್ಸಳರ ಕಾಲದ ವಾಸದ ಮನೆಯ ಸ್ವಲ್ಪ ಭಾಗವೊಂದು ಪತ್ತೆಯಾಗಿದೆ. ಈ ಕಟ್ಟಡದ ಉಳಿದ ಭಾಗವನ್ನು ಸಂಪೂರ್ಣವಾಗಿ ಬಿಡಿಸಿದ ಹೊರತು ಇದರ ಬಗ್ಗೆ ಖಚಿತವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲ. ಇದೇ ಗುಂಡಿಯಲ್ಲಿ, ವಿಜಯನಗರದ ಕಾಲಕ್ಕೆ ಸೇರಿಸಬಹುದಾದ ಎರಡು ಬಳೆಯ ಬಾವಿಗಳು ಪತ್ತೆಯಾಗಿವೆ. ಈ ಬಾವಿಗಳು ಇಲ್ಲಿಯ ಉತ್ಖನನದ ವಿಶಿಷ್ಟವಾದ ಶೋಧನೆ ಎನ್ನಬಹುದು, ಸುಟ್ಟ ಮಣ್ಣಿನ, ದೊಡ್ಡದಾದ ಬಳೆಗಳನ್ನು ಒಂದರ ಮೇಲೊಂದರಂತೆ ಕೂಡಿಸಿ ಸುತ್ತಲಿನ ಮಣ್ಣು ಒಳಕ್ಕೆ ಕುಸಿಯದಂತೆ ತಡೆಯುವುದೇ ಇದರ ಉದ್ದೇಶ. ಈ ಪದ್ಧತಿ ಭಾರತದಲ್ಲಿ ಹರಪ್ಪಾ ಸಂಸ್ಕೃತಿಯ ಕಾಲದಷ್ಟು ಹಳೆಯದಾದರೂ ಪ್ರಾಚೀನ ಕರ್ನಾಟಕದಲ್ಲಿ ಇಂತಹ ಬಾವಿಗಳು ಕಂಡು ಬಂದಿರುವುದು ತಲಕಾಡಿನಲ್ಲಿ. ಮಾತ್ರ. ಹಂಪಿಯ ಉತ್ಖನನದಲ್ಲೂ ಸಹ ಇಂತಹ ಬಳೆ ಬಾವಿ ಕಂಡು ಬಂದಿಲ್ಲವೆಂಬ ಅಂಶ ತಲಕಾಡಿನ ಉತ್ಖನನದ ವೈಶಿಷ್ಟ್ಯತೆಯನ್ನು ಹೆಚ್ಚಿಸಿದೆ. ಮೂರು ಅಡಿ ವ್ಯಾಸದ, ೧೦ ಅಂಗುಲ ಎತ್ತರದ ಸು. ಎರಡು ಅಂಗುಲ ದಪ್ಪದ, ೨೨ ಬಳೆಗಳಿಗೂ ಮೀರಿದ ಒಂದು ಬಾವಿ ಮತ್ತು ಇದೇ ಪ್ರಮಾಣದ ಒಳಕ್ಕೆ ಕುಸಿದಿರುವ ಇನ್ನೊಂದು ಬಾವಿ ಎರಡೂ ಅಕ್ಕ ಪಕ್ಕಗಳಲ್ಲಿ ಒಂದೇ ಗುಂಡಿಯಲ್ಲಿ ದೊರೆತಿವೆ.

ಪ್ರಸ್ತುತ ಸಾಲಿನ ಉತ್ಖನನದಿಂದ ತಲಕಾಡಿನಲ್ಲಿ ಬೃಹತ್ ಶಿಲಾ ಸಂಸ್ಕೃತಿಯ ಅವಶೇಷಗಳು, ಮಡಿಕೆಗಳು, ಆದಿ ಚಾರಿತ್ರಿಕ ಕಾಲದ ಮಡಿಕೆಗಳು ವಿಧವಿಧವಾದ ಐಹಿಕ ವಸ್ತುಗಳು, ಕುಲುಮೆಯ ಕಾರ್ಯಾಗಾರ, ರೋಮನ್ ನಾಣ್ಯಮುದ್ರೆ, ಗಂಗರ ಕಾಲದ ಸಮಾಧಿಗಳು, ಗಂಗ ರಾಜ ನಿವಾಸ ಪ್ರಾಕಾರ, ಜೈನ ಬಸದಿ, ವಿಜಯನಗರ ಕಾಲದ ಬಳೆ ಬಾವಿಗಳು, ಇತ್ಯಾದಿ ವೈವಿಧ್ಯಮಯವಾದ ಅನೇಕ ವಸ್ತು ವಿಷಯಗಳು ಪತ್ತೆಯಾಗಿವೆ. ಅಲ್ಲದೆ ಉತ್ಖನನದಿಂದ ತಿಳಿದು ಬರುವ ಮತ್ತೊಂದು ಬಹಳ ಮುಖ್ಯವಾದ ಅಂಶವೆಂದರೆ ತಲಕಾಡಿನಲ್ಲಿ ಮರಳು ರಾಶಿ ರಚನೆಗೊಂಡ ಕಾಲ. ಉತ್ಖನನದ ಗುಂಡಿಗಳು ಕೆಲವೆಡೆ ೨೦ ಅಡಿ ಆಳದಷ್ಟು ತಲುಪಿದೆ. ಆದರೆ ಈ ಗುಂಡಿಗಳ ಯಾವುದೇ ಪದರದಲ್ಲಿ ತಲಕಾಡಿನ ವಿಶಿಷ್ಟ ರೀತಿಯ ನುಣ್ಣನೆಯ ಮರಳು ದೊರೆತಿಲ್ಲ ಈ ಮರಳು ದೊರೆಯುವುದು ಕೇವಲ ವಿಜಯನಗರ ಕಾಲದ ಪದರಗಳ ಮೇಲ್ಭಾಗದಲ್ಲಿ ಮಾತ್ರ. ಆದ್ದರಿಂದ ತಲಕಾಡಿನ ಪರಂಪರೆಯಲ್ಲಿ ಇರುವ ಸಾಧ್ವಿ ಆಲಮೇಲಮ್ಮನ ಘಟನೆ ೧೬-೧೭ನೇ ಶತಮಾನದಲ್ಲಿ ಪ್ರಾರಂಭವಾದ ಊರಿನ ಮೇಲೆ ಮರಳು ಮುಚ್ಚಿಕೊಳ್ಳುವ ವಿಚಿತ್ರ ವಾತಾವರಣ ವೈಪರೀತ್ಯದ ಸತ್ಯ ಸಂಗತಿಯನ್ನು ಹೇಳುವ ದಂತ ಕಥೆ ಎನ್ನಬಹುದು. ತಲಕಾಡಿನಲ್ಲಿ ಉತ್ಖನನವನ್ನು ಇನ್ನೂ ಕೆಲವು ವರ್ಷಗಳ ಕಾಲ ಮುಂದುವರೆಸುವ ಯೋಚನೆ ಕರ್ನಾಟಕ ಸರ್ಕಾರಕ್ಕೆ ಇರುವುದು ಸ್ವಾಗತಾರ್ಹವಾದ ವಿಷಯ.

---

5 ಎಪಿಗ್ರಾಫಿಯಾ ಕರ್ನಾಟಿಕಾ' ಸಂ ೧. ಪುಟ ೧-೫

ಡಾ|| ಎಸ್. ಕೆ. ಜೋಶಿ*

# ಸನ್ನತಿ ದುರ್ಗದ ಪುನರ್ದರ್ಶನ

ಇತಿಹಾಸ ಪ್ರಾರಂಭದ ಕಾಲದಲ್ಲಿ, (ಕ್ರಿ. ಪೂ. ೫೦೦ ಸುತ್ತಮುತ್ತ) ಐತಿಹಾಸಿಕ ಸಂಗತಿಗಳು ಮಸಕಾಗಿ ಕಾಣ ತೊಡಗಿ, ಸಂಘ ಜೀವಿಯಾದ ಮಾನವನು ಭರತ ಖಂಡದಲ್ಲಿ 'ಜನಪದಗಳ ರಾಜ್ಯ' ನಿರ್ಮಾಣಕ್ಕೆ ಎಡೆಗೊಟ್ಟನು. ಆದಾದನಂತರ, 'ರಾಜ' 'ರಾಜ್ಯಗಳ' ಸ್ಥಾನಗಳಿಗೆ ಎಡೆ ಮಾಡಿದುದನ್ನು ಕಾಣುತ್ತೇವೆ.

ಆದಾಗಿ, ಕ್ರಿ. ಶ. ಪೂ. ೫೦೦ ರ ಸುತ್ತಮುತ್ತ ಎಷ್ಟೋ ಕೋಟೆಗಳು ನಿರ್ಮಾಣಗೊಂಡುದುದನ್ನು ಕಾಣುತ್ತೇವೆ. ಎ. ಘೋಷ್ ಪ್ರಕಾರ ಪ್ರಾಚೀನ ಕಾಲದಲ್ಲಿ ಈ ಕೆಳಗಿನ ಕೋಟೆಗಳು ನಿರ್ಮಾಣಗೊಂಡಿದ್ದು ಅವನ್ನು ಹೀಗೆ ವಿಭಾಗಿಸಬಹುದು :

(i) ಏರಾಣ್ ಉಜ್ಜೈನಿ, ವಾರಣಾಸಿ, ರಾಜಘಾಟ : ಕ್ರಿ. ಪೂ. ೭೦೦
(ii) ಕೌಶಾಂಬಿ : ಕ್ರಿ. ಪೂ. ೬೦೦
(iii) ರಾಜಗೃಹ, ಶ್ರಾವಸ್ತಿ, ವೈಶಾಲಿ, ಪಾಟಲೀಪುತ್ರ : ಕ್ರಿ. ಪೂ. ೫೦೦
(iv) ನಿಶುಪಾಲಘರ್, ಮಥುರಾ : ಕ್ರಿ. ಪೂ. ೩೦೦
(v) ಸನ್ನತಿ, ಬನವಾಸಿ : ಕ್ರಿ. ಪೂ. ೨೦೦

ಇವೆಲ್ಲ ಸಾಮಾನ್ಯವಾಗಿ ಮಣ್ಣಿನ ಕೋಟೆಗಳು ಪಾಟಲೀಪುತ್ರದಲ್ಲಿ ಕಾಷ್ಠ್ಯ ಕೋಟೆಯ ಕೆಲ ಭಾಗವನ್ನು ಶ್ರೀ ವಿಜಯಕಾಂತ ಮಿಶ್ರಾ ಶೋಧಿಸಿದ್ದಾರೆ. ಇವೆಲ್ಲವೂ ಸಾಮಾನ್ಯವಾದ ಸರಳ ಪರಿಮಾಣದ ನಾಗರಿಕ ಕೋಟೆಗಳಾಗಿವೆ. ಇವು ರಕ್ಷಣಾ ಕೋಟೆಗಳಲ್ಲ.

ಈ ನಾಗರಿಕ ಕೋಟೆಗಳಲ್ಲಿ ಸರಳತೆ ಏಕೆ ? ಎಂಬ ಪ್ರಶ್ನೆ, ಮೂಲಭೂತವಾಗಿ ಉದ್ಭವಿಸುತ್ತದೆ. ಇದಕ್ಕೆ ಮುಖ್ಯ ಕಾರಣ ಇದೂ ಆಗಿರಲು ಸಾಕು. 'ಶಾಂತಾತ್ಮ' ನಾದ ಬುದ್ಧನ ಆದರ್ಶ ಜೀವನ ಹಾಗೂ ಅವನ ಅಂಹಿಸಾಮಯ ತತ್ವ-ಸಾರ ಗಳು, ಆಗಿನಸಮಾಜದ ಮೇಲೆ ಪ್ರಭಾವ ಬೀರಿರಲು ಸಾಕು, ಯುದ್ಧಗಳು ನಡೆಯುತ್ತಿದ್ದುದು ಕಡಿಮೆ, ಅದಲ್ಲದೆ ಕೋಟೆಗಳ ಸರಳತೆಗೆ ಆಗಿನ ಯುದ್ಧ ಕಲೆ, ಬಳಕೆಯಲ್ಲಿದ್ದ ಶಸ್ತ್ರಗಳೂ ಕಾರಣ. ಇವು ಹೆಚ್ಚಿನ ಅನರ್ಥಕಾರಿಗಳಾಗಿರಲಿಲ್ಲ. ಕೋಟೆಗಳ ಸ್ಥಳಾಯ್ಕೆಗಾಗಿ ಗುಡ್ಡಗಳ ಓರೆ, ನದಿಗಳ ತಿರುವು ಆಳ ಹಾಗೂ ವಿಶಾಲವಾದ ನೀರಿನ ಹರವು ಮುಂತಾದವು ಸ್ವಾಭಾವಿಕವಾಗಿ ಸೃಷ್ಟಿ ನೀಡಿದ ಪ್ರಥಮ ರಕ್ಷಣಾ ರೇಖೆ(First defence line)ಗಳಾಗಿಪರಿಣಮಿಸಿ, ರಕ್ಷಣೆಗೆ ದೃಢತೆಯನ್ನು ನೀಡಿದವು. ಈ ಮೇಲಣ ಚಿತ್ರಣವು ಸಾಮಾನ್ಯವಾಗಿ ಪ್ರಾಚೀನ ದುರ್ಗಗಳ ಗುಣಗಳಿಗೆ ಅಳವಡಿಸಬಹುದು.

ಈ ಮೇಲಿನ ಎಲ್ಲ ಗುಣಗಳು, ಸನ್ನತಿಯ ಕೋಟೆಗೆ ಹೆಚ್ಚು ಕಡಿಮೆ ಅಳವಡಿಸಲಾಗಿದ್ದು, ಈ ಇಂಥ ದೀರ್ಘ ಪರಾಮರ್ಶೆ ಅವಶ್ಯವೆನ್ನಿಸಿತು. ನನ್ನ ಸಂಶೋಧನೆಯ ಮಹಾ ಪ್ರಬಂಧದ (Early forts in Karnataka), ಕಾಲದಲ್ಲಿ (೧೯೭೬-೮೦)

* ಅಸಿಸ್ಟೆಂಟ್ ಸೂಪರಿಂಟೆಂಡಿಂಗ್ ಆರ್ಕಿಯಾಲಜಿಸ್ಟ್, ಬೆಂಗಳೂರು ಸರ್ಕಲ್, ಬೆಂಗಳೂರು.

ಇಂಥ ದೀರ್ಘ ಪರಾಮರ್ಶೆ ಅವಶ್ಯವೆನ್ನಿಸಿತು. ನನ್ನ ಸಂಶೋಧನೆಯ ಮಹಾ ಪ್ರಬಂಧದ (Early forts in Karnataka), ಕಾಲದಲ್ಲಿ (೧೯೭೬-೮೦) ಸನ್ನತಿ ಕೋಟೆಯ ಅವಲೋಕನ ಮತ್ತು ೧೯೯೨-೯೩ ರ ಕಾಲದಲ್ಲಿ ಬೇರೆ ಬೇರೆ ವಿದ್ವಾಂಸರಿಂದ ಪರಿಶೋಧನ ಗೊಂಡು, ಈಗ ಬೆಳಕಿಗೆ ಬಂದಿರುವ ವಿಶೇಷ ಸಂಗತಿ ಯನ್ನು ಇಲ್ಲಿ ನೀಡುತ್ತಿದ್ದೇನೆ.

ಸನ್ನತಿಯು ಭೀಮಾನದಿ ದಡದಲ್ಲಿದ್ದು, ಗುಲ್ಬರ್ಗಾ ಜಿಲ್ಲೆಯ ಚಿತ್ತಾಪೂರ ತಾಲೂಕಿಗೆ ಸೇರಿದ ಒಂದು ಗ್ರಾಮ, ಚಂದ್ರಲಾಂಬಾ ದೇವಿಯ ಪವಿತ್ರ ಕ್ಷೇತ್ರ. ಸ್ತೂಪ, ಕೋಟೆಗಳ ಅವಶೇಷಗಳು ಇಲ್ಲಿವೆ. ಈ ಮೊದಲು, ಈ ಕ್ಷೇತ್ರದ ಪ್ರಾಚ್ಯ ಸಂಶೋಧನೆಯ ಕಾರ್ಯವನ್ನು ಕಪಟರಾಳ ಕೃಷ್ಣರಾವ್, ಎಮ್. ಶೇಷಾದ್ರಿ, ಪಿ. ಬಿ. ದೇಸಾಯಿ, ಎಸ್. ಆರ್. ರಾವ್, ಎಮ್. ಎಸ್. ನಾಗರಾಜರಾವ್, ಅ. ಸುಂದರ, ಕೆ. ವಿ. ರಮೇಶ್, ಆಯ್. ಕೆ. ಶರ್ಮಾ, ಆರ್. ವಿ. ಶಿವಶರ್ಮ, (ಈ ಲೇಖಕನೂ ಸೇರಿದಂತೆ) ಅನೇಕರಿಂದ ಹಮ್ಮಿಕೊಳ್ಳಲಾಗಿತ್ತು.

೧೯೭೬-೭೮ ರಲ್ಲಿ ಸನ್ನತಿಯ ಕೋಟೆ ಹಾಗೂ ಆದರ ಪರಿಸರದ ಸಮೀಕ್ಷೆಯನ್ನು ಕೈಕೊಂಡಿದ್ದಾಗ, ಅಲ್ಲಿ ಅರ್ಧಚಂದ್ರಾಕೃತಿಯಲ್ಲಿ ಒಂದರೊಳಗೊಂದರಂತೆ ಚಾಚಿ, ಭೀಮಾನದಿಯ ತಿರುವಿನಲ್ಲಿ, ಮೇಲಿನ ಹಾಗೂ ಕೆಳಗಿನ ಸ್ತರಗಳಲ್ಲಿ ಈ ಕೋಟೆಯು ಇತ್ತು. ಈ ಕೋಟೆಯು ಇಟ್ಟಿಗೆಯ ಹಾಗೂ ಮಣ್ಣು ದಿಬ್ಬಗಳಿಂದ ಮಾಡಿದ ಕೋಟೆಯಾಗಿದ್ದು ಇದನ್ನು ಶಾತವಾಹನರ ಕಾಲದ್ದೆಂದು ನಿಗದಿಪಡಿಸಲಾಗಿತ್ತು. ಭೀಮಾನದಿಯ ರಕ್ಷಣೆಯ ಮೊದಲ ಹಂತವಾಗಿ ಎರಡು ಅರ್ಧ ಸುತ್ತಿನ ಗೋಡೆ, (೪ ಮೀ. ಅಗಲ ಹಾಗೂ ೬ ರಿಂದ ೮ ಮೀ. ಎತ್ತರ) ಹಾಗೂ ಶಾತವಾಹನರ ಸಮಕಾಲೀನ ಇಟ್ಟಿಗೆಗಳನ್ನು (೪೫ × ೨೦ × ೧೦ ಸೆಂ. ಮೀ) ಉಪಯೋಗಿಸಿದ್ದು, ೮೦ ಹೆಕ್ಟರ್ ವಿಸ್ತಾರವಾಗಿದೆ. ಎರಡು ಸ್ತರಗಳಲ್ಲಿ ವ್ಯಾಪಿಸಿಕೊಂಡ ಜನಸಾಮಾನ್ಯರ ಹಾಗೂ ರಾಜ ಪ್ರಮುಖರ ಪ್ರತ್ಯೇಕ ವಸತಿಗಳು, ಅಲ್ಲದೆ, ಎರಡೂ ಕ್ಷೇತ್ರಗಳನ್ನು ನೇರವಾಗಿ ಜೋಡಿಸುವ ಮಹಾದ್ವಾರಗಳು, ಅನತಿ ದೂರದಲ್ಲಿ ಪೂರ್ವದಿಶೆಯ ನದಿಯ ದಡದಲ್ಲಿ ಚಂದ್ರಲಾಂಬ (ಕ್ರಿ. ಶ. ೧೦-೧೧ ಶತ) ದೇವಸ್ಥಾನ, ಆದರಾಚೆ ಸ್ವಲ್ಪ ಅಂತರದಲ್ಲಿ ರಚಿತವಾಗಿರುವ ಎರಡು ಸ್ತೂಪಗಳು, ಮುಂತಾದ ಅವಶೇಷಗಳನ್ನು ಮಾತ್ರ ಸಮೀಕ್ಷಿಸಲಾಗಿತ್ತು.

ಆದರೆ ಇತ್ತೀಚೆಗೆ (೧೯೯೨-೯೩ ರವರೆಗೆ) ಮಾತ್ರ ಕೈಕೊಂಡ ಪರಿಶೋಧನೆಯಲ್ಲಿ ಕೆಳಕಂಡ ವಿಷಯಗಳು ಬೆಳಕಿಗೆ ಬಂದಿವೆ.

ಡಾ|| ಕೆ. ವಿ. ರಮೇಶ ಅವರು 'ಸನ್ನತಿ' ಕಾಣದ ಶಬ್ದಾರ್ಥ ಮಾಡುತ್ತ, ಸನ್ನತಿಯು 'ಸೇತು ರಾಜನ ಕಟ್ಟೆ' ಅಥವಾ 'ಶಾತವಾಹನರ ಕೋಟೆ' ಎಂದು ಅರ್ಥೈಸುತ್ತಾರೆ. ಶಾತವಾಹನರ ಕೋಟೆ ಹಾಗೂ ಎರಡು ಮಹತ್ವದ ಸ್ತೂಪಗಳಿರುವ ಮೂಲಕ ಇದೊಂದು ಮಹತ್ವದ ಕರ್ನಾಟಕದ ಬೌದ್ಧತಾಣ ಎಂದೂ ಕರೆದಿದ್ದಾರೆ.

ಡಾ|| ಅ. ಸುಂದರ ಅವರ ಸಂಶೋಧನೆಯ ಪ್ರಕಾರ, ಮೇಲಿನ ಕೋಟೆಯಲ್ಲಿ 'ರಣಮಂಡಲ'ವೆಂದು ಕರೆಯಲ್ಪಡುವ ಭಾಗದಲ್ಲಿ ೩.೫ ಮೀ ಉದ್ದವಾದ ಅರಮನೆಯ ಕಟ್ಟಡದ ಗೋಡೆ, ತಾಮ್ರ ತಯಾರಿಕೆಯ ಒಲೆ,ಮಣಿಗಳು (ಲ್ಯಾಪಿಸ್ ಲಝೂಲಿ,ರಾಕ್‌ಕ್ರಿಸ್ಟಲ್, ಎಮರಾಲ್ಡ್, ಹಾಗೂ ಸ್ಟೀಯಟೈಟ್ ಮುಂತಾದ ಪದಾರ್ಥಗಳ ಮಣಿಗಳು), ಅರೆ ಪ್ರಶಸ್ತ ಹಾಗೂ ಪೂರ್ತಿಗೊಂಡ ಮಣಿಗಳು, ಪದಕಗಳು, ಬಳೆಚೂರುಗಳು, ಶಂಖ ಸಿಂಪುಗಳಲ್ಲಿ ತಯಾರಿಸಿದ ವಸ್ತುಗಳು, ಮುಂತಾದ ಆದಿ ಇತಿಹಾಸ ಯುಗಕ್ಕೆ ಸಂಬಂಧಿಸಿದ ಬೃಹತ್ ಗಾತ್ರದ ಬೂದಿ ದಿಬ್ಬಗಳು ದೊರೆತಿವೆ.

**ಸ್ತೂಪಗಳು ಹಾಗೂ ಶಿಲಾಲೇಖಗಳು :** ನಾಲ್ಕು ಸ್ತೂಪಗಳು ಇಲ್ಲಿವೆ. ಒಂದನ್ನು ಡಾ|| ಜೇಮ್ಸ್ ಹೋವೆಲ್ ಪರಿಶೋಧಿಸಿದ್ದು, ಅದು ನೆಲಸಮವಾಗಿದೆ. ಹಾಗೂ ಇನ್ನುಳಿದವು ಅವುಗಳ ವಿನ್ಯಾಸ ಹಾಗೂ ಶಾತವಾಹನರ ಹಾಗೂ ತತ್ಪೂರ್ವದ ಜನವಸತಿಗೆ ಸಂಬಂಧಿತ ಸಾಂಸ್ಕೃತಿಕ ಹಾಗೂ ಧಾರ್ಮಿಕ ಸಮೃದ್ಧ ಜೀವನವನ್ನು ಒದಗಿಸಿದೆ. (Dr. A. Sundara, 'Excavations at Sunnati', Puratatwa', 1986-87). ಕ್ರಿ. ಪೂ. ೫-೬ ನೇ ಶತಕಗಳಿಗೆ ಸಂಬಂಧಿಸಿದಂತೆ ಇಟ್ಟಿಗೆ, ಆಟಿಕೆಗಳು, ಮಣ್ಣಿನ

ಮೂರ್ತಿಗಳು ಹೊಳಪುಳ್ಳ ಕೆಂಪು ಕಪ್ಪು ಮೃತ್ ಪಾತ್ರೆಗಳು, ಸ್ತೂಪಗಳಿಗೆ ಹೊದಿಸಲಾದ ಉಬ್ಬುಶಿಲ್ಪಗಳುಳ್ಳ ಸುಣ್ಣದ ಫಲಕಗಳು ತುಂಡು ಶಾಸನಗಳು, ಬುದ್ಧನ ಜಾತಕ ಕಥಾ ಫಲಕಗಳು, ಸಾಮಾಜಿಕ ಜೀವನ, ರತಿಕ್ರೀಡೆಗಳ ರಸಮಯ ಸನ್ನಿವೇಶಗಳು, ಅಲ್ಲದೆ ಅಲ್ಲಿ ೪೬ ಶಾಸನಗಳು ದೊರೆತು ೪೩ ಬ್ರಾಹ್ಮೀ ಲಿಪಿಯಲ್ಲಿ ದಾನ ದತ್ತಿಗಳ ಉಲ್ಲೇಖ ತೋರಿಸುತ್ತವೆ. ಉಳಿದವು ಬಾದಾಮಿ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದವು. ಅಲ್ಲದೆ ಅತೀ ಮಹತ್ವದ ಇತ್ತೀಚಿನ ಶೋಧನೆಯೆಂದರೆ ಡಾ|| ಕೆ. ಪಿ. ಪುಣಚ್ಚರು ಕಂಡು ಹಿಡಿದ ಉತ್ತರ ಭಾರತದ ಹೊಳಪುಳ್ಳ ಕಪ್ಪು ಮೃತ್‌ಪಾತ್ರೆ. ಇದುವರೆಗೆ ಉತ್ತರ ಭಾರತದಲ್ಲಿ ಮಾತ್ರ ದೊರೆತಿತ್ತು. ಈ ಹೊಸ ಶೋಧನೆಯಿಂದ ಈ ಬಗೆಯ ಮೃತ್‌ಪಾತ್ರೆ ದಕ್ಷಿಣದಲ್ಲಿ ಭೀಮಾ ನದಿಯ ಕೊಳ್ಳದ ವರೆಗೂ ಹಬ್ಬಿದಂತೆ ತಿಳಿಯುತ್ತದೆ. ಹೀಗಾಗಿ ಸನ್ನತಿಯು ಕ್ರಿ. ಪೂ. ೫೦೦ ರ ಸಮಯದಲ್ಲಿ ಕರ್ನಾಟಕದಲ್ಲಿ ಬುದ್ಧ ಸಂಪ್ರದಾಯದ ಏಕಮೇವ ಪರಿಚಿತ ಕ್ಷೇತ್ರವಾಗಿತ್ತೆಂದು ಡಾ|| ಕೆ. ಪಿ. ಪೂಣಚ್ಚ ಅವರು ಅಭಿಪ್ರಾಯ ಪಡುತ್ತಾರೆ.

**ಅಶೋಕನ ಶಿಲಾಶಾಸನ :**

ಸನ್ನತಿಯ ಚಂದ್ರಲಾಂಬ ದೇಗುಲದ ಪರಿಸರದಲ್ಲಿ ದೊರೆತ ಅಶೋಕನ ಶಿಲಾಶಾಸನವು, ಕರ್ನಾಟಕದ ಹಾಗೂ ಅಶೋಕನ ಸಂಬಂದವನ್ನು ವಿಷದೀಕರಿಸುವುದು, ಈ ಶಿಲಾಶಾಸನವು ದೆಹಲಿ ಹಾಗೂ ಜೌಗಡಗಳಂತೆ, ಅಶೋಕನ ವಿಶೇಷ ಶಾಸನದ ಗುಂಪಿಗೆ ಸೇರಿದ್ದು ಅವುಗಳಲ್ಲಿ, ಮೂರನೆಯದಾಗಿದೆ. ಈ ಶಾಸನವು ಕ್ಷಮಾಯಾಚನೆಯ ರೂಪದಲ್ಲಿದ್ದು, ಹೊಸದಾಗಿ ಗೆದ್ದ ರಾಜ್ಯವೊಂದರ ಜನರಲ್ಲಿ ಭಯ, ಶಂಕೆ, ಭೀತಿಗಳನ್ನು ನಿವಾರಿಸಿ, ಸಜ್ಜನರಿಗೆ ಪ್ರಿಯನಾಗುವ ದೊರೆಯ ಬಯಕೆಯನ್ನು ತಿಳಿಸುತ್ತದೆ. ಅಲ್ಲದೆ ಪ್ರದೇಶದ ನಿಯುಕ್ತ ಅಧಿಕಾರಿಗಳಿಗೆ ವಿಶೇಷ ಆಜ್ಞೆ-ನಿರ್ದೇಶನ-ಅರ್ಥಪೂರ್ಣ ಕಾರ್ಯ ಮಾಡಲು ವಿಶೇಷ ಅಧಿಕಾರಗಳನ್ನು ನೀಡುವ ಬಗೆಗೆ ತಿಳಿಸುತ್ತದೆ. ಈ ಶಾಸನದ ಪ್ರಕಾರ, ಅಶೋಕನು ಈ ಭಾಗವನ್ನು ತನ್ನ ತೋಳ್ ಬಲದಿಂದ ಗೆದ್ದುಕೊಂಡು, ಈ ಸನ್ನತಿ ಶಿಲಾಶಾಸನವನ್ನು ಕೊರೆಯಿಸಿರಲು ಸಾಕು. ಮುಂದುವರಿದು ಹೀಗೆಯೂ ಅರ್ಥೈಸಬಹುದು. ಸ್ಥಳೀಯ ಜನರನ್ನೂ ಅವರ ಕೋಟೆ ಕೊತ್ತಲಗಳನ್ನೂ ಕೈವಶ ಮಾಡಿಕೊಂಡು ತನ್ನ ಸಾಮ್ರಾಜ್ಯಕ್ಕೆ ಅಳವಡಿಸಿಕೊಂಡಿರಬೇಕು. ಅಂದರೆ ಅಶೋಕನ ಕಾಲದಲ್ಲೂ ಈ ಸನ್ನತಿಯ ಕೋಟೆ ಅಸ್ತಿತ್ವದಲ್ಲಿದ್ದಿರಬೇಕು. ಅಂದರೆ, ಆ ಸಮಕಾಲೀನ ಉತ್ತರ ಭಾರತದ ಕೋಟೆಗಳಾದ ಶ್ರಾವಸ್ತಿ, ಸಿಶುಪಾಲಘಡ, ಪಾಟಲೀಪುತ್ರ, ರಾಜಗೃಹ ಮುಂತಾದ ಕೋಟೆಗಳಂತೆ ದಕ್ಷಿಣ ಭಾರತದಲ್ಲಿ, ಸನ್ನತಿ ಕೋಟೆ ಅಸ್ತಿತ್ವದಲ್ಲಿ ಇದ್ದಿರಬೇಕು ಎಂದು ನನ್ನ ನಿಷ್ಕರ್ಷೆ. ಹೆಚ್ಚಿನ ಉತ್ಖನನ ಇದರ ಬಗ್ಗೆ ಹೆಚ್ಚಿನ ಕಥೆ ಹೇಳಬಹುದು.

ಆದಾಗಿ, ದಕ್ಷಿಣ ಭಾರತದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ, ಸನ್ನತಿಯ ಕೋಟೆಯು ಅತೀ ಪ್ರಾಚೀನ ಕೋಟೆಯಾಗಿದ್ದು ಬೌದ್ಧ ಸಂಪ್ರದಾಯದ ವಿಷಯಗಳಲ್ಲಿ ಮಹತ್ತಮ 'ಪರಿಚಿತ ಕ್ಷೇತ್ರ'ವಾಗಿತ್ತೆಂದು ಹೇಳಿ, ಇನ್ನೂ ಮುಂದಿನ ಸಂಶೋಧನೆಯು ಇದಕ್ಕಿಂತಲೂ ಹೆಚ್ಚು ಐತಿಹಾಸಿಕ ಮಾಹಿತಿಯನ್ನು ನೀಡಬಹುದೆಂದು ಆಶಿಸಲಾಗಿದೆ.

**ಆಧಾರ ಗ್ರಂಥಗಳು**

(1) Ghosh A, The City in Early Historical India, New Delhi, 1992
(2) Joshi, S. K. Defence Architecture in Early Karnataka, New Delhi. 1985
(3) Deshpande P. N., Maratha forts with Special Reference to Shivaji Forts, Poona University.
(4) Mate M. S.. Forts in Maharastra, Bombay, 1967
(5) Kamalapur J. N., The Deccan Forts, Bombay, 1968
(6) ವಿಶ್ವೇಶ್ವರ ಎಂ. ವಿ., "ಸನ್ನತಿಯ ಅಶೋಕನ ಶಾಸನಗಳು", ಸಂಶೋಧನ, ಡಾ|| ಎಂ. ಚಿದಾನಂದಮೂರ್ತಿಯವರ ಸಂಭಾವನಾ ಸಂಪುಟ. ಬೆಂಗಳೂರು, ೧೯೯೩
(7) Sundara. A, "Excavations at Sannati" Puratatwa, New Delhi, 1986-87

ಡಾ|| ದೇವರಕೊಂಡಾರೆಡ್ಡಿ*

# ಎರಿಗಲ್ವಾಡಿ ಚೋಳರ ಕೂರಾಕಲಪಲ್ಲಿ ತಾಮ್ರಶಾಸನ

ಈ ಶಾಸನವು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಕೂರಾಕಲಪಲ್ಲಿಯ ಚೌಧರಿ ಎಂಬುವವರ ವಶದಲ್ಲಿದ್ದು ಅದರ ಪೆನ್ಸಿಲ್ ಪ್ರತಿಯನ್ನು ಡಾ|| ಆರ್ ಶೇಷಶಾಸ್ತ್ರಿಯವರು ಪಡೆದಿದ್ದರು. ಈ ಶಾಸನ ಐದು ಹಲಗೆಗಳನ್ನು ಹೊಂದಿದ್ದು ಇನ್ನೊಂದು ಹಲಗೆ ಕಳೆದಿರುವಂತೆ ತಿಳಿಯುತ್ತದೆ. ಪ್ರತಿ ಹಲಗೆಯೂ ನಾಲ್ಕು ಸಾಲುಗಳನ್ನು ಹೊಂದಿದೆ. ಶಾಸನದ ಲಿಪಿಗಳು ಸ್ವಲ್ಪ ದಪ್ಪದಾಗಿದ್ದು, ಕ, ರ, ಮ, ಚ, ಪ, ಲ ಮುಂತಾದ ಅಕ್ಷರಗಳ ಬೆಳವಣಿಗೆಯನ್ನು ಮತ್ತು ತಲೆ ಕಟ್ಟುಗಳನ್ನು ಗಮನಿಸಿದಾಗ ೧೦ ನೆಯ ಶತಮಾನದ ಮಧ್ಯ ಭಾಗಕ್ಕೆ ಸೇರಬಹುದಾದ ಕನ್ನಡಲಿಪಿಯಲ್ಲಿದೆ.

ಶಾಸನದ ಭಾಷೆ ಮತ್ತು ಲಿಪಿ ಕನ್ನಡ, 'ಟ' ಕಾರದ ಪ್ರಯೋಗವಿದೆ. ಶಾಸನವು ಗದ್ಯದಲ್ಲಿದ್ದು ಈ ಪ್ರದೇಶದ ಶಾಸನಗಳಲ್ಲಿ ಕಾಣಬರುವ 'ದೊಡ್ಡ' ಎಂಬ ಪ್ರಯೋಗ ಕಾಣಬರುತ್ತದೆ. ಉದಾಹರಣೆಗೆ ನಾಗೆಯದೊಡ್ಡ, ಪ್ರಭುದೊಡ್ಡ ಮುಂತಾದವು. ಶಾಸನದ ತುಂಬ ಆರಸರ, ಸಾಕ್ಷಿಗಳ ಹೆಸರೇ ತುಂಬಿದೆ.

ಶಾಸನದಲ್ಲಿ ಒಂದು ಹಲಗೆ ಕಳೆದಿರುವುದರಿಂದ ದಾನ ನೀಡಿದ ರಾಜನ ಮತ್ತಿತರ ವಿವರಗಳು ದೊರೆಯುವುದಿಲ್ಲ. ೪ನೆಯ ಹಲಗೆಯಲ್ಲಿ 'ಚೋಳ ಮುತ್ತರಸ ಕೊಟ್ಟದತ್ತಿ, ಎರಿಗಲ್ವಡಿಯೊಳಗಣ ಕೊಳ್ಳೂರಪ್ಪಡೆದತ ಕಭ್ಯಾರ್ವರ ಸುಕ್ಕೈಱಿಯ ಬ್ರಹ್ಮದೇಯ ಪಡೆದೊ' ಎಂದಿರುವುದರಿಂದ ಈ ಶಾಸನದ ಅರಸ ಚೋಳಮುತ್ತರಸ, ದಾನವನು ಪಡೆದವನು ಸುಕ್ಕೈಱಿಯ ಎಂಬ ಬ್ರಾಹ್ಮಣ, ದಾನ ಪಡೆದ ಗ್ರಾಮ ಕೊಳ್ಳೂರು ಎಂಬ ವಿವರಗಳು ತಿಳಿಯುತ್ತವೆ.

ಈ ಶಾಸನದ ಚೋಳ ಅರಸರ ವಂಶಾವಳಿ ಹೇಳುವಾಗ ಇವರನ್ನು ಉರೆಯೂರು ಮೂಲದವರೆಂದು ಕರೆದಿರುತ್ತಾರೆ. ವಂಶಾವಳಿಯಲ್ಲಿ ಮೊದಲನೆಯವನು

ಅರ್ಕ್ಕ – ಕರಾಪಟ್ಟ – ಪುನ್ಯವಲ್ಲಭ-ಸಿರಿರಾಮ–ಚೋಳಧನಞ್ಜಯ–ಪೊಲೆಯಮ್ಮ-ದವಳೆಯ–ನರಸಿಗ-ಇಲ್ಲಿಂದಾಚೆ ಮುಂದಿನ ವಿವರಗಳು ದೊರೆಯುವುದಿಲ್ಲ. ಈ ವಂಶಾವಳಿಯಲ್ಲಿ ಚೋಳ ಧನಞ್ಜಯನು ಗಂಗ ಅರಸ ಶ್ರೀ ಪುರುಷನ ಸಮಕಾಲಿಕನಾಗಿದ್ದು ರಾಷ್ಟ್ರಕೂಟರ ವಿರುದ್ಧ ನಡೆದ ಯುದ್ಧದಲ್ಲಿ ಗಂಗರ ಪರವಾಗಿ 'ಪನ್ನಿರ್ವರ ದಂಡಿ'ನಲ್ಲಿ ಈತನೂ ಒಬ್ಬನಾಗಿದ್ದ. ಧನಞ್ಜಯನ ಕಾಲಕ್ಕೆ ನೊಳಂಬರು ಆಗ ತಾನೇ ಕಾಣಿಸಿಕೊಂಡಿದ್ದರು. ಹೀಗಾಗಿ ಈ ಪ್ರದೇಶಕ್ಕೆಲ್ಲಾ ಧನಞ್ಜಯನೇ ರಾಜನಾಗಿದ್ದ. ಈ ವಂಶವು ಪ್ರಾಚೀನವಾದುದಾಗಿದ್ದು ಇವರು ಆಳುತ್ತಿದ್ದ ರಾಜ್ಯವನ್ನು 'ಎರಿಗಲ್ವಾಡಿ' ಎಂದು ಶಾಸನದಲ್ಲಿ ಕರೆದಿದೆ. ನಿಡುಗಲ್ಲು ಇದರ ಕೇಂದ್ರ. ಈ ಶಾಸನದಲ್ಲಿ ಆ ಕಾಲಕ್ಕೆ ಚೋಳಿಕ ವಿಷಯ ಅಥವಾ ಎರಿಗಲ್ವಾಡಿಯಲ್ಲಿದ್ದ ತಿಮ್ಮಣಿ ಬಲ್ಲೂರು, ಚೋಳರಟ್ಟೆ ಗುಡಿ, ಪೇರೂರು, ಮುಂತಾದ

* ನಂ. ೭೫, ೧ನೆಯ ಅಡ್ಡರಸ್ತೆ, ಲಕ್ಕಸಂದ್ರ, ಬೆಂಗಳೂರು-೫೬೦ ೦೩೦

ಗ್ರಾಮಂಗಳೂ ಪೇರೂರನಾಟ್ಗಾಮುಣ್ಡ, ರಶೆಯ ಗವುಣ್ಡ, ಚೋಟಿಗವುಣ್ಡ, ಪ್ರಭುದೊಡ್ಡ, ಅಜ್ಜಪಟಿ ಮುಂತಾದ ವ್ಯಕ್ತಿಗಳ ಹೆಸರಿನ ಉಲ್ಲೇಖವಿದೆ. ದಾನದ ಸಾಕ್ಷಿಗೆ ಹದಿನೆಂಟು ಜನರನ್ನು ಹೆಸರಿಸಿದೆ. ದಾನದ ಗಡಿಗಳನ್ನು ತಿಳಿಸುವಾಗ ಪೂರ್ವಕ್ಕೆ-ಬಳಪದ ಕಲ್ಲು ಕೂಡುವಲ್ಲಿನ ದೊಣೆ, ಮತ್ತು ಕಡವಿನ ಪೊಟಿ³, ತೆಂಕ-ದಪ್ಪುದೊಟಿ³, ಪಶ್ಚಿಮಕ್ಕೆ-ಪೆಣ್ಣೆ, ನೈರುತಿಗೆ-ಮಂಜೀರದ ಪಳ್ಳ, ಬಡಗ ಅಶಗನಕೆಟಿ³, ಸೇಗಲ್ಲಗುಡ್ಡೆ, ಗುವಿಾಯ ಪಳ್ಳ, ಮದರಿಂಕೆಟಿ³ಯತೊಟಿ³ ಈಶಾನಕ್ಕೆ ಸವಣಕಲರಕೆಟಿ³ ಎಂದಿದೆ.

ಈ ಪ್ರಾಚೀನ ಚೋಳರ ಬಗ್ಗೆ ಹೆಚ್ಚಿನ ಶಾಸನಗಳು ದೊರೆಯದಿರುವುದರಿಂದ ಹೆಚ್ಚಿನ ಇತಿಹಾಸ ಹೊರ ಬಂದಿರುವುದಿಲ್ಲ.

## ಶಾಸನ ಪಾಠ

ಸ್ವಸ್ತಿ ಚೋಟಿ³ಕ ವಿಷಯ ದ್ವಿಡಾಮ್ಬರ ಮಹಾನಿ
ಯಶ ಖಡಸಶದರಯ ಮನಲಕ್ಕೆಯೊಟಿ³ಯುು
ರ ರಜದನಿ ಪರಸಲಬ್ದ ಜಯಲಕ್ಷ್ಮೀ ಜಯಪತಕ
ವಿರಜೀತ್ತ ಶ್ರೀಮ್ ಚೋಟ್ಯಾಡಿ ಬಣ್ಬನರ್ಕನನೆ[ಂ]ಜೊನ ಮಗ[ಂ]

ಕರಾಪಟ್ಟಿ ಕರಾಪಟ್ಟಿಯ ಮಗಂ ಪುನ್ಯವಲ್ಲ ಪುನ್ಯವಲ್ಲನ
ಮಗಂ ಸಿರಿರಾಮ ಸಿರಿರಾಮನ ಮಗಂ ಚೋಳ ದನಞ್ಜಯ
ಚೋಟ ದನಞ್ಜಯ ನಮಗಂ ಪೊಲೆಯಮ್ಮ ಪೊಲೆಯ
ಮ್ಮನ ಮಗಂ ದವಳೆಯ ದವಳೆಯನ ಮಗಂ ನರಸಿಗಂ

ಕಾಟೆಯಗಾವುಣ್ಡನು ಮದವಗಾವುಣ್ಡನು ಮುತ್ತರಾಜನು
ಪ್ರಜೆಮೆಣ್ಡಿಗಾವುಣ್ಡನು ತಿಮ್ಮಣಿಯ್ಯೊ ಕಟ್ಟಣೆಗಾಮುಣ್ಡ
ನು ಬಲ್ಲವ ಗಾಮುಣ್ಡನು ಜಯತುಗಂ ಗಾವುಣ್ಡನು ನಾಗ್ಗುವು
ಣ್ಡನು ಬಲ್ಲೂರ ಚೋಟಿಗಾವುಣ್ಡನು ಚೋಟಿರಟ್ಟಗುಡಿಯುು ಎಳವಕ್ಕ

ಗಾವುಣ್ಡನು ಕವಲಿಗಳು ಪೇರೂರ ನಾಟ್ಗಮುಣ್ಡನು ರಶೆಯಗವುಣ್ಡ
ನು ಚೋಟಿಗವುಣ್ಡನು ಗವುಣ್ಡದೊಡ್ಡನು ಕಮ್ಮಟಿ³ಯ್ದೊ ಶ್ರೀರಮದೊ
ಡ್ಡರು ನಾಗೆಯದೊಡ್ಡನು ಪ್ರಭುದೊಡ್ಡನು ಅಜ್ಜಪಟಿನು ಇನ್ತಿ
ನಿಬೊರು ಅಟ(ದ)ರ ಪೊಲಾಮೇರೆಯ ನಡೆದು ಗುಡ್ಡೆ ಇಕ್ಕಿ ಸ್ತಿತಿಯ ನಿಟಿ³

ಸಿದೋಲ್ ಇ(ದ)ಕ್ಕೆ ಅಟಿ³ಪಿದೊಡೆ ಕೆಟಿ³ಯುು ಅರವೆಯುುಮ್ಪಸುವು ಪಾರ್ಮ್ವರ
ಪಮ್ಬರಣಸಿಯುುವನಟಿ³ದೊರ್ ಅಡಗೆ.... ಟಿಂ ಸಿರಿಯಣನು ಮಾರದೆ
ಟಿ³ಯನುಡುಗ್ಗದೆಟಿ³ಯನು ಆಣೆಜೀವದೆಟಿ³ನು ಪೊನ್ನದೆಟಿ³ನು
ಪೊಲೆಯಮ್ಮ ಎಟಿ³ಯನು ಎನುಕಟ್ಟರ ಕೆಣ್ಣಮ್ಮ ಎಟಿ³ಯನು....

ಚೋೞ ಮುತ್ತರಸರ ಕೊಟ್ಟುದತ್ತಿ ಎಂಗಲ್ವಾಡಿಯೊಳಗಣ
ದು ಕೊಳ್ಳುರಪ್ಪಡೆದತ ಕಬ್ಬಾರ್ವ್ವರ ಸುಕ್ಕೆಱೆಯ ಬ್ರಹ್ಮ
ದೇಯ ಪಡೆದೊ ಆಟರ ಪೊಲ ಮೇರೆ ಮೂಡ ಬಳಿಪ
ದ ಕಲ್ಲು ಕೂಡುತೆ ದೊಣೆಯು ಕಡವಿನಪೊೞೆಯು ತೆಂಕ್ಕ

ದಪ್ಪುದೊಱೆ ಪಡುವ ಪೆಣ್ಣೆಯು ನೈರತಿಯ ದೆಸೆಯದು
ಮಞ್ಜೀರದಪಳ್ಳವು ಬಡಗ ಅಶಗನಕೆಱೆಯುಂ ಸೇಗ್ಗ[ಂ]
ಲ್ಲ ಗುಡ್ಡೆಯು ಗುವಿಯ ಪಳ್ಳಮು ಮದರಿಕೆಱೆಯ ತೊಱೆ
ಇಸ್ವನ ಸವಣಕಲರ ಕೆಱೆ ಇದರ್ಕ್ಕೆ ನಡದೊ[ಂ] ಅರಸರ

ಶ್ರೀ ಖರಣದ ಲೋಕಣನು ಶ್ರೀ ವೆಣ್ಡಯು ರೊಪ್ಪದ ಬೋವ
ಸರುಗನು ಸುಳಿವಳ್ಳನು ಪಡೆವಳ್ಳನು ರೊದ್ದೊಳ್ಳೊ ಚೋೞ
ಗವುಣ್ಡನು ಮರೆಯುಗವುಣ್ಡನು ಎಂಗ್ಲ ಗವುಣ್ಡನು
ದೆಮ್ಬರ ಗವುಣ್ಡನು ಪರರ ದೇವಣನು ಕೋಡಿ ಕುನ್ದೆಯ್ದೋ

ಮದವಱೆಯನು ಸಿಡುಕ ಪಱಿರ ಕಾಳೆಯನು ಪಣ್ಣಯನು ದೊಣಪಱಿರ
ನಾಕೋರನು ನಗದೇವನು ವಡ್ಡಪರರ ಅಜಱೆಯನು ಕ್ಷಕುಮ್ಭಱಿರ
ಮದವಱೆಯನು ಕೋಲ ಶ್ರೀ ಪಱಿರ ಭೆನೆಯದೆಱೆಯನು
ಎಮ್ಮುಳಪಱಿರ ಕೋಮದೆಱೆಯನು ಪದಿನೆೞ್ಬ್ಬರ ಪಡೆದ ಚೋೞ
ಮಙ್ಗಳ ಅರಿಹರನ ಲಿಖಿತ ಮ[ಂ]ಗ್ಗಳಮಸಿರಿ.

ಶ್ರೀಮತಿ ಕೋ. ವಸಂತಲಕ್ಷ್ಮಿ*

# ಶ್ರವಣಬೆಳಗೊಳದ ಮತ್ತು ಸಮೀಪ ಗ್ರಾಮಗಳ ಅಪ್ರಕಟಿತ ಶಾಸನಗಳು

ಸುಮಾರು ಕ್ರಿ.ಶ. ೬ನೇ ಶತಮಾನದಿಂದ ಕ್ರಿ.ಶ. ೨೦ನೇ ಶತಮಾನದವರೆಗಿನ ನೂರಾರು ಶಾಸನಗಳನ್ನು ಹೊಂದಿರುವ ಶ್ರವಣಬೆಳಗೊಳವು 'ಶಾಸನಗಳ ನಗರ' ವೆಂದೇ ಪ್ರಸಿದ್ಧವಾಗಿದೆ. ಬಿ. ಎಲ್. ರೈಸ್‌ರವರು, ಆರ್. ನರಸಿಂಹಾಚಾರ್, ಬಾ. ರಾ. ಗೋಪಾಲ್ ಮತ್ತು ಪುರಾತತ್ವ ಇಲಾಖೆಯ ಹಲವು ಅಧಿಕಾರಿಗಳು ಕಂಡು ಓದಿ ಪ್ರಕಟಿಸಿರುವ ಸು. ೫೭೩ ಶಾಸನಗಳು **ಎಪಿಗ್ರಾಫಿಯಾ ಕರ್ನಾಟಿಕಾ** ಸಂಪುಟ ಎರಡರಲ್ಲಿ ಪ್ರಕಟವಾಗಿವೆ. ಇದಾದ ನಂತರ ಶ್ರೀ ಪಿ.ವಿ. ಕೃಷ್ಣ ಮೂರ್ತಿಯವರು ಭಂಡಾರಿ ಬಸದಿಯ ಚೆಂಗಾಳ್ವರ ಶಾಸನವೊಂದನ್ನು ಪ್ರಕಟಿಸಿದ್ದಾರೆ. ಆದರೂ ಇಲ್ಲಿ ಇನ್ನೂ ಕೆಲವು ಅಪ್ರಕಟಿತ ಶಾಸನಗಳು ಕಂಡುಬಂದಿವೆ. ನನ್ನ ಕ್ಷೇತ್ರ ಕಾರ್ಯದ ಸಮಯದಲ್ಲಿ ನನಗೆ ದೊರೆತ ಕೆಲವು ಅಪ್ರಕಟಿತ ಶಾಸನಗಳನ್ನು ಇಲ್ಲಿ ಪರಿಚಯಿಸುತ್ತಿದ್ದೇನೆ.

ಇಲ್ಲಿ ಪ್ರಕಟಿಸುತ್ತಿರುವ ಶಾಸನಗಳು ಕ್ರಮವಾಗಿ ಹಳೇಬೆಳ್ಗೊಳದ ಕೇಶವ ದೇವಾಲಯದ ಮುಂದಿರುವ ಶಿಲಾಶಾಸನ, ಬರಾಳು ಗ್ರಾಮದ ರಸ್ತೆಬದಿಯಲ್ಲಿ ನಿಲ್ಲಿಸಿರುವ ಶಿಲಾಶಾಸನ, ಶ್ರವಣಬೆಳಗೊಳದ ಚಿಕ್ಕ ಬೆಟ್ಟದಲ್ಲಿರುವ ಪಾರ್ಶ್ವನಾಥ ಬಸದಿಯ ಅಂತರಾಳ ದಲ್ಲಿರುವ ಶಾಸನ, ಚಿಕ್ಕಬೆಟ್ಟದ ಎರಡು ಕಟ್ಟೆ ಬಸದಿಯ ಕಂಬದ ಮೇಲಿನ ಶಾಸನ, ಜಿನನಾಥಪುರದ ಶಾಂತೀಶ್ವರ ಬಸದಿಯ ಒಳಭಿತ್ತಿಯಲ್ಲಿನ ಎರಡು ಶಾಸನಗಳು ಮತ್ತು ಶ್ರವಣಬೆಳಗೊಳದ ಅಕ್ಕನ ಬಸದಿಯ ಮುಂಭಿತ್ತಿಯಲ್ಲಿ ದೊರೆತ ಶಾಸನಗಳಾಗಿವೆ.

**ಶಾಸನಗಳ ಕಾಲ :**

ಎರಡುಕಟ್ಟೆ ಬಸದಿಯ ಶಾಸನವೊಂದನ್ನು ಬಿಟ್ಟರೆ ಉಳಿದೆಲ್ಲ ಶಾಸನಗಳು ಹೊಯ್ಸಳರ ಕಾಲದ ಶಾಸನ ಗಳಾಗಿವೆ. ಹಳೇಬೆಳ್ಗೊಳದ ಶಾಸನವು "ಸಕವರ್ಷದ ೧೦೯೨ನೆಯ ಖರ ಸಂವತ್ಸರದ ಪೌಷ್ಯಬಹುಳ ೧೧, ಮಂ(ಗ)ಳವಾರದುತ್ತರಾಯಣ ಸಂಕ್ರಾತಿ"ಯನ್ನು ಉಲ್ಲೇಖಿಸಿದೆ. ಇದು ಕ್ರಿ. ಶ. ೧೧೭೧ ಡಿಸೆಂಬರ್ ೨೫ಕ್ಕೆ ಸರಿಹೊಂದುತ್ತದೆ.

ಬರಾಳು ಗ್ರಾಮದ ಶಾಸನದಲ್ಲಿ—ಶಕವರ್ಷ ೧೦೭೦ ನೆಯ ಪ್ರಭವ ಸಂವಚ್ಛರದ ಉತ್ತರಾಯಣ ಸಂಕ್ರಾಂತಿ ವ್ಯತೀಪಾತದ ಉಲ್ಲೇಖವಿದ್ದು ಇದರ ಕಾಲ ಕ್ರಿ. ಶ. ೧೧೪೮ ಆಗುತ್ತದೆ. ಚಿಕ್ಕಬೆಟ್ಟದ ಪಾರ್ಶ್ವನಾಥ ಬಸದಿಯ ಅಂತರಾಳದ ಮುಂಭಿತ್ತಿಯ ಬಣ್ಣದ ಶಾಸನ ದಲ್ಲಿ ತೇದಿ ವಿವರಗಳಿಲ್ಲ. ಲಿಪಿಯ ದೃಷ್ಟಿಯಿಂದ ಇದನ್ನು ಸು. ೧೨ನೇ ಶತಮಾನವೆಂದು ಹೇಳಬಹು ದಾಗಿದೆ.

ಇದೇ ಪಾರ್ಶ್ವನಾಥ ಬಸದಿಯ ಅಂತರಾಳದ ಬಲ ಭಾಗದ ಭಿತ್ತಿಯಲ್ಲಿ ಕೆತ್ತಿರುವ ಶಾಸನದಲ್ಲಿ ಸಕವರ್ಷ

* ೧೬೪೩, ೨೧ನೆಯ ಮುಖ್ಯರಸ್ತೆ, ಬನಶಂಕರಿ ಮೊದಲನೆಯ ಹಂತ, ಬೆಂಗಳೂರು–೫೬೦ ೦೫೦

೧೧೭೯ನೆಯ ನಳ ಸಂವತಚ್ಛರದ ಉತ್ತರಾಯಣ ಸಂಕ್ರಮಣದ ಉಲ್ಲೇಖವಿದ್ದು, ಇದು ಕ್ರಿ.ಶ. ೧೨೫೭ರ ಕಾಲದ್ದಾಗಿದೆ. ಅಕ್ಕನ ಬಸದಿಯ ಶಾಸನಗಳಲ್ಲಿ ಮತ್ತು ಜಿನನಾಥಪುರದ ಶಾಂತೀಶ್ವರ ಬಸದಿಯ ಶಾಸನಗಳಲ್ಲಿ ತೇದಿಯ ವಿವರಗಳನ್ನು ತಿಳಿಸಿಲ್ಲ. ಈ ಶಾಸನದಲ್ಲಿ ಹೆಸರಿಸಿರುವ ವ್ಯಕ್ತಿಗಳನ್ನಾಧರಿಸಿ ಮತ್ತು ಲಿಪಿಯ ವಿನ್ಯಾಸವನ್ನು ಗಮನಿಸಿ ಈ ಶಾಸನಗಳು ೧೩ನೇ ಶತಮಾನಕ್ಕೆ ಸೇರಿದವೆಂದು ತಿಳಿದುಬರುತ್ತದೆ.

**ಶಾಸನಗಳ ಲಿಪಿ ಮತ್ತು ಭಾಷೆ :**

ಎರಡುಕಟ್ಟೆ ಬಸದಿಯ ಕಂಬದ ಮೇಲಿನ ಶಾಸನದ ಲಿಪಿಯ ವಿನ್ಯಾಸವು ಕ್ರಿ. ಶ. ಸು. ೮ನೇ ಶತಮಾನ ದ್ದಾಗಿದೆ. ಇದರ ಭಾಷಾ ಪ್ರಯೋಗವು ನಿರ್ದಿಷ್ಟವಾಗಿ ಈ ಕಾಲವನ್ನೇ ದೃಢಪಡಿಸುತ್ತಿದೆ. ೮ನೇ ಶತಮಾನದಲ್ಲಿ ದುಗ್ಗಮಾರನೆಂಬ ವ್ಯಕ್ತಿನಾಮದೊಂದಿಗೆ 'ಓವಜ' ಸೇರಿ ದುಗ್ಗಮಾರೋವಜ ಎಂದಾಗಿದ್ದು ಶ್ರೀ ಪುರುಷನ ಮಗ ದುಗ್ಗಮಾರನ ಕಾಲಕ್ಕೆ ಸೇರಿಸಬಹುದಾಗಿದೆ.

ಸು. ೧೨ನೇ ಶತಮಾನದ ಹಳೇಬೆಳ್ಗೊಳ ಮತ್ತು ಬರಾಳು ಗ್ರಾಮದ ಶಾಸನಗಳು ಮಾತ್ರ ದೀರ್ಘಪಾಠ ಗಳುಳ್ಳ ಶಾಸನಗಳಾಗಿವೆ. ೩೨ ಸಾಲುಗಳುಳ್ಳ ಹಳೇ ಬೆಳ್ಗೊಳದ ಶಾಸನದ ಲಿಪಿ, ಬರಾಳಿನ ಶಾಸನದ ಲಿಪಿಗಿಂತ ಹೆಚ್ಚು ಸ್ಫುಟವಾಗಿದೆ, ಹೆಚ್ಚು ಆಳವಾಗಿ ಕೊರೆಯ ಲಾಗಿದೆ. ಬರಾಳಿನ ಶಾಸನದ ಒಂದು ಭಾಗದ ಲಿಪಿ ಸವೆದು ಹೋಗಿದ್ದು ನಿರ್ದಿಷ್ಟವಾಗಿ ಗುರುತಿಸಲು ಕಷ್ಟ ಸಾಧ್ಯವಾಗುತ್ತದೆ. ಈ ಶಾಸನದ ಕೊನೆಭಾಗದಲ್ಲಿ ನಂತರದ ಕಾಲದ ಮತ್ತೊಂದು ಉಲ್ಲೇಖವಿದ್ದು ಲಿಪಿ ಹಾಗೂ ಭಾಷಾ ಬದಲಾವಣೆಯನ್ನು ಕಾಣುತ್ತೇವೆ.

೧೩ನೆಯ ಶತಮಾನದ ಶಾಸನಗಳು ಹೆಚ್ಚು ಆಳವಾಗಿ ಕೊರೆದಿಲ್ಲ ; ಈ ಶಾಸನಗಳು ಭಿತ್ತಿಯ ಮೇಲ್ಭಾಗದಲ್ಲಿರುವುದರಿಂದ ಅಕ್ಷರಗಳು ಸುಣ್ಣದಿಂದ ಕೂಡಿವೆ. ಪಾರ್ಶ್ವನಾಥ ಬಸದಿಯ ಬಲಭಾಗದ ಭಿತ್ತಿಯ ಶಾಸನದ ಅಕ್ಷರಗಳ ವಿನ್ಯಾಸ ಸುಂದರವಾಗಿದೆ ಹೆಚ್ಚು ಸ್ಫುಟವಾಗಿದೆ. ಜಿನನಾಥಪುರದ ಬಸದಿಯ ಶಾಸನಗಳೂ ಹೀಗೆಯೇ ಇವೆ. ಆದರೆ ಅಕ್ಕನ ಬಸದಿಯ ಮುಂಭಿತ್ತಿಯ ಶಾಸನದ ಲಿಪಿವಿನ್ಯಾಸವು ಸ್ಫುಟವಾಗಿರದೇ ಸುಣ್ಣವು ಕೂಡಿದ್ದು, ಓದಲು ಸುಲಭ ಸಾಧ್ಯವಲ್ಲ ;

ಹಳೇಬೆಳ್ಗೊಳದ ಶಾಸನದಲ್ಲಿ ಮತ್ತು ಬರಾಳಿನ ಶಾಸನದಲ್ಲಿ ವೀರನರಸಿಂಹದೇವನನ್ನು ಹೊಗಳುವ ಪ್ರಸಿದ್ಧವಾಗಿದ್ದ ಶಾಸನ ಪದ್ಯಭಾಗಗಳನ್ನು ಬಳಸ ಲಾಗಿದೆ. ಹಳೇಬೆಳ್ಗೊಳದ ಶಾಸನ ಪಾಠವನ್ನು ಸಿದ್ಧ ಪಡಿಸುವಲ್ಲಿ ಬೊಮ್ಮೇನಹಳ್ಳಿಯ ಶಾಸನ ಪಾಠ (ಶ. ಬೆ. ೫೭೧) ಮತ್ತು ಶ್ರವಣಬೆಳ್ಗೊಳದ ಬಂಢಾರಿ ಬಸದಿ ಶಾಸನದ (ಶ್ರ. ಬೆ. ೪೭೬) ಪದ್ಯಭಾಗಗಳು ನೆರವಾಗುತ್ತಲಿವೆ. ಶ್ರೀಪತಿಜನ್ಮದಿಂದೆ (ಉತ್ಪಲ ಮಾಲಾವೃತ್ತ), ಪಡೇಮಾತೇಂ.. (ಮಹಾಸ್ರಗ್ಧರಾ) ಪ್ರಸಿದ್ಧವಾದ ಈ ಭಾಗಗಳನ್ನು ಬಳಸಿರುವುದರಿಂದಲೂ ನೇಮಂಸಮಸ್ತ... (ಸಾಲು ೨೦–೨೧) ಕಂದಪದ್ಯವನ್ನು ತಾನೇ ರಚಿಸಿರುವುದರಿಂದಲೂ ಈ ಶಾಸನದ ರಚನೆ– ಕಾರನೂ 'ಪಂಡಿತ'ನಾಗಿದ್ದನೆಂದು ತಿಳಿಯಬಹುದಾಗಿದೆ.

ಬರಾಳಿನದ ಶಾಸನದಲ್ಲಿ– ಶ್ರೀಕಾಂತಾಪೀನ.... (ಸ್ರಗ್ಧರಾವೃತ್ತ), ಅದರೊಳ್ಶ್ಲಾಘ್ಯಾತ್ಮಿಕ... (ಮತ್ತೇಭವಿ ಕ್ರೀಡಿತ ವೃತ್ತ) ವಿನಯಾದಿತ್ಯನತನಯಂ.... (ಕಂದ) ಮೊದಲಾದ ಪ್ರಸಿದ್ಧವಾದ 'ನರಸಿಂಹದೇವನ' ವರ್ಣನೆ ಯುಳ್ಳ ಪದ್ಯಭಾಗವಿದೆ. ಈ ಶಾಸನದ ಮೊದಲ ಹನ್ನೆರಡು ಸಾಲುಗಳು, ಬೆಕ್ಕದ ಶಾಸನ ಪಾಠದ ಮೊದಲ ಹನ್ನೆರಡು ಸಾಲುಗಳು ಒಂದೇ ಆಗಿದ್ದು ಬರಾಳಿನ ಮೊದಲ ೫–೬ ಸಾಲುಗಳ ಅಸ್ಪಷ್ಟ ಭಾಗವನ್ನು ಸರಿಪಡಿಸಲು ನೆರವಾಗಿದೆ.

**ಶಾಸನಗಳಲ್ಲಿ ಕಾಣಬರುವ ಅಂಶಗಳು :**

೧. ದೀರ್ಘವಾದ ಶಾಸನ ಪಾಠವುಳ್ಳ ಹಳೇಬೆಳ್ಗೊಳ ಮತ್ತು ಬರಾಳಿನ ಶಾಸನಗಳಲ್ಲಿ ಆರಂಭದಲ್ಲಿ ಜಿನಸ್ತುತಿ ಇದೆ. ಹೊಯ್ಸಳ ವಂಶದ ಉದಯವನ್ನು ಸೂಚಿಸಿದ್ದು, ಆ ವಂಶದ ಪ್ರಸಿದ್ಧ ದೊರೆಗಳಾದ ಸಳ, ವಿನಯಾದಿತ್ಯ, ಎಱೆಯಂಗ, ವಿಷ್ಣುನೃಪನನ್ನು ಹೆಸರಿಸಿ ನರಸಿಂಹದೇವನ ಪ್ರತಾಪವನ್ನು ಮಾತ್ರ ವಿವರವಾಗಿ ಬಣ್ಣಿಸಲಾಗಿದೆ ; ಇವುಗಳಲ್ಲಿ ಹೊಯ್ಸಳರ ಇತರ ದೊರೆಗಳ ವಿವರವಿಲ್ಲ– ನರಸಿಂಹದೇವನ ಬಿರುದಾವಳಿಗಳನ್ನು ಮಾತ್ರ ಉಲ್ಲೇಖಿ ಸಲಾಗಿದೆ ;

ಹಳೇಬೆಳ್ಗೊಳದ ಶಾಸನವು ಕ್ರಿ.ಶ. ೧೧೭೦ರಲ್ಲಿ ಜರಗರಹಳ್ಳಿಯ ಪಾರ್ಶ್ವದೇವರ ಅಷ್ಟವಿಧಾರ್ಚನೆಗೆ ಬಿಟ್ಟ ದಾನವನ್ನು ತಿಳಿಸುತ್ತದೆ. ದುರೆಯನಾಯಕ ಮತ್ತು ಜಕ್ಕವ್ವೆಯರಿಗೆ ನೇಮಿಯ ನಾಯಕ, ದಾಸೆಯ ನಾಯಕ ಭರತ ಮತ್ತು ಬಾಹುಬಲಿ ಎಂಬ ಮಕ್ಕಳಿದ್ದು ಇವರಲ್ಲಿ ಸದ್ಗುಣಿ ನೇಮಿಯ ನಾಯಕನು ಮೂಲ ಸಂಘದ ದೇಶೀಯ ಗಣದ ಪುಸ್ತಕಗಚ್ಛದ ನಯಕೀರ್ತಿ ಸಿದ್ಧಾಂತ ದೇವರ ಶಿಷ್ಯರಾದ ಬಾಳಚಂದ್ರದೇವರ ಗುಡ್ಡ ನಾಗಿದ್ದನು. ಇವನು ಮಧುರ ಸಮುದ್ರದ ಕೆಳಗೆ ಮೂರು ಸಲಗೆ ಗದ್ದೆಯನ್ನು, ಅವರೆಗಂಡಿಯಲ್ಲಿ ೧೦ ಕೊಳಗ ಬೆದ್ದಲೆಯನ್ನು, ಒಂದು ಹೂದೋಟವನ್ನು ಪಾರ್ಶ್ವದೇವರಿಗೆ ದಾನ ಬಿಡುತ್ತಾನೆ. ಇದೇ ದಿನ, ಸರ್ವಾಧಿಕಾರಿ ಹೆಗ್ಗಡೆ ಕಮ್ಮಟದ ಮಾಚಯ್ಯನು ನಂದಾ ದೇವಿಗೆಂದು ಒಂದು ಗಾಣವನ್ನು, ಬಸದಿ ಮನೆ, ಮೂರು ಮಗ್ಗಗಳನ್ನು ದಾನ ನೀಡಿದನೆಂದು ಶಾಸನ ತಿಳಿಸುತ್ತಿದೆ. ಈ ಶಾಸನದಿಂದ ಹಳೇಬೆಳಗೊಳಕ್ಕೆ ಮೊದಲು 'ಜರಗರಹಳ್ಳಿ' ಎಂಬ ಹೆಸರಿದ್ದಂತೆ ತಿಳಿದು ಬರುತ್ತದೆ ಈ ಶಾಸನದಲ್ಲಿನ ದಾನಿ ಕಮ್ಮಟದ ಮಾಚ ಯ್ಯನು ಕುಂಭೇನಹಳ್ಳಿಯ ಬಸದಿಯ ನಂದಾದೀವಿಗೆ ಗೆಂದು, ಗಾಣದ ಸುಂಕವನ್ನು ಬಿಟ್ಟಿರುತ್ತಾನೆ. (ಶ್ರ. ಬೆ. ೫೭೨). ಇದರಿಂದ ೧೨ನೇ ಶತಮಾನದಲ್ಲಿ ಹಳೇ ಬೆಳ್ಗೊಳದ ಬಸದಿಯಲ್ಲಿ ಪೂಜೆ ಪುನಸ್ಕಾರಗಳು ಸಾಂಗ ವಾಗಿ ನಡೆಯುತ್ತಿತ್ತೆಂದು ತಿಳಿಯಬಹುದಾಗಿದೆ.

ಬರಾಳಿನ ಶಾಸನವು ಅಂದಿನ ಆಡಳಿತ ವ್ಯವಸ್ಥೆಯ ಬಗೆಗೆ ಬೆಳಕು ಚೆಲ್ಲುತ್ತಾ– "ಸುಂಕದ ಅಧಿಕಾರಿ ಬಿಟ್ಟಿ ಮಯ್ಯ ಹೆಗ್ಗಡೆಯು ತನ್ನ ಆಳ್ವಿಕೆಯ ಭಾಗವಾದ ಬರಹಾಳಿನಲ್ಲಿ ಕೆಱೆಯನ್ನು ಕಟ್ಟಿಸಿ ಸುಪಾರ್ಶ್ವ ಭಟಾರ ಕರ ಬಸದಿಯನ್ನು ಕಟ್ಟಿಸಿದ್ದನೆಂದು ತಿಳಿಸುತ್ತಿದೆ. ಇವನ ಪತ್ನಿ ಚಾಮುವ್ವೆ ಹೆಗ್ಗಡತಿಯು ದೇವರ ಅಷ್ಟವಿಧಾರ್ಚ ನೆಗೆ ರಿಶಿಯರಾ ಹಾರದಾನಕ್ಕೆಂದು ಕೆರೆಯ ಕೆಳಗೆ ಐದು ಸಲಗೆ ಗದ್ದೆಯನ್ನು, ಊರ ಮುಂದಿನ ಬೆದ್ದಲಿನಲ್ಲಿ ಒಂದು ಸಲಗೆ ೧೦ ಕೊಳಗವನ್ನು ; ತಾನು ಕಟ್ಟಿಸಿದ ಕೆರೆಯ ನೀರು ಹರಿವತನಕದ ಭೂಮಿಯನ್ನು ದಾನ ಮಾಡುತ್ತಾಳೆ. ಈ ದಾನವನ್ನು ಕ್ರಿ. ಶ. ೧೧೪೮ರಲ್ಲಿ ಶ್ರೀ ಮೂಲಸಂಘದ ಕೊಂಡ ಕುಂದಾನ್ವಯದ ದೇಶೀಯ ಗಣದ ಪುಸ್ತಕಗಚ್ಛದ ಗೋಣಿಯ ಮಲಧಾರಿ ಅಪ್ಪೋಪವಾಸಿ ಗುಣಭದ್ರ ದೇವರಿಗೆ ನೀಡಲಾಗಿದೆ. ಈ ಗುಣಭದ್ರ ದೇವರು, ಮಹಾಮಂಡಳಾಚಾರ್ಯರಾಗಿದ್ದ ಶ್ರೀ ನಯ ಕೀರ್ತಿ ಸಿದ್ಧಾಂತ ಚಕ್ರವರ್ತಿಗಳಿಗೆ ಗುರುಗಳಾಗಿದ್ದರೆಂದು (ಶ್ರ. ಬೆ. ೩೪೨) ತಿಳಿದುಬರುತ್ತತೆ.

ಈ ಶಾಸನದ ಮುಂದಿನ ಭಾಗದಲ್ಲಿ ಮುಕ್ಕಂದಿಯ ಮುಕ್ಕಣ್ಣ ಕದಂಬ ವಂಶದ ಇವಱಬೆಡಂಗನೆನಿಸಿದ್ದ ವೀರಮಾಣಿಕ್ಯ ಸೆಟ್ಟಿಯ ಶಾಸನವಿದೆ. ಇವನ ಮೊಮ್ಮಗನಾದ ಎರಡನೆಯ ವೀರಮಾಣಿಕ್ಯ ನಾರಿ ಸೆಟ್ಟಿಯು ಬರಹಾಳಿನ ಬಸದಿಯನ್ನು ಜೀರ್ಣೋದ್ಧಾರ ಮಾಡಿಸಿ ಕೆರೆಯ ಏರಿಯನ್ನು ತಿದ್ದಿಸಿ, ತನ್ನ ಮಗ ನುಚ್ಚಿ ಸೆಟ್ಟಿಯನ್ನು ಬಸದಿಗೆ ಅಧಿಪತಿಯನ್ನಾಗಿ ಮಾಡಿ ಧರ್ಮಾಭಿವೃದ್ಧಿಯನ್ನು ಮಾಡಿ ಪುಣ್ಯಾವೃದ್ಧಿ ಮಾಡಿ ಕೊಳ್ಳುತ್ತಾನೆ. ಈ ಶಾಸನದಲ್ಲಿ ವೀರ ಮಾಣಿಕ್ಯ ನಾರಿ ಸೆಟ್ಟಿಯನ್ನು ಕಟ್ಟಿಪ್ಪು ಸಾಸಿರ ನಾಡಿನ ಸೆಟ್ಟಿಯ ರೆಂದಿದೆ. ಸು ೧೩ನೇ ಶತಮಾನದಲ್ಲಿ ಶ್ರವಣಬೆಳ್ಗೊಳದಲ್ಲಿ (ನಖರರು) ಸೆಟ್ಟಿಯರ ಸಮೂಹವೇ ಇದ್ದು ಇವರನ್ನು ಕಟ್ಟಿಪ್ಪು ನಾಡಿನ ಸೆಟ್ಟಿಯರೆಂದೇ ಗುರುತಿಸಿರುವಂತಿದೆ.

ಶ್ರವಣಬೆಳ್ಗೊಳದ ಚಿಕ್ಕ ಬೆಟ್ಟದ ಪಾರ್ಶ್ವನಾಥ ಬಸದಿ ಶಾಸನಗಳಿಂದ ಪಾರ್ಶ್ವನಾಥ ಬಸದಿಯು, ದಾಮ ನನ್ದಿತ್ರೈವಿದ್ಯದೇವರ ಶಿಷ್ಯ ಧನಕೀರ್ತಿದೇವರ ಕಾಲದಲ್ಲಿ ಮತ್ತೆ ಕಟ್ಟಲಾಯಿತೆಂದು ತಿಳಿಯುತ್ತದೆ. ಇಲ್ಲಿಯ ಇನ್ನೊಂದು ಶಾಸನದಿಂದ ಕ್ರಿ. ಶ. ೧೨೫೭ರಲ್ಲಿ ಮಹಾ ಪಸಾಯತರಾಗಿದ್ದ ವಿಜಯಣ್ಣ ನವರಳಿಯ ಚಿಕ್ಕಮುದು ಕಣ್ಣನವರು ಕಮಠ ಪಾರ್ಶ್ವದೇವರಿಗೆ ಅಂಕಮಾಲ್ಯಗೆರೆ, ಗೋವಿಂದವಾಡಿಯ ಕೆರೆಯ ಕೆಳಗೆ ೧೦ ಕೊಳಗ ಗದ್ದೆ ಯನ್ನು ೧೦೦ ಕಂಬ ಬೆದ್ದಲನ್ನು ಉತ್ತರಾಯಣ ಸಂಕ್ರ ಮಣದಂದು ದಾನ ನೀಡಿದ್ದಾಗಿ ತಿಳಿಯುತ್ತದೆ. ಇದ ರಿಂದ ೧೩–೧೪ ನೇ ಶತಮಾನಗಳಲ್ಲಿ ಇಲ್ಲಿ ಪೂಜಾ ವ್ಯವಸ್ಥೆ ಇತ್ತೆಂದು ತಿಳಿಯುತ್ತದೆ. ದಾನಿ ಚಿಕ್ಕಮುದು ಕಣ್ಣನು, ಕ್ರಿ. ಶ. ೧೨೫೬ ರಲ್ಲಿ ಗೊಮ್ಮಟ ದೇವರಿಗೂ (ಶ್ರ. ಬೆ. ೩೩೯) ಕ್ರಿ. ಶ. ೧೨೫೬ ರಲ್ಲಿ ದ್ವಾರ ಸಮುದ್ರದ ಶಾನ್ತಿನಾಥ ದೇವರಿಗೂ ದಾನಬಿಟ್ಟಿರುತ್ತಾನೆ. (ಬೇ. ೪೦೭)

ಜಿನನಾಥಪುರದ ಶಾಂತೀಶ್ವರ ಬಸದಿ ಶಾಸನ ಗಳಿಂದ, ೧೩ನೆಯ ಶತಮಾನದಲ್ಲಿ ಈ ಬಸದಿಗೆ

ಸಾಕಷ್ಟು ಆರ್ಥಿಕ ಸಂಪತ್ತಿತ್ತೆಂದು ತಿಳಿದು ಬರುತ್ತದೆ. ಬಸದಿಗೆ ಸಂಬಂಧಿಸಿದಂತೆ, ಮನೆ, ಗಾಣ, ಕೆರೆಗಳಲ್ಲದೇ ರಾಮಗಟ್ಟದ ಭೂಮಿಯೂ ಬಸದಿಗೆ ಸೇರಿದ್ದಾಗಿತ್ತು ಈ ಬಸದಿಯಲ್ಲಿ ನಡೆಯುತ್ತಿದ್ದ ಪೂಜೆಗಾಗಿ ಅರಸಿಕೆರೆಯ ಚಾಮಿಸೆಟ್ಟಿಯಲ್ಲಿ ಕಂಚಿನ ೧೫ ಎಲೆಗಳುಳ್ಳ ಜಿನತೋರಣ ವನ್ನು, ನಾಲ್ಕು ಕಂಚಿನ ಹೂ ಗಳನ್ನು ತಾಮ್ರದ ಏಳು ಹೂಗಳನ್ನು ಮಾಡಿಸಿದ್ದರೆಂದು ತಿಳಿಯುತ್ತದೆ. ದೇವರ ಆರತಿಗಾಗಿ ಮಂಗಳಾರತಿ ತಟ್ಟೆ (=ಕಣ್ಣುರ್ಪಾಳಿಕೆ ದೀವಿಗೆ?) ಎರಡನ್ನು ಐದು ಸಣ್ಣ ಸೊಡರುಗಳನ್ನು ಒಂದು ಕನ್ನಡಿಯನ್ನು ದಾನ ನೀಡಿದ್ದರೆಂದು ತಿಳಿಸುತ್ತಿದ್ದು ಜಿನಪೂಜೆಯಲ್ಲಿ, ಬಳಸುವ ಈ ಮಂಗಳ ವಸ್ತುಗಳನ್ನು ದಾನ ನೀಡಿರುವ ಅಪರೂಪದ ಉಲ್ಲೇಖವಾಗಿದೆ. ಇದು ಬಸದಿಗಿದ್ದ ವೈಭವವನ್ನು ಸೂಚಿಸುತ್ತಿದೆ ಜೈನರು ವಾಸಿಸುತ್ತಿದ್ದ ಈ ಗ್ರಾಮದಲ್ಲಿ ಪಟ್ಟಣ ಸ್ವಾಮಿಯಾಗಿದ್ದ ನಾಗದೇವನ ಮಠಾರವೊಂದು, ಲಕ್ಕಣಂದಿ ದೇವರ ಶಿಷ್ಯರು ವಾಸಿಸುತ್ತಿದ್ದಿರಬಹುದಾದ ಮಠಾರವೊಂದಿತ್ತೆಂಬುದನ್ನು ಖಚಿತವಾಗಿ ತಿಳಿಸುತ್ತಿದೆ. ಲಕ್ಕನಾಂದಿ ದೇವರು ದೇವಕೀರ್ತಿ ಮುನಿಯ ಶಿಷ್ಯರಾಗಿದ್ದು ಚಿಕ್ಕ ಬೆಟ್ಟದಲ್ಲಿ ದೇವಕೀರ್ತಿ ಮುನಿಗಳಿಗೆ ನಿಶಿಧಿಗೆಯನ್ನು ಮಾಡಿದ್ದಾರೆ (ಶ್ರ. ಬೆ. ೭೧).

ಅಕ್ಕನ ಬಸದಿಯ ಶಾಸನಗಳ ಪಾಠವನ್ನು ಗಮನಿಸಿದರೂ, ಎಲ್. ಕೆ. ಶ್ರೀನಿವಾಸನ್‌ರವರು ಅರ್ಥೈಸುವಲ್ಲಿ ತಪ್ಪಾಗಿ ಭಾವಿಸಿದ್ದಾರೆ. ಮೊದಲನೇ ಶಾಸನದಲ್ಲಿ ನಯಕೀರ್ತಿಸಿದ್ಧಾನ್ತ ಚಕ್ರವರ್ತಿಯ ಶಿಷ್ಯರಾದ ನಯಕೀರ್ತಿದೇವರು ನಾಡಸೇನ ಬೋವನಿಗೆ ತ್ರಿರತ್ನ (ಮುಕ್ಕೊಡೆ) ಮತ್ತು ಪದುಮರ ಹೆಸರಿನಲ್ಲಿ ಸೋಮಸಮುದ್ರದಲ್ಲಿ ಒಂದು ಸಲಗೆ ಗದ್ದೆಯನ್ನು ನೂರು ಅಳತೆ ಹೊಲವನ್ನು ಆಚಾಂವ್ವೆ ಬಸದಿಗಾಗಿ ಬಿಟ್ಟ ದಾನವನ್ನು ವಹಿಸಿಕೊಟ್ಟರೆಂದು ಅರ್ಥೈಸಿರುತ್ತಾರೆ* ಆದರೆ ಮುಂಕ್ಕೊಡೆ ಎಂಬುದು ವೃತ್ತಿ ವಾಚಕವಲ್ಲ= 'ತ್ರಿರತ್ನ' ಎಂದಾಗುವುದಿಲ್ಲ ; ಆಗ ಭಟಾರಕರಾಗಿದ್ದ ನಯಕೀರ್ತಿ ದೇವರು ನಾಡಸೇನ ಬೋವನಿಗೆ ವಹಿಸಿಕೊಟ್ಟರೆಂಬುದು ವಿಹಿತವೆನ್ನಿಸುವುದಿಲ್ಲ ಇಲ್ಲಿ ಶಾಸನವು- ನಯಕೀರ್ತಿ ದೇವರು ಆಚಾಂವ್ವೆ ಬಸದಿಗೆಂದು ಬಿಟ್ಟದ್ದ ಭೂಮಿಯ ಸೀಮೆಯನ್ನು ನಿಗದಿಪಡಿಸಲು ಮುಕ್ಕೊಡೆ ಕಲ್ಲನ್ನು ಹಾಕಿಸಿದರೆಂದು ತಿಳಿಸುತ್ತಿದೆ. ಹೀಗೆ ಬಿಟ್ಟದ್ದ ಭೂಮಿ ಒಂದು ಸಲುಗೆ ಗದ್ದೆ ಮತ್ತು ಸೋಮಸಮುದ್ರದ ಹಿರಿಯ ಕೆರೆಯ ಕೆಯ್ಯಲ್ಲಿ ತೋಟದ ಮಣ್ಣು ೧೦೦ ಕಂಬವಿರಬೇಕು. ಈ ಭೂಮಿ ಎಂದೆಂದಿಗೂ ಬಸದಿಗೆ ಸಲ್ಲುತ್ತದೆಂದು ತಿಳಿಸುತ್ತಾನೆ. ಇಲ್ಲಿ ಉಕ್ತವಾಗಿರುವ ಕಿರಿಯ ನಯಕೀರ್ತಿ ದೇವರನ್ನು ಬಸ್ತಿಹಳ್ಳಿಯ ಶಾಸನವು, ನಯಕೀರ್ತಿ ಸಿದ್ಧಾಂತ ದೇವರ ಶಿಷ್ಯರಾದ ನೇಮಿಚಂದ್ರ ಪಂಡಿತರ ಶಿಷ್ಯರೆಂದು (ಶ್ರ. ಬೆ. ೫೬೨) ತಿಳಿಸಿದೆ. ಇದರಿಂದ ಈ ಶಾಸನವು ಸು. ೧೩–೧೪ನೇ ಶತಮಾನದ್ದೆನ್ನಬಹುದು.

ಇಲ್ಲಿಯ ಇನ್ನೊಂದು ಶಾಸನದ ಬಗೆಗೆ ಶ್ರೀನಿವಾಸನ್‌ರು ಆಚವ್ವೆಯ ಬೊಮ್ಮನಹಳ್ಳಿಯ ಸೋಮಸಮುದ್ರದ ಕೆರೆಯ ಕೆಳಗೆ ಒಂದು ಸಲಗೆ ಗದ್ದೆ, ಐದು ಕೊಳಗ ಗದ್ದೆ ಬೆದ್ದಲೆಯನ್ನು ನಯಕೀರ್ತಿಸಿದ್ಧಾನ್ತ ಚಕ್ರವರ್ತಿಗಳ ಶಿಷ್ಯರಾದ ಚಂದ್ರಪ್ರಭಾ ದೇವರು ಅಕ್ಕನ ಬಸದಿಯ 'ದೇವಸಂಘ' ಕ್ಕೆಂದು ದಾನ ನೀಡಿದರೆಂದು ಅರ್ಥೈಸುತ್ತಾರೆ (ಪು ೪೬) ಈ ಶಾಸನವು ಪಾರ್ಶ್ವನಾಥನನ್ನು 'ಪೆರಮಾಳು' ಎಂದು ಕರೆದಿರುವ ಅಪರೂಪದ ಉಲ್ಲೇಖವೆಂದೂ ಅಭಿಪ್ರಾಯಪಟ್ಟಿರುತ್ತಾರೆ. ಈ ಶಾಸನವು 'ದೇವಸಂಘ'ಕ್ಕೆ ಸೇರಿದ್ದಾಗಿರದೇ, ೧೩ನೇ ಶತಮಾನದಲ್ಲಿ ಶ್ರ. ಬೆಳಗೊಳದಲ್ಲಿ ಮಹಾಮಂಡಳಾಚಾರ್ಯರಾಗಿದ್ದ ಚಂದ್ರಪ್ರಭಾದೇವರು, ತಮಗೆ ಸಂಬಂಧಿಸಿದ ಬಸದಿಗಳ ಭೂಮಿಯ ಉತ್ಪನ್ನದ "ಆಯವ್ಯಯ"ಗಳನ್ನು ಗಮನಿಸಲು ದವಸಿಗರನ್ನು ನೇಮಿಸಿದ್ದು, ಈ ಶಾಸನದಲ್ಲಿ ಆಚವ್ವೆಯ ಬಸದಿಯ "ದವಸಿಗತನ"ಕ್ಕೆ ಸೋಮಸಮುದ್ರದ ಕೆರೆಯ ಕೆಳಗೆ ಒಂದು ಸಲಗೆ ಗದ್ದೆ ಐದು ಕೊಳಗ ಬೆದ್ದಲೆಯನ್ನು ಕೊಟ್ಟರೆಂದು ತಿಳಿದು ಬರುತ್ತದೆ 'ದವಸ+ಇಗ'—'ದವಸಿಗ' ಎಂಬ ರೂಪವು ದವಸವನ್ನು ಮಾರುವವನು ಕಿರಾಣಿವರ್ತಕ ಎಂದು

* Two Newly Discovered Epigraphs form the Akkana Basadi, SravanaBelagola, G. S. Gai Felicitation Volume, P. No. 45-48

ಆರ್ಥೈಸುತ್ತದೆಂದು (ಕನ್ನಡ–ಕನ್ನಡ ನಿಘಂಟು) ತಿಳಿದು ಬರುತ್ತದೆ. ಬಸದಿಗೆ ಸಂಬಧಿಸಿದ ಬೆಳೆಯನ್ನು ಸಂಗ್ರಹಿಸಲು, ಬಳಸಲು, ಅಗತ್ಯವಿದ್ದಲ್ಲಿ ಮಾರಲು, ದವಸದ ಆಗುಹೋಗುಗಳನ್ನು ಗಮನಿಸಲು ದವಸಿಗರಿರುತ್ತಿದ್ದರು ; ಇಂಥ ದವಸಿಗರು ಹಳೇಬೀಡಿನ ಹೊಯ್ಸಳೇಶ್ವರ ದೇವಾಲಯದಲ್ಲಿಯೂ ಇದ್ದರು (ಬೇ ೨೯೦).

ಈ ಶಾಸನದಲ್ಲಿ ಉಕ್ತವಾದ ಮತ್ತೊಂದು ಅಂಶ 'ಪೆರುಮಾಳು'. ಇದು ದೇವರ ಹೆಸರಾಗಿರದೆ ಆಕ್ಕನ ಬಸದಿಯ ಸ್ಥಾನೀಕನ ಹೆಸರಾಗಿದೆ. ಹಿರೇಹಳ್ಳಿಯ ಬಸದಿಯ ಸ್ಥಾನೀಕರು ಪೆರುಮಾಳು ಕಂತಿಯರಾಗಿದ್ದಾರೆ. ಬೇ. (೩೪೦) ಸು. ೧೩ ನೇ ಶತಮಾನದಲ್ಲಿ ನೇರವಾಗ ಮತಾಂತರಗಳಾಗುತ್ತಿದ್ದು ವೈಷ್ಣವ ಮತದಿಂದ ಜೈನ ಮತಕ್ಕೆ ಬಂದಿರಬಹುದಾದವರು ತಮ್ಮ ಪೂರ್ವನಾಮದಿಂದಲೇ 'ಪೆರುಮಾಳು' ಹೆಸರನ್ನೇ ಧರಿಸಿದ್ದಿರಬಹುದು. ವೈದಿಕರನ್ನು ಬಸದಿಗಳಲ್ಲಿ ಅರ್ಚಕರಾಗಿ ನೇಮಿಸುತ್ತಿದ್ದ ಸಂಪ್ರದಾಯವಿತ್ತಾದ್ದರಿಂದ 'ಪೆರುಮಾಳು' ಬಸದಿಯ ಅರ್ಚಕನ ಹೆಸರಾಗಿದ್ದು, ಅವರು ಇಲ್ಲಿ ದಾನ ಸ್ವೀಕರಿಸಿದ್ದಾರೆಂದು ಭಾವಿಸಬಹುದಾಗಿದೆ.-ಆದರಿಂದಲೇ ಶಾಸನವು 'ಪೆರುಮಾಳಿಗೆ ಕೊಟ್ಟದು' ಎಂದಿದೆ.

## ಶಾಸನ ಪಾಠಗಳು

### ೧ ಹಳೇ ಬೆಳ್ಗೊಳ ಗ್ರಾಮದ ಕೇಶವ ದೇವಾಲಯದ ಮುಂದೆ ನಿಲ್ಲಿಸಿರುವ ಶಿಲಾ ಶಾಸನ

೧ ಶ್ರೀ ಮತ್ಪರಮ ಗಂಭೀರಸ್ಯಾದ್ವಾದಾಮೋಘಲಾಂಛನಂ ಜೀಯಾತ್ತ್ರೈ
೨ ಲೋಕ್ಯ ನಾಥಸ್ಯ ಶಾಸನಂ ಜಿನ ಶಾಸನಂ|| ಶ್ರೀಸತಿ ಜನ್ಮದಿಂ
೩ ದೆಸೆವ ಯಾದವ ವಂಶದೊಳಾದ ದಕ್ಷಿಣೋರ್ವ್ವಿಪತಿ ಎಪ್ಪನೂರ್ವ್ವಸಳ
೪ ನೆಂಬ ನೃಪಂ ಸೆಳೆಯಿಂದ ಕೋಪನ ದ್ವೀಪಿಯನೊನ್ದನೊರ್ವ್ವ ಮುನಿ ಪೊಯ್ಸ
೫ ಳಯೆನ್ದಡೆ ಪೊಯ್ದು ಗೆಲ್ದು ದಿಗ್ವ್ಯಾಪಿಯಶ ನೆಗಳ್ತೆವಡೆದೊಂಗಡ ಪೊಯ್ಸ
೬ ಳನೆಂಬ ನಾಮದಿಂ|| ವಿನಯಾದಿತ್ಯ ನೃಪಾಳನ ತನೂಜನೆಱೆಯಂಗ
೭ ನೃಪನಾತನ ಪುತ್ರನ್ನುನ್ನತ ಬಳೌನ್ನತಂ ವಿಷ್ಣು ನೃಪಾಳಕನಾತನಾತ್ಮ
೮ ಜಂ ನರಸಿಂಹಾ || ಪಡೆಮಾತೇಂ ಬಂದು ಕಂಡಂಗಮೃತಜಳಧಿ ತಾಂಗರ್ಬ್ಬದಿಂಗಂಡವಾ
೯ ತಂ ನುಡಿವಾತಂಗೆನ್ನ ನೆಂಬೈ ಪ್ರಳಯ ಸಮಯದೊಳ್ಮೀರೆಯಂ ಮೀರಿಬಪ್ಪಾ
೧೦ ಕಡಲನ್ನಂ ಕಾಳನನ್ನಂ ನೀ ಮುಳಿದ ಕುಳಿಕನನ್ನಂ ಯುಗಾನ್ತಾಗ್ನಿಯನ್ನಂಸಿಡಿಲನ್ನಂ
೧೧ ಸಿಂಹದನ್ನಂ ಪುರಹರನುರಿಗಣ್ಣನ್ನನೀ ನಾರಸಿಂಹ || ಸ್ವಸ್ತಿ ಶ್ರೀ ಮನ್ಮಹಾಮಂ
೧೨ ಡಳೇಶ್ವರ ತ್ರಿಭುವನಮಲ್ಲ ತಳಕಾಡು ಕೊಂಗು ನಂಗಲಿ ನೊಣಂಬವಾಡಿ ಬನ.
೧೩ ವಸೆ ಹಾನುಗಲ್‌ಗೊಂಡ ಭುಜಬಳ ಬೀರಗಂಗ ಪ್ರತಾಪ ಹೊಯ್ಸಳನಾರಸಿಂಹದೇವ
೧೪ ರ್ ದಕ್ಷಿಣ ಮಹೀಮಂಡ (ಳ) ಮಂ೧ ದುಷ್ಟ ನಿಗ್ರಹ ಶಿಷ್ಟಪ್ರತಿಪಾಳನಂ ಮಾಡಿದೋರಸ
೧೫ ಮುದ್ರದ ನೆಲೆವೀಡಿನೊಳ್ ಸುಖಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತಮಿರೆ |
೧೬ ದಾಸೆಯನಾಯಕ ಗೌರವ ವಿನಯಕೀರ್ತಿಯದುತ್ತಮ ದುರೆಯ
೧೭ ನಾಯಕಂಗಂ ವಾಸವನುತ ಶೀಲೆ ನೇಮ ಶೌಚ ಚಾಕಿಯವ್ವೆಸುತೆಗುಣೆ
೧೮ ಜಕ್ಕವ್ವೆಗಂ ಕೇಸರಿವಿಷ್ಪರ ಶ್ರೀ ಪಾರ್ಶ್ವಜಿನಪಾದಭಕ್ತಿ ನಿಯುಕ್ತ ನೇಮಿಯನಾ
೧೯ ಯಕಂ ದಾಸೆಯ ನಾಯಕಂ ಗೌರವಕ್ಕೆ ಭರತಂ ಬಾಹುಬಲಿಯುಮೆಂ

೨೦ ಬಪಪುತ್ರ್ಯಕ್ಕಳಾದರ್ || ನೇಮಂ ಸಮಸ್ತ ಗುಣಗಣಧಾಮಂ ದಾಸ....ನಿ

೨೧ ವಾಸ ಭರತಂ ನೇಮಿಜಿನ ಭಕ್ತಿನಿರತಂ ಶ್ರೀ ಮದ್ಬಾಹುಬಲಿ ಕೀರ್ತಿ....ನಿತ

೨೨ ಭುವನಂ || ಆ (ಶಿ?) ಯ ಮೂರ್ತಿ ನೇಮಿನಾಥ ನಯ ನಿಕ್ಷೆಯಾ ಪ್ರಮಾಣೋಪಪ್ಸಿ

೨೩ ದ್ಧಾನ್ತತ್ರಯ ಚಕ್ರವರ್ತಿ ನಯಕೀರ್ತಿಯ....ಶ್ವರ ಚರಣ ಕಮಲ ರತ

೨೪ ಷಟ್ಟ ರಣ || ಶ್ರೀ ಮೂಲ ಸಂಘ ದೇಶೀಯ ಗಣ ಪುಸ್ತಕಗಚ್ಛ ಕೊಂಡ ಕೊಂದಾನ್ವಯ

೨೫ ಶ್ರೀ ನಯಕೀರ್ತಿ ಸಿದ್ಧಾನ್ತ ದೇವಸುತ ಬಾಳಚಂದ್ರ ದೇವರಗುಡ್ಡಂ ನೇಮಯನಾ

೨೬ ಯಕ ಸಕ ವರ್ಷದ ೧೧೦೨ನೆಯ ಖರ ಸಂವತ್ಸರ ಪೌಷ್ಯ ಬ ೧೧ ಮಂ (ಗ)

೨೭ ಳವಾರ ದುತ್ತರಾಯಣ ಸಂಕ್ರಾನ್ತಿಯೊಳು ಜರಗರಹಳ್ಳಿಯ ಪಾರ್ಶ್ವದೇವರ

೨೮ ಷ್ಟ ವಿಧಾರ್ಚ್ಚನೆಗೆ ಮದುರ ಸಮುದ್ರದ ಕೆಳಗೆ ಗದ್ದೆ ಸಲಿಗೆ ಮೂ

೨೯ ಱು ಆವರೆಗಂಡಿಯಲ್ಲಿ ಬೆದ್ದಲೆ ಕೊಳಗ ಹತ್ತು ಹೂದೋಟವೊಂ

೩೦ ದಂ || ಸರ್ವ್ವಾಧಿಕಾರಿ ಹೆಗ್ಗಡೆ ಕಮ್ಮಟದ ಮಾಚಯ್ಯ ನಂದಾ ದೀವಿ

೩೧ ಗೆ ಬಿಟ್ಟ ಗಾಣ ವೊಂದು || ಬಸದಿಯ ಮನೆ ಮೂಱು ಮಗ್ಗ

೩೨ ಇನಂ ಕಿಡಿಸಿದನ ಗಂಗೆಯಲು ಕವಿಲೆಯಕೊಂದ ಪಾತಕನಕ್ಕುಂ ||

## ೨ ಬರಾಳು ಗ್ರಾಮದಲ್ಲಿ ರಸ್ತೆಯ ಬದಿಯಲ್ಲಿ ನಿಂತಿರುವ ಶಾಸನದ ಕಲ್ಲು

೧ ಶ್ರೀ ಮತ್ಪರಮ ಗಂಭೀರ ಸ್ಯಾದ್ವಾದಾಮೋಘ ಲಾಂಛನಂ | ಜೀಯಾತ್ರೈ

೨ ಳೋಕ್ಯನಾಥಸ್ಯ ಶಾಸನಂ ಜಿನ ಶಾಸನಂ || ಶ್ರೀಕಾಂತಾಪೀನವಕ್ಷೋರುಹಗಿರಿ ಶಿಖರೋಜ್ಜೃಂಭ

೩ ಮಾಣಂ ವಿಶಾಳಂ ಲೋಕೋದ್ಯತ್ತಾಪಲೋಪ ಪ್ರವಣ ವಿಳಸಿತಂ ವೀರ ವಿದ್ವನ್ಮಹೀಪಾನೇಕಾಪ್ಯಾ

೪ ಮುಕ್ಥ ಸಂಜೀವನ ಬಹಳಿತವೃದ್ಯದ್ಗುಣ ಸ್ತೋಮ ಮುಕ್ತಾನೀಕಂ ನಿಷ್ಕಂಟಕಂ ನಿಶ್ಚಳಮೆನ

೫ ಲೆಸುಗಂ ಹೊಯ್ಸಳ ಕ್ಷತ್ರವಂಶಂ || ಅದರೊಳ್ಮಾಕ್ತಿಕದನ್ತೆ ಪುಟ್ಟಿದ ನಿಳಾಪಾಳೌಘ ಚೂಡಾ

೬ ಮಣಿತ್ವದಿನುದ್ಯುದ್ಗುಣ ಶೋಭೆಯಿಂ ಸ್ವರುಚಿಯಿಂ ಸದ್ವೃತ್ತರಾರಾಜಿತತ್ವದಿನತ್ಯುನ್ನತ ಜಾತಿಯಿಂಸ

೭ ಮನೆನಲ್ಸಂಗ್ರಾಮರಂಗಾಗ್ರದೊಳ್ಮದವದ್ವೈರಿಕುಳ ಪ್ರತಾಪಿ ವಿನಯಾದಿತ್ಯಂ ಧರಾಧೀಶ್ವ

೮ ರಂ || ವಿನಯಾದಿತ್ಯನ ತನಯಂ ಜನನುತನೆಱೆಯಂಗ ಭೂಭುಜಂ ತತ್ತನುಜಂ ವಿನುತಂ ವಿಷ್ಣುನೃಪಾ

೯ ಳಂ ಮನಸ್ವಿ ತದಪತ್ಯಂ ನೆಗೆರ್ದ್ದ ನರಸಿಂಹಂ || ವೃ || ನತನರಪಾಳಜಾಳಕ ವಿಶಾಳವಿಜೃಂಭಿತ ಬಾಳಬಾಸು

೧೦ ರೋದ್ಧತ ತಿಳಕಾಂಕಿತಾಂಘ್ರಿ ನಖಂ ಮಂಡಳ ಮಹಾವರಂಗರಾಮನೂರ್ಜ್ಜಿತ ನಿಜ ಪುಣ್ಯಪುಂಜ ಬಳ

೧೧ ಸಾಧಿತ ಸದ್ವನ ಮಹೀತಳದೊಳೆ ಮಹೋನ್ನತಿಯಿಂದೆಸೆದಂ ನರಸಿಂಹಹೆ

೧೨ ಭೂಭುಜಂ || ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಮಣ್ಡಳೇಶ್ವರಂ ದ್ವಾರಾವತೀಪು

೧೩ ರವರಾಧೀಶ್ವರಂ ತುಳವ ಬಳಜಳದವಿಳಯಾನಿಳಂ ದಾಯಾದದಾವಾನಳಂಪಾಂಡ್ಯ ಕುಳ ಕುಧರ ಕುಳಿ

೧೪ ಶ ದಂಡಂ | ಗಂಡ ಭೇರುಂಡಂ | ಮಂಡಳಿಕ ಬೇಂಟೆಕಾರಂ ಚೋಳಕಟಕ ಸೂರೆಕಾರ ಸಂಗ್ರಾಮ ಭೀಮ ಕಲಿಕಾ

೧೫ ಲ ಕಾಮ | ಸಕಳ ವಂದಿಜನ ಮನಸ್ಸಂತರ್ಪ್ಪಣ ಪ್ರವಣತರ ವಿತರಣ ವಿನೋದಂ ವಾಸಂತಿಕಾ ದೇವೀಲಬ್ಧವರ

೧೬ ಪ್ರಸಾದಂ | ಯಾದವ ಕುಳಾಂಬರದ್ಯುಮಣಿ | ಮಂಡಳಿಕ ಚೂಡಾಮಣಿ | ಕದನ ಪ್ರಚಂಡ | ಮಲಪರೊ

೧೭ ಳ್ಗಂಡ ನಾಮಾದಿ ಪ್ರಶಸ್ತಿ ಸಹಿತಂ ಶ್ರೀ ಮತ್ರಿಭುವನಮಲ್ಲ ತಳಕಾಡು ಕೊಂಗುನಂಗಲಿನೊಣಂಬವಾಡಿ ಬನವ

೧೮ ಸೆ ಹಾನುಂಗಲ್ಗೊಂಡ ಭುಜಬಳವೀರ ಗಂಗ ಪ್ರತಾಪಹೊಯ್ಸಳ ನಾರಸಿಂಹದೇವರು ದಕ್ಷಿಣಮಹಿಮಂ
೧೯ ಡಳಮಂ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳನ ಪೂರ್ವಕಂ ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯ್ಯುತ್ತ
ಮಿರೆ
೨೦ ಸುಂಕದಧಿಕಾರಿ ಬಟ್ಟಮಯ್ಯ ವೆರ್ಗ್ಗಡೆಗಂ ನಿಯದ ವೃತ್ತಿಯಲು ತನ್ನಾಳಿಕೆಯಲು ಬರಹಾಳಿನಲಿಕೆ
೨೧ ಱೆಯಂ ಕಟ್ಟಿಸಿ ಸುಪಾರ್ಶ್ವ ಭಟಾರಕರ ಬಸದಿಯ ಮಾಡಿಸಿದನಾಬಸದಿಯಷ್ಟ ವಿಧ (ರ್ಚ) ನೆಗೆ ಋಷಿ
೨೨ ಯರಾಹಾರ ದಾನಕ್ಕಮ್ ಆ ಊರ ಹಿರಿಯ ಕೆಱೆಯ ಕೆಳಗೆ ನೊದಲೇರಿಯಲಿ ಸಲಗೆ ಹಾ
೨೩ ........ಬೆದ್ದಲೆ ಸಲಗೆ ೧ ಕೊಳಗ ೧೦ ತಾ ಕಟ್ಟಿದಕೆಱೆಯಲಿ ನೀರು ಹರಿವುದಲ್ಲಿ ತನಕವಿು
೨೪ ಗಿನಿತುವ ಶಕವರ್ಷದ ೧೦೭೦ ನೆಯ ಪ್ರಭವ ಸಂವತ್ಸರದ ಉತ್ತರಾಯಣ ಸಂಕ್ರಾಂತಿ
೨೫ ವ್ಯತಿ ಪಾತದಲು ಶ್ರೀ ಮೂಲಸಂಘದ ಕೊಂಡಕುಂದಾನ್ವಯದ ದೇಶಿಯ ಗಣದ ಪುಸ್ತಕ ಗಚ್ಛ
೨೬ ದ ಕಾಣೋರ ಬಳಿಯ ಗೋಣಿಯ ಮಲಧಾರಿ ಅಪ್ಪೋಪವಾಸಿ ಗುಣಭದ್ರದೇವರ ಶ್ರೀಪಾದ
೨೭ ದ ಧಾರಾಪೂರ್ವ್ವಕಂ ಮಾಡಿ ಚಾಮವೆ ಹೆಗ್ಗಡತಿ ಬಿಟ್ಟಳು ಬಸದಿಗೆ ಧರ್ಮದೊಳಗನುದನ್ದು
೨೮ ದು ಮುಕುಂಡಿಯ ಮುಕ್ಕಣ್ಣ ಕಡಂಬ ವಂಶದ ಇಱುವ ಬೆಡಂಗ ವೀರ ಮಾಣಿಕ್ಯನಾರಿ
೨೯ ಸೆಟ್ಟಿಯಮಗಂ ಗೋಪತಿ ನಾಯಕನ ಮಗಂ ಕಬ್ಬಪ್ಪ ನಾಡು ಸಾಸಿರದ ವೀರ ಮಾಣಿಕ್ಯ
೩೦ ನಾರಿ ಸೆಟ್ಟಿಯರು ಬರಹಾಳ ಬಸದಿಯಲ್ಲಿ ಜೀರ್ಣೋದ್ಧಾರನುಂ ಮಾಡಿ ಅಲ್ಲಿಯ ಕೆಱೆ
೩೧ ಯುಮಂ ಕಟ್ಟಿಸಿ .......ಮಂ ತಿದ್ದಿಸಿ ತನ್ನ ಮಗ ಮಚ್ಚಿಸೆಟ್ಟಿಯನಾಧಿಪತ್ಯವ ಮಾಡಿಕೊ
೩೨ ಟ್ಟು ಆ ಧರ್ಮಮೂರ್ಜಿತಂ ಮಾಡಿ ಯಶೋವೃದ್ಧಿಯಂ ಪುಣ್ಯವೃದ್ಧಿಯಂ ಮಾಡಿ
೩೩ ಕೊಂಡು ಶಾಸನಮಂ ನಿಲ್ಲಿಸಿದಂ ||

**೩ ಶ್ರವಣಬೆಳಗೊಳದ ಚಿಕ್ಕಬೆಟ್ಟದ ಪಾರ್ಶ್ವನಾಥ ಬಸದಿಯ ಅಂತರಾಳದ ಬಲಭಿತ್ತಿಯ ಮೇಲಿನ ಶಿಲಾಶಾಸನ**

೧ ಶ್ರೀ ಮನ್ಮಹಾ ಪಸಾಯಿತರುಮಪ್ಪ ವಿಜಯಣ್ಣನವರಳಿಯ ಚಿಕ್ಕ ಮದುಕಣ್ಣ
೨ ನವರು ಶ್ರೀ ಕಮಠ ಪಾರ್ಶ್ವದೇವರ ಅಂಕಮಾಲ್ಯಗೆಱೆ ಗೋವಿಂದವಾಡಿ
೩ ಯ ಕೆಱೆಯ ಕೆಳಗೆ ಗದ್ದೆ ಕೊ ೧೦ ಬೆದ್ದಲು ಇತ್ತಿರೆ ೧೦೦ನೂ ಸಕವರು
೪ ಷ ೧೧೯೭ ನೆಯ ನಳ ಸಂವಚ್ಛರದ ಉತ್ತರಾಯಣ ಸಂಕ್ರಮಣದಂದು ಧಾರಾಪೂರ್ವಕವಾಗಿ ಮಾಡಿ
೫ ಕೊಟ್ಟ ದತ್ತಿ ಮಂಗಳಂ ಮಹಾಶ್ರೀ

**೪ ಅದೇ ಬಸದಿಯ ಅಂತರಾಳದ ಎಡ ಭಾಗದ ಮುಂಭಿತ್ತಿಯಲ್ಲಿ ಮೇಲ್ಭಾಗದಲ್ಲಿರುವ ಶಾಸನ**

೧ ಶ್ರೀ ದಾಮನನ್ದಿ ತ್ರೈವಿದ್ಯದೇವರ ಶಿಷ್ಯರು ಧನ
೨ ಕೀರ್ತಿ ದೇವರು ಕಮ್ಮಟದ ಸಕಲ್ಯೆಯಂ ಮಾ
೩ ಡಿಸಿದರು

**೫ ಚಿಕ್ಕಬೆಟ್ಟದ ಎರಡು ಕಟ್ಟೆ ಬಸದಿಯಲ್ಲಿನ ನವರಂಗದ ಕಂಬದ ಮೇಲಿನ ಶಾಸನ**

೧ ಸ್ವಸ್ತಿ ಶ್ರೀ ನವಕಣ್ಡದ ನಾಲ್ಕು ಕಮ್ಬಮನ್ ದುಗ್ಗ ಮಾರೋಜ ಮಾಡಿದನ್ ||

**೬ ಜಿನನಾಥಪುರದ ಶಾಂತೀಶ್ವರ ಬಸದಿಯ ಗರ್ಭಗೃಹದ ಬಲಗಡೆ ಒಳಭಿತ್ತಿಯಲ್ಲಿರುವ ಶಾಸನ**

೧ ಸಾಗರಣಂದಿ ಸಿದ್ಧಾಂತ ದೇವರ ಬಸದಿಗೆ ತಂದ ಸಾಱರ ಗದ್ಯಾಣ ನಿರ್ನ್ನಯ
ಹೆಗ್ಗಡೆ ನಾಗದೇವ ಬಮ್ಮಯ ನಾಯಕರ ಸಾಕ್ಷಿ

೭ ಅದೇ ಬಸದಿಯ ನವರಂಗದ ಎಡ ಭಿತ್ತಿಯ ಮೇಲೆ

೧ ಸ್ವಸ್ತಿ ಶ್ರೀಮತು ವಸುಧೈಯ್ಕ ಬಾಂಧವ ರೇಚಿಮಯ್ಯ ದಂಡ ನಾಯಕರ ಬಸದಿಯ ಶಾನ್ತಿನಾಥ ದೇ
೨ ವರಷ್ಟ ವಿಧಾರ್ಚನೆಗೆ ಲಕ್ಕಣಂದಿ ದೇವರ ವಟ್ಟಾರಮುಂ ಬಸದಿಯ ಸುತ್ತಣ ಮನೆಗಾಣ ನಾಗದೇವನ
೩ ವಟ್ಟಾರಮುಂ ನಾಗದೇವ ಕಟ್ಟಿಸಿದ ಕೆಱೆಯುಂ ರಾಚೆಯನಹಳ್ಳಿಯ ರಾಮಗಟ್ಟಮಂ ಲಕ್ಕಣಂದಿ ದೇವರು ಕನ
೪ ಕ ಸೇನ ಪಂಡಿತರುಂ ಮಂಚಿಯಣ ಹೆಗ್ಗಡೆಯುಂ ಸಮಸ್ತ ಗಾವುಂಡಗಳು ಪರೋಕ್ಷ ವಿನಯವಾಗಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟರು............ (ಮುಂದೆ ಅಕ್ಷರಗಳು ಇಲ್ಲ)
೫ ಶ್ರೀ ರೇಚಣ ದಂಡನಾಯಕರ ಬಸದಿಗೆ ಅರಸಿಯ ಕೆಱೆಯ ಲಕ್ಷ್ಮಿಸೆಟ್ಟಿಯು ಬೊಮ್ಮಿಸೆಟ್ಟಿಯುರು ಮಾಡಿಸಿ ಕೊಟ್ಟ ಕಂ
೬ ಚಿನ ತೋರಣವೊಂದು ಕಂಚಿನೆಲೆ ಹದಿನೈದು ಕಂಚಿನ ಹೂ ನಾಲ್ಕುತಾಂಬ್ರದ ಹೂವೇಳು ಕಣ್ಣಾಪಾಳಿಕೆಯ ದೀವಿ(ಗೆ)
೭ ಯರಡು ಮಾಣಿಕ ದೀವಿಗೆಆಯಿದು ಕಂನಡಿಯೊಂದು||

೮ ಅಕ್ಕನ ಬಸದಿಯ ಮುಖ ಮಂಟಪದ ಮುಂಭಿತ್ತಿಯಲ್ಲಿರುವ ಎರಡು ಶಾಸನಗಳು

೧ ಶ್ರೀ ಮನ್ಮನಯ ಕೀರ್ತಿ ಸಿ
೨ ದ್ಧಾಂತ ಚಕ್ರವರ್ತಿಗಳ ಶಿಷ್ಯ
೩ ರು ನಯ ಕೀರ್ತಿ ದೇವರು
೪ ಆಚಾವೆ ಬಸದಿಗೆ ಮುಕ್ಕೊಡೆ
೫ ಅಪದುಮಂಗೆ ಗದ್ದೆ ಸ ೧ ಸೋ
೬ ಮಸದ್ರದಲ್ಲಿ ನಾ.... ನಹ[1]
೭ ರಿಯ ಕೆಯ್ಯಲು ಮಣ್ಣು
೮ ೧೦೦ ಯಂತಿನಿತುವಂ ಎಂದೆಂ
೯ ದಿಗಂ ಸಲಿಸುವರು ಮಂಗಳ ಮಹಾ
೧೦ ಶ್ರೀ

೯ ಅದರ ಕೆಳಭಾಗದಲ್ಲಿರುವ ಶಾಸನ

೧ ಶ್ರೀ ಮನ್ಮನಯ ಕೀರ್ತಿ ಸಿ
೨ ದ್ಧಾಂತ ಚಕ್ರವರ್ತಿಗಳ
೩ ಶಿಷ್ಯರು ನಯಕೀರ್ತಿ
೪ ದೇವರ ಶಿಷ್ಯರು ಚಂದ್ರ
೫ ಪ್ರಭ ದೇವರು ಅಕ್ಕನ ಬ
೬ ಸದಿಯ ದವಸಿಗತನ[2]
೭ ಕ್ಕೆ ಆಚವ್ವೆಯ ಬೊಂಮೆಯ
೮ ನ ಹಳ್ಳಿಯ ಸೋಮ ಸಮು

---

ಶ್ರೀ ಎಲ್. ಕೆ. ಶ್ರೀನಿವಾಸನ್ ಅವರ ಪಾಠ

1 ನಾಡಸೇನ ಬೋವಿಯ

2. ದೇವ ಸಂಘಟನ

೯ ದ್ರದ ಕೆಱೆ[3]ಯ ಕೆಳಗೆ ಕಿಱು
೧೦ ಕಟ್ಟಿದ ಗದ್ದೆ ಸಲಗೆ ಒಂದು ಕೊ
೧೧ ಳಗ ವಯಿದು ಬೆದ್ದಲು ಕೆನು (?)
೧೨ ತದ[3] ಕೆಯ್ಯಿಯಲಿ ಬೆದ್ದಲೆ
೧೩ ೧೦೦ನೂ ದೇವರ ಭೋಗಕ್ಕೆ ಪೆರು
೧೪ ಮಾಳಿಗೆ ಕೊಟ್ಟದು ಮಂಗ[4]
೧೫ ಳ ಮಹಾಶ್ರೀ ಶ್ರೀ ಶ್ರೀ

ಈ ಲೇಖನವನ್ನು ಸಿದ್ಧ ಪಡಿಸಲು ಸಹಾಯ ಮಾಡಿದ ಡಾ॥ ದೇವರಕೊಂಡಾರೆಡ್ಡಿ, ಪಿ. ವಿ. ಕೃಷ್ಣಮೂರ್ತಿ ಮತ್ತು ಶ್ರೀಮತಿ ಕೊ. ಸ. ಅಪರ್ಣ ಅವರಿಗೆ ನಾನು ಅಭಾರಿ)

---

3. ಕೆಯ್ಮತ್ತರು
4. ಧರ್ಮ

ಜೆ.ಟಿ. ಜಯರಾಮಯ್ಯ* ಮತ್ತು ಕೆ. ಕುಮಾರ್ ಯಾದವ್**

# ಮುಮ್ಮಡಿ ಬಲ್ಲಾಳನ ತೆಂಕನಹಳ್ಳಿದೊಡ್ಡಿಯ ಶಿಲಾಶಾಸನ

ತೆಂಕನಹಳ್ಳಿದೊಡ್ಡಿಯು ಬೆಂಗಳೂರು ಗ್ರಾಮಾಂತರ ಜಿಲ್ಲೆ ಚನ್ನಪಟ್ಟಣ ತಾಲೂಕಿನ ಒಂದು ಗ್ರಾಮ. ಪ್ರಸ್ತುತ ಶಾಸನವು ತೆಂಕನಹಳ್ಳಿದೊಡ್ಡಿಯ ಸಂಬೇಗೌಡ ಎಂಬುವರ ಹೊಲದಲ್ಲಿದೆ. ಈ ಶಿಲಾ ಶಾಸನದ ಎದುರು ಪಾಳುಬಿದ್ದ ಮಾರಿಗುಡಿ ಇದೆ. ಗುಡಿಯಲ್ಲಿ ಯಾವುದೇ ದೇವರ ಮೂರ್ತಿಯಿಲ್ಲ.

ಕನ್ನಡ ಭಾಷೆ ಹಾಗೂ ಕನ್ನಡ ಲಿಪಿಯಲ್ಲಿರುವ ಈ ಶಾಸನವು ೫೨ ಇಂಚು ಎತ್ತರ ೨೭ ಇಂಚು ಅಗಲ ವಾಗಿದೆ. ಒಟ್ಟು ೨೭ ಸಾಲುಗಳಿಂದ ಕೂಡಿದ ದಾನ ಶಾಸನವಾಗಿದ್ದು ಅಲ್ಲಲ್ಲಿ ತ್ರುಟಿತವಾಗಿದೆ. ಭಾಷೆ ಮತ್ತು ಲಿಪಿ ಹೊಯ್ಸಳರ ಕಾಲದ್ದಾಗಿದ್ದು ಶಾಸನ ಪೂರ್ಣ ವಾಗಿದೆ.

**ಶಾಸನ ಪಾಠ**

೧ ಸಮಸ್ತ ವಿಸ್ತ್ರುತ ವಿಸ್ತಾರ ಪ್ರಶಸ್ತಿ ಸಹಿತಂ
೨ ಶ್ರೀಮತು ಪ್ರತಾಪ ಚಕ್ರವರ್ತಿ ಹೊಇಸಣ ಶ್ರೀ ವೀ.
೩ ಬಲ್ಲಾಳ ದೇವರಸರು ವಿರುಪಾಕ್ಷ ಪಟ್ಟಣದೊ
೪ ಳು ಸುಖ ಸಂಕಥಾ ವಿನೋದದಿಂ ರಾಜ್ಯಂಗೆಯುತ್ತಿರೆ
೫ ಕಲಿಮು ಶಕ ವರುಷ ೧೨೬೦ನೆಯ ಇಸ್ವರ ಸಂ
೬ ವತ್ಸರದ ಆಶ್ವಇಜ ಸು ೩ ವಡ್ಡವಾರದಾದು ಶ್ರೀ
೭ ಮನುಮಹಾ ಸಾವಂತಾದಿ ಪತಿ ಮಾರಿಸೆಟ್ಟಿ
೮ ಯ ಗೂಳಿಯ ನಾಯಕರವರು ಶ್ರೀಮನುಮ
೯ ಹಾ ವಡ ಬ್ಯವಹಾರಿ ಉಭಯ ನಾನಾ ದೇಶಿಮಲೆ
೧೦ ಯಾಳ ಮುಖ್ಯರಪ ನಿಲಪಸೆಟ್ಟಿಯರ ಮಕಳು ರಾ
೧೧ ಯಪ ಸೆಟ್ಟಿಯರಿಗೆ ಲಂಕೆರೆಯ ಸ್ಥಳದೊಳಗಣ
೧೨ ನವರಾದಿಯಾ.... ಹಳಿಯ ಚುತುಸೀಮೆ ಇಂ
೧೩ ದೊಳಗುಳ್ಳ ಗದ್ದೆ ಬೆದ್ದಲು ಆ ಲಂಕೆರೆಯಾ ಹಿರಿ

* ಉಪನ್ಯಾಸಕರು, ವಿವೇಕಾನಂದ ಪದವಿಪೂರ್ವ ಕಾಲೇಜು, ರಾಜಾಜಿನಗರ, ಬೆಂಗಳೂರು-೫೬೦ ೦೧೦
** ನಂ. ೨೫, ಕಾವಲ್ ಭೈರಸಂದ್ರ, ಆರ್. ಟಿ. ನಗರ ಅಂಚೆ, ಬೆಂಗಳೂರು–೫೬೦ ೦೪೩

೧೪ ಯಾ ಕೆಳಗೆ ಪೂರ್ವ ಮರಿಯಾದೆಯಲಿ
೧೫ ನವರಾದಿಯ ಹಳಿಗೆ ಸಲುವ ಗದ್ದೆ ಸಲಿಗೆ....
೧೬ ನೊಳಗಣ ಭೂಮಿಯೊಳಗಣ ನಿಧಿ ನಿಕ್ಷೇಪ ಜ
೧೭ ಲ ಪಾಷಾಣ ಅಸ್ತು ಆಗಾಮಿಯೊಳಗಣ ಸರ್ವ ಸ್ವಾ
೧೮ ಮ್ಯನನು ಪಾತ್ರ ಜ್ಞಾತಿ ಸಾಮಂತದಾಯ
೧೯ ....ಮತದಿಂ ಸ್ವರುಚಿ ಇಂ ದಾರಾಪೂರ್ವ
೨೦ ಕಂ ಮಾಡಿ ಆ ಗೂಳೆಯ ನಾಯಕರು
೨೧ ಆ ರಾಯಪ್ಪ ಸೆಟ್ಟಿಯ ಭೂಮಿ ಚಂದ್ರಾದಿತ್ಯರುಳಂ ನಂಬರಂ
೨೨ ಕೊಡುಗೆಯಾಗಿ ಸಲುವಂತಾಗಿ ಕೊಟ್ಟ ಶಿಲಾಶಾಸ
೨೩ ನ ಇ ಧರ್ಮನಂ ಅವನಳುಪಿದವನು ಅಶ್ವೇತಿ ಬ್ರಹ್ಮೇತಿ
೨೪ ಯೊಳಾಗ್ರ ಪಂಚ ಮಹಾಪಾತಕವ್ ಮಾಡಿದ [ವ]
೨೫ ರು ಹೋಹಗತಿಗೆ ಹೋಹರು ಸ್ವದತ್ತಂ ಪರದತ್ತಾಂ
೨೬ ವಾಯೋ ಹರೇತಿ ವಸುಂಧರಾ ಷಷ್ಟಿರ್ ವರುಷ ಸಹಸ್ರಾಣಿ
೨೭ ಜಾಯೇತಿ ಜಾಯೇ ಕ್ರಿಮಿಃ

ಶಕ ವರುಷ ೧೨೬೦ನೆಯ ಈಶ್ವರ ಸಂವತ್ಸರದ ಆಶ್ವಯುಜ ಶು ೩ ವಡ್ಡವಾರ ಎಂದು ಕಾಲವನ್ನು ಗಣನೆ ಮಾಡಿಕೊಂಡಿದೆ. ಈ ಶಾಸನ ಕ್ರಿ. ಶ.೧೩೩೮ರ ಸೆಪ್ಟೆಂಬರ್ ೨೭ನೇ ತಾರೀಖಿಗೆ ಸರಿಹೊಂದುತ್ತದೆ. ಈ ಕಾಲಕ್ಕೆ ಸರಿಯಾಗಿ ಹೊಯ್ಸಳ ರಾಜ ಮೂರನೇ ಬಲ್ಲಾಳನು ರಾಜ್ಯಭಾರ ಮಾಡುತ್ತಿದ್ದ ಕಾಲವಾಗಿದೆ.

ಈ ಶಾಸನವು ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಕಾಲವನ್ನು ಮುಂದೂಡಲು ಸಹಕಾರಿಯಾಗಿದೆ. ಇತ್ತೀಚಿನ ಸಂಶೋಧನೆಗಳ ಪ್ರಕಾರ ಕ್ರಿ. ಶ. ೧೩೩೬ರಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಲ್ಲಿಲ್ಲವೆಂದು, ಬಹುಶಃ ೧೩೪೬ರಲ್ಲಿ ಸ್ಥಾಪನೆಯಾಗಿರಬೇಕು. ಆದುದರಿಂದ ವಿಜಯನಗರ ಸ್ಥಾಪನೆಯ ಕಾಲವನ್ನು ಕ್ರಿ. ಶ. ೧೩೩೬ಕ್ಕೆ ಬದಲಾಗಿ ೧೩೪೬ಕ್ಕೆ ಮುಂದೂಡಬಹುದಾಗಿದೆ. ಆದಕ್ಕೆ ಈ ಕೆಳಕಂಡ ಅಂಶಗಳನ್ನು ನಾವು ಗಣನಗೆ ತೆಗೆದುಕೊಳ್ಳಬಹುದು. ಶೃಗೇರಿ ಕ್ರಮಾಂಕ ಒಂದರ ಶಾಸನ ಇದೇ ವರ್ಷದ್ದಾಗಿದೆ (೧೩೪೬) ಇಲ್ಲಿ ಸಂಗಮ ಸೋದರರು ಭಾರತೀತೀರ್ಥರಿಗೆ ದಾನ ಮಾಡಿದ ಶಾಸನವಿದೆ.

ಹೊಯ್ಸಳ ಬಲ್ಲಾಳನು ಮೂರು ರಾಜಧಾನಿಗಳನ್ನು ಮಾಡಿಕೊಂಡಿದ್ದನು. ಒಂದನೆಯದಾಗಿ ದ್ವಾರಸಮುದ್ರ, ಎರಡನೆಯದಾಗಿ ತಿರುವಣ್ಣಾಮಲೈ ಬಲ್ಲಾಳ ಪಟ್ಟಣ ಮತ್ತು ಮೂರನೆಯದಾಗಿ ವಿಜಯ ವಿರೂಪಾಕ್ಷ ಹೊಸ ಪಟ್ಟಣ. ವಿಜಯ ವಿರೂಪಾಕ್ಷ ಪಟ್ಟಣದ ಬಗ್ಗೆ ವೆಂಕಟರಮಣಯ್ಯ ಮತ್ತು ನೀಲಕಂಠ ಶಾಸ್ತ್ರಿಗಳು ಮುಮ್ಮಡಿ ಬಲ್ಲಾಳನ ಹೊಸಪಟ್ಟಣವೇ ಬೇರೆ ಬುಕ್ಕನ ರಾಜಧಾನಿ ಹೊಸಪಟ್ಟಣವೇ ಬೇರೆ ಎಂದು ಹೇಳಿರುತ್ತಾರೆ.

ಹೊಸಪಟ್ಟಣವೆಂಬುದು ಹಂಪೆ ವಿಜಯನಗರದ ಮೊದಲಿನ ಹೆಸರಾಗಿತ್ತು. ಕ್ರಿ. ಶ. ೧೩೨೦ರಲ್ಲಿಯ ಶಿಲಾಶಾಸನದಲ್ಲಿ (ಎಕ ೧೦ ಕೋ ೭೫) ಬಲ್ಲಾಳ ಪುದು ಪಡೈವೀಡು ಎಂದರೆ ಹೊಸ ಪಟ್ಟಣದಲ್ಲಿ ಎಂದಿದೆ. ಅರಸೀಕೆರೆ (ಎಕ ೫ ಅರಸೀ ೬೬) ಶಾಸನದ ಪ್ರಕಾರ ಬಲ್ಲಾಳನು ಹೊಸ ಪಟ್ಟಣದಲ್ಲಿದ್ದ. ಗುಬ್ಬಿ (ಎಕ. ೧೨ ಗುಬ್ಬಿ ೩೦ರ) ಶಾಸನದಲ್ಲಿ ಹೊಸ ಪಟ್ಟಣದಲ್ಲಿ ಎಂದಿದೆ. ಈ ಎಲ್ಲ ಶಾಸನಗಳು ರಾಜಧಾನಿಯ ಹೆಸರನ್ನು ವಿಜಯ ವಿರೂಪಾಕ್ಷ ಹೊಸ ಪಟ್ಟಣ ಎಂದು ಹೇಳಿವೆ.

ಈ ಹೆಸರು ಹೇಗೆ ಮತ್ತು ಏಕೆ ಬಂದಿತು ಎಂಬ ಪ್ರಶ್ನೆಗೆ ಉತ್ತರ ಬಹಳ ಸುಲಭವಾಗಿದೆ. ಮೂರನೇ ಬಲ್ಲಾಳನ ಮಗನ ಹೆಸರು ನಾಲ್ವಡಿ ಬಲ್ಲಾಳ ಅಥವಾ ವೀರವಿಜಯ ಬಲ್ಲಾಳ (ಎಂ ಎ ಆರ್ ೧೯೨೮ ನಂ ೪), ವೀರ ವಿರೂಪಾಕ್ಷ ಬಲ್ಲಾಳ (ಎಕ ೬. ಚಿಕ್ಕಮ. ೧೦೫) ಹಾಗೂ ಹಂಪೊಡೆಯಾ (ಎಕ ೪ ಕೃನ ೨೯) ಹಂಪೆಯ ಒಡೆಯ ಎಂದಿವೆ. ನಾಲ್ಕನೆಯ ಬಲ್ಲಾಳನಿಗೆ ಹಂಪೆ ವಿರೂಪಾಕ್ಷನ ಹೆಸರೆ ಇದ್ದಿತು. ವಿರೂಪಾಕ್ಷ ಪಟ್ಟಣವೆಂಬುದು ಹಂಪೆಗಿದ್ದ ಇನ್ನೊಂದು ಹೆಸರು. ಇದಲ್ಲದೆ ಹಂಪೆಯ ವಿರೂಪಾಕ್ಷ ದೇವಾಲಯದಲ್ಲಿರುವ ಶಾಸನ (ಸೌ ಇ ಇ ಸಂ ೪)ರಲ್ಲಿ ವಿರೂಪಾಕ್ಷ ತೀರ್ಥ ವೆಂದಿದೆ. ವಿರೂಪಾಕ್ಷ ತೀರ್ಥ, ವಿರೂಪಾಕ್ಷ ಪಾದ, ವಿರೂಪಾಕ್ಷ ಪಟ್ಟಣ ಎಂಬುವು ಹಂಪೆಯ ಬೇರೆ ಬೇರೆ ಹೆಸರುಗಳು

ನಾಲ್ಕನೆಯ ಬಲ್ಲಾಳನ ಹೆಸರಿನಲ್ಲಿ ಹಂಪೆಯನ್ನು ರಾಜಧಾನಿಯಾಗಿ ಮಾಡಿ ಅದಕ್ಕೆ ಹೊಸಪಟ್ಟಣವೆಂಬ ಹೆಸರನ್ನು ಕೊಟ್ಟಿದ್ದ ದೊರೆ ಮುಮ್ಮಡಿ ಬಲ್ಲಾಳನು ತೀರಿಕೊಂಡಾಗ, ನಂತರ ಬಂದ ನಾಲ್ವಡಿ ಬಲ್ಲಾಳನು ೧೩೪೫ರ ವರೆಗೆ ಅಧಿಕಾರದಲ್ಲಿದ್ದವನು. ಈತನ ನಂತರ ಹರಿಹರನು ಪಟ್ಟಕ್ಕೆ ಬಂದನು. ಕ್ರಿ. ಶ. ೧೩೪೬ರ ಫೆಬ್ರವರಿ ತಿಂಗಳ ೧೩ನೇ ತಾರೀಖಿನಂದು ಹರಿಹರನು ತನ್ನ ವಿಜಯೋತ್ಸವವನ್ನಾಚರಿಸಲು ಶೃಂಗೇರಿಗೆ ಬಂದು ದಾನವಿಟ್ಟಿದ್ದಾನೆ. ಇವರ ಆಳ್ವಿಕೆಯ ಮೊದಲಿನ ಕೆಲವರುಷಗಳು ರಾಜಧಾನಿಗೆ ಹೊಸಪಟ್ಟಣ ಎಂದೇ ಕರೆಯುತ್ತಿದ್ದರು. ಈ ಎಲ್ಲಾ ಅಂಶಗಳಿಂದಾಗಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯು ಕ್ರಿ. ಶ. ೧೩೪೬ರಲ್ಲಿ ಪ್ರಾರಂಭವಾಗಿರಬಹುದೆಂದು ಹೇಳಬಹುದಾಗಿದೆ.

[ಈ ಶಾಸನವನ್ನು ಓದಲು ಮತ್ತು ಲೇಖನ ಸಿದ್ಧಪಡಿಸಲು ಸಹಾಯ ನೀಡಿದ ಡಾ॥ ದೇವರ ಕೊಂಡಾರೆಡ್ಡಿಯವರಿಗೆ ಚಿರಋಣಿಯಾಗಿದ್ದೇನೆ.]

ಡಾ|| ಎಚ್.ಆರ್. ರಘುನಾಥಭಟ್*

# ಚಂದ್ರಗುತ್ತಿಯಲ್ಲಿ ಪರ್ಶಿಯನ್ ಶಾಸನ ಶೋಧನೆ

ಶಿವಮೊಗ್ಗ ಜಿಲ್ಲೆಯ ಸೊರಬ ತಾಲ್ಲೂಕಿನ ಚಂದ್ರಗುತ್ತಿಯ ವಾಸ್ತುಶಿಲ್ಪ ಕೃತಿಗಳು ಪ್ರಾಕ್ತನ ಪಂಡಿತರ ಗಮನ ಸೆಳೆದದ್ದು ಒಂದು ಶತಮಾನದ ಹಿಂದೆ.[1] ಅಲ್ಲಿಯ ರೇಣುಕಾಂಬೆಯ ಮಹಾತ್ಮೆ ಶತಶತಮಾನಗಳಿಂದ ಜನಜನಿತ. ಬರಬರುತ್ತ ಅತಿರೇಕಕ್ಕೆಳೆದು ಅಲ್ಲಿಯ ಹಲವು ಸೇವೆಗಳಲ್ಲಿ 'ಬತ್ತಲೆ ಸೇವೆ' ಇಡೀ ಜಗತ್ತಿನ ಲಕ್ಷ್ಯ ಸೆಳೆಯುವಷ್ಟಾಗಿ, ಚಂದ್ರಗುತ್ತಿಯ ಪರ್ಯಾಯನಾಮ ಈ ಬತ್ತಲೆಸೇವೆ ಆಗಿ ಹೋಗಿದ್ದುದು ದುರ್ದೈವದ ಸಂಗತಿ.[2] ಈ ಗೊಂದಲದ ನಡುವೆ ಅಲ್ಲಿಯ ವಾಸ್ತುಶಿಲ್ಪ ವೈಭವ ಕಣ್ಣಿಗೆ ಕಾಣದಂತಾಯಿತು. ಕಾಡು ಮುಚ್ಚಿದ್ದು ಇನ್ನೊಂದು ಕಾರಣವಿರಬಹುದು. ಅದನ್ನು ಬಗೆದು ಒಳಹೊಕ್ಕರೆ ಗಿರಿದುರ್ಗದೊಳಗಣ ಕೋಟೆ ಕೊತ್ತಳ, ಗುಡಿ, ಮಸೀದಿ, ಮದ್ದಿನ ಮಣತ, ಹನುಮಾನ್ ಚೌಕ, ಮುಸುಕಿನ ಬಾವಿ ತೆರೆದು ನಮ್ಮನ್ನು ಬೆರಗುಗೊಳಿಸುತ್ತದೆ! ಇವುಗಳನ್ನೆಲ್ಲ ಯಾರು ನಿರ್ಮಿಸಿದರು ಅಥವ ಪುನರ್ ನಿರ್ಮಾಣ ಮಾಡಿದರು-ಎಂಬ ಪ್ರಶ್ನೆ ಸಹಜವಾಗಿಯೇ ಏಳುತ್ತದೆ. ಈ ಹಿನ್ನೆಲೆಯಲ್ಲಿ ಈಚೆಗೆ ನನ್ನ ಕ್ಷೇತ್ರ ಕಾರ್ಯದಲ್ಲಿ ಪತ್ತೆಯಾದ ಪರ್ಶಿಯನ್ ಶಾಸನ ಶೋಧನೆ ಕುರಿತು ಒಂದು ಟಿಪ್ಪಣಿಯನ್ನು ಮೊದಲ ಬಾರಿಗೆ ಇಲ್ಲಿ ಪ್ರಕಟಿಸಲಾಗುತ್ತಿದೆ.[3]

ಪ್ರಸ್ತುತ ಶಿಲಾಶಾಸನ ಚಂದ್ರಗುತ್ತಿದುರ್ಗದ ಗೋಡೆಯ ಬುರುಜಿನ ಮೇಲೆ, ಸು. ೧೪ ಮಿ. ಎತ್ತರದಲ್ಲಿ ದುರ್ಗಮವಾದ ಜಾಗದಲ್ಲಿದೆ; ಕಡಿದಾದ ಕೋಟೆಯ ಬುರುಜಿನ ಗೋಡೆಯಲ್ಲಿ ಅಡಗಿದ್ದ ಶಾಸನ ಫಲಕದ ಮೇಲೆ ಗಿಡಬಳ್ಳಿ-ಪಾಚಿ ಹಬ್ಬಿದ್ದು ದೂರದಿಂದ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಇದನ್ನು ಕಂಡು ಹಿಡಿದದ್ದು ಕೇವಲ ಆಕಸ್ಮಾತ್ತಾಗಿ. ನನ್ನ ಜೊತೆಗೆ ಕರೆದುಕೊಂಡು ಹೋಗಿದ್ದ ಕಲ್ಲಪ್ಪನ ಸಹಾಯವನ್ನಿಲ್ಲಿ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತೇನೆ.[4]

ಇದೊಂದು ಪರ್ಶಿಯನ್ ಶಾಸನ, ಅರೆಬಿಕ್ ಲಿಪಿಯ ನಸ್ಕ್ ಶೈಲಿಯಲ್ಲಿ ಕಂಡರಿಸಲಾಗಿದೆ. ಈ ಶಾಸನ ಪಾಠವನ್ನು ಹೀಗೆ ಓದಲಾಗಿದೆ.

---

* ರೀಡರ್, ಪ್ರಾಚೀನ ಇತಿಹಾಸ ಹಾಗೂ ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೫೮೦ ೦೦೩.

1 ನೋಡಿ, ಫ್ರಾನ್ಸಿಸ್ ಬುಕನನ್, ಎಜರ್ನಿ....ಸಂ iii, ಲಂಡನ್, ೧೮೦೭; ಬಿ.ಎಲ್. ರೈಸ್, ಮೈಸೂರು....ಸಂ ii, ಲಂಡನ್, ೧೮೯೭; ಸಿ. ಹಯವದನರಾವ್, ಮೈಸೂರು ಗೆಝೆಟಿಯರ್, ಸಂ. v, ಬೆಂಗಳೂರು.

2 ಈ ಪ್ರಚಾರ ಎಷ್ಟು ತೀವ್ರಗತಿಗೆ ಹೋಯಿತೆಂದರೆ ಅಲ್ಲಿ ಜರುಗುತ್ತಿದ್ದ ವಾರ್ಷಿಕ ರಥೋತ್ಸವವನ್ನು ಈಗ ಕೆಲವು ವರ್ಷಗಳಿಂದ ನಿಲ್ಲಿಸಲಾಗಿದೆ.

3 ಈ ಶಾಸನ ವ್ಯಾಸಂಗದಲ್ಲಿ ನೆರವಾದ, ಅಲಿಗಡ ಮುಸ್ಲಿಂ ವಿಶ್ವವಿದ್ಯಾಲಯದ ಪ್ರೊ|| ಜಲಾಲಿಯವರಿಗೆ ಹಾಗೂ ಕರ್ನಾಟಕ ಕಾಲೇಜಿನ ಸೂಫಿಯಾ ಶೇಕ್ ಅವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

4 ಈಗ ಕೆಲ ತಿಂಗಳುಗಳಿಂದ ಈ ಶಾಸನ ಶೋಧನೆಗಾಗಿ ಹಲವು ಬಾರಿ ಚಂದ್ರಗುತ್ತಿಗೆ ಕ್ಷೇತ್ರಕಾರ್ಯ ಹೋಗಿದ್ದು ಈ ಸಲ ಪತ್ತೆಯಾಯಿತು.

೧. ಬಿನಾ ಶುದ್ ಇನಾಯ-ತಿ-ಇಲಾಹಿ
೨. ಬುರ್ಜ್ ಇಬ್ರಾಹಿಂ ಆದಿಲ್‌ಶಾಹಿ
೩. ಸರಹ್ ಸಲಸ್ ಅರಬೇನ್ ಅಲಫ್

ಇದರ ಅರ್ಥವಿವರಣೆಯನ್ನು ಈ ರೀತಿಯಾಗಿ ನೀಡಬಹುದು. ಬುರುಜುಗಳ ಸಹಿತವಾದ ಈ ಕೋಟೆಯನ್ನು ಇಬ್ರಾಹಿಂ ಆದಿಲ್‌ಶಾಹಿಗಳು ಹಿಜರಿ ೧೦೪೩ರಲ್ಲಿ (೧೬೩೪) ದೇವರದಯದಿಂದ ಕಟ್ಟಿಸಿದರು.

ಇದೊಂದು ಪ್ರತಿಷ್ಠಾನ-ಶಾಸನ (Foundation inscription) ಇದು ಸಂಕ್ಷಿಪ್ತವಾಗಿದ್ದರೂ ತೇದಿಯ ವಿವರ ಮತ್ತು ರಾಜನ ಹೆಸರಿರುವುದರಿಂದ ಐತಿಹಾಸಿಕವಾಗಿ ಮಹತ್ವವುಳ್ಳದ್ದಾಗುತ್ತದೆ.

ಚಂದ್ರಗುತ್ತಿಯಲ್ಲಿ ಆದಿಲ್‌ಶಾಹಿಗಳ ಆಳ್ವಿಕೆಯ ಕಾಲದಲ್ಲಿ, ವಾಸ್ತುಶಿಲ್ಪ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಸಮಕಾಲೀನ ಇತಿಹಾಸಕಾರನಾದ ಫೆರಿಸ್ತಾ ಹೇಳಿದ ಮಾತಿಗೆ[5] ಆ ಕೋಟೆ ಗೋಡೆಗೆ ಅಂಟಿಕೊಂಡಿರುವ, ಇದೀಗ ಪತ್ತೆಯಾಗಿರುವ ಶಿಲಾಶಾಸನದಿಂದ ಹೆಚ್ಚಿನ ಖಚಿತತೆ ಬಂತು. ಅಷ್ಟೇ ಅಲ್ಲ ಆದಿಲ್ ಶಾಹಿಗಳ 'ಶಿಯಾ' ಧರ್ಮದಡಿ ಹಿಂದುತ್ವದ ಕೆಲ ಲಕ್ಷಣಗಳನ್ನು ಸಮನ್ವಯ ಭಾವದಿಂದ ಅಳವಡಿಸಿಕೊಂಡಿರುವುದೂ ಶಾಸನೀಯವಾಗಿ ಸೂಚಿಸಿದಂತಾಯಿತು.

ಶಿವಮೊಗ್ಗ ಜಿಲ್ಲೆಯಲ್ಲಿ ಈವರೆಗೆ ಐದಾರು ಪರ್ಶಿಯನ್ ಶಾಸನಗಳು ಪತ್ತೆಯಾಗಿವೆ.[6] ಈ ಪಟ್ಟಿಗೆ ಚಂದ್ರಗುತ್ತಿಶಾಸನವೂ ಸೇರುವಂತಾಗಿದೆ. ಈ ಶಾಸನವನ್ನೊಳಗೊಂಡಂತೆ ಪರ್ಶಿಯನ್ ಶಾಸನಗಳ ಪ್ರತ್ಯೇಕ ಅಧ್ಯಯನ ಮಾಡುವ ಅಗತ್ಯವೂ ಇನ್ನು ಹೆಚ್ಚಾಗಿ ಕಂಡು ಬರುತ್ತಿದೆಯೆಂಬುದನ್ನೂ ಈ ಶಾಸನ ಶೋಧನೆ ಬೆರಳಿಟ್ಟು ತೋರಿಸುತ್ತದೆ. ಆ ದಿಕ್ಕಿನತ್ತ ನಾವು ಸಾಗಬೇಕಾಗಿದೆ.

ಏಳು ಸುತ್ತಿನ ಕೋಟೆಯ ಅರನೆಯ ಗೋಡೆಯ ಮೇಲಿರುವ ಈ ಶಾಸನ ಪಡಿಯಚ್ಚನ್ನು ಅಗಲೇ ಪತ್ತೆಯಾದ (೧೯೯೨ರಲ್ಲಿ) ಮತ್ತೊಂದು ಪರ್ಶಿಯನ್ ಶಾಸನದೊಟ್ಟಿಗೆ ಹೋಲಿಸಿ ನೋಡಿದಾಗ ಲಿಪಿಶೈಲಿ ಹಾಗೂ ಲಿಪಿಸೌಂದರ್ಯ ಬೇರೆ ತೆರನಾದ್ದು ಕಂಡು ಬರುತ್ತದೆ. ಬಿಜಾಪುರದ ಆದಿಲ್‌ಶಾಹಿಗಳ ಕಾಲದ ಸುಂದರ ಲಿಪಿಯನ್ನು 'ನಸ್ತಲಿಕ್' ಎಂದು ಬಣ್ಣಿಸಲಾಗಿದೆ. ಚಂದ್ರಗುತ್ತಿಯಲ್ಲಿ ಈ ಹಿಂದೆ ಶೋಧ ಮಾಡಿದ ಪರ್ಶಿಯನ್ ಶಾಸನ ವೃತ್ತಾಕಾರದ ಫ್ರೇಮಿನೊಳಗಿದ್ದು ನಾಲ್ಕು ಸಾಲುಗಳಲ್ಲಿ ಅಕ್ಷರಗಳನ್ನು ಬಳಪದ ಕಲ್ಲು ಹಲಗೆಯ ಮೇಲೆ ತುಸು ಆಳವಾಗಿ ಆದರೆ ಕಲಾತ್ಮಕವಾಗಿ, ಸೂಕ್ಷ್ಮವಾಗಿ ಕಂಡರಿಸಲಾಗಿದೆ. ಈಗ ಕಂಡು ಹಿಡಿದ ಶಿಲಾ ಶಾಸನ ಆಯತಾಕಾರದ ಫ್ರೇಮಿನೊಳಗೆ ಮೂರು ಸಾಲುಗಳಲ್ಲಿ ಅಕ್ಷರಗಳನ್ನಷ್ಟೆ ಬಿಟ್ಟು ಉಳಿದ ಭಾಗವನ್ನು ಕೊರೆದು ತೆಗೆಯಲಾಗಿದೆ. ಈ ಒಂದು ಲಿಪಿಕಂಡರಣೆಯ ವ್ಯತ್ಯಾಸ ವಿಶೇಷದಿಂದಾಗಿ ಅಕ್ಷರಗಳು ಇಲ್ಲಿ ಉಬ್ಬಿವೆ (embossed), ತಾಂತ್ರಿಕವಾಗಿ ಪರ್ಶಿಯನ್ ಶಾಸನಗಳ ಲೇಖನ ಮಾದರಿಯ ಇನ್ನೊಂದು ಬಗೆಯನ್ನಿಲ್ಲಿ ನೋಡಬಹುದು. ಲಿಪಿಸೌಂದರ್ಯ ಅಷ್ಟೊಂದು ನವಿರಾಗಿಲ್ಲ. ಆದಿಲ್ ಶಾಹಿಗಳ ಕ್ಯಾಲಿಗ್ರಫಿಯ ಈ ಎರಡೂ ಮಾದರಿಗಳು (ಒಳಕಂಡರಣೆ ಹಾಗೂ ಹೊರ ಉಬ್ಬು ಲಿಪಿಶೈಲಿ) ಮಲೆನಾಡಿನಲ್ಲಿ ಮೂಡಿ ಬಂದ ಬಗೆಯನ್ನು ಇವು ಸೂಚಿಸುತ್ತವೆ.

ಲಿಪಿಕಂಡರಣೆಯ ಎರಡು ವಿಭಿನ್ನ ತಂತ್ರಗಳಲ್ಲಿ ಸೌಂದರ್ಯ ಪ್ರಜ್ಞೆ ಎದ್ದು ಕಾಣುವುದೊಂದು ವಿಶೇಷವಾದರೆ, ಅದಕ್ಕಿಂತ ವಿಶೇಷ ಹಾಗೂ ಸ್ವಾರಸ್ಯಕರ ಸಂಗತಿಯೆಂದರೆ ಸಮಕಾಲೀನ ಹಿಂದೂ ಶಾಸನ ಪರಂಪರೆಯನ್ನು ಅಥವ ಕೆಲಲಕ್ಷಣಗಳನ್ನು ಮುಸ್ಲಿಂ ಶಾಸನಗಳಲ್ಲಿಅಳವಡಿಸಿರುವುದು. ಆಚಂದ್ರಾರ್ಕತಾರಂಬರ ತತ್ವದ (ಶಾಶ್ವತ ತತ್ವ) ಚಂದ್ರ-ಸೂರ್ಯರ ಚಿತ್ರಣ-ಸಾಕ್ಷಿ ಸಂಕೇತವೂ ಹೌದು. ಇದು ನಮ್ಮ ಪರಂಪರೆಯ ಬಹುತೇಕ ಶಾಸನಗಳ ಶಿರೋಭಾಗದಲ್ಲಿ ಕಂಡು ಬರುವವು, ಇದನ್ನು ಆದಿಲ್‌ಶಾಹಿಗಳು ತಮ್ಮ ಅರೆಬಿಕ್-ಪರ್ಶಿಯನ್ ಶಾಸನಗಳಲ್ಲಿ, ಲಿಖಿತ ಭಾಗದ ಆಚೀಚೆ ಸ್ಪಷ್ಟವಾಗಿ ಎದ್ದು ಕಾಣುವಂತೆ ಕೆತ್ತಿದ್ದಾರೆ. ಇಂಥಲ್ಲಿ

5 ನೋಡಿ, ಫೆರಿಸ್ತಾ ಎಂ.ಕೆ., ತಾರಿಖ್-ಇ-ಫೆರಿಸ್ತಾ, ಸಂ. ೩, ಮುಂಬಯಿ, ೧೯೩೧-೨.

6 ನೋಡಿ ಎಕ, vii, ಶಿಕಾರಿಪುರ ೩೨೪ (೧೬೩೨) ; ಚನ್ನಗಿರಿ ೪೩ (೧೬೫೩), ೪೪ (೧೬೫೩.)

ಆದಿಲ್‌ಶಾಹಿಗಳ ಹಿಂದೂಧರ್ಮದ ಸಮನ್ವಯತತ್ವ ಅಡಗಿದೆಯೆಂದು ಹೇಳಬಹುದು.[7] ಇದನ್ನು ಇನ್ನಷ್ಟು ಪುಷ್ಟೀಕರಿಸುವಂತೆ ಚಂದ್ರಗುತ್ತಿ ಕೋಟೆ ಗೋಡೆಯ ಮೇಲೆ ಹನುಮಾನ್ ಶಿಲ್ಪಫಲಕಗಳನ್ನು ಜೋಡಿಸಲಾಗಿದೆ. ಈ ಕೋಟೆ ಭಾಗವನ್ನು "ಹನುಮಾನ್ ಚೌಕ" ಎಂದೇ ಕರೆಯುತ್ತಾರೆ. ಇನ್ನೊಂದೆಡೆ ಗರುಡನ ಶಿಲ್ಪ ಫಲಕವಿದ್ದುದನ್ನು ಗಮನಿಸುವಂತಿದೆ. ಇದನ್ನೆಲ್ಲ ನೋಡಿದಾಗ ಈ ಕೋಟೆಯನ್ನು ಕಟ್ಟಿಸಿದವರು ಸ್ಥಳೀಯ ಹಿಂದೂ ಪಾಳೆಯಗಾರರೋ ಅಥವ ಆದಿಲ್ ಶಾಹಿಗಳೋ ಎಂಬ ಸಂದೇಹ ಬರುವುದು ಸಹಜ. ಈ ಸಂದೇಹ ನಿವಾರಣೆ ಪ್ರಸ್ತುತ ಶಾಸನ ಶೋಧನೆಯಿಂದ ಖಚಿತವಾಗಿ ಆಗುತ್ತದೆ. ಅಂತೆಯೇ ಇದಕ್ಕೆ ಐತಿಹಾಸಿಕ ವಿಶೇಷ ಮಹತ್ವ ಬರುತ್ತದೆ.

7 ಕರ್ನಾಟಕದಲ್ಲಿ ಆಳಿದ ಆದಿಲ್‌ಶಾಹಿಗಳ ಕಾಲ ಸಮಾಜೋ-ಧಾರ್ಮಿಕವಾಗಿ ಬಹು ಸ್ವಾರಸ್ಯಕರವಾಗಿದ್ದು ಸಮಕಾಲೀನ ಸಾಹಿತ್ಯ-ಕಲೆ-ಸೂಫಿಗಳ ಅನುಭಾವ ಸಾಹಿತ್ಯಗಳಲ್ಲಿ ಈ ಉದಾರನೀತಿ ಚೆನ್ನಾಗಿ ಪಡಿಮೂಡಿದೆ.

ಮುತ್ತುರಾಜು*

# ಮುತ್ತತ್ತಿಯ ತಾಮ್ರಶಾಸನ

ಮುತ್ತತ್ತಿ ಗ್ರಾಮವು ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಹಲಗೂರು ಹೋಬಳಿಯ ಒಂದು ಹಳ್ಳಿ. ಇಲ್ಲಿ ಮುತ್ತತ್ತಿರಾಯ ಎಂದು ಕರೆಸಿಕೊಳ್ಳುವ ಆಂಜನೇಯ ದೇವಾಲಯವಿದೆ. ಸುಮಾರು ನಾಲ್ಕು ಶತಮಾನಗಳಿಂದಲೂ ಗುಡಿಸಲು ಮತ್ತು ತಗಡಿನ ಶೀಟ್‌ಗಳನ್ನುಳ್ಳ ದೇವಾಲಯವಾಗಿದ್ದು ಈಚೆಗೆ ನವೀಕರಣಗೊಂಡು ಸುಂದರ ದೇವಾಲಯವಾಗಿದೆ.

ಪ್ರಸ್ತುತ ದೊರೆತಿರುವ ಒಂದು ತಾಮ್ರಶಾಸನವು ಒಂದು ಹಲಗೆಯನ್ನು ಉಳ್ಳದ್ದಾಗಿದೆ. ಹಲಗೆಯ ಎರಡೂ ಕಡೆಗಳಲ್ಲೂ ಬರಹವಿದ್ದು ಒಂದು ಕಡೆ ೩೬ ಸಾಲುಗಳು, ಎರಡನೆಯ ಕಡೆ ೧೭ ಸಾಲುಗಳು ಹೀಗೆ ಒಟ್ಟು ೫೩ ಸಾಲುಗಳಿವೆ. ಈ ತಾಮ್ರಶಾಸನದ ಉದ್ದ ೮.೫ ಅಂಗುಲ, ಅಗಲ ೫.೧ ಅಂಗುಲ ಇದ್ದು ಹಗುರವಾದ ತಾಮ್ರದ ಹಲಗೆಯ ಮೇಲ್ಭಾಗದಲ್ಲಿ ಒಂದು ರಂಧ್ರವನ್ನು ಮಾಡಿದ್ದಾರೆ. ಇದರ ಒಟ್ಟು ತೂಕ ೧೭೫ ಗ್ರಾಂಗಳು.

ಈ ಶಾಸನವು ಮುತ್ತತ್ತಿಯ ದೇವಸ್ಥಾನದ ವಶದಲ್ಲಾಗಲಿ, ಅಥವಾ ಅಲ್ಲಿ ಪೂಜೆ ಮಾಡುವ ತಮ್ಮಡಿಗಳ ವಶದಲ್ಲಾಗಲಿ ಇರದೆ ಕನಕಪುರ ತಾಲ್ಲೂಕಿನ ನಾಯಕನಹಳ್ಳಿಯ ಸಂಜೀವಯ್ಯ ಎಂಬುವರ ವಶದಲ್ಲಿದೆ. ಅವರು ತಮ್ಮ ಪೂರ್ವಿಕರಿಂದ ತಮಗೆ ಇದು ಬಂದಿದ್ದೆಂದು ಹೇಳುತ್ತಾರೆ. ಪ್ರತೀವರ್ಷ ಗೋಕುಲಾಷ್ಟಮಿಯಂದು ನಡೆಯುವ ಜಾತ್ರೆಯಲ್ಲಿ ಈ ಜನಾಂಗದವರದೇ ಪ್ರಧಾನ ಪಾತ್ರವಾಗಿರುತ್ತದೆ.

**ಶಾಸನದ ವಿಷಯ :**

ಈ ಶಾಸನದಲ್ಲಿ ಕಾಲದ ಉಲ್ಲೇಖವಿಲ್ಲ. ಶ್ರೀರಂಗರಾಯರು ಶಿವನಸಮುದ್ರವನ್ನು ಆಳುವ ಸಮಯದಲ್ಲಿ ಎಂದು ಹೇಳಿರುವುದರಿಂದ ಇವನನ್ನು ವಿಜಯನಗರದ ಕೊನೆಯ ಅರಸು ಮೂರನೆಯ ಶ್ರೀರಂಗರಾಯ (ಕ್ರಿ. ಶ. ಸುಮಾರು ೧೬೬೦) ಎಂದು ಲೆಕ್ಕಹಾಕಬಹುದಾಗಿದೆ. ೧೮ನೇ ಶತಮಾನದ ಕೊನೆಯ ೧೯ನೇ ಶತಮಾನದ ಪ್ರಾರಂಭದ ಶಾಸನದ ಲಿಪಿ ಸ್ವರೂಪವು ಇದಕ್ಕೆ ಪೂರಕವಾಗಿದ್ದು ಮುತ್ತತ್ತಿ ದೇವಾಲಯದ ಸ್ವಾಮ್ಯವನ್ನು ತಮ್ಮದೆಂದು ಹೇಳಿಕೊಳ್ಳಲು ಸೃಷ್ಟಿಸಿಕೊಂಡಂತಹ ಶಾಸನವಾಗಿದೆ.

ಈ ಶಾಸನದ ಎರಡನೆಯ ಸಾಲಿನಲ್ಲಿ ಶ್ರೀರಂಗರಾಯನಿಗೂ ದ್ವಾಪರಯುಗಕ್ಕೂ ಸಂಬಂಧ ಕಲ್ಪಿಸಿ ಗೊಂದಲಕ್ಕೀಡು ಮಾಡಿದ್ದಾರೆ. ಆದರೂ ಮುಂದಿನ ಸಾಲುಗಳನ್ನು ಸುಲಭವಾಗಿ ಅರ್ಥೈಸಬಹುದು. ಶ್ರೀರಂಗರಾಯರ ಅರಮನೆಯಲ್ಲಿ ಸ್ವಾಮಿಯು ವ್ಯಾಘ್ರರೂಪದಲ್ಲಿ ಮಲಗಿದ್ದು ನಂತರ ಮೈದುಂಬಿ ಬಂದು ತನ್ನ ನಿಜನಾಮಧೇಯ ಮುತ್ತತ್ತಿರಾಯ ಎಂದು ಹೇಳಿಕೊಂಡು

* ನಂ. ೧, ೧೨ನೆಯ ಕ್ರಾಸ್, ಸಂಪಂಗಿರಾಮನಗರ, ಬೆಂಗಳೂರು-೫೬೦ ೦೨೭

ತನಗೆ ಮುಳುಪಲ್ಲಕ್ಕಿ ಆಗಬೇಕು ಎಂದು ಕೇಳಲು ಆಗ ಶ್ರೀರಂಗರಾಯನು ತಾನು ಏರಿಬರುತ್ತಿದ್ದಂತಹ ಪಲ್ಲಕ್ಕಿಯನ್ನು ಕೊಟ್ಟು, ಜೊತೆಗೆ ಮುಳುಪಲ್ಲಕ್ಕಿಯನ್ನು ಮಾಡಿಸಿಕೊಟ್ಟು, ಸ್ವಾಮಿಯನ್ನು ಮುತ್ತತ್ತಿಗೆ ಕಳುಹಿಸಿ ಕೊಟ್ಟನು. ನಂತರ ಹಲಗೂರು ನಾರಾಯಣಯ್ಯಗೆ ಹೇಳಿ ಸ್ವಾಮಿಯ ದೀಪಾರಾಧನೆಗೆ ಬ್ಯಾಡರಹಳ್ಳಿಯ ಬಳಿ ಹೊಲವನ್ನು ಕೊಡುಗೆ ಹಾಕಿಸಿದನು.

ಆ ಸಮಯದಲ್ಲಿ ಕಾಳಮುತ್ತದಾಸ ಎಂಬುವವನು ಕಕ್ಕೆಯ ಸೊಪ್ಪಿನಿಂದ ಗುಡಿಸಲನ್ನು ಕಟ್ಟಿಕೊಂಡು ಸ್ವಾಮಿಯನ್ನು ಕಾದುಕೊಂಡು ಇದ್ದನು. (೧೯೮೬ನೇ ಇಸವಿಯ ತನಕ ಒಂದೂವರೆ ಅಡಿ ಎತ್ತರದ ಕಕ್ಕೆಮರದ ಮೂರ್ತಿಯನ್ನು ಪೂಜಿಸುತ್ತಿದ್ದರು. ನಂತರ ಶಿವಾರ ಪಟ್ಟಣದಿಂದ ಕಲ್ಲಿನ ಮೂರ್ತಿಯನ್ನು ಮಾಡಿಸಿ ಪ್ರತಿಷ್ಠಾಪಿಸಲಾಯಿತು.) ಹೀಗೆ ಕಾಳಮುತ್ತದಾಸನು ದೇವರನ್ನು ಕಾಯುತ್ತಿರುವಾಗ ಮಾಯಗಗೌಡ, ಸಿಗೆ ಗೌಡರ ಹಸುವು ಸ್ವಾಮಿ ಇದ್ದಂತಹ ಹುತ್ತಕ್ಕೆ ಹಾಲು ಯೆರೆಯುತ್ತಾ ಇತ್ತು. ಆಗ ಹಲಗೂರಿನ ಕಾಳೇಗೌಡ, ಕೆಂಚೇಗೌಡ ಎಂಬ ಅಣ್ಣತಮ್ಮಂದಿರು ದನ ಕಾಯುತ್ತಿರುವಾಗ ಹುಚ್ಚುಗಿಕ್ಕಿ ಹಿಡಿ ತಂದು ಈ ಕಾಳಮುತ್ತ ದಾಸನ ಕೈಗೆ ಕೊಟ್ಟರು. ಆಗ ಸ್ವಾಮಿಯಃ ಸಕಲಾಚಾರರೆಲ್ಲರು ಮುತ್ತತ್ತಿಯಲ್ಲಿ ಸೇರಿ ಈ ಕೆಂಚೇಗೌಡ ಕಾಳೇಗೌಡ ಎಂಬ ಹೆಸರನ್ನು ತೆಗೆದು ಅವರಿಗೆ ಕಾಳ–ಮುತ್ತ, ಕೆಂಚಮುತ್ತ ಎಂಬ ಹೆಸರನ್ನು ಇಟ್ಟು ಅವರನ್ನು ಕಾಳಮುತ್ತದಾಸನ ಹವಾಲು ಮಾಡಿ ದೇವರ ಪೂಜೆಗೆ ಎಡೆಮಾಡಿ ಇಟ್ಟುಕೊಂಡು ಇರಿ ಎಂದು ನಾಲ್ಕು ಮಂದಿಯು ಸಹಿ ಹಾಕಿಸಿ ಚಪ್ಪೊಡನ್ನು ಬರೆಯಿಸಿ ಕಾಳಮುತ್ತದಾಸನ ಕೈಗೆ ಕೊಟ್ಟರು.

### ಶಾಸನ ಪಾಠ

೧ ಶ್ರಿ ಮತು ಶ್ರಿ ರಾಮಾನುಜ್ಯಯ ನಮ
೨ ಹ ದೊಪರಾ ಯುಗದಲ್ಲಿ ಸಂಜಿವ ರಾ
೩ ಯ್ಯನು ಬಂದು ಹುತ್ತದಲ್ಲಿ ನಿತ್ತರೂ ಆ ಸ
೪ ಮೆಯ್ಯದಂಲ್ಲಿ ಶ್ರೀರಂಗರಾಯ್ಯರು ಸಿವನ
೫ ಸಮುದ್ರ ಆಳುವಲ್ಲಿ | ಅರಮನೆಯ್ಯಲ್ಲಿ | ಬಲ
೬ ನ ತೊಟ್ಟಲ ತೊಲೆಯ್ಯ ಮೆಲೆ ವೆಗ್ರ ಮಲಗಿರ
೭ ಲು ಆ ಸಮಯ್ಯದಲ್ಲಿ | ಸ್ರಿ ರಂಗರಾಯರೂ
೮ ಅಂಲ್ಲಿ | ಯ್ಯಡ ಬಲದಲ್ಲಿ | ಯಿಥ ಸಾ
೯ ಮಾಜಿಕರು ಬಂದು ನೊಡಿದಲ್ಲಿ | ಶ್ವಮಿ ವ್ಯೆ
೧೦ ದುಂಬಿ ಬಂದು | ನಾನು ಮುತ್ತತ್ತಿರಾಯ್ಯ
೧೧ ಯ್ಯಂದು | ತಮ ನಾಮದಯ್ಯವಂನು ಹೆಳಿ
೧೨ ಕೊಂಡರೂ | ಆ ಸಮೆಯ್ಯದಲ್ಲಿ ಸ್ರಿರಂಗರಾ
೧೩ ಯ್ಯರು ಶ್ವಮಿ ನಿಉ ಬಂದ ಬಗೆಯೆನೆಂದು ಬಿ
೧೪ ಂನೈಸಿದಲ್ಲಿ ಶ್ವಮಿ ನಮಗೆ ಮುಳುಪಂಲ
೧೫ ಕಿ ಆಗಬೆಕೂಯಂದು ಕೆಳಿದಲ್ಲಿ ಆ ಕ್ಷಣ

೧೬ ದಲ್ಲಿ ಶ್ರಿ ರಂಗರಾಯ್ಯರು ತಾಉಯೆ
೧೭ ರಿ ಬರುವ ಪಂಲ್ಲಕ್ಕಿನೆ ಕೊಟು| ಮುಳು
೧೮ ಪಲ್ಲಕ್ಕಿಯ್ಯನು ಮಾಡಿಸಿ ಕೊಟು | ಶ್ವಮಿಯು
೧೯ ವರ ಮುಂತತಿಗೆ ಕಳುಹಿದರೂ |
೨೦ ಆ ಸಮೆಯಾದಲ್ಲಿ ಹಲಗೂರು ನಾರಣೈಯ್ಯಗೆ
೨೧ ಹೆಳಿಸಿ ಶ್ವಮಿಯ್ಯವರ ದಿಪರಾದನೆಗೆ ಬೈ
೨೨ ಡರ ಹಳ್ಳಿಯ್ಯಲಿ ಹೊಲ ಕೊಡುಗೆ ಹಾಕಿ
೨೩ ದು ಶ್ವಮಿಯ್ಯವರು ಹುತ್ತದಂಲ್ಲಿಯಿರು
೨೪ ವಾಗ್ಗೆ ಮಾಯ್ಯಗಗೌಡ ಸಿಗೆಗೌಡನ ಹ
೨೫ ಸು ಹುತ್ತಕ್ಕೆ ಹಲುಯರೆ
೨೬ ಯುತಯಿತು ಆಗ್ಗೆ ಕಾಳಮುತ್ತ

### ಅದೇ ಹಲಗೆಯ ಹಿಂಭಾಗ

೨೭ ದಾಸನು ಕಂಕೆಸೊಪ್ಪು | ಗುಡುಲು
೨೮ ಕಟಕೊಂಡು ಶ್ವಮಿಯ್ಯ | ಕಾದುಕೊಂ
೨೯ ಡು | ಯಿದ್ದನು ಹಲಗೂರ ಕಾ
೩೦ ಳಿಗೌಡ | ಕೆಂಚೆಗೌಡ ಅಂಣ ತಂಮದಿ
೩೧ ರೂ ದನಕಾಯುವಂಲ್ಲಿ ಹುಚುಗ್ಗಿಕ್ಕಿ ಹಿ
೩೨ ಡಿ ತಂದು | ಕಾಳಮುಂತದಾಸನ ಕೈವಸ
೩೩ ಕ್ಕೆ ಕೊಟರು ಆಗ ಶ್ವಮಿ ಸಕಲಾಚಾ
೩೪ ರೂ ಮುತಾತ್ತಿಯಲ್ಲಿ ಕೂಡಿ ಕೆಂ
೩೫ ಚ್ಚೆಗೌಡ ಕಾಳೆಗೌಡಯುಂಬ ಹೆಸರ ಬಿ
೩೬ ಟು ಕಾಳಮುಂತ್ತ ಕೆಂಚ್ಚ ಮುತ್ತಯುಂ
೩೭ ಬ ಹೆಸರಿಟ್ಟು ಯಿ ಕಾಳಮುತ್ತದಾಸ
೩೮ ನೆ ಹವಲು ಮಾಡಿ ಯಿ ದೆವ ಪುಜೆ ಮು
೩೯ ರು ಮುರುಯೆಡೆಯಾಗಿ ಯಿದುಕೊಂಡು
೪೦ ಯಿರಿಯಂದು ನಾಕ್ಲು ಮಂದಿ
೪೧ ಯಶಂ ಹಾಕಿ ಸನಪತಿಗಳು ಕೂಡಿ
೪೨ ಯಿ ಚಂಪೊಡು ಬರಸಿ ಕಾಳಮುಂತ ದಾ
೪೩ ಸನ ಕೈಗೆ ಕೊಂಟರೂ

ಈ ಮುತ್ತತ್ತಿರಾಯನಿಗೆ ಸಂಬಂಧಿಸಿದ ಜಾನಪದ ಹಾಡುಗಳಲ್ಲೊಂದರಲ್ಲಿ 'ರಂಗರಾಜರ ನಡುವೆ' ಎಂಬ ಸಾಲು ಬರುತ್ತದೆ. ಇದು ಶ್ರೀ ರಂಗರಾಯನಿಗೂ ಈ ಕ್ಷೇತ್ರಕ್ಕೂ ನಡೆದಿರಬಹುದಾದಂತಹ ಘಟನೆಯನ್ನು ಪುಷ್ಟೀಕರಿಸುತ್ತದೆ.

ಇದೇ ಸ್ಥಳದಲ್ಲಿ ಐದು ಸಾಲಿನ ಗ್ರಂಥಾಕ್ಷರವುಳ್ಳ, ವೀರಗಲ್ಲು ದೊರೆತಿದ್ದು ಮೊಸಳೆಯ ಜೊತೆಗೆ ಹೋರಾಟದ ಚಿತ್ರಣವಿದೆ. ಇದು ಹೊಯ್ಸಳರ ಕಾಲಕ್ಕೆ ಸೇರಿದ್ದಾಗಿದ್ದು ಮುತ್ತತ್ತಿಯು ೧೨ನೇ ಶತಮಾನಕ್ಕಿಂತ ಮುಂಚಿನಿಂದಲೂ ಪ್ರಸಿದ್ಧವಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಶಾಸನವಲ್ಲದೆ ವಿಜಯನಗರ ಕಾಲಕ್ಕೆ ಸೇರಿರಬಹುದಾದಂತಹ ಎರಡು ವೀರಗಲ್ಲುಗಳು ದೊರೆತಿವೆ.*

* ಈ ಲೇಖನವನ್ನು ಸಿದ್ಧಪಡಿಸಲು ಸಹಕಾರ ನೀಡಿದ ಪೂಜ್ಯ ಗುರುಗಳಾದ ಡಾ|| ದೇವರಕೊಂಡಾರೆಡ್ಡಿ ಅವರಿಗೆ ಕೃತಜ್ಞನಾಗಿದ್ದೇನೆ.

ಡಾ|| ಹೆಚ್. ಎಸ್. ಉಷಾರಾಣಿ

# ವೀರ ಸೋಮೇಶ್ವರನ ಕುಂಜೇಶ್ವರ ದೇವಾಲಯ ಶಾಸನ ಒಂದು ಹೊಸ ದೃಷ್ಟಿ

ಅರಸೀಕೆರೆ ತಾಲೂಕಿನ ಹಿರಿಯೂರು ಗ್ರಾಮದ ಕುಂಜೇಶ್ವರ ದೇವಾಲಯದಲ್ಲಿ ಎರಡು ಪ್ರಕಟಿತ ಶಾಸನಗಳಿವೆ. ಒಂದು ವೀರ ಸೋಮೇಶ್ವರನ ಕಾಲದ್ದು, ಮತ್ತೊಂದು ವೀರ ನರಸಿಂಹನ ಕಾಲಕ್ಕೆ ಸೇರಿದುದಾಗಿದೆ. ವೀರ ಸೋಮೇಶ್ವರನ ಶಾಸನದಲ್ಲಿ (ಎಕ ೫, ಅರಸೀಕೆರೆ ೧೦೮) ಉಲ್ಲೇಖಿಸಲಾಗಿರುವ ಗಣಕುಮಾರಿ ಹಾಗೂ ವಿಭೂತಿಪಟ್ಟ ಎಂಬ ಪದಗಳು ಸ್ತ್ರೀ ಅಧ್ಯಯನ ದೃಷ್ಟಿಯಿಂದ ಗಮನಾರ್ಹ.

ಶ್ರೀ ಮನ್ಮಮಹಾವಡ್ಡವ್ಯವಹಾರಿ ಕಂಡನಂಬಿ ಸೆಟ್ಟಿ ತನ್ನ ಮಗ ಕುಂಜನ ಹೆಸರಿನಲ್ಲಿ ಕಲ್ಲ ಶಿವಾಲಯುವ ಎತ್ತಿಸಿದ. ಈ ಕುಂಜೇಶ್ವರ ದೇವಾಲಯಕ್ಕೆ ಗ್ರಾಮದವರು ದತ್ತಿ ಬಿಟ್ಟರು. ಅದನ್ನು ಗಣಕುಮಾರಿ ಚಂದವ್ವೆಗೆ ವಹಿಸಲಾಯಿತೆಂದು ಶಾಸನದಲ್ಲಿ ಹೇಳಲಾಗಿದೆ.

ಗಣಕುಮಾರಿ ಚಂದವ್ವೆ ಯಾರು ? ಸಾಮಾನ್ಯವಾಗಿ ವೀರಶೈವ ಶರಣೆಯರಿಗೆ ಸಂಬಂಧಿಸಿದಂತೆ ಗಣಕುಮಾರಿ ಎಂಬ ಪದ ಪ್ರಯೋಗಿಸಲ್ಪಟ್ಟಿರುತ್ತದೆ. ಹಾಗಾಗಿ ಚಂದವ್ವೆ ಅಂತಹ ಸಂಪ್ರದಾಯಕ್ಕೆ ಸೇರಿದವಳೆಂದು ಭಾವಿಸುವುದು ಸಹಜ. ಆದರೆ ಈಕೆ ನರ್ತಕ ಶ್ರೇಣಿಗಳ ಸಮುದಾಯಕ್ಕೆ ಸೇರಿದವಳಾಗಿದ್ದು ಶ್ರೀ ಮನ್ಮಮಹಾವಡ್ಡವ್ಯವಹಾರಿ ಕಂಡನಂಬಿಸೆಟ್ಟಿಯ ಮಗಳು ಎಂದಿದೆ. ಕಂಡನಂಬಿ ಸೆಟ್ಟಿಯನ್ನು ಸ್ತ್ರೀ ವಂಶಾವಳಿಯ ಹಿನ್ನಲೆಯಲ್ಲಿ ಗುರುತಿಸಲಾಗಿದೆ. ಶಾಸನದಲ್ಲಿ ಕಂಡನಂಬಿಸೆಟ್ಟಿ ಭಂಡಿ ನಂಬಿಯ ಅಳಿಯ ಹಾಗೂ ಭಂಡಿ ನಂಬಿ ಸೆಟ್ಟಿ ಕುಂಜನಂಬಿ ಸೆಟ್ಟಿಯ ಅಳಿಯ ಎಂದು ವಂಶಾವಳಿಯನ್ನು ಚಿತ್ರಿಸಲಾಗಿದೆ. ಕುಂಜನಂಬಿ ಕೇರಳ ರಾಜ್ಯದ ಮೂಲದವನು. ಆತನ ಬಗ್ಗೆ ಶಾಸನೋಕ್ತಿ ಹೀಗಿದೆ; "ಚಿತ್ತ ವೃತ್ತಿಗಳನಿಚ್ಛಾ ಮಾತ್ರದಿಂ ಬಲ್ಲನೆಂಬೀ ನಿಸ್ತಾರದ ಕುಂಜನಂಬಿನೆಗಳ್ದಂ ಮಂತ್ರಾಂಗ ಸಾಮರ್ಥ್ಯಂ ವಿದ್ಯಾ ನೈಪುಣ್ಯನು ದಾರಮೇರು ಮಲೆಯಾಳ ಶ್ರೀ ಕುಳೋದ್ಧಾರಕಂ" ಎಂಬುದಾಗಿ ಆತನ ಗುಣ ವಿಶೇಷಣಗಳನ್ನು ಎತ್ತಿ ಹಿಡಿಯಲಾಗಿದೆ. ಅಷ್ಟೇಅಲ್ಲದೆ, ಈ ವಡ್ಡವ್ಯವಹಾರಿಗಳನ್ನು "ರಾಜ್ಯದೊಳುಭಯ ನಾನಾದೇಶಿ ಮಲೆಯಾಳ ಮುಖ್ಯರು ಎಂದಿದೆ. ಕೇರಳ ದೇಶಲಕ್ಷ್ಮಿ ಮುಖ ಮುಖರೆನಿಪ ಕುಳಮೂಕ ನಗರಾಧಿಷ್ಟಕರುಂ ವೈಶ್ಯಕುಳಾಭರಣರುಂ" ಇತ್ಯಾದಿಯಾಗಿ ಅವರನ್ನು ಬೇರೆಡೆಯ ವ್ಯಾಪಾರಿಗಳೆಂದು, ಮಲೆಯಾಳ ಮುಖ್ಯರೆಂದು ವರ್ಣಿಸಲಾಗಿದೆ. ಇದರಿಂದ ಚಂದವ್ವೆ ಮಲೆಯಾಳಿಗಳ ಮಾತೃ ಪ್ರಧಾನ ಕುಟುಂಬಕ್ಕೆ ಸೇರಿದವಳೆಂಬುದು ನಿರ್ವಿವಾದ.

ಶಾಸನದಲ್ಲಿ ಗಣಕುಮಾರಿ ಚಂದವ್ವೆಗೆ 'ವಿಭೂತಿ ಪಟ್ಟ' ನೀಡಿ ಗೌರವಿಸಿರುವುದನ್ನು ದಾಖಲಿಸಲಾಗಿದೆ. ವಿಭೂತಿಪಟ್ಟ ಎಂದರೆ ನಿತ್ಯಧಾರ್ಮಿಕ ಕಾರ್ಯಗಳ ಮೇಲ್ವಿಚಾರಣೆಗೆ ನೀಡಿದ ಶ್ರೇಷ್ಠ ಪಟ್ಟವೆಂದು ಪರಿಗಣಿಸ

* ನಂ. ೪೪೩, 'ಇ' ಬ್ಲಾಕ್, ಜಯಪ್ರಕಾಶನಗರ, ಮೈಸೂರು-೫೭೦೦೦೮

ಬಹುದು. ಆದರೆ ಮಠದೆರೆ ಎಂಬ ಪದದ ಹಿನ್ನಲೆಯಲ್ಲಿ ಮಠಾಧಿಪತಿಯ ಪಟ್ಟವನ್ನು ಕೊಟ್ಟರೆಂದು ಅರ್ಥೈಸಬಹುದೇ ? ಅಥವಾ ಮುಖ್ಯ ಪುರೋಹಿತನ ಸ್ಥಾನವನ್ನು ಅನುಗ್ರಹಿಸಿದರೆಂದು ತಿಳಿಯಬಹುದೆ ? ಈ ಗುರು ಪೀಠವನ್ನು ಅಲಂಕರಿಸಲು ಚಂದವ್ವೆಗಿದ್ದ ಅರ್ಹತೆಗಳೇನು ? ಆಕೆಯ ಸಾಮರ್ಥ್ಯ, ಪಾಂಡಿತ್ಯ ಇತ್ಯಾದಿಗಳ ಬಗ್ಗೆ ಶಾಸನ ಮೌನವಾಗಿದೆ. ಹಾಗಾಗಿ ಚಂದವ್ವೆಯ ಅಂತಃಸತ್ವವನ್ನು ಅರಿಯಲು ಈ ಶಾಸನ ನೆರವಾಗುವುದಿಲ್ಲ. ಉಲ್ಲೇಖಿತ ಶಾಸನದಲ್ಲಿ ದೇವಾಲಾಯದ ಮೇಲ್ವಿಚಾರಣೆಯನ್ನು ಚಂದವ್ವೆಗೆ ವಹಿಸುವ ಸಂದರ್ಭದಲ್ಲಿ ದೋರಸಮುದ್ರದ ರಾಜಗುರು ರುದ್ರಶಕ್ತಿ, ನೂರ ಇಪ್ಪತ್ತು ಸ್ಥಾನಿಕರು ಮತ್ತು ಕುಡಗಾಚಾರಿಗಳು ಉಪಸ್ಥಿತರಿದ್ದರೆಂದೂ, ಅರಸೀಕೆರೆಯ ಮಹಾಗಣಗಳಾದ ಭೂತಜೀಯ, ಅನಂತಜೀಯ, ಮಾದಜೀಯ ಹಾಗೂ ಇತರರು "ಆ ಚಂದವ್ವೆಗೆ ವಿಭೂತಿ ಪಟ್ಟವನ್ನು ಕಟ್ಟಿ ಗಣಕುಮಾರಿತನವನುಂ ಕೊಟ್ಟು ಯಿೂ ಕುಂಜೇಶ್ವರ ದೇವರಸ್ಥಾನಕ್ಕೆ ಮಠದೆರೆ ಮುಖ್ಯವಾಗಿ ಸಮಸ್ತ ತೆರೆಯನುಂ ಆ ಚಂದ್ರಾರ್ಕ್ಕಂಬರ. ಸರ್ವ ಮಾನ್ಯವಾಗಿ ಧಾರೆಯನೆರೆದು ಕೊಟ್ಟರು" ಎಂದು ತಿಳಿಸಲಾಗಿದೆ. ಮಹಾಗಣಗಳಲ್ಲಿ ಸ್ತ್ರೀಯರನ್ನು ಹೆಸರಿಸಿಲ್ಲ, ಪ್ರಾಯಶಃ ಮಲೆಯಾಳಿಗಳ ಸ್ತ್ರೀ ಪರಂಪರೆಯನ್ನು ಸ್ಥಳೀಯ ಸಂಪ್ರದಾಯದಂತೆ ಶ್ರೇಷ್ಠ ಪದವಿ ಅಥವಾ ವಿಭೂತಿ ಪಟ್ಟ ನೀಡಿ ಗೌರವಿಸಿರಬಹುದು.

ಒಟ್ಟನಲ್ಲಿ ಮಲೆಯಾಳಿಗಳ ವಲಸೆ ಹಾಗೂ ಸ್ತ್ರೀ ಪ್ರಧಾನ ಸಾಂಸ್ಕೃತಿಕ ಅಂಶಗಳು ಅಂದು ಶಿವಶರಣರ ಸಾಮಾಜಿಕ ಸಮಾನತೆಯ ಆಂದೋಲನಕ್ಕೆ ಪ್ರೇರಣೆ ನೀಡಿತ್ತೆಂಬುದರಲ್ಲಿ ಸಂದೇಹವಿಲ್ಲ. ಹೀಗೆ ವೀರಶೈವ ಸಂಪ್ರದಾಯದಲ್ಲಿ ಮಲೆಯಾಳಿ ಸಂಸ್ಕೃತಿಯ ಪ್ರಭಾವವನ್ನು ಅರಿಯಲು ಪ್ರಸ್ತುತ ಶಾಸನ ಉತ್ತಮ ನಿದರ್ಶನವಾಗಿದೆ.

ಆರ್. ವೆಂಕಟೇಶಮೂರ್ತಿ*

# ಮಳೂರಿನ ಶಾಸನಗಳಲ್ಲಿ ಕೃಷಿ ಮತ್ತು ವಾಣಿಜ್ಯ ನಿಬಂಧನೆಗಳು

ಚನ್ನಪಟ್ಟಣ ತಾಲ್ಲೂಕಿಗೆ ಸೇರಿದ ಮಳೂರು ಗ್ರಾಮವು ಕ್ರಿ.ಶ. ೧೦೦೦ದಲ್ಲಿ ದೊಡ್ಡ ಮಳೂರು ಅಗ್ರಹಾರವಾಗಿ ಇದರ ಸಮೀಪದ ಮಳೂರು ಪಟ್ಟಣವು ದೊಡ್ಡಮಳೂರಿನ ಭಾಗವಾಗಿ ೧೦೦೭ರಲ್ಲಿಯೇ ಅಸ್ತಿತ್ವದಲ್ಲಿತ್ತು.

ಕೆರೆ-ಕಟ್ಟೆಗಳನ್ನು ಕಟ್ಟಿಸುವುದು ಶ್ರೇಯಸ್ಕರವೆಂದು ನಂಬಿದ್ದ ರಾಜರು, ಶ್ರೀಮಂತರು ಹಾಗೂ ಮಹಾಜನರು ಕೆರೆಗಳನ್ನು ಕಟ್ಟಿಸಿ ಅದರೊಂದಿಗೆ ದೇವಾಲಯಗಳಿಗೆ ಭೂಮಿಗಳನ್ನು ದಾನ ಮಾಡುತ್ತಿದ್ದರು. ಈ ರೀತಿ ದಾನ ಮಾಡಿದ ಭೂಮಿಗಳೆಲ್ಲವೂ ಕೃಷಿಗೆ ಯೋಗ್ಯವಾದಂಥ ಭೂಮಿಗಳೇ ಆಗಿರುತ್ತಿದ್ದವು.

ಮುಡಿಗೊಂಡ ಚೋಳ ಮಂಡಲದ ಅಧಿಕಾರಿಯೊಬ್ಬನು ಕೆರೆಯನ್ನು ಕಟ್ಟಿಸಿ, ಅದರ ಪಕ್ಕದಲ್ಲಿದ್ದ ೩೦೦ ಕುಟಿ ಭೂಮಿಯನ್ನು ದುರ್ಗೈಯಾರ್ ದೇವರಿಗೆ ನೈವೇದ್ಯಕ್ಕಾಗಿ ಅಕ್ಕಿ, ದೀಪಕ್ಕಾಗಿ+ ಎಣ್ಣೆಯನ್ನು ಒದಗಿಸುವುದಕ್ಕಾಗಿ ದಾನ ನೀಡಿರುವುದಾಗಿ ಕ್ರಿ.ಶ. ೧೧೧೮ರ ಶಾಸನವೊಂದು ತಿಳಿಸುತ್ತದೆ. (೮೮)*

ಆದರೆ ಇದಕ್ಕೆ ವಿರುದ್ಧವಾಗಿರುವ ವಿಷಯವನ್ನು ದಾಖಲಿಸಿರುವ ಕ್ರಿ.ಶ. ೧೦೬೦ರ ಇದೇ ಮಳೂರಿನ ಶಾಸವೊಂದು, ಕೆರೆ ಕಟ್ಟಿಸಿದ ಅಪ್ಪಿಯಾರ್ ಗ್ರಾಮದ ಗಾವುಂಡನಾದ ಮಲ್ಲಿಗಾವುಂಡನಿಗೆ ಆ ಕೆರೆಯ ಪಕ್ಕದ ಭೂಮಿಗಳನ್ನು ಕೊಡುಗೆಯಾಗಿ ನೀಡಿರುವ ಅಪರೂಪದ ಸಂಗತಿಯನ್ನು ತಿಳಿಸುತ್ತದೆ. (೧೫೪)

ಕೆರೆ-ಕಟ್ಟೆಗಳ ನೀರನ್ನು ಕೃಷಿ ಮಾಡಲು ಉಪಯೋಗಿಸುವುದಕ್ಕಾಗಿ ಅನುಮತಿ, ತತ್ಸಂಬಂಧವಾಗಿ ಅಡಚಣೆ ಮಾಡಿದವರಿಗೆ ವಿಧಿಸಲಾಗುವ ದಂಡ, ಭೂಮಿಯನ್ನು ಮಾರಾಟ ಮಾಡಿದ ಸಂದರ್ಭದಲ್ಲಿ ಮಾರಾಟ ಮಾಡಿದವರು ಮತ್ತು ಕೊಂಡವರು ತಮಗೆ ತಾವೇ ವಿಧಿಸಿಕೊಳ್ಳುವ ಕಟ್ಟುಪಾಡುಗಳು, ಭೂಮಿಯನ್ನು ದಾನ ನೀಡಿ ಅಲ್ಲಿ ಉತ್ಪಾದಿಸುವ ಬೆಳೆಯನ್ನು ದೇವಾಲಯಗಳ ನಿಗದಿತ ಕಾರ್ಯಗಳಿಗೆ ವಿನಿಯೋಗಿಸಲು ಸೂಚಿಸುವುದು, ಇತ್ಯಾದಿಗಳನ್ನು ಕೃಷಿಗೆ ಸಂಬಂಧಿಸಿದ ನಿಬಂಧನೆಗಳೆಂದೂ ; ಹಣವನ್ನು ದಾನವಾಗಿ ಅಥವಾ ಠೇವಣಿಯಾಗಿ ನೀಡಿ ಅದರ ಬಡ್ಡಿಯಿಂದ ದೇವಾಲಯದಲ್ಲಿನ ನಿಗದಿತ ಕಾರ್ಯಗಳಿಗೆ ವಿನಿಯೋಗಿಸಲು ಸೂಚಿಸುವುದು, ಧಾನ್ಯಗಳನ್ನು ದೇವಾಲಯದ ಖಜಾನೆಯಿಂದ ಸಾಲ ಪಡೆದು ಅದಕ್ಕೆ ಬಡ್ಡಿಯಾಗಿ ನಿಗದಿತ ಪ್ರಮಾಣದ ಧ್ಯಾನ್ಯವನ್ನು ನೀಡುವುದು, ಹಾಗೂ ಸರಿಯಾಗಿ ಧಾನ್ಯವನ್ನು ಪೂರೈಸದಿದ್ದರೆ ಅದಕ್ಕಾಗಿ ವಿಧಿಸುವ ದಂಡ, ಇವೇ ಮೊದಲಾದವುಗಳನ್ನು ವಾಣಿಜ್ಯ ನಿಬಂಧನೆಗಳೆಂದೂ ಪರಿಗಣಿಸಬಹುದಾಗಿದೆ.

---

* ನಂ. ೨೫೩, ೫ನೆಯ ಮುಖ್ಯರಸ್ತೆ, ಕೆಂಪೇಗೌಡನಗರ, ಬೆಂಗಳೂರು-೫೬೦ ೦೧೯

+ ಆವರಣದಲ್ಲಿರುವ ಸಂಖ್ಯೆಗಳು ಎಪಿಗ್ರಾಫಿಯಾ ಕರ್ನಾಟಿಕ ೯ನೆಯ ಸಂಪುಟದ ಚನ್ನಪಟ್ಟಣ ತಾಲೂಕಿನ ಶಾಸನ ಸಂಖ್ಯೆಗಳನ್ನು ನಿರ್ದೇಶಿಸುತ್ತವೆ.

ಕೆರೆಗಳಿಗೆ ಮತ್ತು ಬೇಸಾಯಕ್ಕೆ ಯಾವುದೇ ರೀತಿಯಲ್ಲಿ ತೊಂದರೆ ಉಂಟು ಮಾಡಿದರೆ ಇದನ್ನು ಅಪರಾಧವೆಂದು ಪರಿಗಣಿಸಿ ದಂಡವನ್ನು ವಸೂಲು ಮಾಡಲಾಗುತ್ತಿತ್ತು.

ನೀಲಕಂಠ ದೇವರ್ ಎಂಬುವ ವ್ಯಕ್ತಿ ಕೆರೆಯ ದುರಸ್ತಿಗಾಗಿ ೨೬೦ ಗಚ್ಛಾಣವನ್ನು ನೀಡಿದ್ದಕ್ಕಾಗಿ ಆತನಿಗೆ ಸರ್ವಮಾನ್ಯವಾಗಿ ಭೂಮಿ ಮತ್ತು ಮನೆಯನ್ನು ನೀಡಿ, ಈ ಮನೆಗೆ ಸಂಬಂಧಿಸಿದಂತೆಯೇ ಆಗಲೀ ಅಥವಾ ಕೃಷಿಗಾಗಿ ಕೆರೆಯ ನೀರನ್ನು ಬಳಸಿದಾಗಲೇ ಆಗಲೀ ತೊಂದರೆ ನೀಡಿ ಅವಿಧೇಯತೆಯಿಂದ ನಡೆದು ಕೊಂಡವರಿಗೆ ದಂಡ ವಿಧಿಸಲಾಗುವುದು (೯೭ ಎ) ಎಂಬ ವಿಷಯವನ್ನು ಕ್ರಿ ಶ. ೧೧೬೬ರ ಶಾಸನವು ತಿಳಿಸುತ್ತದೆ.

ಬಹುಶಃ ಈ ರೀತಿ ದಂಡದ ರೂಪದಲ್ಲಿ ಬರುವ ಹಣವು ಕೆರೆಗಳ ಉಸ್ತುವಾರಿ ಮತ್ತು ಪಾಲನೆ ಕಾರ್ಯಗಳಿಗೆ ಉಪಯೋಗಿಸುವುದಕ್ಕಾಗಿ ಒಂದು ರೀತಿಯ ಆದಾಯವಾಗಿದ್ದಿರಬಹುದು.

ಒಂದು ಊರಿನ ಕೆರೆಯ ನೀರನ್ನು ಇನ್ನೊಂದು ಊರಿನ ಹೊಲಗಳಿಗೆ ಹರಿಸಬೇಕಾದರೆ ಅಥವಾ ಬೇರೆ ಗ್ರಾಮದಿಂದ ದಾನವಾಗಿ ನೀಡಲಾದ ಭೂಮಿಯನ್ನು ಸ್ವೀಕರಿಸಿರುವುದಕ್ಕೆ ಮತ್ತು ವ್ಯವಸಾಯಕ್ಕಾಗಿ ಹಾಲಿ ಊರಿನಲ್ಲಿರುವ ಕೆರೆ ಅಥವಾ ಬಾವಿಯ ನೀರನ್ನು ಉಪಯೋಗಿಸುವುದಕ್ಕೆ ಅಲ್ಲಿನ ಗೋಷ್ಠಿಯವತಿಯಿಂದ ಅನುಮತಿ ನೀಡಬೇಕಾಗಿತ್ತು.

'ವಂಡೂರ್' ಗ್ರಾಮದ ಗೋಷ್ಠಿಯ ಸದಸ್ಯರು ಕೆಲವು ಭೂಮಿಗಳನ್ನು ತೆರಿಗೆ ಮನ್ನಾ ಮಾಡಿ ದೇವದಾನವಾಗಿ ನೀಡಿ, ಈ ಭೂಮಿಗಳನ್ನು ನಮ್ಮ ಗ್ರಾಮದ ಕೆರೆ ಮತ್ತು ಬಾವಿಗಳ ಸಹಾಯದಿಂದ ವ್ಯವಸಾಯ ಮಾಡಲು ಅನುಮತಿ ನೀಡಿರುವುದಾಗಿ ಕ್ರಿ.ಶ. ೧೦೦೭ರ ಶಾಸನ ದಾಖಲಿಸಿದರೆ (೧೩೨), ಪುಂಗನೂರು ಗ್ರಾಮದ ಗೋಷ್ಠಿಯ ಸದಸ್ಯರು ಮಣಲೂರಿನ ದೇವಾಲಯಕ್ಕೆ ನೀಡಿದ ದೇವದಾನ ಭೂಮಿಯನ್ನು ಸ್ವೀಕರಿಸಿದ ಮಣಲೂರಿನ ಮಹಾ ಜನರು, ಈ ಭೂಮಿಯನ್ನು ಮಣಲೂರಿನ ಕೆರೆಯ ಸಹಾಯದಿಂದ ಬೇಸಾಯ ಮಾಡಬಹುದು ಎಂದು ಅನುಮತಿಯನ್ನು ನೀಡಿ, ಈ ಭೂಮಿಯನ್ನು ಪಡೆಯುವುದಕ್ಕೇ ಆಗಲೀ, ಬೇಸಾಯ ಮಾಡುವುದಕ್ಕೇ ಆಗಲೀ ಯಾರಾದರೂ ಅಡ್ಡಿ ಮಾಡಿದರೆ ಅಂಥವರಿಗೆ ದೇವಾಲಯದ ಅಧಿಕಾರಿಗಳಿಂದ ನೀವೇ ಸ್ವತಃ ೫೦ ಕಲಂಜುವಿನ ದಂಡ ವಿಧಿಸಬಹುದು ಎಂದು ಅನುಮತಿಯನ್ನು ನೀಡಿ ನಿಬಂಧನೆ ಮಾಡಿರುವುದನ್ನು ಕ್ರಿ.ಶ. ೧೦೧೪ರ ಶಾಸನವು ದಾಖಲಿಸಿದೆ. (೧೨೭).

ದಂಡವನ್ನು ವಿಧಿಸುವ ನಿಬಂಧನೆಗಳ ಶಾಸನಗಳು ಕೆಲವಾದರೆ ದಾನ ನೀಡಿದವರು, ಸ್ವೀಕರಿಸಿದವರು, ಮಹಾಜನರು, ಸಾಲ ಪಡೆದವರು, ಮುಂತಾದವರು ತಮಗೆ ತಾವೇ ವಿಧಿಸಿಕೊಳ್ಳುವ ನಿಬಂಧನೆಗಳನ್ನು ತಿಳಿಸುವ ವಿಶಿಷ್ಟವಾದ ಶಾಸನಗಳು ಹಲವಿವೆ.

ಮಳೂರಿನ ಗ್ರಾಮಾಧಿಕಾರಿಯೊಬ್ಬನು ಗೋಷ್ಠಿಯ ಸದಸ್ಯರಿಂದ ಭೂಮಿಗಳನ್ನು ಕೊಂಡು ದೇವಾಲಯಕ್ಕೆ ದಾನವಾಗಿ ನೀಡಿದ್ದಾರೆ. ಮಾರಾಟದ ಹಣವನ್ನು ಪೂರ್ತಿಯಾಗಿ ಸ್ವೀಕರಿಸಿದ ಗೋಷ್ಠಿಯ ಸದಸ್ಯರು ಈ ಭೂಮಿಯ ಕಂದಾಯವು ಎಷ್ಟೇ ಆದರೂ ಇನ್ನು ಮುಂದೆ ನಾವೇ ಸಂದಾಯ ಮಾಡುತ್ತೇವೆ. ಎಂಬುದಾಗಿ ತಮಗೆ ತಾವೇ ಕಟ್ಟುಪಾಡನ್ನು ವಿಧಿಸಿಕೊಂಡು, ದೇವಾಲಯದ ಅರ್ಚಕರು ತಮಗೆ ಇಷ್ಟ ಬಂದ ಬೆಳೆಗಳನ್ನು ಬೆಳೆದುಕೊಳ್ಳಬಹುದು ; ಆದರೆ ದೇವರಿಗೆ, ದೀಪಕ್ಕಾಗಿ ತೈಲ, ನೇವೇದ್ಯಕ್ಕಾಗಿ ಅಕ್ಕಿ ಹಾಗೂ ತಿಂಗಳಿಗಾಗುವಷ್ಟು ತುಪ್ಪ ಇವುಗಳನ್ನು ಪೂರೈಸಲೇಬೇಕು ಎಂಬುದಾಗಿ ನಿಬಂಧನೆಯನ್ನು ವಿಧಿಸಿರುವ ಸಂಗತಿಯನ್ನು ಕ್ರಿ.ಶ. (೧೦೧೪)ರ ಶಾಸನ ತಿಳಿಸುತ್ತದೆ. (೮೮ ಸಿ.)

ದೊಡ್ಡಮಳವೂರಿನ ಸಭಾ ಸದಸ್ಯರು ಇದೇ ಊರಿನ ದೇವಾಲಯವೊಂದಕ್ಕೆ ಭೂಮಿಗಳನ್ನು ದಾನವಾಗಿ ನೀಡಿ, ತಾವೇ ಸ್ವತಃ ಬೇಸಾಯ ಮಾಡಿ ಪ್ರತಿದಿನದ ನೈವೇದ್ಯಕ್ಕಾಗಿ, ಶುದ್ಧ ಮಾಡಿದ ಭತ್ತವನ್ನು ದೇವಾಲಯಕ್ಕೆ ತಂದು 'ಮರಕ್ಕಾಲ್'ನಲ್ಲಿ ಅಳತೆ ಮಾಡಿ ಕೊಡುತ್ತೇವೆ ಎನ್ನುವಂಥ ನಿಬಂಧನೆಯ ವಿಷಯವು ಕಿ.ಶ. ೧೦೦೭ರ ಶಾಸನದಿಂದ ತಿಳಿದು ಬರುತ್ತದೆ (೧೨೮).

ಕ್ರಿ.ಶ. ೧೦೩೪ರ ಎರಡು ಶಾಸನಗಳು, ರಾಜೇಂದ್ರಸಿಂಹ ಚತುರ್ವೇದಿ ಮಂಗಲಂನ ಗೋಷ್ಠಿಯ ಸದಸ್ಯರು 'ಪುಲಿಯೂರ್' ಗ್ರಾಮದ ಮುಖ್ಯಸ್ಥನಾದ ವಿಂಗಳಕೂಟ್ಟನ್ ಎಂಬುವನಿಂದ ಚಿನ್ನವನ್ನು ಸ್ವೀಕರಿಸಿ, ಎಲ್ಲಾ ತೆರಿಗೆಗಳಿಂದ ಮನ್ನಾ ಮಾಡಿದ ಭೂಮಿಯನ್ನು ನೀಡಿ ಈ ಗ್ರಾಮದ ಅಡವಳ ರಾಜೇಂದ್ರ ಚೋಳಸಿಂಗರ್ ಮತ್ತು ಅದರ ಜೊತೆಯಲ್ಲಿರುವ ದೇವರಿಗೆ ನೈವೇದ್ಯಕ್ಕಾಗಿ ಅಕ್ಕಿ, ತರಕಾರಿ, ತುಪ್ಪ, ವೀಳ್ಯದೆಲೆ ಮತ್ತು ಅಡಕೆಯನ್ನು ನೀಡಬೇಕು ಎಂಬ ಕಟ್ಟಪಾಡನ್ನು ವಿಧಿಸಿ, ಈ ಪೂರೈಕೆಯನ್ನು ಒಂದು ವರ್ಷಕ್ಕೆ ಲೆಕ್ಕಾಚಾರದ ಭತ್ತದ ಅಳತೆಯಲ್ಲಿ ನೀಡಬೇಕು (೮೨-೮೩) ಎನ್ನುವ ವಿಷಯವನ್ನು ದಾಖಲಿಸಿವೆ.

ಪ್ರಾಯಃ ಭತ್ತದ ಅಳತೆಯಲ್ಲಿ ಎಂದರೆ ಎಲ್ಲ ವಸ್ತುಗಳನ್ನು ಒಂದು ವರ್ಷಕ್ಕೆ ಲೆಕ್ಕಾಚಾರ ಮಾಡಿ ಅಷ್ಟಕ್ಕೆ ಹೊಂದಿಕೊಳ್ಳುವಷ್ಟು ಭತ್ತವನ್ನು ನೀಡಿದರೆ, ಭತ್ತದ ಮಾರಾಟದಿಂದ ವಸ್ತುಗಳನ್ನು ಒದಗಿಸಿಕೊಳ್ಳುವುದು ದೇವಾಲಯಕ್ಕೆ ಸಂಬಂಧಿಸಿದ್ದು ಎಂದು ಕಂಡು ಬರುತ್ತದೆ.

ದೊಡ್ಡಮುಳವೂರಿನ ಗೋಷ್ಠಿಯ ಸದಸ್ಯರು ಇದೇ ಗ್ರಾಮದ ರಾಜೇಂದ್ರಸಿಂಹ ಉಡೈಯ ಮಹಾದೇವರ್ ದೇವಾಲಯದಲ್ಲಿ ದೀಪವನ್ನು ಬೆಳಗಿಸಲು, ಗ್ರಾಮದಲ್ಲಿರುವ ಅಂಗಡಿಗಳ ಕಿರು ತೆರಿಗೆಯನ್ನು ಕೊಡುಗೆಯಾಗಿ ನೀಡಿ, ದೇವಾಲಯದ ಅರ್ಚಕರೇ ಈ ತೆರಿಗೆಯನ್ನು ಸಂದಾಯ ಮಾಡಬೇಕು ಮತ್ತು ದೀಪದ ಉಸ್ತುವಾರಿಯನ್ನು ನಿರ್ವಹಿಸಬೇಕು (೭೭) ಎಂಬ ವಿಚಿತ್ರವಾದ ನಿಬಂಧನೆಯನ್ನು ವಿಧಿಸಿರುವ ವಿಷಯವನ್ನು ಕ್ರಿ.ಶ. ೧೦೮೭ರ ಶಾಸನ ದಾಖಲಿಸಿದೆ.

'ಅಂಗಿಪುರಂ'ನ ತಿರುವರಂಗ ಮಾಲಿಭಟ್ಟನ್ ಎಂಬುವನು ಮುಳವೂರಿನ ಕೈಲಾಸಂ ಉಡೈಯಾರ್ ದೇವಾಲಯದ ಪೂಜಾರಿಗಳ ಬಳಿ ೧ ಗಚ್ಛಾಣ ಮತ್ತು ೫ ಪಣವನ್ನು ಠೇವಣಿಯಾಗಿಟ್ಟು ಈ ಹಣದ ಬಡ್ಡಿಯಿಂದ ದೇವರಿಗೆ ಬೆಳಗಿನ ನೈವೇದ್ಯಕ್ಕಾಗಿ ಅಕ್ಕಿ ಹಾಗೂ ನಂದಾದೀಪ ಮತ್ತು ತೂಗುಯ್ಯಾಲೆ ದೀಪಕ್ಕಾಗಿ ಎಣ್ಣೆಯನ್ನು ಒದಗಿಸಬೇಕು (೮೮ ಎ) ಎಂಬುದನ್ನು ಕ್ರಿ.ಶ. ೧೧೩೯ರ ಶಾಸನ ತಿಳಿಸುತ್ತದೆ.

'ವಂಣ್ಣಾರು' ಗ್ರಾಮದ ಗೋಷ್ಠಿಯ ಸದಸ್ಯರಾದ ಕೌಶಿಕ ಗೋತ್ರದ ಸುಬ್ರಹ್ಮಣಿ-ಗ್ರಾಮಾಧಿಕಾರಿ ; ಆತ್ರೇಯ ಗೋತ್ರದ ಜನ್ನಯ್ಯ-ಗ್ರಾಮಾಧಿಕಾರಿ, ವಚ್ಚ ಗೋತ್ರದ ದಿವಾಕರೈಯನ್ ಮತ್ತಿತರರು ಮಣಲೂರಿನ ಭಾಗವಾದನಿಗರಿಲಿ ಚೋಳಪುರಂನಲ್ಲಿರುವ ಜಯಂಗೊಂಡ ಚೋಳವಿಣ್ಣಗರ ದೇವರ್ ದೇವರ ಅರ್ಚಕರಿಗೆ ಸಹಿ ಮಾಡಿ ನೀಡಿದ ಒಡಂಬಡಿಕೆ ಪತ್ರದ ಕ್ರಮವೇನೆಂದರೆ "ನಾವು ಮೇಲ್ಕಂಡ ದೇವರ ಉಗ್ರಾಣದಿಂದ, ಪೂಜಾರಿಗಳ ಮುಖಾಂತರ ೩೨೦ ಕಲಂ ಭತ್ತವನ್ನು 'ಮರಕ್ಕಾಲ್'ನಲ್ಲಿ ಅಳತೆ ಮಾಡಿ ಸ್ವೀಕರಿಸಿದ್ದೇವೆ. ಮೇಲ್ಕಂಡ ಪರಿಮಾಣಕ್ಕೆ ಬಡ್ಡಿಯಾಗಿ, ಒಂದು ವರ್ಷಕ್ಕೆ ೩ ಕುರುಣಿ ಮತ್ತು ೨ ನಾಟಿ ದರದಂತೆ ಭತ್ತವನ್ನು ದೇವಸ್ಥಾನಕ್ಕೆ ತಂದು ಎಲ್ಲವನ್ನೂ ಮರಕ್ಕಾಲ್‌ನಲ್ಲಿ ಅಳತೆ ಮಾಡಿ ಸೂರ್ಯ ಚಂದ್ರರು ಇರುವವರೆಗೆ ನೀಡುತ್ತೇವೆ. ಕಲ್ಲು, ಮಣ್ಣಿನ ಹೆಂಟೆ, ಮೊಳಕೆ ಮತ್ತು ಜಳ್ಳುಗಳಿಂದ ಹೊರತು ಪಡಿಸಿದ ೧೦೦ ಕಲಂ ಭತ್ತದ ಕ್ರಮ ಎಂತೆಂದರೆ-೫೦ ಕಲಂ ಬಿಳಿ ಭತ್ತ ವಸಂತ ಋತುವಿನ ಬೆಳೆಯಲ್ಲಿ ; ಮತ್ತು ೫೦ ಕಲಂ ಕಪ್ಪು ಭತ್ತ ಬೇಸಿಗೆ ಬೆಳೆಯಲ್ಲಿ ನೀಡುತ್ತೇವೆ- ಈ ರೀತಿಯಾಗಿ ತೆಗೆದುಕೊಂಡ ಸಾಲಕ್ಕೆ ನೀಡುವ ಬಡ್ಡಿಯ ರೂಪದ ಧಾನ್ಯದ ವಿವರಣೆಯನ್ನು ಸೂಚಿಸಿ, ನಂತರ-ನಾವು ಕೊಡಬೇಕಾಗಿರುವ ಧಾನ್ಯವನ್ನು ಪಡೆಯಲು ಬರುವವರಿಗೆ ಪ್ರತಿದಿನ ಎರಡು ಹೊತ್ತಿನ ಪೂರ್ತಿ ಊಟವನ್ನು ನೀಡುತ್ತೇವೆ. ಆದರೆ ಇವರು ಬೆಂಕಿ ಮತ್ತು ನೀರನ್ನು ಹಳಿಯೊಳ್ಳಕ್ಕೆ ತರಕೂಡದು ; ಇತರೆ ಹಳ್ಳಿಗಳ ಜೊತೆಯಲ್ಲಿ ಸಂಪರ್ಕವಿಟ್ಟುಕೊಳ್ಳಬಾರದು ಮತ್ತು ವಸೂಲಾತಿಯ ದೃಷ್ಟಿಯಿಂದ ಗೋವುಗಳನ್ನು ಕರೆ ತರಬಾರದು. ಈ ವಸೂಲಾತಿಗಾಗಿ ಬರುವವರಿಗೆ ಬೇರೆ ಯಾರಾದರೂ ತೊಂದರೆ ಉಂಟು ಮಾಡಿದರೆ, ಅದರಿಂದ ಉಂಟಾಗುವ ಅಘಾತಗಳಿಗೆ ತೊಂದರೆ ಮಾಡಿದವರೇ ಜವಾಬ್ದಾರರಾಗುತ್ತಾರೆ "ಎಂಬ ಕಟ್ಟುಪಾಡನ್ನು ತಿಳಿಸಿರುವುದಲ್ಲದೆ, "ಒಂದು ವೇಳೆ ನಾವೇನಾದರೂ ಈ ಭತ್ತವನ್ನು ತಲುಪಿಸಲು ತಪ್ಪಿದಲ್ಲಿ ಧರ್ಮವನ್ನು ಕಾಪಾಡುತ್ತಿರುವ ನೀವು ೧೦೦೦ ಕಟಂಜುವಿನ ಚಿನ್ನವನ್ನು ದಂಡವಾಗಿ ಹಾಕುವುದು ಮತ್ತು ಭತ್ತವನ್ನು ಕೊಡಲು ಒತ್ತಾಯ ಪಡಿಸುವುದು"

ಎಂದು ಒಡಂಬಡಿಕೆ ಪತ್ರವನ್ನು ಬರೆದು ಸಾಲವನ್ನು ತೆಗೆದು ಕೊಂಡಿರುವ ವಿಷಯವನ್ನು ನಾರಾಯಣಸ್ವಾಮಿ ದೇವಾಲಯದಲ್ಲಿರುವ ಕ್ರಿ.ಶ. ೧೦೧೪ರ ಶಾಸನವು (೧೨೯) ತಿಳಿಸುತ್ತದೆ.

ಈ ಶಾಸನದಲ್ಲಿ ಉಲ್ಲೇಖಿತವಾಗಿರುವಂಥ-ಬೆಂಕಿ ಮತ್ತು ನೀರನ್ನು ಹಳ್ಳಿಯೊಳಕ್ಕೆ ತರಕೂಡದು ; ಅಕ್ಕ ಪಕ್ಕ ಹಳ್ಳಿಗಳೊಡನೆ ಸಂಪರ್ಕವಿಟ್ಟುಕೊಳ್ಳಬಾರದು ; ಹಾಗೂ ವಸೂಲಾತಿಗಾಗಿ ಗೋವುಗಳನ್ನು ಕರೆತರ ಬಾರದು ಎನ್ನುವಂಥ ಕಟ್ಟು ಪಾಡುಗಳನ್ನು ಗಮನಿಸಿ ದಾಗ, ಜನಗಳ ಸಂಪರ್ಕದಿಂದ ಚಾಡಿ ಮಾತುಗಳು ಉದ್ಭವಿಸಿ ಹಾನಿಕಾರಕ ವಸ್ತುವಾದ ಬೆಂಕಿಯಿಂದ ತೊಂದರೆ ಉಂಟಾಗಬಹುದು, ಲಂಚ ರುಷುವತ್ತುಗಳಿಂದ ಮಾನಸಿಕವಾಗಿ ಬದಲಾವಣೆಗಳಾಗಿ ಕಿರುಕುಳ ಕೊಡು ವಂಥ ಸಂದರ್ಭ ಸಂಭವಿಸಬಹುದು ಮತ್ತು ಗೋವು ಗಳನ್ನು ಕರೆತರುವುದರಿಂದ ಫಸಲುಗಳನ್ನು ಹಾಳು ಮಾಡುವ ಹಾಗೂ ಗೋಗ್ರಹಣವಾಗುವ ಸನ್ನಿವೇಶಗಳು ಬರಬಹುದು ಎನ್ನುವ ಅನುಮಾನಗಳಿಂದ ಈ ಮೇಲ್ಕಂಡ ನಿಬಂಧನೆಗಳನ್ನು ವಿಧಿಸುತ್ತಿದ್ದರು ಎಂದು ಹೇಳಬಹುದು.

ಈ ಎಲ್ಲ ತಮಿಳು ಶಾಸನಗಳಲ್ಲಿ ಅಳತೆ ಸಾಧನ ಗಳಿಂದ ನಾಟಿ, ಕುಱುಣಿ, ಕಲಂ, ಮರಕ್ಕಾಲ್ ಮತ್ತು ಚಿನ್ನಕ್ಕೆ ಸಂಬಂಧಿಸಿದಂತೆ ಕಟಿಂಜು ಇತ್ಯಾದಿ ಪದಗಳನ್ನು ಪದೇ ಪದೇ ಬಳಸಲಾಗಿದೆ.

ಶಾಸನ ಸಂಖ್ಯೆ ೧೨೫ರಲ್ಲಿ ಗಮನಿಸಿದಂತೆ ೩೨೦ ಕಲಂ ಭತ್ತಕ್ಕೆ ಬಡ್ಡಿಯಾಗಿ, ಒಂದು ವರ್ಷಕ್ಕೆ ೩ ಕುಱುಣಿ ಮತ್ತು ೨ ನಾಟಿ ದರವೆಂದು ಉಲ್ಲೇಖಿಸಿ, ಮುಂದೆ ೧೦೦ ಕಲಂ ಭತ್ತವನ್ನು ನೀಡುವ ಕ್ರಮವನ್ನು ವಿವರಿಸಿದೆ. ಇದನ್ನು ಗಮನಿಸಿದಾಗ ಒಂದು ವರ್ಷದ ೩ ಕುಱುಣಿ+೨ ನಾಟಿ=೧೦೦ ಕಲಂ ಎಂದು ಅರ್ಥೈಸಿಕೊಳ್ಳಬಹುದು ಎಂಬುದಾಗಿ ಊಹೆಯನ್ನು ಮಾಡಬಹುದು.

'ಮರಕ್ಕಾಲ್' ಎಂಬ ಅಳತೆ ಸಾಧನವು ತಮಿಳು ನಾಡಿನಲ್ಲಿ ಈಗಲೂ ಅಲ್ಲಲ್ಲಿ ಉಪಯೋಗಿಸುತ್ತಿರುವ ಅಳತೆಯ ಪ್ರಕಾರ :

೮ ಪಾವು=೧ ಸೇರು

೫ ಸೇರು=೧ ಮರಕ್ಕಾಲ್ ಆಗುತ್ತದೆ.

(ಇದು ಹಳೇ ಮೈಸೂರು ಸೀಮೆಯ ಕೊಳಗಕ್ಕೆ ಸಮಾನವಾಗಿದೆ)

ಭೂಧಾನಗಳಿಗೆ ಸಂಬಂಧಿಸಿದಂತೆ ಕಂಡುಬರುವ 'ಕುಟಿ' ಎನ್ನುವ ಪದಕ್ಕೆ ಎಸ್. ಕೃಷ್ಣಸ್ವಾಮಿ ಐಯ್ಯಂಗಾರ್‌ರವರು ೨೦೦೦ ಕುಟಿ ಎಂದರೆ ೬ ಎರಡು ವರೆ ಎಕರೆಗಳು ಎಂಬ ಸಮೀಕರಣವನ್ನು ತಿಳಿಸುತ್ತ, ಇದರ ಪ್ರಕಾರ, ೧ ಕುಟಿ=೦೦೦೩೩೩ ಎಕರೆಗಳು ಆಗುತ್ತದೆ ಎಂದೂ ತಿಳಿಸಿರುತ್ತಾರೆ.[1]

ಚಿನ್ನದ ತೂಕಕ್ಕೆ ಸಂಬಂಧಿಸಿದಂತೆ 'ಕಟಿಂಜು' ಎನ್ನುವ ಪದಕ್ಕೆ ಸಿ. ಕುಪ್ಪುರಂರವರು ಅರ್ಧ ಕಟಿಂಜುವಿಗೆ ೧ ಕಾಸು ಎಂಬ ಸಮೀಕರಣವನ್ನು ನೀಡಿದ್ದಾರೆ.[2]

ಅಪರೂಪದ ವಿಶಿಷ್ಟ ವಿಚಾರಗಳನ್ನು ತಿಳಿಸುವ ಮಳೂರಿನ ಶಾಸನಗಳ ಅವಲೋಕನದಿಂದ ಈ ಸ್ಥಳದಲ್ಲಿ ಪ್ರಮುಖವಾದ ಭತ್ತದ ಬೆಳೆಯ ಜೊತೆಗೆ ತೋಟದ ಬೆಳೆಗಳಾದ ತೆಂಗು, ಬಾಳೆ, ವೀಳೆಯದಲೆ ಮತ್ತು ಅಡಕೆಗಳನ್ನು ಬೆಳೆಯುತ್ತಿದ್ದರು ಹಾಗೂ ಕೃಷಿ ಸಂಬಂಧವಾಗಿ ತೊಂದರೆಯಿಲ್ಲದಂತೆ ಬೇಸಾಯ ನಡೆಸಿ ಕೊಂಡು ಹೋಗಲು ಮತ್ತು ದೇವಾಲಯಗಳಲ್ಲಿ ನಿಗದಿತ ಕಾರ್ಯಗಳು ಅಡಚಣೆಯಿಲ್ಲದೆ ಸುಸೂತ್ರವಾಗಿ ನೆರವೇರಲು ಸಹಾಯಕವಾಗುವಂತೆ ಆಗಿನ ಮಹಾ ಜನರು, ಊರಿನ ಪ್ರಜೆಗಳು, ಗಾವುಂಡರು ಚತುರತೆ ಯಿಂದ ನಿಬಂಧನೆಗಳನ್ನು ವಿಧಿಸಿಕೊಳ್ಳುವ ಮೂಲಕ ಕಾನೂನಿನ ಚೌಕಟ್ಟನ್ನು ರೂಪಿಸಿಕೊಳ್ಳುತ್ತಿದ್ದರು ಎಂಬುದನ್ನು ಸ್ಪಷ್ಟಪಡಿಸುತ್ತದೆ.

---

1 The Chola Administration- S. Krishnaswamy Iyengar
2 Imperial Colas in Karnataka-C. Kuppuram-P. 92

ತಿರುಮಲೆ ಶ್ರೀರಂಗಾಚಾರ್ಯ*

# ಗದ್ದೆಮನೆ ಶಾಸನ-ಒಂದು ಹೊಸ ದೃಷ್ಟಿ

ಶಿವಮೊಗ್ಗಾ ಜಿಲ್ಲೆ ಸಾಗರ ಹೋಬಳಿ ಗದ್ದೆಮನೆ ಎಂಬ ಗ್ರಾಮದ ಬಳಿ ಕಾಡು ಹಾದಿ ಮಗ್ಗಲಿಗೆ ಇದ್ದ ಶಾಸನವೊಂದಿದೆ. ಡಾ॥ ಹೆಚ್. ಶಾಮಾಶಾಸ್ತ್ರಿಗಳು ೧೯೨೨-೨೩ರ ತಮ್ಮ ವಾರ್ಷಿಕ ವರದಿಯಲ್ಲಿ ಈ ಶಾಸನವನ್ನು ಕುರಿತಂತೆ ವಿವರಣೆಯನ್ನೂ ಶಾಸನ ಪಾಠವನ್ನೂ ಪ್ರಕಟಿಸುತ್ತಾರೆ.

**ಶಾಸನಪಾಠ**

೧ ಸ್ವಸ್ತಿ ಶ್ರೀ ಶಿಲ ಆದಿತ್ಯನ್ ದಿಶಾವಮ್ ಭರ್‌ಗನ್ ಆಕೆವಾಳನ್ ಅಗ್ಗಳ ಕಂಟಕನ್

೨ ಪೇರಾಳ್ಕೆವರೆ ಪೆತ್ತಣಿ ಸಂತ್ಯಾಂಕನ್ ಆಟ್ಟುಳ್ವ ಭಟನ್ ಬೆದರೆ ಮಹೇಂದ್ರನ್

೩ ಬೇಡರ ರಾಯರ ಮಲಪ್ಪರ ಕಾಳಗದೊಳೆ ವಿರಿದು ಸ್ವರ್ಗಾಲಯ

೪ ಕ್ಕೇರಿ(ಅ)ದಾನ್ ಬೆಳೆಯ ಮಾಳಕಾದೋನ್ ಕಲ್ಯಾಣಂ ಅಕ್ಕೆ ಅಳಿಪೋನ್ ಪಂಜ್ಚಮ.........

ಶಾಮಾಶಾಸ್ತ್ರಿಗಳು ಇದರ ಬಗ್ಗೆ ಬರೆಯುತ್ತಾ

"ಶಾಸನವು ಹಳೆಯ ಕನ್ನಡ ಅಕ್ಷರಗಳಲ್ಲಿದ್ದು ಅವು ಕ್ರಿ. ಶ. ೭ನೇ ಶತಮಾನದ ಲಿಪಿಯನ್ನು ಬಹಳಷ್ಟು ಹೋಲುತ್ತವೆ. ಇದು ಒಂದು ವೀರಗಲ್ಲು. ಶಿಲಾದಿತ್ಯನ ಸೇನಾಪತಿ ಪೆತ್ತಣಿ ಸತ್ಯಾಂಕನುಬೇಡರ ತಂಡದಿಂದ ಕೂಡಿದ ಮಹೇಂದ್ರನ ಸೇನೆಯೊಂದಿಗೆ ಹೋರಾಡಿ ಸತ್ತುದರ ಜ್ಞಾಪಕಾರ್ಥ ಹಾಕಿದ್ದು. ಶಾಸನದಲ್ಲಿ ಹೇಳಿರುವ ಶಿಲಾದಿತ್ಯ ಮತ್ತು ಮಹೇಂದ್ರರು ಯಾರೆಂಬ ಬಗೆಗೆ ಶಾಸನದಲ್ಲಿ ಯಾವ ಸೂಚನೆಯೂ ಇಲ್ಲ. ಲಿಪಿಯು ಕಾಲದ ಆಧಾರದ ಮೇಲೆ ನಾನು ಶಾಸನದ ಶಿಲಾದಿತ್ಯನು ಹರ್ಷವರ್ಧನ ಶಿಲಾದಿತ್ಯನೂ, ಮಹೇಂದ್ರನು ೧ನೆಯ ಮಹೇಂದ್ರವರ್ಮ ಪಲ್ಲವನೂ ಇರಬಹುದು ಎಂದು ಅನುಮಾನಿಸುತ್ತೇನೆ. ಇವರು ಎರಡನೆಯ ಪುಲಕೇಶಿಯ ಸಮಕಾಲೀನರು. ಹರ್ಷನ ಆಳ್ವಿಕೆಯು ಶಿವಮೊಗ್ಗೆಯವರೆಗೆ ಪ್ರಸರಿಸಿತ್ತೆಂಬುದು ಅಸಂಭವವಿರಲಾರದು. ಶಿಲಾದಿತ್ಯ ಎಂಬುದು ಶಿಲ ಆದಿತ್ಯ ಎಂದು ಬರೆದಿರುವುದು ವಿವರಣೆಗೆ ನಿಲುಕದೆಇದೆ"—ಎಂದಿರುತ್ತಾರೆ.

ಶ್ರೀ ಶಾಸ್ತ್ರಿಗಳ ಈ ಅನುಮಾನವು ಅನೇಕ ವಿದ್ವಾಂಸರನ್ನು ಕೆಣಕಿದೆ. ದಕ್ಷಿಣ ಭಾರತದ ಮೇಲೂ ಕನೌಜದ ಹರ್ಷನ ಆಳ್ವಿಕೆ ಇತ್ತು ಎಂದೂ ತಮ್ಮ ಪ್ರಬಂಧಗಳಲ್ಲಿ ಬರೆಯಲು ಅದು ಕಾರಣವಾಗಿದೆ. ಈ ಶಿಲಾದಿತ್ಯ ಯಾರು? ಹರ್ಷವರ್ಧನನಲ್ಲದೆ ಬೇರೆ ಇನ್ನೊಬ್ಬನಾರೋ ಶಿಲಾದಿತ್ಯನಿರಬೇಕು. ಮಹೇಂದ್ರನು ೧ನೇ ಮಹೇಂದ್ರ ಪಲ್ಲವನಲ್ಲದೆ ಬೇರೊಬ್ಬನಾರೋ ಇರಬಹುದೇ ಎಂಬೆಲ್ಲ ಚಿಂತನೆ ನಡೆದಿದೆ.

ಈ ಎಲ್ಲ ಊಹಾಪೋಹಗಳೂ-ಸೂಚನೆಗಳೂ ಶ್ರೀ ಶಾಸ್ತ್ರಿಗಳ ಅನುಮಾನ-ಸೂಚನೆಯ ಸುತ್ತಲೇ ಹರಿದಾಡುತ್ತಿವೆ. ಸಮಕಾಲೀನ ರಾಜ ವಂಶಗಳನ್ನೆಲ್ಲ ಜಾಲಾಡಿ ಶಿಲಾದಿತ್ಯನ ಶೋಧನೆ ನಡೆದಿದೆ.

---

* ನಂ ೭೫, ಡಾ॥ ಅನಕೃರಸ್ತೆ, ವಿಶ್ವೇಶ್ವರಪುರ, ಬೆಂಗಳೂರು-೫೬೦೦೦೪.

1 MAR, 1922-23, P. 8, 83

ಪ್ರಸ್ತುತ ಲೇಖನದಲ್ಲಿ ಶಾಸ್ತ್ರಿಗಳ ಶಾಸನ ಪಾಠವನ್ನು ಹಾಗೂ ಲಿಪಿ ಆಧಾರದ ಮೇಲೆ ಶಾಸನದ ಕಾಲವನ್ನೂ ಸ್ವೀಕರಿಸಿ, ಆ ಕಾಲದ ರಾಜಕೀಯ–ಸಾಮಾಜಿಕ ಜೀವನ ಸ್ಥಿತಿಯ ಹಿನ್ನೆಲೆಯಲ್ಲಿ, ಶಾಸನದ ಭಾಷೆಯ, ಪ್ರಯೋಗದ, ಒಕ್ಕಣೆಯ ನೆಲೆಯಲ್ಲಿ ಅದಕ್ಕೆ ಕೊಡಬಹುದಾದ ಅರ್ಥವನ್ನು ವಿವೇಚಿಸಲಾಗಿದೆ.

ಶಿಲಾದಿತ್ಯನು ಕನೌಜದ ಹರ್ಷನಲ್ಲ. ಅವನು ಒಂದನೆಯ ವಿಕ್ರಮಾದಿತ್ಯನ (೬೫೫–೬೮೨ ಕ್ರಿ. ಶ.) ಮೊಮ್ಮಗನಾದ ಹಾಗೂ ವಿನಯಾದಿತ್ಯ (೬೫೧–೬೯೬ ಕ್ರಿ. ಶ.)ನ ಮಗ ಶ್ರ್ಯಾಶ್ಯ ಶಿಲಾದಿತ್ಯ. ಇವನು ಯುವರಾಜನೂ, ಪ್ರಾಂತ್ಯಾಧಿಕಾರಿಯೂ ಆಗಿದ್ದ. ಚಾಲುಕ್ಯ–ಪಲ್ಲವ ಸಂಘರ್ಷದಲ್ಲಿ ಅವನು ಪಾಲ್ಗೊಂಡಿರಬಹುದು–ಎಂದು ಡಾ|| ಮಜುಂದಾರರ ಅಭಿಪ್ರಾಯ.

ಡಾ|| ನಿಹಾರ್‌ರಂಜನರೇ ಅವರು ಹರ್ಷನ ಆಸ್ಥಾನ ಕವಿ ಬಾಣನ ಮಾವನಾಗಿದ್ದ ಮಯೂರನ ಸಂಸ್ಕೃತ ಕಾವ್ಯದ ಒಂದು ಪದ್ಯವನ್ನಾಧರಿಸಿ ಡಾ|| ಶಾಸ್ತ್ರಿಗಳ ಸೂಚನೆಯನ್ನು ಪುಷ್ಟೀಕರಿಸುತ್ತಾರೆ.

ಡಾ|| ಬಿ. ಎ. ಸಾಲೆತೊರೆ ಅವರು ವಲ್ಲಭೀ ವಂಶದ ದೇವಭಟ್ಟನೇ ಈ ಶಿಲಾದಿತ್ಯನಿರಬೇಕು ಎಂದು ಅನುಮಾನಿಸುತ್ತಾರೆ.

ಈ ಎಲ್ಲ ಸೂಚನಾ ಸರಣಿಗಳನ್ನೂ ತಮ್ಮ ಲೇಖನದಲ್ಲಿ ಶ್ರೀಮತಿ ಡಾ|| ಕುಮುದ್ ಪ್ರಸನ್ನ ಅವರು ಉಲ್ಲೇಖಿಸಿ ಅವು ಯಾವುವೂ ಸ್ವೀಕಾರಾರ್ಹವಲ್ಲ ಎಂದು ಸಕಾರಣವಾಗಿ ವಿವರಿಸಿದ್ದಾರೆ.[2] ಈ ಶಾಸನದ ಶಿಲಾದಿತ್ಯ–ಮಹೇಂದ್ರರು ಸೂಚಿತರಾಗಿರುವವರು ಯಾರೂ ಅಲ್ಲ–ಈ ಹೆಸರಿನ ಸಮಕಾಲೀನರು ೨ನೇ ಮಹೇಂದ್ರ ಪಲ್ಲವ (೬೬೮–೬೭೦ ಕ್ರಿ. ಶ.) ಶ್ರ್ಯಾಶ್ಯ ಶಿಲಾದಿತ್ಯ (೬೭೮–೬೯೧ ಕ್ರಿ. ಶ.) ೧ ನೇ ವಿಕ್ರಮಾದಿತ್ಯನ ಆಳ್ವಿಕೆಯ ಕಾಲ ಇದು ಎಂದು ಸೂಚಿಸುತ್ತ ಶಾಸನದಲ್ಲಿ ಹೇಳಿರುವ ಕಾಳಗವು ಹರ್ಷ–ಪಲ್ಲವ ಸಂಘರ್ಷವಲ್ಲ, ಅದು ಚಾಲುಕ್ಯ-ಪಲ್ಲವ ಸಂಘರ್ಷ. ಶಾಸನದಲ್ಲಿ ಹೇಳಿರುವ ಶಿಲಾದಿತ್ಯ–ಮಹೇಂದ್ರರನ್ನು ನಾವು ಬೇರೆಡೆ ಹುಡುಕಬೇಕು–ಎಂದು ಅಭಿಪ್ರಾಯಪಟ್ಟಿದ್ದಾರೆ.

ಪ್ರಸ್ತುತ ಗದ್ದೆಮನೆ ಶಾಸನವು ಕ್ರಿ. ಶ. ೭ನೇ ಶತಮಾನದ್ದು ಎಂದು ಒಪ್ಪಿ, ಆ ಶತಮಾನದ ರಾಜಕೀಯ ಸ್ಥಿತಿಯ ಸಿಂಹಾವಲೋಕನ ಮಾಡೋಣ.

ಕನೌಜದ ಹರ್ಷವರ್ಧನನ ಕಾಲ ಕ್ರಿ. ಶ. ೬೦೬ ರಿಂದ ೬೪೭, ಬಾದಾಮಿ ಚಾಲುಕ್ಯ ೨ನೇ ಪುಲಕೇಶಿ ಕಾಲ ಕ್ರಿ. ಶ. ೬೦೯ ರಿಂದ ೯೪೨. ಪಲ್ಲವ ಮಹೇಂದ್ರವರ್ಮನ ಕಾಲ ಕ್ರಿ. ಶ. ೬೦೦ ರಿಂದ ೬೩೮ ೧ನೇ ವಿಕ್ರಮಾದಿತ್ಯನ ಕಾಲ ಕ್ರಿ. ಶ. ೬೫೫ರಿಂದ ೬೮೨

೨ನೇ ಪುಲಿಕೇಶಿಯು ಹರ್ಷನನ್ನು ನರ್ಮದಾ ತೀರದಲ್ಲಿ ಸೋಲಿಸಿ ಹಿಮ್ಮೆಟ್ಟಿಸಿದ ಕಾಲವನ್ನು ಕ್ರಿ. ಶ. ೬೩೪ಕ್ಕೆ ಹಿಂದೆ ಎಂದು ಅನೇಕರು ಒಪ್ಪಿದ್ದಾರೆ. ಕ್ರಿ.ಶ. ೬೩೦ ಎಂದು ನಾವು ಸ್ವೀಕರಿಸಿಕೊಂಡರೂ, ಆ ವೇಳೆಗಾಗಲೇ ಕದಂಬ ಸಾಮ್ರಾಜ್ಯವು, ಚಾಲುಕ್ಯ ಸಾಮ್ರಾಜ್ಯದಲ್ಲಿ ಸೇರಿಹೋಗಿತ್ತು.[3] ಪಶ್ಚಿಮ ಕರಾವಳಿಯೂ ಒಳಗೊಂಡು, ಕೊಂಕಣವೂ ಸೇರಿ ಗುಜರಾತದವರೆಗೂ ಚಾಳುಕ್ಯರ ಪ್ರಭುತ್ವ ವಿಸ್ತರಿಸಿತ್ತು. ೨ನೇ ಪುಲಕೇಶಿಯು ಕ್ರಿ.ಶ. ೬೩೫ರಲ್ಲಿ ನೌಕಾ ಯುದ್ಧದಲ್ಲಿ ಕೊಂಕಣ ಮೌರ್ಯರನ್ನು ಸೋಲಿಸಿ ಆ ಕ್ಷೇತ್ರವನ್ನೆಲ್ಲ ಸಾಮ್ರಾಜ್ಯಕ್ಕೆ ಸೇರಿಸಿದ್ದ. ಪೂರ್ವ ತೀರದ ಕಡೆಗೂ ರಾಜ್ಯವನ್ನು ವಿಸ್ತರಿಸಿ ವೆಂಗಿಯಲ್ಲಿ ತಮ್ಮನಾದ ಕುಬ್ಜ ವಿಷ್ಣುವರ್ಧನನ್ನು ಅಧಿಪನನ್ನಾಗಿ ಮಾಡಿದ. ಆ ಸಮಯದಲ್ಲೇ ಕಂಚಿಯ ಪಲ್ಲವರೂ ತಮ್ಮ ಉತ್ತರಕ್ಕಿದ್ದ ಆಂಧ್ರದ ಕಡೆ ರಾಜ್ಯ ವಿಸ್ತರಿಸಲು ಹೊರಟು ಪೂರ್ವ ತೀರದಿಂದ, ಪಾಲಾರ್–ಪೆನ್ನಾರ್ ನದಿ ಬಯಲುಗಳನ್ನು ದಾಟಿ ಉತ್ತರ ಭಾಗದ ಕಡೆಗೆ

2 Chalukyas of Badami–Mythic Soeiety.
3 ಕರ್ನಾಟಕ ಇತಿಹಾಸ-ಪಿ. ಬಿ. ದೇಸಾಯಿ

ಸಾಗಿದರು. ಆಂಧ್ರದ ಈ ನೆಲಕ್ಕಾಗಿ ಚಾಳುಕ್ಯರಿಗೂ ಪಲ್ಲವರಿಗೂ ಯುದ್ಧಗಳು ನಡೆಯುತ್ತಲೇ ಇದ್ದವು.

ಇಡೀ ದಕ್ಷಿಣ ಭಾರತದಲ್ಲಿ ವಿಂಧ್ಯಾಚಲಕ್ಕೆ ಕೆಳಕ್ಕೆ ನರ್ಮದಾ–ಕೃಷ್ಣಾ–ಗೋದಾವರಿ–ತುಂಗಭದ್ರಾ ನದಿಗಳ ಪ್ರಾಂತವೆಲ್ಲ ಚಾಳುಕ್ಯರ ಆಳ್ವಿಕೆಗೆ ಒಳಪಟ್ಟಿತ್ತು. ಅದರ ದಕ್ಷಿಣಕ್ಕೆ ಕಾವೇರಿಯವರೆಗೆ ಗಂಗರೂ, ಅದರಾಚೆಗೆ ಕಂಚಿಯ ಪಲ್ಲವರೂ ಪ್ರಭುತ್ವ ಹೊಂದಿದ್ದರು.

ಈ ಹಿನ್ನೆಲೆಯಲ್ಲಿ ೨ನೇ ಪುಲಕೇಶಿಯಿಂದ ಸೋತು ಹಿಂದಿರುಗಿದ ಹರ್ಷವರ್ಧನ ಬನವಾಸಿ ನಾಡಿನತ್ತ ಬಂದದ್ದಾದರೂ ಹೇಗೆ–ಎತ್ತಲಿಂದ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಹರ್ಷನು ಕಳಿಂಗವನ್ನು ಆಕ್ರಮಿಸಿದ್ದನೆಂದು ಹಲವರ ಅಭಿಪ್ರಾಯ. ಅದನ್ನು ಒಪ್ಪಿದರೂ ಅಲ್ಲಿಂದ ಬಹುದೂರ ಈಶಾನ್ಯದಲ್ಲಿ ಇರುವ ಬನವಾಸಿನಾಡಿನತ್ತ ಅವನ ಸೇನೆ ಬಂದದ್ದಾದರೂ ಹೇಗೆ ?–ಬರುವ ಸಾಧ್ಯತೆ ಇತ್ತೇ ?–ಚಾಳುಕ್ಯರೂ ಪಲ್ಲವರೂ ಆ ಸೇನೆಯ ಚಲನೆಯನ್ನು ತಡೆಯದೆ ಸಾಗಲು ಬಿಡುತ್ತಿದ್ದರೇ ?

ಶಾಸನವು ಪೂರ್ವಾಚಾರ ಸಂಪ್ರದಾಯದ ಅನುಸರಣೆಯಲ್ಲಿ ಸ್ವಸ್ತಿ ಶ್ರೀ ಎಂದು ಆರಂಭವಾಗುತ್ತದೆ. ಮುಂದೆ ಶಿಲ ಆದಿತ್ಯನ್–ದಿಶಾವರ್ ಭರ್ಗನ್–ಅಕೆವಾಳನ್. ಅಗ್ಗಳಕಂಟಕನ್ ಎಂದು ಮೊದಲ ಸಾಲಿನಲ್ಲಿದೆ. ಮೊದಲ ಮಾತು ಶಿಲ ಆದಿತ್ಯನ್ ಅನ್ನುವುದನ್ನು ಶ್ರೀ ಶಾಸ್ತ್ರಿಗಳು ಅನ್ವರ್ಥ ನಾಮಪದನ್ನಾಗಿ ತೆಗೆದುಕೊಂಡಿದ್ದಾರೆ.

ಈ "ಶಿಲ ಆದಿತ್ಯ" ಎಂದು ಬಿಡಿಸಿ ಬರೆದಿರುವುದನ್ನು ವಿವರಿಸಲು ಆಗದೆ ಇದೆ ಎಂದು ಶ್ರೀ ಶಾಸ್ತ್ರಿಗಳೇ ಹೇಳಿದ್ದಾರೆ. ಆ ವಾಕ್ಯದ ಪದ ಸಮೂಹವೆಲ್ಲ ಬರಿ ವಿಶೇಷಣಗಳೇ. ಅನೇಕ ಸಂಧಿಪದಗಳನ್ನು ಬಳಸಿರುವ ಈ ಶಾಸನದಲ್ಲಿ ಶಿಲಾದಿತ್ಯ ಎಂಬ ಮಾತನ್ನು ಬಿಡಿಸಿ ಶಿಲ ಆದಿತ್ಯ ಎಂದು ಬರೆಯಲು ಬೇರೆ ಏನು ಕಾರಣ ? ಬರಹಗಾರನ ತಪ್ಪೆಂದು ಹೇಳೋಣವೇ ? ಅದು "ಶೀಲ ಆದಿತ್ಯ" ಇರಬಾರದೇಕೆ ಶೀಲ ಬರಯಲು ಹೋಗಿ ಶಿಲ ಆಗಿದೆಯೇ ? ಶಾಸನಕಾರನ ಅಪೇಕ್ಷೆ ಹೆಸರು ಹೇಳುವುದಲ್ಲ, ಕೀರ್ತಿ ಪ್ರಶಂಸೆ. ಆ ಕಾರಣದಿಂದಲೇ ಅವನು ಆ ಮಾತನ್ನು ಬಿಡಿಸಿ ಶಿಲ ಆದಿತ್ಯನ್ ಎಂದು ಬರೆದ. ಅನೇಕ ಸಂಧಿ ಪದಗಳನ್ನು ಬರೆದವನಿಗೆ ಈ ಮಾತನ್ನು ತಪ್ಪಾಗಿ ಬರೆದಿರಬಹುದೆಂದು ಊಹಿಸುವುದು ಸರಿಯಾಗಲಾರದು. ಉದ್ದೇಶ ಪೂರ್ವಕವಾಗಿ ಅದು ಹೆಸರೆಂದು ಭಾವಿಸದಿರಲಿ ಎಂದೇ ಬಿಡಿಸಿ ಬರೆದಿರಬಹುದು. "ಶಿಲ ಆದಿತ್ಯನ್" ಎಂದು ತೆಗೆದುಕೊಂಡರೂ, ಅದು ವಿಶೇಷಾರ್ಥದ ವಿಶೇಷಣ ಪದವಾಗುತ್ತದೆ. ಮುಂದಿನ ಸಾಲಿನಲ್ಲಿ ಬರುವ ಸ್ಪಷ್ಟವಾದ ಪೆತ್ತಣಿ ಸತ್ಯಾಂಕನೆಂಬ ಹೆಸರಿನ ವ್ಯಕ್ತಿಯ ಹೊಗಳಿಕೆಯ ಮಾತುಗಳ ಸರಣಿ ಇದು.

ಎರಡನೆಯ ಸಾಲಿನಲ್ಲಿ "ಪೇರಾಳ್ಕೆವರೆ" ಎಂದರೆ ಸಿಂಹಾಸನವನ್ನು ಏರಲಾಗಿ–ಎಂಬರ್ಥ ಸರಿಯಲ್ಲ. "ಆಳುತ್ತಿರಲಾಗಿ" ಎಂಬರ್ಥವೇ ಯುಕ್ತವೆನಿಸುತ್ತದೆ. "ನಾಯಕನಾಗಿ ಆಳುತ್ತಿರಲಾಗಿ" ಎಂಬುದು ಈ ಮಾತಿನ ಇಂಗಿತ. ಇದು ಪೆತ್ತಣಿ ಸತ್ಯಾಂಕನ ಸ್ಥಾನ–ಮಾನ–ಗೌರವಾದಿಗಳ ಸೂಚಕವಾದ ಮಾತು. ಅವನು ನಾಯಕ–ಪಾಳೆಗಾರನಾಗಿ ಇರಲಾಗಿ ಎಂಬುದು ಈ ಮಾತಿನ ಭಾವ.

"ಅಟ್ಟುಳ್ವ ಭಟನ್" ಬೆದರೆ ಮಹೇಂದ್ರನ್ ಎಂಬ ಮುಂದಿನ ಮಾತುಗಳೂ ಸತ್ಯಾಂಕನಿಗೇ ಅನ್ವಯವಾಗುವ ವಿಶೇಷಣಗಳೇ. ಈ ವಿಶೇಷಣಗಳೆಲ್ಲ ಜೊತೆ ಮಾತುಗಳು. ಹಲವು ಪೂರ್ವಾನ್ವಯವಾಗಿ, ಮತ್ತೆ ಕೆಲವು ಉತ್ತರಾನ್ವಯವಾಗಿ ಬಳಕೆಯಾಗಿವೆ.

ಶಿಲ ಆದಿತ್ಯನ್, ದಿಶಾವರ್ ಭರಗನ್, ಅಕೆವಾಳನ್, ಅಟ್ಟುಳ್ವ ಭಟನ್, ಬೆದರೆ ಮಹೇಂದ್ರನ್–ಹೀಗೆ–ಇಂದ್ರನೇ ಇವನ ಪ್ರತಾಪಕ್ಕೆ ಹೆದರಿದ ಎಂಬ ಅತಿಶಯೋಕ್ತಿ, ಅಲಂಕಾರಿಕ ಪ್ರಯೋಗ ವೈಖರಿ ಅಷ್ಟೆ.

ಇನ್ನು "ಬೇಡರ ರಾಯರ ಮಲಪ್ಪರ ಕಾಳಗದೊಳೆ ಇರಿದು" ಎಂಬ ಮುಂದಿನ ಸಾಲನ್ನು ಎರಡುರೀತಿ ಅರ್ಥೈಸಬಹುದು. "ಮಲ್ಲಪ್ಪ" ಎಂಬುದನ್ನು ಅನ್ವರ್ಥ ನಾಮ ಎಂದು ತೆಗೆದುಕೊಂಡರೆ "ಬೇಡರ ನಾಯಕ ಮಲಪ್ಪನೊಂದಿಗೆ ಯುದ್ಧದಲ್ಲಿ ಹೋರಾಡಿ" ಎಂದು ಹೇಳಬೇಕು. ಹಾಗೆ ಮಾಡದೆ ಮಲ್ಲಪ್ಪ ಎಂಬ ಮಾತನ್ನು ವಿಶೇಷಾರ್ಥದ ಮಾತನ್ನಾಗಿ ನಾವು ತೆಗೆದುಕೊಂಡರೆ,

ಆಗ ಆ ಮಾತಿಗೆ "ಗುಡ್ಡಗಾಡಿನ ಮಂದಿ" ಎಂದು ನಾವು ಅರ್ಥ ಮಾಡಿ "ಬೇಡರಿಗೂ ಗುಡ್ಡಗಾಡಿನ ಜನರಿಗೂ ನಡೆದ ಕಾಳಗದಲ್ಲಿ ಹೋರಾಡಿ" ಎಂದು ಅರ್ಥವಾಗುತ್ತದೆ. ನಾಯಕನಾಗಿ ಆಳುತ್ತಿದ್ದ ಪೆತ್ತಣಿ ಸತ್ಯಾಂಕ ಈ ಕದನದಲ್ಲಿ ಹೋರಾಡಿ ಏಕೆ ಸತ್ತ ಎಂಬ ಸಂದೇಹಕ್ಕೆ ವಿವರಣೆ ಹುಡುಕಬೇಕು. ಆದಕ್ಕೆ ಪೆತ್ತಣಿ ಸತ್ಯಾಂಕನಿಗೆ ಕೊಟ್ಟಿರುವ ವಿಶೇಷಗಳೂ, ಅವನು ಆಳುತ್ತಿದ್ದನೆಂಬ ಮಾತೂ ಸೂಚಕಗಳು.

ಆ ಕಾಲಕ್ಕೆ ಬನವಾಸಿಯನಾಡಿನ ದಟ್ಟವಾದ ವಿಸ್ತಾರಕಾಡಿನಲ್ಲಿ ಬೇಡರು-ಬೆಟ್ಟಗಾಡಿನಲ್ಲಿ ಕಾಡು ಜನಾಂಗದವರೂ ಇದ್ದರು. ವಿಶಾಲವಾದ ಒಂದು ಪ್ರದೇಶಕ್ಕೆ ಒಡೆಯ ಪೆತ್ತಣಿ ಸತ್ಯಾಂಕ. ತನ್ನ ನಾಡಿನ ಪ್ರಜೆಗಳೇ ಆಗಿದ್ದ ಬೇಡರೂ, ಗುಡ್ಡಗಾಡಿನ ಜನರೂ ಪರಸ್ಪರ ಜಗಳ-ಕದನಕ್ಕಿಳಿದಾಗ ಅವರನ್ನು ತಡೆಯಲು ಹೋಗಿ, ಹೋರಾಡಿ ಸತ್ಯಾಂಕ ಸತ್ತಿರಬೇಕು. ಅವನ ಈ ಶೌರ್ಯವನ್ನು, ಅವನ ಸದಪೇಕ್ಷೆಯ ನಿಮಿತ್ತದ ತ್ಯಾಗವನ್ನು ಮೆಚ್ಚಿ ಅವನ ಕಡೆಯವರು ಯಾರೋ ಈ ವೀರಗಲ್ಲನ್ನು ಸ್ಥಾಪಿಸಿರಬೇಕು.

ಈ ಎಲ್ಲ ಹಿನ್ನೆಲೆಯಲ್ಲಿ ಗದ್ದೆ ಮನೆ ಶಾಸನವು ಕನ್ನಡನಾಡಿನ ೭ನೇ ಶತಮಾನದ ಕಾಲದ ಗ್ರಾಮೀಣ ಪರಿಸರದ ಜನಜೀವನ-ಬದುಕು-ಒಡೆತನಕ್ಕಾಗಿ ಸಣ್ಣಪುಟ್ಟ ಪಂಗಡಗಳಲ್ಲಿ ನಡೆಯುತ್ತಿದ್ದ ಹೊಡೆದಾಟ ಬಡಿದಾಟಗಳನ್ನು ದಾಖಲಿಸುತ್ತದೆ. ಪೆತ್ತಣಿ ಸತ್ಯಾಂಕ ಒಬ್ಬ ಸಣ್ಣ ನಾಯಕನೇ ಹೊರತು ದಂಡನಾಯಕನಲ್ಲ. ಬನವಾಸಿ ನಾಡಿಗೆ ಪಲ್ಲವರು ದಂಡೆತ್ತಿ ಬಂದದ್ದೂ, ಹರ್ಷವರ್ಧನನು ಈ ನಾಡಿಗೆ ಕಾಲಿಟ್ಟು ಕಾದಾಡಿದ್ದೂ ಎಲ್ಲ ಅಸಂಭವದ ಮಾತು. ಇದು ಚಾಲುಕ್ಯ-ಪಲ್ಲವ ಸಂಘರ್ಷವೂ ಅಲ್ಲ; ಪಲ್ಲವ-ಹರ್ಷ ಸಂಘರ್ಷವೂ ಅಲ್ಲ.

ಗದ್ದೆಮನೆ ಶಾಸನಕ್ಕೆ ಕರ್ನಾಟಕದ ಭಾಷಿಕ-ಸಾಮಾಜಿಕ-ಸಾಂಸ್ಕೃತಿಕ ಮೌಲ್ಯ ಹೊರತಾಗಿ ಐತಿಹಾಸಿಕ ಮೌಲ್ಯವೇನೂ ಇಲ್ಲವೆಂಬುದು ಸ್ಪಷ್ಟ.

---

ಲೇಖನದ ಚಿಂತನೆಗೆ ನೆರವಾಗಿ, ಸೂಚನೆ, ಸಲಹೆಗಳನ್ನು ಕೊಟ್ಟ ಪ್ರೊ|| ಜಿ. ವೆಂಕಟಸುಬ್ಬಯ್ಯ, ಡಾ|| ವೆಂಕಟಾಚಲಶಾಸ್ತ್ರಿಗಳಿಗೆ ನಾನು ಆಭಾರಿಯಾಗಿದ್ದೇನೆ, ಈ ವಿಚಾರ ಚಿಂತನೆಯಲ್ಲಿ ಪ್ರೋತ್ಸಾಹಿಸಿದ ಮಿತ್ರರಾದ ತೋ. ಸು. ಸುಬ್ರಹ್ಮಣ್ಯ ಮತ್ತು ಅಳ್ಲ ಚಿರಂಜೀವಿ ಅವರಿಗೆ ನಾನು ಕೃತಜ್ಞ.

ಎಂ. ಎಸ್. ಪ್ರಭಾಕರ*

# ದಾಕ್ಷಿಣಾತ್ಯ ದೇವಾಲಯ-ವಾಸ್ತು ಮತ್ತು ಪರಿಭಾಷೆ

ಭಾರತೀಯ ಶಿಲ್ಪಕಲೆಯ ಉತ್ತಮೋತ್ತಮ ಆದರ್ಶ ಹಾಗೂ ಶಿಲ್ಪ ಕಲೆಯನ್ನು ಕುರಿತ ಮೂರು ನೂರು ಗ್ರಂಥಗಳು ಈಗಲೂ ದೊರಕುತ್ತಿವೆ ಎಂದು ಶ್ರೀಧರ ಭಾಸ್ಕರ ವರ್ಣೇಕರ್‌ರವರು "ಭಾರತೀಯ ವಿದ್ಯೆ" ಎಂಬ ಗ್ರಂಥದಲ್ಲಿ ಪ್ರಸ್ತಾಪಿಸಿದ್ದು,[1] ಕ್ರಿ. ಶ. ೧೯೩೪ ರಲ್ಲಿ ವಿದ್ವಾಂಸ ಶ್ರೀಯುತ ವಝೆಯವರು ಸಿದ್ಧಪಡಿಸಿದ ಗ್ರಂಥಾವಳಿಯನ್ನಾಧರಿಸಿ ಸುಮಾರು ೧೩೫ ವಾಸ್ತು ಗ್ರಂಥಗಳ ಶೀರ್ಷಿಕೆಗಳನ್ನು ಹೆಸರಿಸಿದ್ದಾರೆ[2] ಇವುಗಳಲ್ಲಿ ಮುದ್ರಿತ ಗ್ರಂಥಗಳ ಸಂಖ್ಯೆ ಕೇವಲ ಬೆರಳೆಣಿಕೆಯಷ್ಟು. ಪ್ರಕಟಗೊಂಡ ಗ್ರಂಥಗಳನ್ನು ದಾಕ್ಷಿಣಾತ್ಯ ಮತ್ತು ಔತ್ತರೇಯ ಎಂದು ವಿಂಗಡಿಸಬಹುದು.

ದೇವಾಲಯ ಮತ್ತು ದಾಕ್ಷಿಣಾತ್ಯ ಗ್ರಂಥಗಳ ವಿವರಣೆಯನ್ನಾಧರಿಸಿ ದಕ್ಷಿಣದ ದೇವಾಲಯದ ಸ್ವರೂಪವನ್ನು ಗುರುತಿಸಬಹುದು; ದೇವಾಲಯ ಮತ್ತು ದೇವಾಲಯದ ಹಲವು ಅಂಗಗಳಿಗೆ ಸಂಬಂಧಿಸಿದಂತೆ ಪರ್ಯಾಯ ಪದಗಳನ್ನು ಗಮನಿಸಬಹುದು. ಈ ಗ್ರಂಥಗಳಲ್ಲಿ ಕಾಣಬರುವ ಹೆಚ್ಚಿನ ಪ್ರಭೇದಗಳು ಪ್ರಾದೇಶಿಕ ವೈವಿಧ್ಯಗಳಿಂದ ಕೂಡಿದ್ದು ಖಚಿತವಾಗಿ ಗುರುತಿಸಲಾರದು. ಪ್ರಸ್ತುತ ಪ್ರಬಂಧದಲ್ಲಿ ಪರ್ಯಾಯ ಪದಗಳೊಂದಿಗೆ ದೇವಾಲಯದ ವಿವಿಧ ಅಂಗರಚನೆಯನ್ನು ಸ್ಥೂಲವಾಗಿ ಪರಿಚಯಿಸುವುದು ಲೇಖನದ ಉದ್ದೇಶವೆನಿಸಿದೆ.

ಪ್ರಾಸಾದ, ಹರ್ಮ್ಯ, ಸೌಧ, ಗೃಹ ಇತ್ಯಾದಿ ರಚನೆಗಳು ವಸ್ತು ಅಥವಾ ಭೂಮಿಯನ್ನು ಆಶ್ರಯಿಸಿದ್ದು 'ವಾಸ್ತು' ಎಂದು ಗುರುತಿಸಲ್ಪಡುತ್ತದೆ. ವಾಸ್ತು ಪದವು "ನಿವಾಸಾದ್ ಸರ್ವಭೂತಾನಾಂ ವಾಸ್ತುರಿತ್ಯಭಿಶಬ್ದಿತಃ"[3] ಎಂದು ವಿವರಿಸಲ್ಪಟ್ಟದ್ದು ಈ ವಾಸ್ತುವಿಗೆ ಹಲವಾರು ಜ್ಞಾತಿ ಪದಗಳಿವೆ. ಇವು ಒಟ್ಟಾರೆ ವಾಸಿಸುವ ಸ್ಥಳವನ್ನು ಪ್ರತಿನಿಧಿಸುವುದಾದರೂ ಸ್ವಲ್ಪ ಅರ್ಥ ವ್ಯತ್ಯಾಸಗಳುಂಟು. ಕಾಮಿಕಾಗಮ ಗ್ರಂಥದಲ್ಲಿ ವಸ್ತುವನ್ನು ಆಶ್ರಯಿಸಿದ ಹರ್ಮ್ಯಾದಿ ಪದಗಳ ಯಾದಿಯಿದೆ.

ವಿಮಾನಂ ಭವನಂ ಹರ್ಮ್ಯ ಸೌಧಂ ಧಾಮ ನಿಕೇತನಂ
ಪ್ರಸಾದ ಸದನಂ ಸದ್ಮಗೇಹ ಮಾವಸಥಂ ಗೃಹಂ
ಆಲಯಂ ನಿಲಯಂ ವಾಸೋಽಪ್ಯಾಸ್ಪದಂ ವಾಸ್ತು ವಾಸಕಂ
ಕ್ಷೇತ್ರಮಾಯತನಂ ವೇಶ್ಮ ಮಂದಿರಂ ದಿಷ್ಣ್ಯಕಂಪದಂ

* ಡೆಪ್ಯುಟೀ ಮ್ಯಾನೇಜರ್. ಸ್ಟೇಟ್ ಬ್ಯಾಂಕ ಆಫ್ ಮೈಸೂರು, ಕೋಟೆ ಶಾಖೆ, ಬೆಂಗಳೂರು-೫೬೦೦೦೨.

1 ಬಿ. ಎಸ್. ರಾಮಕೃಷ್ಣರಾವ್ (ಅನು.), 'ಭಾರತೀಯ ವಿದ್ಯೆ' ಬೆಂಗಳೂರು ೧೯೮೭, ಪು : ೧೦೯

2 ಅದೇ, ಪು : ೧೩೪-೧೩೬

3 ಟಿ. ಗಣಪತಿಶಾಸ್ತ್ರಿ (ಸಂ.), 'ನಾಮಲಿಂಗಾನುಶಾಸನ' (ಭಾಗ-೨), ತಿರುವನಂತಪುರ, ೧೯೧೫

ಲಯಂ ಕ್ಷಯಮಗಾರಂ ಚ ತಥೋವಸಿತಂ ಪುನಃ
ಸ್ಥಾನ ಮಿತ್ಯೇವ ಮುಕ್ತಾನಿ ಪರ್ಯಾಯವಚನಾನಿ[4]

ಕಾಶ್ಯಪ ಶಿಲ್ಪ ಗ್ರಂಥವೂ ಪರ್ಯಾಯ 'ವಾಚಕ' ಶಬ್ದಗಳನ್ನು ಸೂಚಿಸಿದೆ. ಕೆಲವು ವಾಸ್ತು ಗ್ರಂಥಗಳಲ್ಲಿ ಆಲಯ, ನಿಲಯ, ಗೃಹ, ವೇಶ್ಮ ಸೌಧ, ಹರ್ಮ್ಯ ಮುಂತಾದ ಪದಗಳು ಅರ್ಥಗಳೊಂದಿಗೆ ವಿವರಿಸಲಾಗಿದೆ. ಇವುಗಳಲ್ಲಿ ಕೆಲವನ್ನು ಗಮನಿಸಬಹುದು.

ಆಲಯ : ತದೇವಂ ಲೀಯತೇ ಸರ್ವಮಾಲಯಾದಿ ಸಮುದ್ಭವಂ[5]
ಅಲೀಯಂತೇ ಅಸ್ಮಿನ್ ಆಲಯಃ[6]

ನಿಲಯ : ಪೂರ್ವಾಪರ ದ್ವಾರ ನಿಲಯಃ[7]
ನಿಲೀಯಂತೇ ಅಸ್ಮಿನ್ ನಿಲಯಃ

ಗೃಹ : ಪೂರ್ವೇಚೈಕದ್ವಾರಯುತಂ ಗೃಹ ಸಂಜ್ಞಃ[8]
ಗೃಹ್ಣಾತಿ ಗೃಹಂ

ವೇಶ್ಮ : ಏಕದ್ವಾರಂ ಭವೇತ್ ವೇಶ್ಮ[9]
ವಿಶಂತ್ಯಸ್ಮಿನ್ ವೇಶ್ಮ

ಸೌಧ : ಸುಧಾ ಲಿಪ್ತತಲಂ ಸೌಧಂ[10]
ಸುಧಾ ಶುಭ್ರಂ ಸೌಧಂ
ರಾಜ್ಞ ಏವಸದನೇ ಸೌಧಃ

ಹರ್ಮ್ಯ : ಗೃಹಸ್ಯೋಪರಿ ಭೂಮಿರ್ಯಾ ಹರ್ಮ್ಯಂ ತತ್ ಪರಿಕೀರ್ತಿತಂ[11]
ಹರತಿ ಮನೋ ಹರ್ಮ್ಯಂ

ಪ್ರಾಸಾದ : ಹರ್ಮ್ಯಾಧಿ ನೀನಾಂ ವಾಸಾಃ ಪ್ರಾಸಾದೋ ದೇವ ಭೂಭುಜಾ[12]
ಪ್ರಸೀದಂತ್ಯಸ್ಮಿನ್ ಪ್ರಾಸಾದಃ

ಪ್ರಾಸಾದಿಕಾ: ಪ್ರಾಸಾದಸ್ತು ಸ ಏವ ಸ್ಯಾದಲ್ಪಾ ಪ್ರಾಸಾದಿಕಾ ಭವೇತ್[13]

ಪದ ವ್ಯುತ್ಪತ್ತಿಯ ದೃಷ್ಟಿಯಿಂದ ಕೆಲವು ಪದಗಳ ಅರ್ಥಗಳನ್ನು ಖಚಿತವಾಗಿ ಗುರುತಿಸಬಹುದಾದರೂ, ಮತ್ತೆ ಕೆಲವು ಕಾಲದೇಶಗಳ ಬಳಕೆಗೆ ತಕ್ಕಂತೆ ಅರ್ಥ ವ್ಯಾಪ್ತಿ ಪಡೆಯುತ್ತಿವೆ. ಒಂದೇ ಪದವು ಬೇರೊಂದೆಡೆಯಲ್ಲಿ ಮತ್ತೊಂದು ಅರ್ಥವನ್ನು ಧ್ವನಿಸುವುದುಂಟು, ದಾಕ್ಷಿಣಾತ್ಯ ಸಂಪ್ರದಾಯದ ಗ್ರಂಥಗಳ ಪ್ರಕಾರ ಅತಿ ಸಾಮಾನ್ಯ ವಾಸ್ತು ರಚನೆಯು ಪ್ರಪಾ ಎಂದು ಗುರುತಿಸಬಹುದು. "ಆಚ್ಛಾದಿತಂ ಪ್ರಪಾನಾಮ[14] ಇದು ಕಾಮಿಕಾಗಮದಲ್ಲಿರುವ ವಿವರಣೆ"'ಪಿಬಂತಸ್ಯಾಂ ಪ್ರಪಾ' –ಧಾತು ಮೂಲದ ವ್ಯುತ್ಪತ್ತಿಯಿಂದ ಗಮನಿಸಬಹುದು. ನೀರಿನ ಆಸರೆಯನ್ನು ಒಳಗೊಂಡಿದ್ದು ಪ್ರಪಾ"ಪ್ರಪಾ ಪಾನೀಯ ಶಾಲಿಕಾ"[15] ಇದು ಅಮರ ಕೋಶದ ಉಲ್ಲೇಖ. ಇದು "ಪ್ರಪಾದ್ವಯಂ ಪಾನೀಯಾ ಶಾಲಾಯಾಂ" ಅಮರ ಕೋಶದ ಬಗ್ಗೆ ಟೀಕೆ, ಧಾತು ಮೂಲದ ಅರ್ಥದಲ್ಲಿ 'ಪಾ–ರಕ್ಷಣೇ' ಎಂಬ ವ್ಯುತ್ಪತ್ತಿಯನ್ನೂ ಗಮನಿಸ

---

4 ಸಿ. ಸ್ವಾಮಿನಾಥ ಶಿವಾಚಾರ್ಯ (ಸಂ.), 'ಕಾಮಿಕಾಗಮ' (ಪೂರ್ವಭಾಗ), ಮದ್ರಾಸ್, ೧೯೭೫, ಪು : ೧೫೧, ಪಟಲ : ೫೫, ಶ್ಲೋಕ : ೨೦೭-೨೧೦

5 ಪಿ. ಎ. ಮಂಕಡ್ (ಸಂ.), 'ಅಪರಾಜಿತ ಪೃಚ್ಛಾ' ಬರೋಡಾ, ೧೯೫೦, ಪು : ೧೬೯, ಅಧ್ಯಾಯ : ೬೯, ಶ್ಲೋ : ೭,

6 'ನಾಮಲಿಂಗಾನುಶಾಸನ'

7 'ಅಪರಾಜಿತ ಪೃಚ್ಛಾ', ಪು : ೧೬೯, ಶ್ಲೋ : ೧೩

8 ಅದೇ., ಶ್ಲೋ : ೧೨

9 ಅದೇ., ಶ್ಲೋ : ೧೩

10 ವಿ. ಎಸ್. ಅಗ್ರವಾಲಾ (ಸಂ.) 'ಸಮರಾಂಗಣ ಸೂತ್ರಧಾರ,' ಬರೋಡಾ, ೧೯೬೬, ಪು :೮೯ ಅ : ೧೮' ಶ್ಲೋ : ೧೨

11 ಅದೇ, ಶ್ಲೋ : ೧೦

12 'ನಾಮಲಿಂಗಾನುಶಾಸನ' ದ್ವಿತೀಯ ಕಾಂಡ, ಪುರವರ್ಗ, ಶ್ಲೋ : ೩೩

13 'ಸಮರಾಂಗಣ ಸೂತ್ರಧಾರ' ಪು : ೯೦, ಶ್ಲೋ : ೨೨

14 'ಕಾಮಿಕಾಗಮ' ಪು : ೧೩೪, ಪು : ೫೦, ಶ್ಲೋ ೮೮

15 'ನಾಮಲಿಂಗಾನುಶಾಸನ' (ದ್ವಿತೀಯ ಕಾಂಡ) ಪುರವರ್ಗ

ಬಹುದು. ಆಚ್ಛಾದಿತಂ ಎನ್ನುವಲ್ಲಿ ಹೊದ್ದಿಸಿದ್ದು ಎಂದಷ್ಟೇ ಅರ್ಥ. ಗವಿ ಅಥವಾ ಗುಹೆಗಳೂ ನೈಸರ್ಗಿಕವಾಗಿ ಆಚ್ಛಾದಿತವಾದದ್ದು. ಪ್ರಪಾ ಪದದ ಬಳಕೆ ಸ್ವತಂತ್ರ ರಚನೆಗಳಿಗೆ ಸೀಮಿತಗೊಂಡಿದೆ. ಮಯಮತ ಗ್ರಂಥವನ್ನು ಅನುವಾದಿಸಿರುವ ವಿದ್ವಾಂಸ ಬ್ರೂನೋಡಗೆನ್ಸ್‌ರವರು ಪ್ರಪಾ ಪದವನ್ನು Light buildings[16] ಎಂದು ಗುರುತಿಸಿದ್ದಾರೆ.

ಪ್ರಪಾ ಮತ್ತು ಪ್ರಪೆಯ ಪ್ರಯೋಗ ಶಾಸನಗಳಲ್ಲಿದೆ ನಾಡಿನ ಹೆದ್ದಾರಿಗಳಲ್ಲಿ ನಿರ್ಮಾಣಗೊಂಡ ಪ್ರಾಚೀನ ಕಾಲದ ಅರವಟ್ಟಿಗೆಗಳನ್ನು ಪ್ರಪಾ ಎಂದು ಗುರುತಿಸಲಾಗುತ್ತಿತ್ತು. ಇಲ್ಲಿ ನೀರಿನ ವ್ಯವಸ್ಥೆಯಿದ್ದು ಯಾತ್ರಿಕರು ಸ್ವಲ್ಪ ಕಾಲದಣಿವಾರಿಸಿಕೊಳ್ಳಲು ಸಾಧ್ಯವಾಗುವ ತಂಗುದಾಣಗಳೆನಿಸಿದ್ದವು.

ಔತ್ತರೇಯ ಗ್ರಂಥಗಳಲ್ಲಿ 'ಶಾಲಾ' ಎನ್ನುವುದು ಅತಿ ಸಾಮಾನ್ಯ ರಚನೆ ಎನಿಸಿದೆ. "ಶಾಲತೇ ಇತಿ ಶಾಲಾ" ಇದು ಪದ ವ್ಯುತ್ಪತ್ತಿಯ ದೃಷ್ಟಿ." ಗೃಹಮೇಕಂತು ಯಚ್ಛನ್ನಂ ಸರ್ವಂ ಶಾಲೇತಿ ಸ್ಮೃತಾ"[17] ಎಂದು ವಿವರಿಸಿರುವುದನ್ನು ಕಾಣಬಹುದು. 'ಯಚ್ಛನ್ನಂ' ಎಂದಲ್ಲಿ ಹೊದ್ದಿಸಿದ್ದು ಎಂದಷ್ಟೇ ಅರ್ಥ. "ಛನ್ನಂ ಭವೇತ್ ಮಹಾಜನಸ್ಯ ಸ್ಥಾನಂ ಸಭಾಯಾ ಕಥಿತಾ ಶಾಲಾ"[18] ಇದು ಮತ್ತೊಂದೆಡೆಯಲ್ಲಿ ವಿವರಣೆ, ಸಭಾ, ಶಾಲಾ ಮುಂತಾದ ಪದಗಳ ವ್ಯುತ್ಪತ್ತಿಯನ್ನೂ ಗಮನಿಸಬಹುದು. "ಸಮ್ಯಗ್‌ಭಾತಿ ಇತಿ ಸಭಾ". ಶಾಲಾ, ಸಭಾ ಪದಗಳಲ್ಲಿ ಪ್ರಕಾಶಿಸು, ಹೊಳೆಯುವುದು ಎಂಬ ಅರ್ಥವಿದೆ. ಸಭಾ ಪದವು ವೇದಗಳ ಕಾಲದಿಂದ ಬಳಕೆಯಲ್ಲಿದೆ. ಸಭೆಯು ಸ್ಥಳೀಯ ರಾಜ್ಯ ವ್ಯವಸ್ಥೆಯನ್ನು ನಿರ್ದೇಶಿಸುವ ಅಂಗವೆನಿಸಿದ್ದು ತೀಕ್ಷ್ಣಮತಿಗಳ ಹಾಗೂ ವಿದ್ವದ್ ಜನರ ಸಮೂಹವಾಗಿತ್ತು. "ಸಹ ಧರ್ಮೇಣ ಸದ್ಭಿರ್ವಾ ಭಾತೀತಿ ಸಭಾ"[19] ಇದು ಸಭೆಗೆ ಸಂಬಂಧಿಸಿದ ಪೂರ್ಣ ವಿವರಣೆ. ಸಮೂಹವನ್ನು ಪ್ರತಿನಿಧಿಸಿದ ಪದವು ತದನಂತರ ನಿಗದಿತ ಸ್ಥಳಕ್ಕೆ ಅನ್ವಯವಾಯಿತು. ಅದೇ ರೀತಿ ಮಹಾಜನರು ಸೇರುವ ಜಾಗಕ್ಕೆ ಸಭಾ ಎಂದು ಗುರುತಿಸಲಾಯಿತು. ಸಭಾ ರಚನೆಗೆ ಪ್ರತ್ಯೇಕ ವಾಸ್ತು ವಿವರಣೆಗಳೂ ಸಿದ್ಧಗೊಂಡವು. ಐಹೊಳೆಯ ಲಾಡ್‌ಖಾನ್ ದೇವಾಲಯ ಇಂತಹ ಸಭಾ ರಚನೆಯಲ್ಲಿ ಒಂದೆನಿಸಿದೆ.

ದೇವಾಲಯಕ್ಕೆ ಸಂಬಂಧಿಸಿದಂತೆ ಪ್ರಾಸಾದ ಎಂಬ ಪದವೂ ಬಳಕೆಯಲ್ಲಿದ್ದು ದೇವಾಲಯ ಸಂಕೀರ್ಣದಲ್ಲಿ ಗರ್ಭ ಗೃಹವನ್ನು ಸೂಚಿಸಲು ಹೆಚ್ಚಾಗಿ ಬಳಕೆಗೊಂಡಿದೆ. "ಪ್ರಾಸಾದೋ ದೇವ ಭೂಪಾನಾಂ"[20] ಎಂಬ ವಿವರಣೆ ಇದ್ದು ದೇವಾಲಯಕ್ಕೆ ಪ್ರಾಸಾದವು ಪರ್ಯಾಯ ಪದವೆಂದೇ ತಿಳಿಯಬಹುದು.

ದೇವಧಿಷ್ಣ್ಯಂ ಸುರಸ್ಥಾನಂ ಚೈತ್ಯಮರ್ಚಾ ಗೃಹಂ ಚ ತತ್
ದೇವತಾಯತನಂ ಪ್ರಾಹುರ್ವಿಬುಧಾಗಾರ ಮಿತ್ಯಪಿ[21]

ದೇವದಿಷ್ಣ್ಯ, ಚೈತ್ಯ, ಅರ್ಚಾಗೃಹ, ದೇವತಾಯತನ ಮುಂತಾದವು ದೇವಾಲಯ ಪದಕ್ಕೆ ಪರ್ಯಾಯ ವಾಚಕಗಳೆನಿಸಿವೆ.

ಪಾದ್ಮ ಸಂಹಿತೆಯ ಗ್ರಂಥಕಾರನು "ಆರಭೇತ್ ಸ್ಥಪತಿಭಿಸ್ಸಾಕಂ ರಥಕೃದಾಲಯ"[22] ಎಂದು ಗುರುತಿಸಿದ್ದಾನೆ. ರಥದಂತೆ ಸೌಂದರ್ಯ ಹಾಗೂ ಔನ್ನತ್ಯದಿಂದ ಕೂಡಿರಬೇಕೆಂಬ ಆಶಯವೂ ವ್ಯಕ್ತಗೊಂಡಿದೆ. ರಥದ ಮೇಲಿರುವ ಪರ್ವಾಂಗ ಸುಂದರ ಮಂಡಪ, ಎತ್ತರವಾಗಿ

---

16 ಬ್ರೂನೋಡಗೆನ್ಸ್ (ಅನು), 'ಮಯಮತ,' ನವದೆಹಲಿ, ೧೯೮೫

17 ಸಮರಾಂಗಣ ಸೂತ್ರಧಾರ, ಪು. ೯೦, ಶ್ಲೋ. ೧೯

18 ಅದೇ., ಪು. ೯೩, ಶ್ಲೋ ೫೮

19 ಕೆ. ಪಿ. ಜಯಸ್ವಾಲ್, 'ಹಿಂದೂ ಪಾಲಿಟಿ', ಬೆಂಗಳೂರು, ೧೯೭೮, ಪು: ೧೮ (ಅಡಿ ಟಿಪ್ಪಣಿ)

20 ಅಪರಾಜಿತ ಪೃಚ್ಛಾ, ಪು : ೧೭೦. ಅ : ೧೯, ಶ್ಲೋ : ೨೯

21 'ಸಮರಾಂಗಣ ಸೂತ್ರಧಾರ', ಪು : ೯೩, ಅ : ೧೮, ಶ್ಲೋ : ೫೭

22 ಜಿ. ಆರ್. ಜೋಷ್ಯರ್ (ಪು.), 'ಪಾದ್ಮ ಸಂಹಿತಾಯಾಂ (ಪ್ರಥಮ ಸಂಪುಟ), ಮೈಸೂರು, ೧೯೯೧, ಪು : ೨೩, ಅ : ೯, ಶ್ಲೋ : ೨೫

ಮೂಡಿರುವ ಶಿಖರ, ಶಿಖರದ ತುದಿಯಲ್ಲಿ ಬಂಗಾರದಂತೆ ಹೊಳೆಯುವ ರಥ ಕಳಶ ಇವು ಆಕರ್ಷಣೀಯ ಅಂಗಗಳು. ದೇವಾಲಯದ ಕಲ್ಪನೆಗೆ ಕೇವಲ ಗರ್ಭಗೃಹವೊಂದೇ ಸಾಕು. ಇದರಿಂದ ದೇವಾಲಯದ ಪೂರ್ಣ ಕಲ್ಪನೆ ಸಾಧ್ಯವಿದೆ. ರಥಮಂಡಪವೂ ಗರ್ಭಗೃಹದೋಪಾದಿಯಲ್ಲಿದ್ದು ರಥವೂ ದೇವಾಲಯದ ಸ್ವರೂಪವೆನಿಸಿದೆ. ಆದ್ದರಿಂದಲೇ 'ರಥಕೃದಾಲಯಂ' ಎಂಬ ಉಕ್ತಿ ಇದೆ. ರಥವನ್ನು ನಡೆಯುವ ದೇಗುಲವೆಂದೂ, ದೇವಾಲಯವನ್ನು ನೆಲೆದೇಗುಲವೆಂದೂ ಶಾಸನಗಳು ಬಣ್ಣಿಸಿವೆ.

ಪಲರಂ ರಕ್ಷಿಸಿ ಮತ್ತಂ
ಪಲವಂ ನಡೆದೇಗುಲಂಗಳಂ ಮಾಡಿಸಿದಂ
ನೆಲವೆಲ್ಲ ಮಱಿಯೆ ಚಟ್ಟಂ
ನೆಲೆ ದೇಗುಲ ಮುಮನಿದೊಂದನೊಲ್ದೆತ್ತಿಸಿದಂ[23]

ಗರ್ಭಗೃಹದ ಮುಂದಿರುವ ಅಂತರಾಳ, ಮಂಡಪ, ನೃತ್ಯ ಶಾಲಾ, ಪ್ರಾಕಾರ ಇತ್ಯಾದಿಗಳು ದೇವಾಲಯ ಸಂಕೀರ್ಣದ ಪೂರಕಾಂಗಗಳೆನಿಸಿವೆ. ಅಪರಾಜಿತ ಪೃಚ್ಛಾ ಗ್ರಂಥಕಾರನು "ಪ್ರಾಸಾದ ಮಂಡಪಾ ಶಾಲಾ ಜಗತ್ಯಶ್ಚ ವ್ಯತಿಕ್ರಮಾತಾ[24] ಎಂದು ಗುರುತಿಸಿದ್ದಾನೆ. ಪ್ರಾಸಾದ ಎಂದಲ್ಲಿ ಗರ್ಭಗೃಹ, ಮಂಡಪ ಅಥವಾ ನವರಂಗ, ಶಾಲಾ ಎಂದಲ್ಲಿ ನೃತ್ಯಶಾಲಾ ಅಥವಾ ನೃತ್ಯ ಮಂಡಪ ಇವೆಲ್ಲವೂ ಜಗತಿಯ ಮೇಲೆ ರಚನೆಗೊಳ್ಳುವುದನ್ನು ಸ್ಮರಿಸಿದ್ದಾನೆ. (ಕ್ರಿ. ಶ. ೧೬೬೧ ರ ಹಾಸನ ಜಿಲ್ಲೆಯ ಚನ್ನರಾಯಪಟ್ಟಣ ತಾಲ್ಲೂಕಿನ ಶಾಸನವು "ಶ್ರೀ ಗೋಪಾಲಸ್ವಾಮಿಯವರ ನವರಂಗ ಪಟ್ಟ ಶಾಲೆ ಪ್ರಾಕಾರವನ್ನು ಕಟ್ಟಿಸಿದ"[25] ಬಗ್ಗೆ ಉಲ್ಲೇಖಿಸಿದೆ.

ದೇವಾಲಯದ ಪೂರಕಾಂಗಗಳ ಬಗ್ಗೆ ಕಾಶ್ಯಪ ಶಿಲ್ಪ ಗ್ರಂಥದ ವಿವರಣೆ ಇಂತಿದೆ :

ಪ್ರಾಸಾದ ಸ್ಯಾಗ್ರತಃ ಕುರ್ಯಾನ್ಮಂಡಪಂ
ಚತುಷ್ಟಯಂ
ಮುಖ ಮಂಡಪಮಾದೌ ತು ಪ್ರತಿಮಾ
ಮಂಡಪಂ ತತಃ
ಸ್ನಾಪನಾರ್ಥಂ ತೃತೀಯಂ ನೃತ್ಯಾರ್ಥಂ
ಚತುಷ್ಟಯಂ[26]

ಗರ್ಭಗೃಹದ ನಂತರ ಅರ್ಧ ಮಂಡಪ ಅಥವಾ ಸುಕನಾಸಿಯನ್ನು ದಾಕ್ಷಿಣಾತ್ಯ ದೇವಾಲಯಗಳಲ್ಲಿ ಕಾಣಬಹುದು. ಔತ್ತರೇಯ ಗ್ರಂಥಗಳು ಈ ಭಾಗವನ್ನು ಕೋಲಿಕಾ ಎಂದು ಗುರುತಿಸಲಾಗಿದೆ. ಅಂತರಾಳವೆನ್ನುವ ಪದ ಎರಡು ಸಂಪ್ರದಾಯದಲ್ಲಿದೆ. ಗರ್ಭಗೃಹ ಹಾಗೂ ಮಂಡಪಗಳನ್ನು ಬಂಧಿಸುವಂಥದ್ದು ಅಂತರಾಳ. ಅಂತರಾಳದ ನಂತರ ಕಾಣುವ ಮಂಡಪವು ನವರಂಗವೆನ್ನಿಸಿದೆ. ನವರಂಗ ಪದದ ಬಳಕೆ ಗ್ರಂಥಗಳಲ್ಲಿ ಅಪರೂಪ. ಇದನ್ನು ದಾಕ್ಷಿಣಾತ್ಯ ದೇವಾಲಯಗಳಲ್ಲಿ ಕಾಣಬಹುದಾಗಿದ್ದು ಕೆಲವು ವಿದ್ವಾಂಸರು ಹೊಯ್ಸಳರ ಕಾಲದ ವಿಶೇಷ ರಚನೆ ಎನ್ನುವಂತೆ ಗುರುತಿಸುತ್ತಾರೆ. ಯೋಗ ಜಾಗಮದಲ್ಲಿರುವ ಉಲ್ಲೇಖವು ಕೆಳಕಂಡಂತಿವೆ.

ನವಾಂಗೈರ್ನವರಂಗಂತು ನೃತ್ಯಾರ್ಥಂ ನೃತ್ಯ ಮಂಡಪಂ[27] ನವ-ಅಂಗ ಎನ್ನುವಲ್ಲಿ ಮಂಡಪದ ಅಂಕಣಗಳ ಸಂಖ್ಯೆಯನ್ನು ಸೂಚಿಸಿದೆ ಎನ್ನಬಹುದು. ನಾಲ್ಕು ಸ್ತಂಭಗಳ ಮಧ್ಯದ ಚೌಕ ರಚನೆಗೆ ಒಂದು ಅಂಕಣ ಎನ್ನಬಹುದು. ಇದಕ್ಕೆ ನಿಶ್ಚಿತ ಅಳತೆಯಿಂದ ಗುರುತಿಸಲು ಸಾಧ್ಯವಿಲ್ಲ. ಕಾಮಿಕಾಗಮದ ಪ್ರಕಾರ ರಂಗ ಪದದ ವಿವರಣೆ :

---

23 ಎ. ಎಸ್. ಅಣ್ಣಿಗೇರಿ ಮತ್ತು ಮೇವುಂಡಿ ಮಲ್ಲಾರಿ, (ಸಂ.) 'ಶಾಸನ ಸಾಹಿತ್ಯ ಸಂಚಯ' ಧಾರವಾಡ, ೧೯೬೧, ಪು : ೧೩೭

24 'ಅಪರಾಜಿತ ಪೃಚ್ಛಾ', ಪು : ೪೭೮, ಅ : ೧೮೫, ಶ್ಲೋ : ೧೪

25 'ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ : ೫ (ಭಾಗ-೧), ೧೮೭೩' ಚನ್ನರಾಯ ಪಟ್ಟಣ : ೧೮೫, ಪು. ೬೩೦-೬೩೧

26 'ಕಾಶ್ಯಪ ಶಿಲ್ಪ', ಪು : ೧೧೭, ಪು : ೪೫, ಶ್ಲೋ : ೫

27 ಆಸೂರಿ ಶ್ರೀನಿವಾಸಯ್ಯಂಗಾರ್ಯ, ಮತ್ತು ತಿರುಪತಿ ಶ್ರೀನಿವಾಸಯ್ಯಂಗಾರ್ಯ. 'ಭರತಖಂಡದ ದೇವಾಲಯಗಳು, ಬೆಂಗಳೂರು, ೧೯೩೮' ಪು : ೧೧೯

ಮಂಡಪೇ ಮಂಡಪಂ ಮತ್ತು ರಂಗ ಮಿತ್ಯಭಿಧೀಯತೇ[28] ಎಂದಿದೆ. ಮಯಮತ ಗ್ರಂಥವು "ವೇದಿಕೋಷ್ಟಂ ತುಭಾಗೇನ ಮಧ್ಯೇರಂಗಂ ಪ್ರಯೋಜಯೇತ್"[29] ಎಂದು ಗುರುತಿಸಿದೆ. ಸಾಮಾನ್ಯವಾಗಿ ಮಂಡಪವು ಹಲವು ಅಂಕಣಗಳಿಂದ ಕೂಡಿದ್ದು ಮಧ್ಯದ ಭಾಗವು ತುಸು ಎತ್ತರವಾಗಿದ್ದು ವೇದಿಕೆ ಎಂದು ಗುರುತಿಸಬಹುದಾಗಿದೆ. ಆದ್ದರಿಂದ ರಂಗ ಎನ್ನಬಹುದು. ನವರಂಗದಲ್ಲಿ ಪರಿವಾರ ದೇವತೆಗಳಿಗೂ ಅವಕಾಶವಿದ್ದು ಪ್ರತಿಮಾ ಮಂಡಪ ಎಂದೂ ಗುರುತಿಸಬಹುದು. ಸ್ನಪನ ಮಂಡಪದ ಪ್ರತ್ಯೇಕ ರಚನೆ ಅಪರೂಪ ನವರಂಗದ ನಂತರ ನೃತ್ಯ ಮಂಡಪವು ಹಲವು ದೇವಾಲಯಗಳಲ್ಲಿ ರಚನೆಗೊಂಡಿದೆ. ದೇವಾಲಯವನ್ನು ಸುತ್ತುವರೆದ ಪ್ರಾಕಾರ, ಪ್ರವೇಶ–ದ್ವಾರ ಗೋಪುರ ಇತ್ಯಾದಿಗಳೂ ದೇವಾಲಯ ಸಂಕೀರ್ಣದಲ್ಲಿ ಸೇರ್ಪಡೆಯಾಗುತ್ತವೆ. ಇವುಗಳ ವ್ಯವಸ್ಥಿತ ಜೋಡಣೆಯು ತಿರ್ಯಕ್ ಕ್ರಮವೆಂದು ಗುರುತಿಸಲ್ಪಟ್ಟಿದೆ. ಈ ರೀತಿಯ ವ್ಯವಸ್ಥಿತ ಜೋಡಣೆಯನ್ನು ಪಾಶ್ಚಾತ್ಯ ವಿದ್ವಾಂಸರೂ ಗಮನಿಸಿದ್ದಾರೆ.[30] ದೇವಾಲಯಗಳು ಅಭಿವೃದ್ಧಿಗೊಂಡಂತೆ ಕಾಲಕಾಲಕ್ಕೆ ಹಲವು ರಚನೆಗಳು ಸೇರ್ಪಡೆಯಾಗಿ ವಿಸ್ತಾರಗೊಂಡದ್ದನ್ನು ಗಮನಿಸಬಹುದು. ಇದಕ್ಕೆ ಉದಾಹರಣೆಯಾಗಿ ಹಂಪೆಯ ವಿರೂಪಾಕ್ಷ, ಬೇಲೂರಿನ ಚೆನ್ನಕೇಶವ ದೇವಾಲಯಗಳನ್ನು ಹೆಸರಿಸಬಹುದು. ಈ ವಿವಿಧ ರಚನೆಗಳನ್ನು ಕಾಲಾನುಕ್ರಮದಲ್ಲಿ ಗುರುತಿಸಬಹುದು.

ಕಾಶ್ಯಪ ಶಿಲ್ಪ ಗ್ರಂಥದಲ್ಲಿ 'ಪ್ರಾಸಾದ ಮಂಡಪಾನಾಂಚ ನಿರ್ಗಮಸ್ಯ ಪ್ರದಕ್ಷಿಣಂ ಶಾಲಾನಾಂ ಗೋಪುರಾಣಾಂಚ ಪ್ರವೇಶಸ್ಯ ಪ್ರದಕ್ಷಿಣೇ[31] ಈ ಉಲ್ಲೇಖವಿದ್ದರೆ, ಮತ್ತೊಂದರಲ್ಲಿ "ಪ್ರಾಸಾದೇ ಮಂಡಪೇ ಶಾಲೇ ಗೋಪುರೇಚ ತಥೈವಚ"[32] ಎಂದು ಕ್ರಮವಾಗಿ ಗುರುತಿಸಲಾಗಿದೆ. ದೇವಾಲಯಗಳ ಬೆಳವಣಿಗೆಯೊಂದಿಗೆ ಮಂಡಪ ರಚನೆಯಲ್ಲಿ ಯಾಗ ಶಾಲಾ, ಪಾಕಶಾಲಾ, ಕಲ್ಯಾಣ ಮಂಡಪ ಇತ್ಯಾದಿಗಳೂ ಸೇರ್ಪಡೆಗೊಂಡವು. ಡಾ|| ಕೆ. ವಿ. ಸೌಂದರರಾಜನ್ ರವರು ಔತ್ತರೇಯ ಪ್ರಾಸಾದ, ದಾಕ್ಷಿಣಾತ್ಯ ವಿಮಾನ ಎಂದು ಔತ್ತರೇಯ ಮತ್ತು ದಾಕ್ಷಿಣಾತ್ಯ ಸಂಪ್ರಾದಾಯಗಳನ್ನು ಗುರುತಿಸುವಾಗ ಬಳಸಿದ್ದಾರೆ. ಇಲ್ಲಿ ಪ್ರಾಸಾದ ಮತ್ತು ವಿಮಾನವೆಂಬ ಪದಗಳು ಗರ್ಭಗೃಹದ ಸ್ವರೂಪವನ್ನು ಗುರುತಿಸಲು ಬಳಸಲಾಗಿದೆ ಎನ್ನಬಹುದು.

ದಾಕ್ಷಿಣಾತ್ಯ ದೇವಾಲಯವನ್ನು ವಿವರಿಸುವಾಗ ಸಮೂರ್ತಾರ್ಚನಾಧಿಕರಣವು ವಿಮಾನರಚನೆಯಲ್ಲಿ ಷಡ್ವರ್ಗಗಳನ್ನು ಹೆಸರಿಸಿದೆ.

ವಿಮಾನಾನಾಂಚ ಸರ್ವೇಷಾಂ ಸಾಮಾನ್ಯ ಮಿದ ಮುಚ್ಯತೇ
ಅಧಿಷ್ಠಾನಂ ಪಾದವರ್ಗಃ ಪ್ರಸ್ತರಂ ಗ್ರೀವ ಕಾಪಿಚ
ಶಿಖರಂ ಸ್ಥೂಪಿಕಾ ಚೋತಿ ಷಡ್ವರ್ಗಾ ಇತಿ ಕೀರ್ತಿತಃ[33]

ಅಧಿಷ್ಠಾನ, ಪಾದ, ಪ್ರಸ್ತರ, ಗ್ರೀವ, ಶಿಖರ ಮತ್ತು ಸ್ಥೂಪಿ ಇವು ಊರ್ಧ್ವ ಕ್ರಮದಲ್ಲಿ ವಿಮಾನ ರಚನೆಯ ಅಂಗಗಳು. ಕಾಮಿಕಾಗಮ ಗ್ರಂಥವು ಶಾಲಾ ರಚನೆಯನ್ನು ವಿವರಿಸುವಾಗ

'ಅಧಿಷ್ಠಾನಂ ಚ ಪಾದಂಚ ಪ್ರಸ್ತರ ಕರ್ಣ ಏವಚ

28 'ಕಾಮಿಕಾಗಮ', ಪು : ೧೩೪, ಪ : ೫೦, ಶ್ಲೋ : ೯೪
29 ಬ್ರೂನೋಡಗೆನ್ಸ್ (ಸಂ.), 'ಮಯಮತ' ಪಾಂಡಿಚೆರಿ, ೧೯೭೦, ಪು : ೬೨೩, ಅ : ೨೫, ಶ್ಲೋ : ೩೦
30 ಜೇಮ್ಸ್ ಫರ್ಗುಸನ್, 'ಹಿಸ್ಟರಿ ಆಫ್ ಇಂಡಿಯನ್ ಅಂಡ್ ಈಸ್ಟರ್ನ್ ಆರ್ಕಿಟೆಕ್ಚರ್' (ಸಂಪುಟ :೧), ನವದೆಹಲಿ ೧೯೭೨, ಪು : ೩೦೯
31 'ಕಾಶ್ಯಪಶಿಲ್ಪ', ಪು : ೧೩ ಪ : ೪, ಶ್ಲೋ : ೪೬
32 ಅದೇ., ಪು ೯:, ಪ : ೪, ಶ್ಲೋ :೧
33 ಪಿ. ರಘುನಾಥ ಚಕ್ರವರ್ತಿ ಭಟ್ಟಚಾರ್ಯ (ಸಂ.), 'ಸಮೂರ್ತಾರ್ಚನಾಧಿಕರಣ', ತಿರುಪತಿ, ೧೯೪೩, ಪು : ೩೦, ಅ : ೮, ಶ್ಲೋ ೨-೩

ಶಿಖರಂ ಸ್ಥೂಪಿಕಾಚೈವ ಶಾಲಾಂಗಾಮಿತಿ
ಕಥ್ಯತೇ'[34]

ಎಂದು ಷಡ್ವರ್ಗಗಳನ್ನು ಶಾಲಾಂಗಗಳೆಂದೂ ಹೆಸರಿಸಿದೆ.

ಅಧಿಷ್ಠಾನವೆಂದಲ್ಲಿ ಪೀಠ ರಚನೆಯೇ ಆಗಿದೆ. ಆದರೆ ಪೀಠವೆನ್ನುವ ಪದ ಔತ್ತರೇಯ ಸಂಪ್ರದಾಯದಲ್ಲಿ ವ್ಯಾಪಕವಾಗಿ ಬಳಕೆಯಾಗಿದೆ. ಅಧಿಷ್ಠಾನದ ಕೆಳಗೆ ಉಪಪೀಠ ರಚನೆಯಿದೆ. ಉಪಪೀಠಕ್ಕೆ ಷಡ್ವರ್ಗಗಳ ಗಣನೆಯಲ್ಲಿ ಸ್ಥಾನವಿಲ್ಲ. ಆದರೆ "ವಿನಾವಾಪ್ಯುಪಪೀಠೇನ ಸ್ಯಾದಧಿಷ್ಠಾನ ಕಲ್ಪನಂ"[35] ಎಂದು ಪಾದ್ಮ ಸಂಹಿತಾಕಾರನು ಗುರುತಿಸುತ್ತಾನೆ. ಕಾಮಿಕಾಗಮದಲ್ಲಿ ಷಡ್ವರ್ಗಗಳೊಂದಿಗೆ ಉಪಪೀಠವನ್ನೂ ಹೆಸರಿಸಲಾಗಿದೆ. ಏಕತಲ ರಚನೆಯಲ್ಲಿ ಷಡ್ವರ್ಗಗಳೆನಿಸಿದ್ದು ತಲ ಸಂಖ್ಯೆ ಹೆಚ್ಚಿದಂತೆ ಪ್ರತಿ ತಲದಲ್ಲಿ ಪಾದ ಹಾಗೂ ಪ್ರಸ್ತರ ಭಾಗಗಳು ಪುನರಾವರ್ತನೆಗೊಳ್ಳುತ್ತದೆ. ಏಕತಲದಲ್ಲಿ ಷಡ್ವರ್ಗ, ದ್ವಿತಲದಲ್ಲಿ ಅಷ್ಟವರ್ಗ, ತ್ರಿತಲದಲ್ಲಿ ದಶವರ್ಗ ಹೀಗೆ ಮುಂದುವರೆಯುತ್ತದೆ. ವಿಮಾನಾರ್ಚನ ಕಲ್ಪ ಗ್ರಂಥವು ತಲಕ್ಕೆ ಬದಲಾಗಿ ಭೂಮಿ ಎಂದಿದೆ.[36] ಭೂಮಿ ಪದದ ಬಳಕೆ ಔತ್ತರೇಯ ಗ್ರಂಥಗಳಲ್ಲಿ ಹೆಚ್ಚು. ತಲ ರಚನೆಯನ್ನು ಹಲವು ಗ್ರಂಥಗಳು ಹನ್ನೆರಡಕ್ಕೆ ಮಿತಿಗೊಳಿಸಿವೆ. ಮತ್ತೆ ಕೆಲವು ಗ್ರಂಥಗಳು ಹದಿನಾರರವರೆಗೆ ವಿಸ್ತರಿಸಿವೆ. "ಏಕಭೂಮಿ ವಿಮಾನಾದಿ ರವಿಭೂಮ್ಯವಸಾನಕಂ"[37] ಇದು ಮಾನಸಾರ ಗ್ರಂಥದ ವಿವರಣೆ. ಪಾದ್ಮ ಸಂಹಿತೆ ಹಾಗೂ ಅಜಿತಾಗಮ ಗ್ರಂಥಗಳು ದ್ವಾದಶ ತಲದವರೆಗೆ ಅನುಮೋದಿಸಿವೆ."ತಲೈರ್ದ್ವಾದಶಭಿರ್ಯುಕ್ತಮುತ್ತಮಮುಚ್ಯತೇ"[38] ಇದು ಸಮೂರ್ತಾರ್ಚನಾಧಿಕರಣದ ವಿವರಣೆ ಕಾಶ್ಯಪ ಶಿಲ್ಪ[39] ಹಾಗೂ ಕಾಮಿಕಾಗಮ ಗ್ರಂಥಗಳು ಹದಿನಾರರವರೆಗೆ ಗುರುತಿಸಿವೆ.

ಒಂದು ಕಾಲಕ್ಕೆ ಶಾಸ್ತ್ರಗ್ರಂಥಗಳು ಹನ್ನೆರಡರವರೆಗೆ ಅವಕಾಶ ಕಲ್ಪಿಸಿದ್ದು ತದನಂತರ ಹದಿನಾರಕ್ಕೆ ವಿಸ್ತರಿರಬಹುದು. ಆದರೆ ಇದಕ್ಕೆ ಆಧಾರವೇನೂ ಇಲ್ಲ. ಹದಿನಾರರವರೆಗೆ ತಲ ರಚನೆಯನ್ನು ಕಾಶ್ಯಪ ಶಿಲ್ಪವು ಸವಿಸ್ತಾರವಾಗಿ ಬಣ್ಣಿಸಿದೆ.

ಷಡ್ವರ್ಗಗಳ ಅಳತೆ ಪ್ರಮಾಣಗಳನ್ನು ದೇವಾಲಯದ ಒಟ್ಟು ಅಂದಕ್ಕೆ ತಕ್ಕಂತೆ ವಿಭಜಿಸಿದ್ದು, ಶಾಂತಿಕ, ಪೌಷ್ಟಿಕ, ಜಯದ, ಅದ್ಭುತ ಮತ್ತು ಸಾರ್ವಕಾಮಿಕ ಎಂದು ಪ್ರಮುಖವಾದ ಐದು ಪ್ರಭೇದಗಳಾಗಿ ಗುರುತಿಸಲಾಗಿದೆ.[40] ವಿಮಾನಾರ್ಚನ ಕಲ್ಪದಲ್ಲಿ ಈ ಪ್ರಭೇದಗಳ ಅಳತೆಯನ್ನು ಗುರುತಿಸಬಹುದು. ಕಾಮಿಕಾಗಮ ಗ್ರಂಥದಲ್ಲಿ ವಿವರಗಳಿದ್ದರೂ ಹೆಚ್ಚು ಸ್ಪಷ್ಟತೆಯಿಲ್ಲ. ಈ ಪ್ರಭೇದಗಳ ಖಚಿತಮಾನವನ್ನು ಶ್ರೀಯುತ ಆಸೂರಿ ಶ್ರೀನಿವಾಸ ಅಯ್ಯಂಗಾರ್‌ರವರು ಗುರುತಿಸಿದ್ದಾರೆ.[41] ಶಾಂತಿಕ ಪ್ರಭೇದದ ಮಾನವನ್ನು ಬಹುಪಾಲು ಗ್ರಂಥಗಳು ಗುರುತಿಸಿದ್ದು ಈ ವಿವರಣೆಗಳಲ್ಲಿ ಹೆಚ್ಚಿನ ವ್ಯತ್ಯಾಸಗಳಿಲ್ಲ.

ಕಾಶ್ಯಪ ಶಿಲ್ಪವು ಸಾರ್ವಕಾಮಿಕ ಪ್ರಭೇದವನ್ನು ಗುರುತಿಸುವಾಗ ಷಡ್ವರ್ಗ ರಚನೆಯನ್ನು ಗುರುತಿಸದೆ ಲುಪಾಕಾರ ರಚನೆಯನ್ನು ವಿವರಿಸಿದೆ. ಲುಪಾಕಾರ ರಚನೆಯು ಚತುವರ್ಗಗಳಿಂದ ಕೂಡಿದ್ದು, ಈ ರೀತಿಯ ರಚನೆಗಳು ಇಳಿಜಾರಾದ ಶಿಖರವನ್ನು ಹೊಂದಿದ್ದು, ಮಲೆನಾಡಿನ ಸರಹದ್ದಿನಲ್ಲಿ ಹಾಗೂ ಉತ್ತರ ಕನ್ನಡ

---

34 'ಕಾಮಿಕಾಗಮ, ಪು : ೯೮, ಪ : ೩೫, ಶ್ಲೋ : ೪೬
35 'ಪಾದ್ಮ ಸಂಹಿತಾ,' ಪು : ೨೫, ಅ: ೪, ಶ್ಲೋ : ೩೮
36 'ರಘುನಾಥ ಚಕ್ರವರ್ತಿ ಭಟ್ಟಾಚಾರ್ಯ (ಸಂ.), ವಿಮಾನಾರ್ಚನ ಕಲ್ಪ, ಮದ್ರಾಸ್, ೧೯೨೬ ಪು: ೩೩, ಪ : ೯
37 ಪಿ. ಕೆ. ಆಚಾರ್ಯ (ಸಂ.), 'ಮಾನಸಾರ,' ನವದೆಹಲಿ, ೧೯೭೯' ಪು. ೧೨೭, ಅ. ೧೫, ಶ್ಲೋ : ೨
38 'ಸಮೂರ್ತಾರ್ಚನಾಧಿಕರಣ', ಪು : ೨೭
39 'ಕಾಶ್ಯಪ ಶಿಲ್ಪ', ಪು : ೧೧. ಪ: ೪, ಶ್ಲೋ : ೨೩
40 'ಕಾಮಿಕಾಗಮ', ಪು :೧೩೯, ಪ : ೫೦, ಶ್ಲೋ : ೨೪
41 'ಭರತಖಂಡದ ದೇವಾಲಯಗಳು'' ಪು : ೪೬

ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕಾಣಬಹುದು. ಈ ದೇವಾಲಯಗಳ ವಿಸ್ತಾರವಾದ ವಿವರಣೆಯನ್ನು ಮಯಮತ ಗ್ರಂಥದಲ್ಲಿ ಕಾಣಬಹುದು.

ದಾಕ್ಷಿಣಾತ್ಯ ಗ್ರಂಥಗಳಲ್ಲಿ ತ್ರಿವರ್ಗವುಳ್ಳದ್ದು ಮಂಡಪ ; ಅಧಿಷ್ಠಾನ, ಪಾದ ಮತ್ತು ಪ್ರಸ್ತರಗಳನ್ನು ಹೊಂದಿದೆ.[42] ಚತುವರ್ಗವುಳ್ಳದ್ದು ಲುಪಾಕಾರ ದೇವಾಲಯಗಳು, ಅಧಿಷ್ಠಾನ, ಪಾದ, ಶಿಖರ ಮತ್ತು ಸ್ತೂಪಿಗಳನ್ನು ಹೊಂದಿದೆ.[43] ಸಭಾರಚನೆಯು ಪಂಚ ವರ್ಗದ ರಚನೆಯೆಂದು ಗುರುತಿಸಲಾಗಿದೆ.[44] ಆದರೆ ವರ್ಗರಚನೆಯ ವಿವರಗಳಿಲ್ಲ. ಷಡ್ವರ್ಗವು ಶಾಂತಿಕಾದಿ ಪ್ರಭೇದಗಳಿರುವ ದೇವಾಲಯಗಳು, ಇದಲ್ಲದೆ ಕಾಮಿಕಾಗಮವು ಅಷ್ಟವರ್ಗ ರಚನೆಯನ್ನು ಹೆಸರಿಸುತ್ತದೆ. ಮಸೂರಕ, ಜಂಘಾ, ಕಪೋತ, ಶಿಖರ, ಗಲ, ಆಮಲಸಾರ, ಕುಂಭ ಮತ್ತು ಶೂಲ ಇವು ಅಷ್ಟವರ್ಗಗಳು.[45] ಇದನ್ನು ಕಳಿಂಗ ಶೈಲಿಯೆಂದೂ ಔತ್ತರೇಯ ಸಂಪ್ರದಾಯದ ಮೊದಲ ಹೆಜ್ಜೆಯೆಂದೂ ಖಚಿತವಾಗಿ ಗುರುತಿಸಬಹುದು. ದಾಕ್ಷಿಣತ್ಯ ಗ್ರಂಥದಲ್ಲಿ ಈ ವಿವರಗಳಿದ್ದು, ಔತ್ತರೇಯ ಸಂಪ್ರದಾಯ ಇನ್ನೂ ಪ್ರತ್ಯೇಕವಾಗಿ ಗುರುತಿಸಲಾಗದ ಕಾಲದಲ್ಲಿ ಈ ಗ್ರಂಥ ರಚನೆಗೊಂಡಿರಬಹುದು. ತ್ರಿವರ್ಗ, ಚತುವರ್ಗ, ಪಂಚವರ್ಗ, ಷಡ್ವರ್ಗ ಇತ್ಯಾದಿ ರಚನೆಗಳ ಉಲ್ಲೇಖವು ಶಾಸ್ತ್ರೀಯ ನೆಲೆಗಟ್ಟಿನ ಮೇಲೆ ನಿಂತಿದ್ದು ಅಧ್ಯಯನ ದೃಷ್ಟಿಯಿಂದ ಗಮನಾರ್ಹವೆನಿಸಿದೆ.

ಲುಪಾಕಾರ ದೇವಾಲಯದ ಸಾಮಾನ್ಯ ವಿವರಣೆಯನ್ನು ವಿಮಾನಾರ್ಚನ ಕಲ್ಪ ಗ್ರಂಥವು ಗುರುತಿಸಿದೆ.

ಏಕಾಂಶಂ ಅಧಿಷ್ಠಾನಂ ದ್ವಯಂಶಂ ಪಾದತುಂಗಂ
ದ್ವಯಂಶಂ ಶಿಖರಂ ಏಕಾಂಶಂ ಸ್ತೂಪಿಕೋದಯ
ಮೇವಂ ಚತುರ್ವರ್ಗ
ಯುತಂ ಅಥವಾ ಶಿಖರ ಕ್ರಿಯಾ ಲುಪಾಕಾರ
ವಿಧಾನೇನಕಾರಯೇತ್[46]

ಕಾಶ್ಯಪ ಶಿಲ್ಪ ಗ್ರಂಥದಲ್ಲಿರುವ ವಿವರಣೆ ಕೆಳ ಕಂಡಂತಿದೆ.

ಉತ್ತುಂಗೇ ಸಪ್ತಭಾಗೇತು ವ್ಯೋಮಾಂಶಂ
ಧರಾತಲಂ
ಪಕ್ವಾಂಶಂ ಪಾದ ತುಂಗಂ ತು ಶಿಖರೋಚ್ಚಂ
ಗುಣಾಂಶಕಂ
ಸ್ತೂಪೋತ್ಸೇಧಂ ತಥೈಕಾಂಶಂ ಏತತ್ ಸ್ಯಾತ್
ಸರ್ವಕಾಮಿಕಂ[47]

ಈ ವಿವರವು ಸಾರ್ವಕಾಮಿಕ ಪ್ರಭೇದಕ್ಕೆ ಬದಲಾಗಿ ಉಲ್ಲೇಖಿಸಲಾಗಿದೆ. ಗ್ರಂಥಗಳು ವಿವರಿಸುವ ಪ್ರಭೇದಗಳ ವಿವರಗಳು ಹಲವೆಡೆ ವ್ಯತ್ಯಾಸಗೊಂಡಿದ್ದು ವ್ಯವಸ್ಥಿತ ಅಧ್ಯಯನಕ್ಕೆ ತೊಡಕಾಗಿದೆ ಎಂದು ಗಮನಿಸಬಹುದು.

ಕಾಶ್ಯಪ ಶಿಲ್ಪ ಗ್ರಂಥವು ಶಾಂತಿಕಾದಿ ಪ್ರಭೇದಗಳೇ ಅಲ್ಲದೆ, ಶ್ರೀಬಂಧ, ಸ್ವಸ್ತಿ ಬಂಧ ಸುಶೋಭನ, ಶ್ರೀಕರ, ವೃತ್ತ ಕೇಸರ, ರಾಜಕೇಸರ, ಕಲ್ಯಾಣ ಸುಂದರ ಎಂಬ ಮತ್ತಷ್ಟು ಪ್ರಭೇದಗಳನ್ನು ಹೆಸರಿಸುತ್ತದೆ[48] ಪಾದ್ಮ ಸಂಹಿತೆಯಲ್ಲಿ, ವೈಜಯಂತಕ, ಶ್ರೀವಿಶಾಲ, ಪುಷ್ಪಕ, ಕೇಸರ, ಸುದರ್ಶನ, ಸ್ವಸ್ತಿಕ, ವಿಪುಲ ಸುಂದರ, ಪರ್ವತ ಮಂದರ ಇತ್ಯಾದಿಯಾಗಿ ಪ್ರಭೇದಗಳನ್ನು ಗುರುತಿಸಿದೆ.[49] ಕಾಮಿಕಾಗಮ ಗ್ರಂಥವು,

---

42 ಎನ್. ಆರ್. ಭಟ್ (ಸಂ.), 'ರೌರವಾಗಮ', ಪಾಂಡಿಚೇರಿ, ೧೯೭೨, ಪು. ೧೫೩, ಪ : ೬೦, ಶ್ಲೋ : ೮

43 'ವಿಮಾನಾರ್ಚನ ಕಲ್ಪ', ಪು : ೩೭, ಪ : ೯

44 ಎನ್. ಆರ್. ಭಟ್ (ಸಂ.) 'ಅಜಿತಾಗಮ', ಪಾಂಡಿಚೇರಿ' ೧೯೬೪, (ಕ್ರಿಯಾ ಪಾದ) ಪ: ೧೪, ಶ್ಲೋ : ೧೩

45 'ಕಾಮಿಕಾ', ಪು : ೧೨೫, ಪ: ೪೯, ಶ್ಲೋ : ೫-೬

46 'ವಿಮಾನಾರ್ಚನಕಲ್ಪ', ಪ : ೯

47 'ಕಾಶ್ಯಪಶಿಲ್ಪ', ಪು : ೨೭, ಶ್ಲೋ : ೨೩. ೨೪

48 ಅದೇ. ಪು. ೬೩-೬೫

49 'ಪಾದ್ಮ ಸಂಹಿತಾ', ಅ : ೮. ಶ್ಲೋ : ೨-೧೮

ವಿಜಯ, ಶ್ರೀಭೋಗ, ಶ್ರೀವಿಶಾಲ, ಸ್ವಸ್ತಿಬಂಧನ ಶ್ರೀಕರ, ಹಸ್ತಿ ಪೃಷ್ಠ, ಸ್ಕಂದಕಾಂತ, ಕೇಸರ ಮುಂತಾಗಿ ವಿವರಿಸುತ್ತದೆ.[50]

ಈ ಪ್ರಭೇದಗಳನ್ನು ಆಯಾ ಗ್ರಂಥಗಳು ಪ್ರಚಲಿತದಲ್ಲಿದ್ದ ಕಾಲ ಹಾಗೂ ಪ್ರಾದೇಶಿಕ ವಿಭಾಗಗಳಲ್ಲಿ ಗುರುತಿಸಲು ಸಾಧ್ಯವಾಗಿರಬಹುದು. ಆದ್ದರಿಂದ ಪ್ರಾದೇಶಿಕ ಪ್ರಭೇದಗಳೆಂದು ಹೆಸರಿಸುವುದು ಸೂಕ್ತವಾದೀತು. ಇವನ್ನು ಕೇವಲ ತಿಳುವಳಿಕೆಗಾಗಿ ಗಮನಿಸಬೇಕೇ ಹೊರತು ಸಾರ್ವತ್ರಿಕವಾಗಿ ಬಳಸಲಾಗದು. ಅಳಿದುಳಿದಿರುವ ದೇವಾಲಯಗಳಲ್ಲಿ ಗುರುತಿಸುವುದು ಅಸಾಧ್ಯ ಮತ್ತು ಕೆಲವೊಮ್ಮೆ ಅಸಂಗತವೆನಿಸಬಹುದು. ಆದರೆ ಕೆಲವು ಪ್ರಭೇದಗಳ ವಿಶ್ಲೇಷಣೆ ಸಾಧ್ಯವಿದ್ದು ಅವುಗಳ ಲಕ್ಷಣಗಳನ್ನು ಗಮನಿಸಬಹುದು.

ವೃತ್ತಾಕಾರದ ಕಂಠ ಮತ್ತು ಶಿಖರವುಳ್ಳದ್ದು ವೇಸರ ಶೈಲಿಯನಿಸಿದ್ದು ಏಕ ತಲವಿಮಾನದ ವೇಸರ ಶೈಲಿಯು ವಿಜಯ ಎಂಬ ಪ್ರಭೇದವೆಂದು ಕಾಮಿಕಾಗಮದಲ್ಲಿ ಗುರುತಿಸಲಾಗಿದೆ. ಏಕತಲ ರಚನೆಯಲ್ಲಿ ಕರ್ಣಕೂಟ ರಚನೆ ಸಾಧ್ಯವಾಗದು. ಬಹುಶಃಸಾಂಧಾರ ರಚನೆಯಿದ್ದಲ್ಲಿ ಕರ್ಣಕೂಟ ರಚನೆ ಸಾಧ್ಯವಿದೆ. ಆಗ ಶ್ರೀಭೋಗವೆಂಬ ಪ್ರಭೇದವೆಂದು ಹೆಸರಿಸಲ್ಪಡುತ್ತದೆ. ಅಷ್ಟಾಶ್ರದಿಂದ ಕೂಡಿದ ಕಂಠ, ಶಿಖರವುಳ್ಳದ್ದು ದ್ರಾವಿಡ ಶೈಲಿ. ಇದು ಏಕತಲ ವಿಮಾನವೆನಿಸಿದಲ್ಲಿ ಸ್ವಸ್ತಿ ಬಂಧನವೆನಿಸುತ್ತದೆ. ಆರುಕೋನಗಳಿಂದ ಕೂಡಿದ ಕಂಠ ಮತ್ತು ಶಿಖರವುಳ್ಳ ರಚನೆ ದ್ರಾವಿಡ ಶೈಲಿಯದು, ಇದು ಏಕತಲ ವಿಮಾನವೆನಿಸಿದಲ್ಲಿ ಸ್ಕಂದಕಾಂತ ಪ್ರಭೇದವೆಂದು ಗುರುತಿಸಲಾಗುತ್ತದೆ. ಚತುರಶ್ರಾಕಾರದ ನಾಗರ ಶೈಲಿಯು ಏಕತಲ ರಚನೆಯನ್ನು ಹೊಂದಿದ್ದು ಶ್ರೀಕರ ಪ್ರಭೇದವೆಂದು ಹೆಸರಿಸಲಾಗಿದೆ. ಏಕಭೂಮಿ ರಚನೆಯ ನಂತರ, ದ್ವಿಭೂಮಿ, ತ್ರಿಭೂಮಿ ಮುಂತಾದ ರಚನೆಗಳು ಪ್ರತ್ಯೇಕ ಅಧ್ಯಾಯಗಳಲ್ಲಿ ಹೇಳಲ್ಪಟ್ಟಿವೆ ಕಾಶ್ಯಪಶಿಲ್ಪ ಗ್ರಂಥದಲ್ಲಿ ಪಂಚ ತಲ ವಿಮಾನದವರೆಗೆ ಶಾಂತಿಕಾದಿ ಪ್ರಭೇದ ರಚನೆಗಳೂ ವಿವರಿಸಲ್ಪಟ್ಟಿವೆ. ಕಾಮಿಕಾಗಮ ಗ್ರಂಥದ ದ್ವಿತಲ ವಿಮಾನ ರಚನೆಯು ಕಾಶ್ಯಪಶಿಲ್ಪದಲ್ಲಿರುವ ದ್ವಿತಲ ರಚನೆಯ ಶಾಂತಿಕ ಪ್ರಭೇದವನ್ನು ಹೋಲುತ್ತದೆ. ಮಯಮತವು ದ್ವಿತಲ ರಚನೆಯಲ್ಲಿ "ವಿಮಾನೋತ್ಸೇದಂ ವಿಭಜೇತ್ ಅಷ್ಟಾವಿಂಶತಿ ಸಂಖ್ಯಯಾ"[51] ಎಂದು ವರ್ಗ ಪ್ರಸ್ತಾರವನ್ನು ತಿಳಿಸಿದೆ. ಕಾಶ್ಯಪ ಶಿಲ್ಪದ ದ್ವಿತಲ ರಚನೆ ಕೆಳಕಂಡಂತಿದೆ :

ಪ್ರಾಸಾದೋಚ್ಚಂತು ವಿಭಜೇದಷ್ಟಾ ವಿಂಶತಿ ಭಾಗಯಾ ಗುಣಾಂಶಂ ಧರಾತಲೋತ್ಸೇದಂ ರಸಾಂಶಂ ಚರಣೋದಯಂ ಪ್ರಸ್ತರೋಚ್ಚಂ ಗುಣಾಂಶಂ ಸ್ಯಾತ್ ಭೂತಾಂಶಂ ವೇದಿಕೋದಯಂ ದ್ವಿಭಾಗಂ ಪ್ರಸ್ತರೋತ್ಸೇಧಂ ಸಾರ್ಧಮೇಕಾಂಶಂ ವೇದಿಕೋದಯಂ ದ್ವಿಭಾಗಂ ಗಲೋತ್ಸೇಧಂ ಸಾರ್ಧವೇದಂ ಶಿರೋಧಯಂ ಅತ್ಯರ್ಧಾಂಶಂ ಶಿಖಾಮಾನಂ ಕಲ್ಪಿತಂ ಶಾಂತಿಕಂ ಭವೇತ್[52] ದ್ವಿತಲಾದಿ ರಚನೆಯಲ್ಲಿ ಕೂಟ, ಕೋಷ್ಠ, ಪಂಜರ ರಚನೆಯನ್ನು ಕಾಣಬಹುದು. ಇದನ್ನು "ಕೂಟ ಕೋಷ್ಠಾನಾಂ ಪಂಜರಾಣಾಂತು ಲಕ್ಷಣಂ ದ್ವಿತಲಾದಿ ತಲಾಂತಾನಾಂ"[53] ಎಂದು ಗ್ರಂಥಗಳು ಗುರುತಿಸಿವೆ. ಹಾರ ಅಥವಾ ಕೈಪಿಡಿಯ ರಚನೆಯು ಭಿತ್ತಿಯನ್ನಾಶ್ರಯಿಸಿದ್ದು ಮಯಮತ ಹಾಗೂ ವಿಮಾನ ಕಲ್ಪ ಗ್ರಂಥಗಳಲ್ಲಿ ವಿಸ್ತಾರವಾದ ವರ್ಣನೆಯಿದೆ. ಮಯಮತವು "ಕೋಷ್ಠತು ದ್ವಿಗುಣಾಯಾಮಂ ಶೇಷಂ ಹಾರ ಪಂಜರಂ"[54] ಎಂದು ಉಲ್ಲೇಖಿಸಿದೆ. ವಿಮಾನಾರ್ಚನ ಕಲ್ಪದಲ್ಲಿ ಸ್ಪಷ್ಟ ಚಿತ್ರಣವಿದೆ.

"ಬಾಹ್ಯ ಭಿತ್ತಿಂ ಷಡ್‌ಭಾಗಂ ವಿಭಜ್ಯ ದ್ವಯಂ
ಶಂ ಕೋಷ್ಠಂ

50 'ಕಾಮಿಕಾಗಮ,' ಪು : ೧೫೭, ಪ : ೬೦, ಶ್ಲೋ : ೬-೧೦
51 ಅದೇ., ಶ್ಲೋ : ೧೩
52 'ಕಾಶ್ಯಪ ಶಿಲ್ಪ', ಪು : ೬೬, ಪ : ೨೮, ಶ್ಲೋ : ೬-೮
53 ಅದೇ,, ಪು : ೭೯, ಪ : ೪೧, ಶ್ಲೋ : ೧
54 'ಮಯಮತ', ಪು : ೯೪೭, ಅ : ೨೦, ಶ್ಲೋ : ೩

ಏಕಾಂಶಂ ಕೂಟಂ ಏಕಾಂಶಂ ಹಾರಾಂತರಂ ಅಥವಾ

ತಮಷ್ಟಥಾ ವಿಭಜ್ಯ ತದೇಕಾಂಶಂ ಕೂಟತಾರಂ

ಮಧ್ಯೇ ದ್ವಯಂಶಂ ಶಾಲಾಂತಯೋರ್ಮಧ್ಯೇಚ ಏಕಾಶಂ

ಪಂಜರಂ ವಿಶಾಲಂ ಶೇಷಂ ಅರ್ಧಾಂಶೈ ಹಾರಾಂತರಂ ಕಾರಮೇತ್"[55]

ಏಕತಲ ರಚನೆಯ ಷಡ್ವರ್ಗದೊಂದಿಗೆ ಪಾದ ಪ್ರಸ್ತರ ವರ್ಗಗಳು ಪುನರಾವರ್ತನೆಗೊಳ್ಳುತ್ತಾ ತಲ ರಚನೆಯನ್ನು ಹೆಚ್ಚಿಸಿವೆ. ಪ್ರಸ್ತರ ವರ್ಗದಲ್ಲಿ ಕೂಟ ಶಾಲಾ ರಚನೆಗಳನ್ನು ಕಾಣಬಹುದು. ಮಯಮತ, ಕಾಮಿಕಾಗಮ, ಕಾಶ್ಯಪ ಶಿಲ್ಪ ಗ್ರಂಥಗಳಲ್ಲಿ ಷಡ್ವರ್ಗಗಳ ಪರ್ಯಾಯ ಪದಗಳ ಸರಣಿಯಿದೆ. ಈ ಪದಗಳೂ ವ್ಯಾಪಕವಾಗಿ ಬಳಕೆಯಲ್ಲಿದ್ದು ಇವನ್ನು ಕುರಿತ ಶ್ಲೋಕಗಳನ್ನು ಇಲ್ಲಿ ಗಮನಿಸಬಹುದು.

ಅಧಿಷ್ಠಾನ : ಮಸೂರಕಮಧಿಷ್ಠಾನಂ ವಸ್ತ್ವಾಧಾರಂ ಧರಾತಲಂ ತಲಂ ಕುಟ್ಟಿಮಮಾದ್ಯಂಗಂ ಪರ್ಯಾಯ ವಚನಾನಿ

ಪಾದ : ಸ್ಥಾಣುಃ ಸ್ಥೂಣಶ್ಚ ಪಾದಶ್ಚ ಜಂಘಾಚ ಚರಣಾಂಘ್ರಿ ಕಂ ಸ್ತಂಭೇಸ್ತು ತಲಿಪಂ ಕಂಪಃ ಪಾದಾನಾಮಭಿಧಾನಕಂ

ಪ್ರಸ್ತರ : ಪ್ರಸ್ತರಂ ಚೈವಗೋಪಾನಂ ಕಪೋತಂ ಮಂಚ ಮೇವನಾನೀವುಮಿತ್ಯೇವಾಖ್ಯಾತಂ ಪ್ರಸ್ತರಸ್ಯ ದ್ವಿಜೋತ್ತಮಾ

ಕಂಠ : ಕಂಧರಂ, ಗಲ ಸಂಜ್ಞಾಂಚ ಕಂಠ ಗ್ರೀವಾ ಶಿರೋಧರಂ ಏವಂ ಕಂಠಸ್ಯ ಮಾನಂ ಸ್ಯಾತ್ ಶಿಖರಂ ಪುನರುಚ್ಯತೇ

ಶಿಖರ : ಶಿಖರಂ ಶಿರಮೂರ್ಧಾಚ ಶಿಖಾ ಮೌಲಿಶ್ಚ ಮಸ್ತಕಂ ಶೀರ್ಷಕಮಿತಿ ವಿಜ್ಞೇಯಂ ಶಿರೋ ವರ್ಗಸ್ಯ ಪಂಡಿತಾಃ

ಸ್ತೂಪಿ : ಸ್ಥೂಪಿಕಾಚ ಘಟಃ ಕೀಲೋ ಚುಲುಕಃ ಸ್ಥೂಪಿ ರಿತ್ಯಾಪಿ ಶಿಖಾಸ್ಥೂಪಿ ರಿತಿಖ್ಯಾತಾಚೂಲಿಕಾಚ ದ್ವಿಜೋತ್ತಮಾ[56]

ಮೇಲ್ಕಂಡ ಟಿಪ್ಪಣಿ ಉಲ್ಲೇಖಗಳಿಂದ ದಾಕ್ಷಿಣಾತ್ಯ ಸಂಪ್ರದಾಯದ ದೇವಾಲಯಗಳ ಸ್ಥೂಲ ಚಿತ್ರಣ ದೊರಕಿದಲ್ಲಿ ಈ ಲೇಖನದ ಮೂಲ ಉದ್ದೇಶ ಸಫಲಗೊಳ್ಳುತ್ತದೆ.

---

55 ವಿಮಾನಾರ್ಚನ ಕಲ್ಪ. ಪು : ೪೪, ಪ : ೧೦

56 ಕಾಮಿಕಾಗಮ ಅ : ೫೫ ಶ್ಲೋ : ೨೦೨-೨೦೮

ಕೂ.ಸ. ಅಪರ್ಣ*

# ದೇವಾಲಯದ 'ಪ್ರಸ್ತರ' ರಚನೆಯಲ್ಲಿ ಶಾಸ್ತ್ರಗ್ರಂಥಗಳ ಪಾತ್ರ

ದೇವಾಲಯದಲ್ಲಿ ಭಿತ್ತಿಯ ನಂತರ ಬರುವ ಭಾಗವೇ ಪ್ರಸ್ತರ. ಷಡ್ವರ್ಗ ದೇವಾಲಯಗಳಲ್ಲಿ, ಊರ್ಧ್ವಕ್ರಮದಲ್ಲಿ ಇದು ಮೂರನೇ ಭಾಗವಾಗಿದ್ದು, ಭಿತ್ತಿಯ ಅಂತ್ಯದಿಂದ 'ಗ್ರೀವದ' ಪ್ರಾರಂಭದವರೆಗಿನ ಭಾಗವನ್ನು 'ಪ್ರಸ್ತರ' ಎನ್ನಬಹುದು. ಮಯಮತದ ೧೬ನೆಯ ಅಧ್ಯಾಯ, ಮಾನಸಾರದ ೧೬ನೆಯ ಅಧ್ಯಾಯ ಅಜಿತಾಗಮದ ೧೮ನೆಯ ಅಧ್ಯಾಯ, ಕಾಮಿಕಾಗಮದ ೫೮ನೆಯ ಅಧ್ಯಾಯ, ವಿಮಾನಾರ್ಚನ ಕಲ್ಪದ ೯ನೇ ಪಟಲ, ಕಾಶ್ಯಪಶಿಲ್ಪದ ೧೯ನೆಯ ಅಧ್ಯಾಯಗಳಲ್ಲಿ ಪ್ರಸ್ತರವನ್ನು ಕುರಿತ ವಿವರಣೆಯು ದೊರೆಯುತ್ತಿದ್ದು, ಆ ಬಗ್ಗೆ ಇಲ್ಲಿ ವಿಶ್ಲೇಷಿಸಲಾಗಿದೆ.

ಮಂಚ, ಕಪೋತ, ಪ್ರಚ್ಛಾದನ, ಗೊಪಾನ, ವಿತಾನ, ವಲಭೀ, ಮತ್ತವಾರಣ, ಇವು ಪ್ರಸ್ತರದ ಪರ್ಯಾಯ ಪದಗಳೆಂದು ಮಾನಸಾರವು ಹೇಳಿದ್ದು 'ಕುಟ್ಟಿಮ' ಎಂಬುದನ್ನೂ ಪ್ರಸ್ತರದ ಅರ್ಥದಲ್ಲಿ ಈ ಗ್ರಂಥದಲ್ಲಿ ಬಳಸಿದೆ. ಕಾಮಿಕಾಗಮದಲ್ಲಿ ಗೊಪಾನ, ಕಪೋತ, ಮಂಚ, ನೀವ್ರ, ಇವುಗಳನ್ನು ಪ್ರಸ್ತರದ ಪರ್ಯಾಯ ಪದಗಳೆನ್ನಲಾಗಿದೆ ಇಲ್ಲಿ ಕಪೋತದ ಪರ್ಯಾಯ ಪದಗಳಾದ ಗೊಪಾನ, ನೀವ್ರಗಳನ್ನು ಪ್ರಸ್ತರದ ಪರ್ಯಾಯಪದಗಳಾಗಿ ಸೇರಿಸಿರುವುದು, ಪ್ರಸ್ತರದಲ್ಲಿ ಕಪೋತಕ್ಕೆ ದೊರೆತಿರುವ ಪ್ರಾಧಾನ್ಯತೆಯನ್ನು ಸೂಚಿಸುತ್ತದೆ. ದೇವಾಲಯದಲ್ಲಿ ಅದರ ಮೇಲೆ ಬಿದ್ದ ನೀರು ಹರಿದು ಹೋಗಲು ಇದು ಸಹಾಯಕವಾಗಿದ್ದು, ಭದ್ರತೆಯ ದೃಷ್ಟಿಯಿಂದ ಇದು ಮುಖ್ಯಭಾಗವಾಗಿದೆ. ಅಂತೆಯೇ ಪ್ರಸ್ತರದಲ್ಲಿ ಇದು ಹೆಚ್ಚು ಮುಂಚಾಚಿರುವ ಮತ್ತು ಅಲಂಕಾರಿಕವಾಗಿರುವ ಭಾಗ, ಆದ್ದರಿಂದ ಇದಕ್ಕೆ ದೊರೆತಿರುವ ಪ್ರಾಮುಖ್ಯತೆಯು ಸಹಜವೇ ಆಗಿದೆ. ಅಂತೆಯೇ ಇಲ್ಲಿ ಬಳಸಿರುವ 'ಪ್ರಚ್ಛಾದನ' ಎಂಬ ಪದವು ಪ್ರಸ್ತರದ ಚೌಕಟ್ಟು ಛಾವಣಿಯ ರಚನೆಗೆ ದಾರಿಯಾಗಿರುವುದನ್ನೂ, ಅದರ ಮೇಲಿನ ಅಂಗಗಳ ರಚನೆಗೆ ಆಧಾರವಾಗಿರುವುದನ್ನೂ ಸೂಚಿಸುತ್ತಿದೆ.

ಪ್ರಸ್ತರದಲ್ಲಿ ಅನೇಕ ಅಂಗಗಳಿರುತ್ತವೆ. ಇವುಗಳ ಬಗ್ಗೆ ಕಾಮಿಕಾಗಮವು ಪಾದ, ಗಲ, ಮಸೂರಕ ಎಂದು ಒಂದು ಸ್ಥೂಲ ವಿವರವನ್ನು ನೀಡಿದೆ. ಇದನ್ನು ಪ್ರಸ್ತರದ architrave, frieze and cornice ಎಂದು ವಿದ್ವಾಂಸರು ಗುರುತಿಸಿದ್ದು.[1] ಇಲ್ಲಿ ಪ್ರಸ್ತರದ ಕಪೋತದವರೆಗಿನ ಭಾಗವನ್ನು ಮಾತ್ರ ಹೇಳಿದೆ ಎನ್ನಬಹುದು. ಮಯಮತದಲ್ಲಿ ಮತ್ತು ಮಾನಸಾರದಲ್ಲಿ ಪ್ರಸ್ತರವು 'ಉತ್ತರ'ದಿಂದ ಆರಂಭವೆಂಬ ಸೂಚನೆ ಇದ್ದು, ಪ್ರತಿ (ವಾಜನ)ಯು ಕೊನೆಯ ಅಂಗ ಎಂದು ಹೇಳಲಾಗಿದೆ ಪ್ರಸ್ತರದಲ್ಲಿನ ಪೂರ್ಣ ಅಂಗಗಳ ಬಗ್ಗೆ ಹೇಳುವಾಗ ಶಾಸ್ತ್ರ ಗ್ರಂಥಗಳು ಎರಡು ರೀತಿಯನ್ನು ಗುರುತಿಸಿವೆ. ಅಜಿತಾಗಮದಲ್ಲಿ ಉತ್ತರ, ವಾಜನ, ಭೂತಮಾಲಾ, ನಿರ್ಗಮ, ಪಟ್ಟಿಕಾ, ವಾಜನ, ಕಪೋತ, ನಿರ್ಗಮ, ಲಂಬನ, ಪಟ್ಟಿಕಾ, ಕಂಠ,

* ೧೬೪೩, ೨೧ನೆಯ ಮುಖ್ಯರಸ್ತೆ ಬನಶಂಕರಿ ೧ನೆಯ ಹಂತ, ಬೆಂಗಳೂರು-೫೬೦ ೦೫೦

1 ಪಿ.ಕೆ. ಆಚಾರ್ಯ-ಎನ್‌ಸೈಕ್ಲೋಪೀಡಿಯ ಆಫ್ ಇಂಡಿಯನ್ ಆರ್ಕಿಟೆಕ್ಚರ್-ಪು. ೩೨೮.

ಪಟ್ಟಿಕಾ, ಕಪೋತ, ನವಕೋಣೆ (?) ಗಳನ್ನು ಹೇಳಿದೆ. ವಿಮಾನಾರ್ಚನ ಕಲ್ಪದಲ್ಲೂ ಬಹುಪಾಲು ಇದೇ ವಿವರಗಳಿದ್ದು ಇದರಲ್ಲಿ ಅಜಿತಾಗಮದ ವಾಜನದ ಬದಲು 'ನಿರ್ಗಮ' ಎಂದೂ, ಭೂತಮಾಲಾದ ಬದಲು 'ವಸಂತಕ' ಎಂದೂ ಹೇಳಲಾಗಿದೆ. ಈ ನಂತರ ಬರುವ ಅಜಿತಾಗಮದ 'ನಿರ್ಗಮ'ವನ್ನು 'ಕಪೋತ'ವೆಂದು ಇಲ್ಲಿ ಕರೆದಿದ್ದು, ಇವುಗಳನ್ನು ಒಂದರೊಡನೊಂದಾಗಿ ಸಮೀಕರಿಸಬಹುದಾಗಿದೆ. ಇದರಲ್ಲಿ ಅಜಿತಾಗಮದ ಆರಂಭದ ಪಟ್ಟಿಕಾ ವಾಜನ, ಕಪೋತಗಳನ್ನು ಹೇಳಲಾಗಿಲ್ಲವಾದರೂ, ಇದೇ ಸಹಜತೆಗೆ ಹತ್ತಿರವಾಗಿ ತೋರುತ್ತದೆ. ಅಜಿತಾಗಮದ, ಆನಂತರ ಬಂದಿರುವ ಪಟ್ಟಿಕಾಗೆ ಇಲ್ಲಿ 'ಪ್ರತ್ಯಾಲಿಂಗ' (ಕಪೋತದಬದಲು) ವೆಂದೂ ಹೇಳಿ, ನಂತರದ ಅಂಗವು 'ಅಂತರಿತ' ಎಂದಿರುವುದು ಸರಿಯಾದ ವಿವರವಾಗಿದೆ. ಇದರ ಮುಂದಿನ ಅಂಗವೇ ವಾಜನ, 'ಅಂತರಿತ'ದ ನಂತರ ಬರುವ 'ಪ್ರತಿ'ಯನ್ನು ಅಜಿತಾಗಮವು 'ಪ್ರಸ್ತರ' ಎಂದಿದ್ದರೆ. ವಿಮಾನಾರ್ಚನ ಕಲ್ಪವು ಇದನ್ನ ಗುರುತಿಸಿಯೇ ಇಲ್ಲ.

ಕಾಮಿಕಾಗಮದಲ್ಲಿ ಉತ್ತರ, ವಾಜನ, ಮುಷ್ಟಿ ಬಂಧ ಮೃಣಾಲಿಕಾ, ದಂಡಿಕಾ, ವಲಯ, ಕ್ಷುದ್ರ ಗೋಪನಾ, ಆಚ್ಛಾದನ, ಆಲಿಂಗ, ಅಂತರಿತ, ಪ್ರತಿ– ಈ ಅಂಗಗಳು ಪ್ರಸ್ತರದಲ್ಲಿ ಕ್ರಮವಾಗಿ ಬರುವುದೆಂದು ಹೇಳಲಾಗಿದೆ. ಮಯಮತದಲ್ಲೂ ಇದೇ ರೀತಿ ಇದ್ದು, ಇದರಲ್ಲಿ ಮೃಣಾಲಿಕಾ ಬದಲು 'ಪ್ರಮಾಲಿಕಾ' ಎಂದು ಹೆಳಿದೇ. ಕಾಮಿಕಾಗಮದಲ್ಲಿ 'ದಂಡಿಕಾ'ದ ನಂತರ ವಲಯ ಮತ್ತು ಗೊಪಾನ ಎರಡನ್ನೂ ಹೇಳಿದ್ದರೆ, ಇಲ್ಲಿ ಈ ಯಾವುದಾದರೂ ಒಂದನ್ನು ಮಾಡಬೇಕೆಂದಿದೆ. ಮಯಮತದಲ್ಲಿ ಪ್ರಮಾಲಿಕಾದನಂತರ 'ಕುಂಭ–ಮುಂಡಿ' ಯನ್ನು ಹೆಸರಿಸಿದೆ. ಮಾನಸಾರದಲ್ಲಿ ಪ್ರಸ್ತರದ ವಿವಿಧ ಬಗೆಗಳನ್ನು ಹೇಳುವಾಗ, ಒಂದು ಬಗೆಯ ಪ್ರಸ್ತರದಲ್ಲಿ ಇದೇ ಅಂಗಗಳನ್ನು ಸೂಚಿಸಲಾಗಿದೆ. ಅದರಂತೆ, ಉತ್ತರ, ವಾಜನ, ಪದ್ಮ, ವಾಜನ, ಮುಷ್ಟಿಬಂಧ, ವಾಜನ, ಮೃಣಾಲಿಕಾ, ವಾಜನ, ಪಟ್ಟಿಕಾ, ವಾಜನ, ಕಂಪ, ಪದ್ಮ, ವಾಜನ, ಕಪೋತ, ಆಲಿಂಗ, ವಾಜನ, ಅಂತರಿತ, ಪ್ರತಿ, ವಾಜನಗಳು ಪ್ರಸ್ತರದ ಅಂಗಗಳಾಗಿವೆ. ಕುಲಿಕಾಂಘ್ರಿ ಮತ್ತು ನಾಟಕ ಎಂಬ ಅಂಗಗಳನ್ನೂ ಈ ಗ್ರಂಥದಲ್ಲಿ ಗುರುತಿಸಲಾಗಿದೆ. ಕೆಲವು ವಿವರಗಳನ್ನು ಗಮನಿಸಿದಾಗ ನಾಟಕ ಮತ್ತು ಕುಲಿಕಾಂಘ್ರಿಕ ಒಂದೇ ಎನಿಸುತ್ತದೆಯಾದರೂ, ಅದನ್ನು ಬೇರೆ ಬೇರೆ ಯಾಗಿಯೂ ಹೇಳಿರುವುದಿದೆ. ನಾಟಕದ ವಿವರವನ್ನು ಗಮನಿಸಿದಾಗ ಇದು ವಲಭೀ/ಮುಷ್ಟಿಬಂಧಕ್ಕೆ ಪರ್ಯಾಯ ದಂತೆ ತೋರುವುದಾದರೂ ನಾಟಕದ ಪರ್ಯಾಯ ಪದ ಗಳಲ್ಲಿ ಇದನ್ನು ಸೇರಿಸಿಲ್ಲ.

ಈ ಗ್ರಂಥಗಳಲ್ಲಿ ದೊರೆಯುವ ಪ್ರಸ್ತರದ ಎರಡನೇ ರೀತಿಯ ಅಂಗಗಳೆಂದರೆ–ಉತ್ತರ, ವಾಜನ, ವಲಭೀ (ವಸಂತಕ), ಊರ್ಧ್ವವಾಜನ, ಕಪೋತ, ಆಲಿಂಗ, ಅಂತರಿತ, ಪ್ರತಿ, ವಾಜನ ಎಂಬುವು. ಮಾನಸಾರದಲ್ಲಿ, ಪ್ರಸ್ತರದ ವಿವಿಧ ಬಗೆಗಳನ್ನು ಹೇಳುವಾಗ ಇದೇ ಅಂಗ ಗಳನ್ನು ಹೇಳಿದ್ದರೂ, ವಲಭೀ'ಯ ನಂತರ 'ಪದ್ಮ' ವನ್ನು[2] ಹೇಳಿದೆ. ಕಾಶ್ಯಪಶಿಲ್ಪದಲ್ಲಿ ಎರಡು ರೀತಿಯ ಪ್ರಸ್ತರವನ್ನು ಹೇಳಿದ್ದರೂ, ಅವುಗಳ ಅಂಗಗಳಲ್ಲಿ ಯಾವುದೇ ವ್ಯತ್ಯಾಸವು ಕಂಡುಬರುವುದಿಲ್ಲ ಸುಪ್ರಭೇದಾಗಮದಲ್ಲಿ ಉತ್ತರದ ಮೇಲೆ 'ವಾಜನ'ವು ಬರುವುದೆಂದೂ, ಅದರ ಮೇಲೆ ಪದ್ಮಪಟ್ಟಿಕೆ ಮಾಡ ಬೇಕೆಂದೂ ಹೇಳಿರುವುದಲ್ಲದೆ, ಅಂತ್ಯದಲ್ಲಿ 'ಗಜಶ್ರೇಣೀ, ಮೃಗಶ್ರೇಣೀ'ಯನ್ನು ಮಾಡಬೇಕೆಂದು ಸೂಚಿಸಿದೆ

---

2 ಮಾನಸಾರದಲ್ಲಿ 'ಉತ್ತರ'ದ ಪರ್ಯಾಯ ಪದಗಳಾಗಿ ಆಧಾರ, ಆಧೇಯ, ಶಯನ, ಉದ್ಧೃತ, ಮಾರ್ಧಕ (?), ಮಹಾತೌಲಿ, ಸ್ವಮಂಶಕ, ಪ್ರಚ್ಛಾದನವನ್ನೂ (೨೮-೨೯-ಸಾಲು), 'ವಾಜನ'ಕ್ಕೆ ಪರ್ಯಾಯವಾಗಿ ಕ್ಷೆಪಣ, ನೇತ್ರ, ಪಟ್ಟ, ಉತ್ತರ, ಪಟ್ಟಿಕಾ, ಕಂಪ, ತ್ರಿಕ, ಮುಂದ, ಅಂತರಿತಗಳನ್ನು (ಸಾಲು-೨೩-೨೪), ಮುಷ್ಟಿಬಂಧಕ್ಕೆ ಪರ್ಯಾಯವಾಗಿ ಸಂಗ್ರಹ, ಮದ್ದಲ, ಉದ್ವೃತ ಹಸ್ತಕ, ವಲಭೀ, ಧಾರಣವನ್ನೂ (೨೬), ಹೇಳಲಾಗಿವೆ. ಕಪೋತಕ್ಕೆ ಪರ್ಯಾಯವಾಗಿ ವಕ್ತ್ರಹಸ್ತ, ಲುಪಾ, ಗೋಪಾನ, ಮತ್ತು ಚಂದ್ರಗಳೂ (೨೭), ಅಂತರಿತಕ್ಕೆ ಪರ್ಯಾಯವಾಗಿ ಮೇಲೆ ಹೇಳಿದ ವಾಜನದ ಪರ್ಯಾಯ ಪದಗಳೊಂದಿಗೆ ದೃಕ್ಕ, ಮುಂಡಗಳೂ (೪೬-೪೭), 'ಪ್ರತಿ'ಗೆ ಪರ್ಯಾಯವಾಗಿ ಅನ್ವಂತ, ಅವಸಾನ, ವಿಧಾನಕ ಗಳನ್ನು ಹೇಳಲಾಗಿವೆ. (೪೬-೪೭, ೨೨). ಆದರೂ ಈ ಪರ್ಯಾಯ ಪದಗಳನ್ನು ಗುರುತಿಸುವಾಗ ಈ ಗ್ರಂಥವು ಅಷ್ಟು ಸರಿಯಾಗಿ ಹೇಳಿಲ್ಲವೆನ್ನಿಸುತ್ತದೆ.

ಉದ್ಧೃತ) ಇದರಲ್ಲಿ ಪ್ರಸ್ತರದ ಪ್ರಧಾನ ಭಾಗವಾದ ಕಪೋತವನ್ನೇ ಹೇಳಿಲ್ಲದಿರುವುದು ಗಮನಾರ್ಹವಾಗಿದೆ.

ಈಗ ಉಳಿದು ಬಂದಿರುವ ದೇವಾಲಯಗಳನ್ನು ಗಮನಿಸಿದಾಗ, ಈ ಎರಡನೇ ರೀತಿಯ ಅಂಗಗಳಿಂದ ಕೂಡಿದ ಪ್ರಸ್ತರವನ್ನೇ ನಾವು ಸಾಮಾನ್ಯವಾಗಿ ಕಾಣುತ್ತೇವೆ. ಪ್ರಾಚೀನ ಕಾಲಕ್ಕೆ ಸೇರುವ ಮಹಾಕೂಟದ ಬಾಣಂತಿ ಗುಡಿ, ಹಿರೇಮಹಾಕೊಟೇಶ್ವರ ಇತ್ಯಾದಿ ದೇವಾಲಯಗಳಲ್ಲಿ ಕಪೋತ ಮಾತ್ರ ಎದ್ದು ಕಾಣುವಂತಿದ್ದು ಒಟ್ಟು ಪ್ರಸ್ತರದ ಕಾರ್ಯೋದ್ದೇಶವನ್ನು ಇದು ಪೂರೈಸುತ್ತಿದೆ ಎನ್ನಬಹುದು. ಆದರೂ ದೇವಾಲಯದಲ್ಲಿ ಪ್ರಸ್ತರದ ಅಂಗಗಳು ಬಹುಬೇಗ ರೂಪುಗೊಂಡವೆಂಬುದನ್ನು ಐಹೊಳೆಯ ಮೇಗುತಿ ದೇವಾಲಯ, ಬಾದಾಮಿಯ ಕೆಳಗಣ ಶಿವಾಲಯಗಳು ಸ್ಪಷ್ಟಪಡಿಸುತ್ತವೆ. ಐಹೊಳೆಯ ಕೊಂತಿಗುಡಿ ದೇವಾಲಯಗಳಲ್ಲಿ ಈ ಭಾಗಗಳು ಅಸ್ಪಷ್ಟವಾಗಿಯೇ ಇವೆ. ಅನಂತರದ ಎಲ್ಲ ದೇವಾಲಯಗಳಲ್ಲೂ ಈ ಅಂಗಗಳು ಕಾಣಬರುತ್ತವೆ.

ಈ ಅಂಗಗಳನ್ನು ಯಾವ ರೀತಿ ರಚಿಸಬೇಕೆಂಬುದರ ಬಗ್ಗೆ ಮಾನಸಾರದಲ್ಲಿ ಸೂಚನೆ ಇದೆ. 'ಉತ್ತರ'ವನ್ನು ಸುಂದರವಾಗಿ ಕಾಣುವಂತೆ ಹೊರ ಚಾಚಬೇಕೆಂದೂ, ವಾಜನ ಮತ್ತು ವಲಭೀಯು ಅದಕ್ಕೆ ಸಮನಾಗಿಯೂ ಇರಬೇಕೆಂದಿದೆ. ಇದರ ಮೇಲಿನ ವಾಜನವು ಅದರ ಕಾಲು ಭಾಗ ಇರಬೇಕು ; ಮತ್ತು ಕಪೋತವು ಉಳಿದ ಯಾವುದೇ ಭಾಗಕ್ಕಿಂತಲೂ ಹೊರಚಾಚಿರಬಹುದೆಂದೂ ಸೂಚಿಸಿದೆ. ಆಲಿಂಗ ಮತ್ತು ಅಂತರಿತಗಳು (ಕೆಳಗಿರುವ) ಸ್ತಂಭದಿಂದ ಸ್ವಲ್ಪ ಮಾತ್ರ ಹೊರಚಾಚಿರಬೇಕೆಂದೂ, 'ಪ್ರತಿ'ಯು ಇದರ ಅರ್ಧ ಅಥವಾ ಮುಕ್ಕಾಲು ಭಾಗ ಮಾತ್ರ ಹೊರ ಚಾಚಿದ್ದು, ಅದರ ಮೇಲಿನ ವಾಜನವು ಸ್ತಂಭಕ್ಕಿಂತಲೂ ಹೊರಚಾಚಿರಬೇಕೆಂದಿದೆ. ದೇವಾಲಯಗಳಲ್ಲಿ ಈ ರಚನೆಯನ್ನು ಗಮನಿಸಿದರೆ, ಉತ್ತರಕ್ಕಿಂತಲೂ ವಾಜನವು ಸ್ವಲ್ಪ ಹೊರಚಾಚಿರುವುದು ಕಂಡು ಬರುತ್ತದೆ. ಅಲ್ಲದೆ, ಉತ್ತರದಿಂದ ಕಪೋತದವರೆಗೆ ಹೆಚ್ಚು ಹೆಚ್ಚು ಹೊರಚಾಚುತ್ತಾ ಹೋಗಿ, ಅನಂತರ 'ಪ್ರತೀ'ವರೆಗೆ ಹೊರಚಾಚುವಿಕೆಯು ಕಡಿಮೆಯಾಗುತ್ತಾ ಹೋಗುವುದನ್ನು ಗುರುತಿಸಬಹುದಾಗಿದೆ. ಗೊಪಾನ (=ಕಪೋತ)ವನ್ನು ಉತ್ತರ ಅಥವಾ ವಾಜನದವರೆಗೆ ತೂಗಾಡುವಂತೆ ರಚಿಸಬೇಕೆಂದು ಮಯಮತದಲ್ಲಿ ಹೇಳಿದೆ. ಇದರಂತೆ ಗಮನಿಸಿದರೆ, ಗೊಪಾನವು ಬಾದಾಮಿ ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದ ದೇವಾಲಯಗಳಲ್ಲಿ ವಾಜನದವರೆಗೆ ಚಾಚಿರುವುದನ್ನೂ, ಗಂಗ ಮತ್ತು ನೊಳಂಬರ ಕಾಲದ ದೇವಾಲಯಗಳಲ್ಲಿ ಇದು 'ವಲಭೀಯವರೆಗೆ ಮಾತ್ರ ಚಾಚಿರುವುದನ್ನು ಗುರುತಿಸಬಹುದಾಗಿದೆ. ಈ ಕಾರಣದಿಂದಲೇ ಗಂಗರ ಕಾಲದಲ್ಲಿ ಕೆಲವೆಡೆ ಕಪೋತವು ಗುಂಡಾಗಿರುವಂತೆ ಕಂಡುಬಂದರೆ, ರಾಷ್ಟ್ರಕೂಟರಲ್ಲಿ ಹೆಚ್ಚು ಉದ್ದವಾಗಿರುವುದು ಕಾಣಬರುತ್ತದೆ. ವಿಜಯನಗರ ಕಾಲದ ದೇವಾಲಯಗಳಲ್ಲಿ ಇದು ಇಂಗ್ಲಿಷ್ ವರ್ಣಮಾಲೆಯ ಎಸ್. ಅಕ್ಷರದಂತಿರುವುದೆಂಬುದು ಸಾಮಾನ್ಯವಾದ ಹೇಳಿಕೆಯಾದರೂ, ಮೂಲ ದೇವಾಲಯದ ಪ್ರಸ್ತರದಲ್ಲಿ ಈ ರೀತಿ ಹೆಚ್ಚಾಗಿ ಇರುವುದಿಲ್ಲ. ಬೆಳವಾಡಿಯ ವೀರನಾರಾಯಣದಲ್ಲ ಮುಂಭಾಗದ ಮಂಟಪದ ಕಪೋತವು ಇಂಗ್ಲೀಷ್ ವರ್ಣಮಾಲೆಯ ಎಸ್. ಅಕ್ಷರದಂತೆ ಇರುವುದೂ ಗಮನಾರ್ಹವಾಗಿದೆ.

ಪ್ರಸ್ತರದ ಅಂಗಗಳ ಅಲಂಕರಣದ ಬಗ್ಗೆ ಗ್ರಂಥಗಳಲ್ಲಿ ದೊರೆಯುವ ನಿಯಮ ರೀತಿಯ ವಿವರಗಳನ್ನೂ ಇಲ್ಲಿ ಗಮನಿಸುವುದು ಸೂಕ್ತವಾಗಿದೆ. ವಾಜನದ ಮೇಲಿನ ಭಾಗವನ್ನು ಎಲೆಗಳಿಂದಲಂಕರಿಸಬೇಕೆಂದೂ ವಾಜನದ ಮೇಲೆ ಭೂತ, ಹಂಸ ಇತ್ಯಾದಿಗಳನ್ನು ಬಿಡಿಸಬೇಕೆಂದೂ ಮಯಮತದಲ್ಲಿ ಮತ್ತು ಕಾಮಿಕಾಗಮದಲ್ಲಿ ಹೇಳಲಾಗಿದೆ. ಗ್ರಂಥಗಳಲ್ಲಿ ಹೇಳಿರುವ 'ಭೂತಮಾಲಾ' ಎಂಬುದೂ ಪರೋಕ್ಷವಾಗಿ ಇದನ್ನೇ ಸೂಚಿಸುತ್ತದೆ (ಅಜಿತಾ, ಕಾಶ್ಯಪ.) ಪ್ರಸ್ತರದ 'ನಾಟಕಾ' ಭಾಗದಲ್ಲಿ ಯಕ್ಷ, ವಿದ್ಯಾಧರರನ್ನು ಬಿಡಿಸಬೇಕೆಂದು ಮಾನಸಾರದಲ್ಲಿದೆ.

ಕಪೋತಾಲಂಕರಣದ ಬಗ್ಗೆ ಅನೇಕ ವಿವರಗಳು ಈ ಗ್ರಂಥಗಳಲ್ಲಿವೆ. ಕಪೋತದ ಮೇಲೆ 'ನಾಸಿ'ಯನ್ನು ಬಿಡಿಸಬೇಕೆಂದು ಇವುಗಳಲ್ಲಿ ಹೇಳಿದ್ದು, ಅದನ್ನು

'ಕಪೋತನಾಸಿ' ಎಂದೂ ಅಜಿತಾಗಮ, ಮಯಮತ ಕಾಮಿಕಾಗಮ ಮತ್ತು ಮಾನಸಾರದಲ್ಲಿ ಕ್ಷುದ್ರನಾಸಿ ಎಂದೂ ಕರೆಯಲಾಗಿದೆ[3] ಈ 'ಕ್ಷುದ್ರನಾಸಿ'ಯು ಕಪೋತದ ಅಂಚಿನಿಂದ (ನೀವು) ಮೇಲ್ಭಾಗದಲ್ಲಿರ ಬೇಕೆಂದೂ, ಅದರ 'ಪಟ್ಟಿಕಾ'ವು ಆಲಿಂಗದವರೆಗಿರ ಬೇಕೆಂದೂ, ಆದರೆ ಪ್ರತಿವಾಜನದ ಮೇಲೆ ಬರಬಾರ ದೆಂದೂ ಮಯಮತವು ಹೇಳುತ್ತದೆ. ಈ ನಾಸಿಯು ಕೆಳಗಿರುವ ಸ್ತಂಭದ ನೇರದಲ್ಲಿರ ಬೇಕೆಂದೂ, ಕರ್ಣ ಪಾದದ(corner pillar)ನೇರದಲ್ಲಿನ ನಾಸಿಕವು ಸ್ತಂಭದ ಮುಂಭಾಗದ ಅರ್ಧದಷ್ಟಿರಬೇಕೆಂದೂ ಮಾನಸಾರವು ಹೇಳಿದೆ ; ಮತ್ತು ಮಯಮತದಂತಲ್ಲದೆ, ಇದರಲ್ಲಿ ನಾಸಿಯು ಗೊಪಾನದವರೆಗೆ ಇರಬೇಕೆಂದು ಹೇಳಿದೆ. ನಾಸಿಯನ್ನು ಪತ್ರ, ವಲ್ಲಿಗಳಿಂದಲಂಕರಿಸಬೇಕೆಂದೂ ಮಾನಸಾರದಲ್ಲಿದೆ. ಈ 'ನಾಸಿಕ'ದ ಒಳಭಾಗವನ್ನು 'ಕುಕ್ಷಿ' ಎಂದು ಮಯಮತವೂ, 'ಗಾಧ' ಎಂದು ವಿಮಾನಾರ್ಚನ ಕಲ್ಪವೂ ಗುರುತಿಸಿದೆ. ಕುಕ್ಷಿಯ ಸುತ್ತು ಭಾಗವನ್ನು 'ಪಟ್ಟಿಕಾ' ಎಂದೂ ಇದರ ತುದಿ ಯನ್ನು 'ಶಿಖಾ' ಎಂದೂ ಮಯಮತವು ಗುರುತಿಸಿದೆ. ಈ 'ಶಿಖಾ'ವು ಸಿಂಹದ ಕಿವಿಯಂತಿರಬೇಕೆಂದು ಮಯಮತದಲ್ಲಿದ್ದರೆ ಸಿಂಹದ ಮುಖದಂತಿರಬೇಕೆಂದು ವಿಮಾನಾರ್ಚನ ಕಲ್ಪದಲ್ಲಿದೆ (ಇದರಲ್ಲಿ 'ಶಿಖರ' ಎಂಬ ಪದವನ್ನು ಬಳಸಲಾಗಿದೆ). ಕುಕ್ಷಿ ಮತ್ತು ಶಿಖಾದ ಆಳತೆಯು ಶೋಭಾಯಮಾನವಾಗಿ ಕಾಣುವಂತಿರ ಬೇಕು ಎಂದು ಕಾಮಿಕಾಗಮ ಮತ್ತು ಮಯಮತಗಳು ಹೇಳಿವೆ.

ಕಪೋತದ ಮೇಲೆ ಬರುವ 'ಪ್ರತೀ'ಯನ್ನು ವ್ಯಾಲ, ಸಿಂಹ, ಆನೆಗಳಿಂದ ಅಲಂಕರಿಸಬಹುದೆಂದು ಮಯಮತದಲ್ಲಿದೆ. ಇದರಲ್ಲೇ ಮುಂದುವರೆದು ಸಮಕರ, ಚಿತ್ರಖಂಡ ಮತ್ತು ನಾಗವಕ್ತ್ರಗಳೆಂಬ ಮೂರು ವಿಧಗಳನ್ನು ಹೇಳಲಾಗಿದೆ. (ಬಹುಶಃ ಇದು ಪ್ರತಿವಾಜನಕ್ಕೇ ಅನ್ವಯಿಸುತ್ತದೆ). ಇದನ್ನು ಸಾಮಾನ್ಯವಾಗಿ 'ವ್ಯಾಳಾವರಿ' ಎಂದು ಗುರುತಿಸುತ್ತಾರೆ. ಇದರಂತೆ, ಮೇಲ್ಭಾಗದಲ್ಲಿ ಹಾವಿನ ಹೆಡೆಯನ್ನು ಬಿಡಿಸಿರುವುದನ್ನು 'ನಾಗವಸ್ತ್ರ'ವೆಂದೂ, ನಾಲ್ಕೂ ಕಡೆ ಗಳಲ್ಲಿ (ಚತ್ರರಶ್ರ) ಮುಂಭಾಗದಲ್ಲಿ ಮಕರದಿಂದ ಕೂಡಿದ್ದರೆ 'ಚಿತ್ರಖಂಡ'ವೆಂದೂ ಹೇಳಬಹುದಾಗಿದೆ. ಅಲ್ಲದೆ, ಇಲ್ಲಿ ಆನೆ, ಕರ್ಕಟ ಇತ್ಯಾದಿಗಳನ್ನೂ ಬಿಡಿಸ ಬಹುದಾಗಿದ್ದು, ಅವು ಅದಕ್ಕೆ ತಕ್ಕಂತೆ ಹಸ್ತಿರೂಪ ಕರ್ಕಟಬಂಧ ಇತ್ಯಾದಿ ಹೆಸರುಗಳನ್ನು ಪಡೆಯುತ್ತವೆ. (ಸುಪ್ರಭೇಧಾಗಮದಲ್ಲಿ ಹೇಳಿರುವ 'ಗಜಶ್ರೇಣೀಂ' 'ಮೃಗಶ್ರೇಣೀಂ' ಇದೇ ಇರಬಹುದು) ಇದರಲ್ಲಿ, 'ಸಮಕರ ಪ್ರತಿ'ಯ ಬಗ್ಗೆ ಹೇಳುವಾಗ, ಬ್ರಾಹ್ಮಣರು ಮತ್ತು ದೇವತೆಗಳಿಗೆ ಹೊಂದುವುದೆಂದು ಮಾತ್ರ ಹೇಳಿದ್ದು, ಹೆಚ್ಚಿನ ವಿವರ ನೀಡಿಲ್ಲ[4] (೩೨-೩೪). 'ಪ್ರತಿ'ಯನ್ನು ಸಿಂಹದಿಂದ ಅಲಂಕರಿಸಬೇಕೆಂಬ ಸೂಚನೆಯು ಕಾಶ್ಯಪದಲ್ಲಿದ್ದರೆ ಇದನ್ನು 'ದಳ'ದ ಆಕಾರದಲ್ಲಿ ಬಿಡಿಸಬೇಕೆಂದು ಮಾನಸಾರದಲ್ಲಿದೆ. ಇದೇ ಗ್ರಂಥದಲ್ಲಿ, ಪ್ರಸ್ತರದ ಎಲ್ಲ ಅಂಗಗಳನ್ನೂ ಮಕರ, ಭ್ರಮರಗಳಿಂದ ಅಲಂಕರಿಸಬೇಕೆಂಬ ನಿರ್ದೇಶನವಿದೆ.

ಈ ಹಿನ್ನೆಲೆಯಲ್ಲಿ ಕ್ರಮವಾಗಿ ಎಲ್ಲ ಅಂಗಗಳ ಅಲಂಕರಣವನ್ನು ಗಮನಿಸಿದರೆ, ಸಾಮಾನ್ಯವಾಗಿ 'ವಾಜನ'ದ ಮೇಲೆ, ಗ್ರಂಥಗಳಲ್ಲಿ ಹೇಳಿರುವಂತೆ, ಯಾವುದೇ ರೀತಿಯ ಅಲಂಕರಣ ಕಂಡು ಬರುವುದಿಲ್ಲ. ಎಲ್ಲೋರದ ಛೋಟಾ ಕೈಲಾಸ ಮತ್ತು ಕೈಲಾಸ ದೇವಾಲಯಗಳಲ್ಲಿ ಮಾತ್ರ ಈ ಭಾಗದಲ್ಲಿ ನೃತ್ಯಗಾರ ರನ್ನು ಬಿಡಿಸಲಾಗಿದೆ. ಗ್ರಂಥಗಳಲ್ಲಿ ಹೇಳಿಲ್ಲದಿದ್ದರೂ,

---

3 ಈ 'ನಾಸಿ'ಯನ್ನು 'ಕೂಡು' ಎಂದು ಸಾಮಾನ್ಯವಾಗಿ ಕರೆದು, ಇದಕ್ಕೆ ಸಂಸ್ಕೃತದಲ್ಲಿ ಸಮಾನ ಪದವೆಂದರೆ 'ಚಂದ್ರ ಶಾಲಾ' ಎಂದು ಒಂದೆಡೆ ಗುರುತಿಸಲಾಗಿದೆ. (Ed) M. W. Meister, 'Ananda Coomara Swamy's essays in early Indian Architecture–ನೋಡಿ : ಚಂದ್ರ ಶಾಲಾ) ಆದರೆ 'ಚಂದ್ರ ಶಾಲಾ'ದ ಅರ್ಥ ಬೇರೆಯೇ ಇದ್ದು. 'ಕೂಡು' ಪದಕ್ಕೆ ಸಮಾನಾಂತರವಾಗಿ (?) 'ಕ್ಷುದ್ರನಾಗಿ' ಎಂಬ ಪದವನ್ನು ಗ್ರಂಥಗಳು ನೀಡಿವೆ.

4 'ಸಮಕರ' ಪ್ರತಿಬಗ್ಗೆ ಮಯಮತದ ಅನುವಾದಕರು, 'ಮಕರದಿಂದ ಕೂಡಿದ್ದೆಂದು' ಹೇಳಿದ್ದಾರೆ. ಆದರೆ, ಈ ಶ್ಲೋಕದಲ್ಲಿ ಬರುವ 'ಮಕರ'ವು ಚಿತ್ರಖಂಡಕ್ಕೆ ಅನ್ವಯಿಸುತ್ತದೆಯೇ ಹೊರತು, 'ಸಮಕರ'ಕ್ಕೆ ಅಲ್ಲವೆನಿಸುತ್ತದೆ.

ವಾಜನದ ಹಿಂದಿನ ಭಾಗವಾದ 'ಉತ್ತರ'ದಲ್ಲಿ, ಪದಾಲಂಕಾರಣವನ್ನೂ (ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯದಲ್ಲಿ), ಮಲಾಲಂಕರಣವನ್ನೂ (ಐಹೊಳೆಯ ಪುಷ್ಪಭದ್ರ ದೇವಾಲಯದಲ್ಲಿ), ಕಾಣಬಹುದಾಗಿದೆ.

ಗ್ರಂಥಗಳಲ್ಲಿ ಹೇಳಿರುವ ಹಂಸಮಾಲಾ ಮತ್ತು ಭೂತಮಾಲಾಗಳನ್ನು ಅನೇಕ ದೇವಾಲಯಗಳ 'ವಲಭೀ'ಯಲ್ಲಿ ಬಿಡಿಸಲಾಗಿದೆ. ಬಾದಾಮಿ ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದ ದೇವಾಲಯ ಗಳಲ್ಲಿ ಈ ಎರಡೂ ಕಂಡು ಬಂದರೆ, ಗಂಗರ ದೇವಾಲಯ ಗಳಲ್ಲಿ 'ಹಂಸಮಾಲಕ್ಕೆ ಪ್ರಾಮುಖ್ಯತೆ ದೊರೆತಿರುವು ದನ್ನು ಶ್ರವಣಬೆಳಗೊಳದ ಚಂದ್ರಗುಪ್ತ, ಚಾವುಂಡ ರಾಯ ಬಸದಿಗಳು ಮತ್ತು ಕಂಬದ ಹಳ್ಳಿಯ ಪಂಚ ಕೂಟ ಬಸದಿಗಳು ಸ್ಪಷ್ಟ ಪಡಿಸುತ್ತವೆ. ಇದೇ ಕಾಲದ ಬೇಗೂರಿನ ದೇವಾಲಯದಲ್ಲಿ ಮಾತ್ರ ಭೂತಮಾಲಾ' ವನ್ನು ಬಿಡಿಸಲಾಗಿದೆ. ನೊಳಂಬರ ದೇವಾಲಯಗಳಲ್ಲಿ ಹಂಸಮಾಲಾ ಕಂಡು ಬರುತ್ತದೆ. ಹುಂಚದ ಬೋಗಾರ ಬಸದಿಯಲ್ಲಿ ಹಂಸಮಾಲಾ ಮತ್ತು ಭೂತಮಾಲಾ ಎರಡನ್ನೂ ಬಿಡಿಸಿರುವುದು ವಿಶೇಷವಾಗಿದೆ.

ವಿಜಯನಗರ ಕಾಲದ ದೇವಾಲಯಗಳಲ್ಲಿ ಈ ಭಾಗದಲ್ಲಿ ಸಾಲಾಗಿ ಪದ್ಮಗಳನ್ನೂ ಬಿಡಿಸಿರುತ್ತಾರೆ. ಇದು ಸುಪ್ರಭೇದಾಗಮದ 'ಪದ್ಮ ಪಟ್ಟಿಕೆ'ಯನ್ನು ನೆನಪಿಗೆ ತರುತ್ತದೆ.

ಬಹುಪಾಲು ದೇವಾಲಯಗಳ ಕಪೋತದಲ್ಲಿ ಕಂಡು ಬರುವ ಅಲಂಕರಣವೆಂದರೆ, ನಾಸಿಕಾಲಂಕರಣ, ಮಹಾ ಕೂಟದ ಮಹಾಕೂಟೇಶ್ವರ ಮತ್ತು ಮಲ್ಲಿಕಾರ್ಜುನ ದೇವಾಲಯಗಳು, ಎಲ್ಲೋರದ ಸರ್ವತೋಭದ್ರ ಮುಂತಾದ ದೇವಾಲಯಗಳನ್ನು ಬಿಟ್ಟರೆ, ಉಳಿದ ದೇವಾಲಯಗಳಲ್ಲಿ ಕಪೋತವು ಕ್ಷುದ್ರನಾಸಿಯಿಂದ ಕೂಡಿರುತ್ತದೆ. ಕಪೋತನಾಸಿಯು ಕಂಬದ ನೇರಕ್ಕೆ ಇರ ಬೇಕೆಂದು ಮಾನಸಾರವು ಸೂಚಿಸಿದರೂ, ಎಲ್ಲಿಡೆ ಆ ರೀತಿ ಕಂಡುಬರುವುದಿಲ್ಲ. ನಾಸಿಕಾದ ಆರಂಭವೂ ಮಯಮತ ದಲ್ಲಿ ಹೇಳಿರುವಂತಿರದೆ, ಗೋಪಾನದ ತುದಿಯಿಂದಲೇ ಆರಂಭವಾಗಿದ್ದರೂ, ಅಂತ್ಯವು (ಶಿಖಾ) 'ಆಲಿಂಗ'ದ ವರೆಗೂ ಇರುವುದನ್ನು ಬಹುಪಾಲು ದೇವಾಲಯಗಳಲ್ಲಿ ಕಾಣುತ್ತೇವೆ. ಇದರ 'ಶಿಖಾ' ಭಾಗವು ಮೊದ ಮೊದಲು ಮೊಗ್ಗು ಅಥವಾ ಹೂವಿನ ಆಕಾರದಲ್ಲಿದ್ದು ಆದೇ ಚೂಪಾಗಿ ತಿರುಗಿದ್ದು, ಮುಂದೆ ಕೀರ್ತಿ ಮುಖಕ್ಕೆ ಅಥವಾ ಸಿಂಹಮುಖಕ್ಕೆ ಎಡೆಮಾಡಿಕೊಟ್ಟಿತೆನ್ನಬಹುದು. ಬಾಗಳಿಯ ಕಲ್ಲೇಶ್ವರ ಮತ್ತು ಎಲ್ಲೋರದ ಕೈಲಾಸ ದೇವಾಲಯಗಳಲ್ಲಿ 'ಸಿಂಹಶಿಖಾ' (ಕೀರ್ತಿಮುಖ)ವನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ. ಗ್ರಂಥಗಳಲ್ಲಿ ಹೇಳಿಲ್ಲ ದಿದ್ದರೂ, ಇದರ ಕುಕ್ಷಿಯಲ್ಲಿ (ಗಾಢ) ಗಂಧರ್ವ, ಕಿನ್ನರ ಭೂತ, ವಿದ್ಯಾಧರರ ಮುಖವನ್ನು ಬಿಡಿಸಿರುವುದನ್ನು ಎಲ್ಲ ಕಾಲದ ದೇವಾಲಯಗಳಲ್ಲಿ ಕಾಣಬಹುದಾಗಿದೆ. ಹೀಗೆ ಬಿಡಿಸಿರುವುದು, ಮೇಲಿನ ಭಾಗಗಳಿಗೆ ಗಾಳಿ ಸಂಚರಿಸಲು ಅನುಕೂಲನಾಗುವಂತೆ ಅದು 'ತೆರೆದ' ಪ್ರದೇಶವಾಗಿತ್ತೆಂಬುದನ್ನು ತೋರಿಸುತ್ತದೆ ಎಂದು ವಿದ್ವಾಂಸರು 'ಚಂದ್ರಶಾಲಾ'ದ ಹಿನ್ನೆಲೆಯಲ್ಲಿ ಗುರುತಿಸಿ ದ್ದಾರೆ.[5] ಗಾಢದ ಸುತ್ತಲಿನ ಪಟ್ಟಿಕೆಯನ್ನು ಮಾನಸಾರ ದಲ್ಲಿ ಹೇಳಿರುವಂತೆ, ಬಳ್ಳಿಗಳಿಂದ ಅಲಂಕರಿಸಿರುವುದನ್ನು ಶ್ರವಣಬೆಳಗೊಳದ ಚಾವುಂಡರಾಯ ಬಸದಿ ಮಣ್ಣಿಯ ಅಕ್ಕ ತಂಗಿ ದೇವಾಲಯ ಮುಂತಾದೆಡೆಗಳಲ್ಲಿ ಗುರುತಿಸಬಹುದಾಗಿದೆ. ಗ್ರಂಥಗಳಲ್ಲಿ ಹೇಳಿಲ್ಲದಿದ್ದರೂ ಕಪೋತದ ಮೇಲೆ ಜೊತೆ ಜೊತೆಯಾಗಿ 'ನಾಸಿಯನ್ನು ಬಿಡಿಸಿರುವುದು ಕಂಡು ಬರುತ್ತಿದ್ದು ನೇತ್ರನಾಸಿ' ಎಂದು ಸಾಮಾನ್ಯವಾಗಿ ಗುರುತಿಸುತ್ತಾರೆ. ಈ ನೇತ್ರನಾಸಿಯು ಬಹುಶಃ ಗಂಗರ ಕಾಲದಲ್ಲೇ ಹೆಚ್ಚಾಗಿರುವಂತಿದೆ. ಅಂತೆಯೇ ಗ್ರಂಥಗಳಲ್ಲಿಲ್ಲದಿದ್ದರೂ, ಕಪೋತರ ಅಂಚಿನಲ್ಲಿ ಬರುವ 'ಚಂದ್ರಮಂಡಲ'ವನ್ನು ಶ್ರವಣಬೆಳಗೊಳದ ಚಾವುಂಡರಾಯ ಬಸದಿಯಲ್ಲೂ ತುದಿಯಲ್ಲಿ ಬರುವ 'ಕೋಣಪಟ್ಟಿ'ವನ್ನು ಎಲ್ಲೋರದ ಕೈಲಾಸ ದೇವಾಲಯ, ಶ್ರವಣಬೆಳಗೊಳದ ಚಾವುಂಡ ರಾಯ ಬಸದಿ, ಮಣ್ಣಿಯ ಅಕ್ಕ ತಂಗಿ ದೇವಾಲಯ

---

5 (Ed) M. W. Meister-ಪೂರ್ವೋಕ್ತ

ಮುಂತಾದೆಡೆಗಳಲ್ಲೂ 'ವಲ್ಲೀಮಂಡಲಾ'ಲಂಕರಣವನ್ನು ಎಲ್ಲೋರದ ಸರ್ವತೋಭದ್ರ ದೇವಾಲಯ, ಐಹೊಳೆಯ ಮೇಗುತಿ ದೇವಾಲಯ, ಪಟ್ಟದಕಲ್ಲಿನ ಸಂಗಮೇಶ್ವರ ಮತ್ತು ವಿರೂಪಾಕ್ಷ ದೇವಾಲಯಗಳಲ್ಲೂ ಕಾಣಬಹುದಾಗಿದೆ. ವಿಜಯನಗರ ಕಾಲದ ದೇವಾಲಯಗಳಲ್ಲಿ ಕಪೋತದ ಮೇಲೆ ಪದ್ಮಾಲಂಕರಣವು ಹೆಚ್ಚಾಗಿ ಕಂಡು ಬರುತ್ತದೆ.

ಕಪೋತದ ಮೇಲಿನ ಭಾಗಗಳಾದ ಆಲಿಂಗ, ಅಂತರಿತ, ಪ್ರತಿ, ವಾಜನಗಳು ವ್ಯಾಳ, ಮಕರ, ಆನೆ, ಪ್ರತಿಮುಖ–ಇತ್ಯಾದಿಗಳ ಸಾಲಿನಿಂದ ಬಹುಪಾಲು ಪೂರ್ಣ ತುಂಬಿ ಹೋಗಿದ್ದು, ಗ್ರಂಥಗಳ ಆದೇಶವನ್ನು ಇಲ್ಲಿ ಗಮನಿಸಬಹುದಾಗಿದೆ. ಬಾದಾಮಿಯ ಮಾಲೆಗಿತ್ತಿ ಶಿವಾಲಯದಲ್ಲಿ ಇದು ವಾಜನದವರೆಗೂ ಆವರಿಸಿದ್ದರೆ, ಪಟ್ಟದಕಲ್ಲಿನ ಸಂಗಮೇಶ್ವರ ದೇವಾಲಯದಲ್ಲಿ 'ಪ್ರತೀ'ವರೆಗೆ ಮಾತ್ರ ಕಂಡು ಬರುತ್ತದೆ. ವಿಜಯನಗರ ಕಾಲದ ದೇವಾಲಯಗಳಲ್ಲಿ ಈ ಸಾಲು ಅಷ್ಟಾಗಿ ಕಂಡು ಬರುವುದಿಲ್ಲ.

ಪ್ರಸ್ತರದ ಅಂಗಗಳ ವಿವಿಧ ರೀತಿಯ ಸಂಯೋಜನೆಯಿಂದ ವಿವಿಧ ಪ್ರಭೇದಗಳನ್ನು ಮಾಡಬಹುದೆಂಬ ಸೂಚನೆಯು ಮಾನಸಾರದಲ್ಲಿದ್ದರೂ, ಅದಕ್ಕೆ ಯಾವುದೇ ರೀತಿಯ ಬೇರೆ ಬೇರೆ ಹೆಸರುಗಳನ್ನು ನೀಡಿಲ್ಲ ಹಿಂದೆಯೇ ಹೇಳಿದಂತೆ, ಅಜಿತಾಗಮ ಮತ್ತು ವಿಮಾನಾರ್ಚನ ಕಲ್ಪದಲ್ಲೂ ಎರಡು ಅಂಗಜೋಡಣೆಯನ್ನು ಹೇಳಿದ್ದರೂ, ಅದನ್ನು ವಿಶೇಷವಾಗಿ ಯಾವುದೇ ಪ್ರಭೇದದ ಹೆಸರಲ್ಲಿ ಗುರುತಿಸಿಲ್ಲ. ಕಾಮಿಕಾಗಮವು ಪ್ರಸ್ತರದಲ್ಲಿ ಖಂಡೋತ್ತರ, ಪತ್ರಬಂಧ, ರೂಪೋತ್ತರ ಎಂಬ ೩ ವಿಧಗಳನ್ನು ಆಲಂಕರಣದ ಆಧಾರದಿಂದ ಹೇಳಿರುವುದಲ್ಲದೆ ಸರ್ವತೋಭದ್ರ, ಸ್ವಸ್ತಿಕ, ವರ್ಧಮಾನ, ನಂದ್ಯಾವರ್ತ ಎಂಬ ಮತ್ತೊಂದು ರೀತಿಯ ವಿಂಗಡಣೆಯನ್ನೂ ಹೇಳಿದೆ (೭–೮) ಮಯಮತದಲ್ಲೂ ಇದೇ ವಿಂಗಡಣೆಯಿದ್ದರೂ, ಖಂಡೋತ್ತರ ಇತ್ಯಾದಿಗಳನ್ನು ಆದರಲ್ಲಿ ಉತ್ತರಕ್ಕೆ ಮಾತ್ರ ಅನ್ವಯಿಸಿದ್ದು, ಅದರ ಆಳತೆಯ ಆಧಾರದಿಂದ ಈ ೩ ಭೇದಗಳನ್ನು ಗುರುತಿಸಲಾಗಿದೆ[6] (೨–೩). ಆದರೆ ಈ ಯಾವುದೇ ರೀತಿಯ ರಚನಾ ಭೇದಗಳನ್ನು ದೇವಾಲಯದಲ್ಲಿ ಗುರುತಿಸಲು ಸಾಧ್ಯವಾಗಿಲ್ಲ.

ಈ ಎಲ್ಲವನ್ನೂ ಒಟ್ಟಾರೆಯಾಗಿ ಗಮನಿಸಿದರೆ, ಪ್ರಸ್ತರದ ಅಥವಾ ಕಪೋತದ ಅವಶ್ಯಕತೆಯನ್ನು ಶಾಸ್ತ್ರಕಾರರು ಹಾಗೂ ಶಿಲ್ಪಿಗಳು ಹಿಂದಿನ ಕಾಲದಿಂದಲೇ ಮನಗಂಡಿದ್ದರೆನ್ನಬಹುದು. ಅಂಗರಚನೆಯ ದೃಷ್ಟಿಯಿಂದ ಗ್ರಂಥಗಳು ಮತ್ತು ರಚನೆಗಳು ತಾಳೆಯಾಗುತ್ತವೆಯಾದರೂ, ಹಾಗೆ ರಚಿಸುವಾಗ, ಹೆಚ್ಚು ಪ್ರಾಯೋಗಿಕವಾಗಿ, ಸಹಜವಾಗಿ, ಸುಲಭವಾಗಿ ಇರುವ ಮತ್ತು ಅವಶ್ಯಕತೆ ಮತ್ತು ಶೋಭೆಗೆ ತಕ್ಕದಾದ ರೀತಿಯದನ್ನು ಗಮನಿಸಿ ಆರಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಆಲಂಕರಣದ ವಿಷಯದಲ್ಲಿ ಗ್ರಂಥಗಳನ್ನು ಅನುಸರಿಸಿರುವುದು ಕಂಡುಬರುವುದಾದರೂ, ಆ ಅಲಂಕರಣವು ಕಾಲಾನುಕ್ರಮ ಬೆಳವಣಿಗೆ ಎಂಬುದನ್ನು ದೇವಾಲಯಗಳು ಸ್ಪಷ್ಟಪಡಿಸಿವೆ. ಆದ್ದರಿಂದಲೇ ಗ್ರಂಥಗಳಲ್ಲಿಲ್ಲದಿದ್ದರೂ, ಶಿಲ್ಪಿಗಳ ಕಲ್ಪನೆಯಿಂದಲೇ ಅನೇಕ ಅಲಂಕರಣಗಳು ಮೂಡಿಬಂದಿವೆ. ರಾಷ್ಟ್ರಕೂಟ–ಗಂಗ– ನೊಳಂಬರ ಕಾಲಕ್ಕೆ ತನ್ನ ಪೂರ್ಣರೂಪವನ್ನು ಸ್ಪಷ್ಟವಾಗಿ ಎತ್ತಿ ಹಿಡಿದಿದ್ದು, ಈ ಕಾಲದಲ್ಲಿ ಕಪೋತವು ಅನೇಕ ರೀತಿಯ ಅಲಂಕರಣಗಳಿಗೆ ಸ್ಥಾನವಾಗುತ್ತದೆ. ಆಲಂಕರಣದ ದೃಷ್ಟಿಯಿಂದ ಕಾಲದಿಂದ ಕಾಲಕ್ಕೆ ಅಲ್ಪಸ್ವಲ್ಪ ವ್ಯತ್ಯಾಸವಿರುವುದನ್ನು ಗುರುತಿಸಬಹುದಾಗಿದೆ.

---

6 A Rea ಅವರು ತಮ್ಮ 'Indian Architeature' ನಲ್ಲಿ (ಪು. ೨೨೪) 'ಕಪೋತಂ ಚೈವ ಮಂಚಂ ಪ್ರಚ್ಛಾದನಂ 'ತಥಾ' ಎಂಬಲ್ಲಿ 'ತ್ರಿಧಾ' ಎಂದು ಗಮನಿಸಿ, ಪ್ರಸ್ತರದ ಈ ಪರ್ಯಾಯ ಪದಗಳನ್ನು ಅದರ ವಿಧಗಳೆಂದು ಹೇಳಿದ್ದಾರೆ. ಪ್ರಸ್ತರದ ಬೇರೆ ಬೇರೆ ವಿಧಗಳ ಬಗ್ಗೆ ಹೇಳುವಾಗ ಮುಖಪ್ರಸ್ತರ, ಮಂಚಪ್ರಸ್ತರ, ಕಪೋತಪ್ರಸ್ತರ, ಐರಾವತ ಪ್ರಸ್ತರ, ಪುಂಡರೀಕ ಪ್ರಸ್ತರ–ಗಳನ್ನು ಗುರುತಿಸಿ, ವಿವರಿಸಿದ್ದಾರೆ. ಆದರೆ ಈ ಬಗ್ಗೆ ನನಗೆ ಮೇಲೆ ಗಮನಿಸಿದ ಗ್ರಂಥಗಳಲ್ಲಿ ಯಾವುದೇ ವಿವರ ದೊರೆಯಲಿಲ್ಲ.

ಶಾಸ್ತ್ರಗ್ರಂಥಗಳ ಬಗ್ಗೆ ಹೇಳುವುದಾದಲ್ಲಿ, ಅಜಿತಾಗಮ ಮತ್ತು ವಿಮಾನಾರ್ಚನಕಲ್ಪದ ವಿವರಗಳು ಹೆಚ್ಚು ಹತ್ತಿರವಾಗಿರುವಂತಿದ್ದರೆ, ಮಯಮತ ಮತ್ತು ಕಾಮಿಕಾಗಮವು ಒಂದನ್ನೊಂದು ಹೆಚ್ಚು ಹೋಲುತ್ತಿವೆ. ಆದರೆ ಕಾಮಿಕಾಗಮದ ವಿವರಗಳು ಮಯಮತದಷ್ಟು ಸ್ಪಷ್ಟವಿಲ್ಲ. ಕಾಶ್ಯಪಶಿಲ್ಪ ಮತ್ತು ಸುಪ್ರಭೇದಾಗಮದಲ್ಲಿ ಸರಳ ರೀತಿಯ ಪ್ರಸ್ತರ ರಚನೆಯನ್ನು ಗುರುತಿಸಬಹುದಾಗಿದೆ. ಅಂಗ ರಚನೆಯ ದೃಷ್ಟಿಯಿಂದ ಅಜಿತಾಗಮ, ವಿಮಾನಾರ್ಚನಕಲ್ಪ ಮತ್ತು ಕಾಶ್ಯಪ ಶಿಲ್ಪವೂ, ಅಲಂಕರಣದ ದೃಷ್ಟಿಯಿಂದ ಮಾನಸಾರ ಮತ್ತು ಮಯಮತವೂ ಅನುಸರಣೀಯವಾಗಿರುವಂತೆ ತೋರುತ್ತದೆ.

ಡಾ|| ಡಿ. ವಿ. ದೇವರಾಜ್*

# ಹೊಯ್ಸಳರ ಕಾಲದ ಎರಡು ಪಂಚಲಿಂಗ ದೇವಾಲಯಗಳು-ಒಂದು ವಿವೇಚನೆ

ಹೊಯ್ಸಳರ ಕಾಲ ಕರ್ನಾಟಕದ ವಾಸ್ತುಶಿಲ್ಪದ ಇತಿಹಾಸದಲ್ಲಿ ಒಂದು ವಿಶಿಷ್ಟವಾದ ಘಟ್ಟವೆಂದು ಪರಿಗಣಿಸಬಹುದು. ಈ ಕಾಲದಲ್ಲಿ ದೇವಾಲಯಗಳ ನಿರ್ಮಾಣ ಒಂದು ವಿಶಿಷ್ಟ ಶೈಲಿಯನ್ನು, ಅಭಿವ್ಯಕ್ತಿಯನ್ನು ಮತ್ತು ರೂಪವನ್ನು ಪ್ರಕಟಗೊಳಿಸಿತು. ಒಂದು ಅಂದಾಜಿನ ಪ್ರಕಾರ, ಹೊಯ್ಸಳರ ಕಾಲದಲ್ಲಿ ಸು. ೧೭೦ ದೇವಾಲಯಗಳು (ಕರ್ನಾಟಕದ ಎಂಟು ಜಿಲ್ಲೆಗಳಾದ ಮೈಸೂರು, ಹಾಸನ, ತುಮಕೂರು, ಮಂಡ್ಯ, ಚಿಕ್ಕಮಗಳೂರು, ಶಿವಮೊಗ್ಗ, ಧಾರವಾಡ ಮತ್ತು ಚಿತ್ರದುರ್ಗದಲ್ಲಿ) ಕಟ್ಟಲ್ಪಟ್ಟವು. ಅವುಗಳ ಪೈಕಿ ೮೮ ದೇವಾಲಯಗಳು ಶೈವ ದೇವಾಲಯಗಳೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ.

ಶಿವನನ್ನು ಲಿಂಗ ರೂಪದಲ್ಲಿ ದೇವಾಲಯದಲ್ಲಿ ಪೂಜಿಸುವ ಕ್ರಮ ಭಾರತದಲ್ಲಿ ಬಹು ಹಿಂದಿನಿಂದಲೂ ಪ್ರಚಾರದಲ್ಲಿದ್ದಿತು. ಆದರೆ ಶಿವನ ಲಿಂಗ ಸ್ವರೂಪವನ್ನು ಪಂಚಲಿಂಗ ರೂಪದಲ್ಲಿ ಪೂಜಿಸುವ ಸಂಪ್ರದಾಯ ವಿಶಿಷ್ಟವಾದದ್ದು. ಒಂದೇ ಗುಡಿಯ ಪ್ರತ್ಯೇಕ ಗರ್ಭಗೃಹಗಳಲ್ಲಿ ಐದು ಲಿಂಗಗಳನ್ನು ಸ್ಥಾಪಿಸಿ, ಅವುಗಳನ್ನು ಒಟ್ಟಾಗಿ ಪಂಚಲಿಂಗೇಶ್ವರ ಎಂದು ಕರೆಯುವ ಪದ್ಧತಿಯು ಕಾಣಿಸಿಕೊಂಡಿತು. ಹೊಯ್ಸಳರ ಕಾಲದ ಎರಡು ಪಂಚಲಿಂಗೇಶ್ವರ ದೇವಾಲಯಗಳನ್ನು ಕುರಿತು ಕೆಲವು ವಿಷಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಆ ಎರಡು ದೇವಾಲಯಗಳೆಂದರೆ ಕ್ರಿ.ಶ. ೧೨೩೭ರಲ್ಲಿ ಹೊಯ್ಸಳರ ದೊರೆ ಸೋಮೇಶ್ವರನ ಕಾಲದಲ್ಲಿ ಇಂದಿನ ಕೃಷ್ಣರಾಜಪೇಟೆ ತಾಲ್ಲೂಕಿನ ಕಿಕ್ಕೇರಿಗೆ ಮೂರು ಕಿ.ಮೀ. ದೂರದಲ್ಲಿರುವ ಗೋವಿಂದನಹಳ್ಳಿಯಲ್ಲಿ ಕಟ್ಟಿದ ಪಂಚಲಿಂಗೇಶ್ವರ ದೇವಾಲಯ, ಮತ್ತು ಸೋಮೇಶ್ವರನ ಮಗ ಮೂರನೇಯ ನರಸಿಂಹನ ಕಾಲದಲ್ಲಿ ಕ್ರಿ.ಶ. ೧೨೬೮ರಲ್ಲಿ, ಸೋಮನಾಥಪುರದಲ್ಲಿ ನಿರ್ಮಿಸಿದ ಪಂಚಲಿಂಗ ದೇವಾಲಯ.

ಗೋವಿಂದನಹಳ್ಳಿಯ ಪಂಚಲಿಂಗೇಶ್ವರ ದೇವಾಲಯ, ಹೇಮಾವತಿ ನದಿಯ ದಂಡೆಯ ಮೇಲಿದ್ದರೆ, ಸೋಮನಾಥಪುರದ ಪಂಚಲಿಂಗೇಶ್ವರ ದೇವಾಲಯ ಕಾವೇರಿ ನದಿಯ ಸಮೀಪದಲ್ಲಿ ಕಟ್ಟಲ್ಪಟ್ಟಿದೆ.

ಶಿವನು ಲಿಂಗ ಸ್ವರೂಪಿ. ಅವನು ಸಮಸ್ತ ಸೃಷ್ಟಿಯ ನಿರ್ಮಾಣಕ್ಕೆ ಕಾರಣವಾದ ಅಥವಾ ಬ್ರಹ್ಮಾಂಡದಲ್ಲಿರುವ ಎಲ್ಲಾ ವಸ್ತುಗಳಲ್ಲಿ ಅಂತರ್ಗತನಾಗಿರುವ ಪಂಚಭೂತಗಳನ್ನು ಪ್ರತಿನಿಧಿಸುತ್ತಾನೆ. ಅವುಗಳಾವುವೆಂದರೆ ಪೃಥ್ವಿ, ಅಪ್, ತೇಜಸ್, ವಾಯು ಮತ್ತು ಆಕಾಶ. ಈ ಪ್ರಕಾರವಾಗಿ ಶಿವನು ಅನುಕ್ರಮವಾಗಿ ಪೃಥ್ವಿಲಿಂಗ-ಅಪ್ ಲಿಂಗ-ತೇಜೋಲಿಂಗ-ವಾಯುಲಿಂಗ ಮತ್ತು ಆಕಾಶಲಿಂಗ ಎಂಬ ಐದು ಸ್ವರೂಪಗಳನ್ನು ಪಡೆದುಕೊಳ್ಳುತ್ತಾನೆ. ಇದೇ ಪಂಚಲಿಂಗೇಶ್ವರ ಕಲ್ಪನೆಗೆ ಆಧಾರ. ಹೊಯ್ಸಳರ ಕಾಲದಲ್ಲಿ ಜನಪ್ರಿಯ

* ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು-೫೭೦ ೦೦೧

ವಾಗಿದ್ದ ಶೈವ ಪಂಥ ಶಿವನನ್ನು ಪಂಚಲಿಂಗಗಳ ರೂಪ ದಲ್ಲಿ ಆರಾಧಿಸಲು ಅನುಕೂಲವಾಗುವಂತೆ ಪಂಚ ಲಿಂಗೇಶ್ವರ ದೇವಾಲಯಗಳ ನಿರ್ಮಾಣಕ್ಕೆ ಪ್ರಚೋದನೆ ನೀಡಿತೆಂದು ಹೇಳಬಹುದು. ಈ ಹಿನ್ನೆಲೆಯಲ್ಲಿ ನಾವು ಮೇಲೆ ಸೂಚಿಸಿದ ಎರಡು ಪಂಚಲಿಂಗೇಶ್ವರ ದೇವಾಲಯ ಗಳನ್ನು ಗಮನಿಸಬೇಕು.

ಗೋವಿಂದನಹಳ್ಳಿಯಲ್ಲಿರುವ ಪಂಚಲಿಂಗ ದೇವಾಲಯವು ಹೊಯ್ಸಳ ಶೈಲಿಗೆ ಉತ್ತಮ ಉದಾಹರಣೆಯಾಗಿದ್ದು, ಈ ದೇವಾಲಯದಲ್ಲಿ ಐದು ಗರ್ಭಗೃಹಗಳಿವೆ. ಸೋಮನಾಥಪುರದ ಪಂಚಲಿಂಗ ದೇವಾಲಯವನ್ನು ಬಿಟ್ಟರೆ, ಹೊಯ್ಸಳ ಶೈಲಿಯ ವಾಸ್ತುಶಿಲ್ಪದಲ್ಲಿ ರಚಿತವಾಗಿರುವ ಪಂಚಕೂಟ ದೇವಾಲಯಕ್ಕೆ ಇದೊಂದೇ ಉದಾಹರಣೆಯೆಂದು ಹೇಳಬಹುದು.

ಸೋಮನಾಥಪುರದ ಪಂಚಲಿಂಗದೇವಾಲಯ ದಂತೆ, ಗೋವಿಂದನಹಳ್ಳಿಯಲ್ಲೂ ಗರ್ಭಗೃಹಗಳು ಸಮಾನವಾದ ಆಕಾರಗಳಲ್ಲಿದ್ದು—(೭'೬'' × ೬'೬'') ಅವುಗಳು ಪೂರ್ವಾಭಿಮುಖವಾಗಿವೆ. (ನವರಂಗಗಳ ಅಳತೆ ೧೮' × ೧೮') ಇವೆಲ್ಲಾ ಅಂಶಗಳನ್ನು ಸೋಮನಾಥ, ಪುರದ ಪಂಚಲಿಂಗ ದೇವಾಲಯದಲ್ಲೂ ನೋಡಬಹುದು. “ಮಲ್ಲಿತಮ್ಮ” ಎಂಬ ಶಿಲ್ಪಿಯ ಕಾಲದಲ್ಲಿ ಗೋವಿಂದನಹಳ್ಳಿಯ ದೇವಾಲಯ ನಿರ್ಮಾಣ ವಾಯಿತೆಂದು ಆ ದೇವಾಲಯದಲ್ಲಿ ದೊರೆಯುವ ಲಘು ಶಾಸನದ ಆಧಾರದಿಂದ ತಿಳಿದುಕೊಳ್ಳಬಹುದು. ನುಗ್ಗೇಹಳ್ಳಿ ಮತ್ತು ಸೋಮನಾಥ ಪುರದ ದೇವಾಲಯ ಗಳಲ್ಲಿರುವ ಅನೇಕ ಶಿಲ್ಪಗಳು ಮಲ್ಲಿತಮ್ಮನಿಂದ ೧೨೪೯ ಮತ್ತು ೧೨೬೮ರಲ್ಲಿ ಅನುಕ್ರಮವಾಗಿ ರಚಿಸಲ್ಪಟ್ಟವು ಎಂದು ತಿಳಿದು ಬರುತ್ತದೆ.

ಗೋವಿಂದನಹಳ್ಳಿ ಮತ್ತು ಸೋಮನಾಥಪುರ ಗಳಲ್ಲಿರುವ ಪಂಚಲಿಂಗದೇವಾಲಯಗಳ ನಡುವೆ ಮೇಲೆ ಸೂಚಿಸಿರುವ ಸ್ಥೂಲವಾದ ಹೋಲಿಕೆಗಳು ಇದ್ದರೂ ಸಹ, ಅವುಗಳ ನಡುವೆ ವ್ಯತ್ಯಾಸಗಳೂ ಕಂಡುಬರುತ್ತವೆ. ಗೋವಿಂದನಹಳ್ಳಿಯ ದೇವಾಲಯದ ಗೋಡೆಯ ಮೇಲೆ ಸ್ವಾರಸ್ಯಕರವಾದ ಅನೇಕ ಶಿಲ್ಪಗಳು ಕಂಡು ಬಂದರೆ, ಸೋಮನಾಥಪುರದ ದೇವಾಲಯದ ಗೋಡೆ ಸಂಪೂರ್ಣ ವಾಗಿ ಶಿಲ್ಪರಹಿತವಾಗಿದೆ.

ಗೋವಿಂದನಹಳ್ಳಿಯ ಪಂಚಲಿಂಗದೇವಾಲಯದ ಗೋಡೆ ಶಿಲ್ಪಗಳಲ್ಲಿ ಹೊಯ್ಸಳರ ಕಾಲದ ಜನಜೀವನದಲ್ಲಿ ಹಾಸುಹೊಕ್ಕಾಗಿದ್ದಿರಬಹುದಾದ ಧಾರ್ಮಿಕ ಸಹಿಷ್ಣುತೆ ಮತ್ತು ಸಹ ಬಾಳ್ವೆಯ ತತ್ವಗಳು ಗೋಚರಿಸುತ್ತವೆ. ಇದು ಶಿವನ ದೇವಾಲಯವಾಗಿದ್ದರೂ, ಅದರ ಹೊರ ಗೋಡೆಯ ಮೇಲೆ ವಿಷ್ಣುವಿನ ೨೧ ವಿವಿಧ ಅವತಾರ ಗಳು ಕೆತ್ತಲ್ಪಟ್ಟಿವೆ. ಮೂರು ಸ್ಥಳಗಳಲ್ಲಿ ಮಾತ್ರ ಕೆತ್ತನೆ ಇಲ್ಲದೆ ಸರಳವಾಗಿದೆ. ಸುಖಾಸನದಲ್ಲಿ ಕುಳಿತಿರುವ ಲಕ್ಷ್ಮೀನಾರಾಯಣ, ಒಂದು ಪಕ್ಕದಲ್ಲಿ ನೃತ್ಯ ಮಾಡುತ್ತಿರುವ ಪಾರ್ವತಿ, ಮತ್ತೊಂದು ಪಕ್ಕದಲ್ಲಿ ವೇಣುಗೋಪಾಲ, ಅದರ ಪಕ್ಕದಲ್ಲೇ ಮಹಿಷಾಸುರ ಮರ್ದಿನಿ ಮತ್ತು ಶಾರದೆಯ ವಿಗ್ರಹಗಳಿವೆ. ಮತ್ತೊಂದು ಕಡೆ ಐರಾವತದ ಮೇಲೆ ಕುಳಿತಿರುವ ಇಂದ್ರ ಮತ್ತು ಶಚಿಯರು ಪಾರಿಜಾತವನ್ನು ರಕ್ಷಿಸಲು ಹೋಗುತ್ತಿರು ವಂತೆ ಚಿತ್ರಿತವಾಗಿದೆ. ಇವಲ್ಲದೆ ಸತ್ಯಭಾಮ ಮತ್ತು ಶ್ರೀ ಕೃಷ್ಣನನ್ನು ಹೊತ್ತುಕೊಂಡಿರುವ ಗರುಡ ವಾಮನನಿಗೆ ದಾನವನ್ನು ಕೊಡುತ್ತಿರುವ ಬಲಿ, ತ್ರಿವಿಕ್ರಮ, ಕಾಳಿಂಗ ಮರ್ದನ, ಹಿರಣ್ಯಕಶಿಪುವನ್ನು ಸಂಹರಿಸುತ್ತಿರುವ ನರಸಿಂಹ, ಸ್ತ್ರೀ ಮತ್ತು ಪುರುಷ ವ್ಯಕ್ತಿಗಳೊಡನೆ ನಿಂತಿರುವ ಪ್ರಹ್ಲಾದ, ಕೈಮುಗಿದು ಲಕ್ಷ್ಮಿಯ ಮುಂದೆ ನಿಂತಿರುವ ಗರುಡ, ನಾರದ, ರಾಮ ಮತ್ತು ಲಕ್ಷ್ಮಣರು-ಅವರ ಸುತ್ತ ಹನುಮಂತನೂ ಸೇರಿದಂತೆ ಅನೇಕ ಭಕ್ತರ ಚಿತ್ರಗಳು ಹರಿಹರ, ಮತ್ಸ್ಯ ಭೇದವನ್ನು ಮಾಡುತ್ತಿರುವ ಅರ್ಜುನ, ಮಹಿಷಾಸುರ ಮರ್ದಿನಿ, ಕೇಶವ, ಅಶ್ವಾರೂಢನಾದ ಕಲ್ಕಿ ಮತ್ತು ಕುಳಿತಭಂಗಿಯಲ್ಲಿರುವ ಬುದ್ಧನ ಸಮೇತನಾಗಿರುವ ವಿಷ್ಣುವಿನ ಹತ್ತು ಅವತಾರಗಳ ಶಿಲ್ಪಗಳು. ಪರಿವಾರ ದೇವತೆಗಳಾದ ತಾಂಡವೇಶ್ವರ, ಸುಬ್ರಹ್ಮಣ್ಯ, ಗಣಪತಿ, ಭೈರವ, ದುರ್ಗ, ಕೈಲಾಸವನ್ನು ಎತ್ತಿ ಹಿಡಿದಿರುವ ರಾವಣ, ನೃತ್ಯ ಸರಸ್ವತಿ, ನೃತ್ಯಗಣಪತಿ, ನಂದಿ, ಸಪ್ತಮಾತೃಕೆಯರ ಶಿಲ್ಪಗಳು ಅಲಂಕರಿಸಿವೆ. ಬಾಗಿಲ ವಾಡಗಳಲ್ಲಿ ಶೈವ ದ್ವಾರಪಾಲಕರ ಶಿಲ್ಪಗಳೂ ಕಾಣಸಿಗುತ್ತವೆ. ಸೋಮನಾಥಪುರದ ಪಂಚಲಿಂಗ

ದೇವಾಲಯದ ನವರಂಗದ ಮೇಲ್ಛಾವಣಿಯನ್ನು ತಾವರೆ ಮೊಗ್ಗಿನಿಂದ ಅಲಂಕರಿಸಿರುವಂತೆ ಇಲ್ಲೂ ಸಹ ಅಲಂಕರಿಸ ಲಾಗಿದೆ. ಶಿಲ್ಪದ ದೃಷ್ಟಿಯಿಂದ ಇಷ್ಟೊಂದು ವೈವಿಧ್ಯ ಮಯವಾದ ವಿಗ್ರಹಗಳು ಗೋವಿಂದನಹಳ್ಳಿಯ ಪಂಚಲಿಂಗೇಶ್ವರ ದೇವಾಲಯದಲ್ಲಿದ್ದರೆ, ಸೋಮನಾಥ ಪುರದ ಪಂಚಲಿಂಗದೇವಾಲಯ ಯಾವ ಶಿಲ್ಪವೂ ಇಲ್ಲ.

ಗೋವಿಂದನಹಳ್ಳಿಯ ದೇವಾಲಯದೊಡನೆ ಹೋಲಿಸಿದಾಗ, ಸೋಮನಾಥಪುರದ ಪಂಚಲಿಂಗ ದೇವಾಲಯವನ್ನು ಉದ್ದೇಶಪೂರ್ವಕವಾಗಿಯೇ ಸರಳ ರೀತಿಯಲ್ಲಿ ಗೋಡೆಯ ಮೇಲೆ ಯಾವ ಶಿಲ್ಪವನ್ನೂ ಕೆತ್ತದೆ ಬಿಟ್ಟಿರಲು ಕಾರಣವೇನು ಎಂಬ ಪ್ರಶ್ನೆ ನಮ್ಮನ್ನು ಕಾಡುತ್ತದೆ. ನಿರ್ಮಾಣಕ್ಕೆಸಂಬಂಧಿಸಿದಂತೆ ಹೇಳುವು ದಾದರೆ, ಎರಡೂ ದೇವಾಲಯಗಳ ನಡುವೆ ಕಾಲದ ದೃಷ್ಟಿಯಿಂದ ಅಷ್ಟೊಂದು ವ್ಯತ್ಯಾಸವಿಲ್ಲ. ಸೋಮನಾಥ ಪುರದ ಪಂಚಲಿಂಗ ದೇವಾಲಯವನ್ನು ಅಲಂಕರಿಸಲು ಬೇಕಾಗುವ ಕೌಶಲ್ಯ ಮತ್ತು ತಂತ್ರಜ್ಞಾನ ಆ ಕಾಲಕ್ಕೆ ಲಭ್ಯವಾಗಿತ್ತು. ಗೋವಿಂದನಹಳ್ಳಿಯಿಂದಲೇ ಅವು ದೊರಕುವ ಸಂಭವವಿತ್ತು. ಆದುದರಿಂದ, ಸೋಮನಾಥ ಪುರದ ಪಂಚಲಿಂಗದೇವಾಲಯವನ್ನು ಅಲಂಕರಿಸದೇ ಬಿಟ್ಟಿರುವುದು ಸಹಜವಾಗಿ ನಮ್ಮ ಗಮನವನ್ನು ಸೆಳೆಯುತ್ತದೆ. ಇದಕ್ಕೆ ಒಂದು ಕಾರಣವನ್ನು ಊಹಿಸ ಬಹುದು. ಸೋಮನಾಥಪುರದ ಪಂಚಲಿಂಗ ದೇವಾಲಯದ ಬಳಿ ಕೇಶವ ದೇವಾಲಯವಿದೆ. ಅದನ್ನು ಅತ್ಯಂತ ಶ್ರೀಮಂತವಾಗಿ ಎಲ್ಲಾ ಕೌಶಲ್ಯ ಮತ್ತು ತಂತ್ರಗಳನ್ನು ಬಳಸಿಕೊಂಡು ಕಟ್ಟಲಾಯಿತು. ಇದಲ್ಲದೆ, ವಿಷ್ಣುವಿಗೆ ಸಂಬಂಧಪಟ್ಟ ಅನೇಕ ಪುರಾಣ ಕಥೆಗಳನ್ನು ಮತ್ತು ಅವನ ವಿವಿಧ ರೂಪಗಳನ್ನು ಅಲ್ಲಿ ಕೆತ್ತಲಾಗಿದೆ. ಕೇಶವ ಎಂಬುದು ವಿಷ್ಣುವಿನ ಒಂದು ರೂಪ. ಆದುದರಿಂದ ಕೇಶವ ದೇವಾಲಯವನ್ನು ಕಟ್ಟಿದ ಸ್ಥಪತಿಗಳು ಅದರ ಬಳಿಯಲ್ಲೇ ನಿರ್ಮಿಸಿದ ಪಂಚಲಿಂಗ ದೇವಾಲಯದ ಗೋಡೆಗಳ ಮೇಲೆ ವಿವಿಧ ರೂಪಗಳನ್ನು, ಭಂಗಿಗಳನ್ನು, ಮತ್ತು ವಿವಿಧ ಐತಿಹ್ಯ ಗಳನ್ನು ಪ್ರದರ್ಶಿಸುವುದು ಅನವಶ್ಯಕವೆಂದು ಭಾವಿಸಿದ್ದೀರ ಬೇಕು. ಆದುದರಿಂದ, ಪಂಚಲಿಂಗ ಗುಡಿಯನ್ನು ಸರಳವಾಗಿಯೇ ಇಟ್ಟು, ಆ ಮೂಲಕ ಕಲೆಯ ವೈಭವ ಒಂದು ಕಡೆ ಮತ್ತು ಕಲೆಯ ಸರಳತೆ ಮತ್ತೊಂದು ಕಡೆ–ಇವೆರಡರ ನಡುವಣ ವ್ಯತ್ಯಾಸವನ್ನು ಪ್ರದರ್ಶಿಸು ವುದೇ ಸ್ಥಪತಿಗಳ ಉದ್ದೇಶವಾಗಿದ್ದಿತೆಂದು ಹೇಳಬಹುದು. ದೇವಾಲಯಗಳನ್ನು ಸಂದರ್ಶಿಸುವವರಿಗೆ ಇದರಿಂದ ಎರಡು ರೀತಿಯ ಕಲಾತ್ಮಕ ದರ್ಶನ ಮತ್ತು ಅನುಭವ ಗಳು ಉಂಟಾಗುವ ಸಾಧ್ಯತೆ ಇದ್ದಿತು.

ಹಾಗಿದ್ದ ಪಕ್ಷದಲ್ಲಿ ಗೋವಿಂದನಹಳ್ಳಿಯ ಪಂಚ ಲಿಂಗ ದೇವಾಲಯವನ್ನು, ಅಂದರೆ ಅದರ ಹೊರಗೋಡೆ ಯನ್ನು ವಿಷ್ಣುವಿನ ಐತಿಹ್ಯಗಳಿಂದ ಅಲಂಕರಿಸುವ ಉದ್ದೇಶವೇನಿತ್ತು ಎಂಬ ಪ್ರಶ್ನೆ ಉದ್ಭವಿಸುತ್ತದೆ.

ಇದಕ್ಕೆ ಉತ್ತರವಿಷ್ಟೆ. ಗೋವಿಂದನಹಳ್ಳಿಯಲ್ಲಿ ದೇವಾಲಯವನ್ನು ನಿರ್ಮಿಸುವಾಗ, ನಿರ್ಮಾಪಕರು ಮತ್ತು ಸ್ಥಪತಿಗಳು ಸ್ಥಳೀಯ ಅವಶ್ಯಕತೆಗಳನ್ನು ಗಮನಕ್ಕೆ ತೆಗೆದುಕೊಂಡು ಅವುಗಳನ್ನು ಕಲಾತ್ಮಕ ಸಂಪ್ರದಾಯದೊಂದಿಗೆ ಹೊಂದಾಣಿಕೆ ಮಾಡಿದರು ಎಂದು ಹೇಳಬಹುದು. ಇದಲ್ಲದೆ, ಅವರು ದಕ್ಷಿಣ ಭಾರತದಲ್ಲಿ ಶೈವ ಪಂಥಕ್ಕೆ ಪರಿಚಯವಿದ್ದ ಪಂಚಾಯತನ ಮಾದರಿಯನ್ನು ದೇವಾಲಯ ನಿರ್ಮಾಣದಲ್ಲಿ ಬಳಸಿ ಕೊಂಡಿರಬೇಕು. ಈ ಸಂಪ್ರದಾಯದ ಪ್ರಕಾರ, ಶಿವ, ವಿಷ್ಣು, ಸೂರ್ಯ, ಗಣೇಶ ಮತ್ತು ದುರ್ಗಪೂಜಾರ್ಹರು ಮತ್ತು ದೇವರುಗಳು, ವೈವಿಧ್ಯತೆಯ ಸ್ವರೂಪವನ್ನು, ಈ ಸಂಪ್ರದಾಯದಲ್ಲಿ ಪಡೆದುಕೊಂಡರು.

ಪ್ರಾಯಶಃ ಈ ಸಂಪ್ರದಾಯದ ಪ್ರದರ್ಶನವನ್ನೇ ನಾವು ಗೋವಿಂದನಹಳ್ಳಿಯ ಪಂಚಲಿಂಗೇಶ್ವರ ದೇವಾಲಯದ ಗೋಡೆಯ ಮೇಲೆ ಕಾಣಬಹುದಾಗಿದೆ. ಒಟ್ಟಿನಲ್ಲಿ, ಹೊಯ್ಸಳರ ಕಾಲದ ಈ ಎರಡು ಪಂಚಲಿಂಗೇಶ್ವರ ದೇವಾಲಯಗಳು ಎರಡು ಪ್ರತ್ಯೇಕ ಸ್ಥಳಗಳಲ್ಲಿ ಮತ್ತು ಕಾಲಗಳಲ್ಲಿ ರಚಿಸಲ್ಪಟ್ಟು ಅಂದಂದಿನ ಬದುಕಿನ ಸಾಮರಸ್ಯ ಸಹಬಾಳ್ವೆ ಮತ್ತು ಸಹಿಷ್ಣುತೆಯ ತತ್ವಗಳನ್ನು ಕಲಾಮಾಧ್ಯಮದ ಮೂಲಕ ಪ್ರಕಟಿಸು ತ್ತವೆ.

ಡಾ|| ಅ. ಸುಂದರ*

# ಕೆಳದಿ-ಇಕ್ಕೇರಿ-ಬಿದನೂರು ರಾಜ್ಯ ಕಾಲದ ಅಪರೂಪ ಮಾದರಿಯ ಎರಡು ದೇವಾಲಯಗಳು ಮತ್ತು ಮೂರ್ತಿ ಶಿಲ್ಪ:ಶೋಧನೆ

**ಕೆಳದಿ–ಇಕ್ಕೇರಿ–ಬಿದನೂರು** ರಾಜ್ಯ (ಸು. ೧೫೦೦–೧೧೬೩) ಕಾಲದ ಈ ಸ್ಥಳಗಳಲ್ಲಿಯ ಕ್ರಮವಾಗಿ ಶ್ರೀ ರಾಮೇಶ್ವರ-ಪಾರ್ವತೀ.ವೀರಭದ್ರ, ಅಘೋರೇಶ್ವರ, ನೀಲಕಂಠೇಶ್ವರ, ಹಾಗು ಆರಗೆ, ಕವಲೇದುರ್ಗ, ತೀರ್ಥಹಳ್ಳಿ ಮೊದಲಾದ ಇತರಡೆಗಳಲ್ಲಿಯ ದೇವಾಲಯಗಳ ಅಧ್ಯಯನವು ಸ್ವಲ್ಪ ಮಟ್ಟಿಗೆ ಅಲ್ಲಲ್ಲಿ[1] ೧೯೦೪ರಿಂದ ಆಗಿದೆ. ಇತ್ತೀಚೆಗೆ ಶ್ರೀಮತಿ ಸುಭದ್ರಾ ಐತಾಳರವರು **ಕೆಳದಿ ರಾಜ್ಯ ವಾಸ್ತು ಮತ್ತು ಮೂರ್ತಿ ಶಿಲ್ಪದ**[2] ಮೇಲೆ ಪಿ. ಎಚ್. ಡಿ. ಮಹಾಪ್ರಬಂಧವನ್ನು ಕರ್ನಾಟಕ ವಿಶ್ವವಿದ್ಯಾಯಕ್ಕೆ ಯಶಸ್ವಿಯಾಗಿ ಸಾದರಪಡಿಸಿದರು. ಇವರು ತಮ್ಮ ಪ್ರಬಂಧಕ್ಕೋಸ್ಕರ ಇವೆಲ್ಲ ಸ್ಥಳಗಳಲ್ಲಿ ಅನ್ವೇಷಣೆ ಕಾರ್ಯವನ್ನು ಕೈಗೊಂಡಿದ್ದರು.

ಕರ್ನಾಟಕ ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಸಂಗ್ರಹಾಲಯ ನಿರ್ದೇಶನಾಲಯದಲ್ಲಿ ೧೯೮೪–೮೭ ರಲ್ಲಿ ನಾನು ನಿರ್ದೇಶಕನಾಗಿದ್ದಾಗ ಶಿವಮೊಗ್ಗದಲ್ಲಿಯ ಶಿವಪ್ಪ ನಾಯಕ ಅರಸನ ಅರಮನೆಯ ಸಂರಕ್ಷಣೆಯ ಕಾರ್ಯವನ್ನು ನಡೆಸುತ್ತಿದ್ದ ಸಂದರ್ಭದಲ್ಲಿ **ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿ ಶಿಲ್ಪ** ಎಂಬ ವಿಷಯವನ್ನು ಐದು ಸಂಪುಟಗಳಲ್ಲಿ ಪ್ರಕಟಿಸುವ ಒಂದು ಯೋಜನೆಯನ್ನು ಹಾಕಿಕೊಂಡು ಒಂದನೇ ಸಂಪುಟ ಮತ್ತು ಐದನೇ ಸಂಪುಟದ ಎರಡನೇ ಭಾಗನನ್ನು[3] ಪ್ರಕಟಿಸಿದನು. ಆಗ ಆರಂಭಿಸಿದ ನನ್ನ ಕ್ಷೇತ್ರ ಕಾರ್ಯವನ್ನು ಸಮಯವಾದಾಗಲ್ಲ ಮುಂದುವರಿಸಿದ್ದೇನೆ. ದಿನಾಂಕ ೧೪–೫–೯೩ ಮತ್ತು ೩–೭–೯೩ ರಂದು ಕ್ರಮವಾಗಿ ಶಿವಮೊಗ್ಗಾ–ಜಿಲ್ಲೆಯ ಲಕ್ಕವಳ್ಳಿ (ಭದ್ರಾವತಿ ತಾ.) ಆವಿನ ಹಳ್ಳಿಯ ಹತ್ತಿರ ಗೆಣಸಿನ ಕುಣಿ (ಸಾಗರ ತಾ.) ಯಲ್ಲಿಯ ಈ ಕಾಲದ ಎರಡು

---

* ನಿರ್ದೇಶಕರು, ಕರ್ನಾಟಕ ವಿಶ್ವವಿದ್ಯಾಲಯ ಸ್ನಾತಕೋತ್ತರ ಕೇಂದ್ರ, ಬಿಜಾಪುರ

1 ಕರ್ನಾಟಕ ರಾಜ್ಯ ಸರ್ಕಾರದ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ (ಪ್ರಾ. ಸಂ. ನಿ.) ದ ವಾರ್ಷಿಕ ವರದಿಗಳು, ೧೯೦೪ ಮತ್ತು ೧೯೦೯; ಎಪಿಗ್ರಾಫಿಯ ಕರ್ನಾಟಕ ಸಂಪುಟ-8.

2 ಶ್ರೀಮತಿ ಸುಭದ್ರಾ ಐತಾಳ, ೧೯೯೨ : ಕೆಳದಿ ಕಿಂಗಡಮ್ ದಿ ಆರ್ಟ್ಸ್ ಆ್ಯಡ್ ಆರ್ಕಿಟೆಕ್ಚರ್. ಅಪ್ರಕಟಿತ ಪಿಎಚ್. ಡಿ. ಮಹಾಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

3 ಸುಂದರ. ಅ : ೧೯೮೫, ಕೆಳದಿ ಅರಸರ ಕಾಲದ ವಾಸ್ತು ಮತ್ತು ಮೂರ್ತಿ ಕಲೆ ಸಂಪುಟ (ರಾಜಕೀಯ ಮತ್ತು ಸಾಂಸ್ಕೃತಿಕ ಹಿನ್ನೆಲೆ), ಪ್ರಾ. ಸಂ. ನಿ. ಮೈಸೂರು.
ಸುಂದರ, ಅ. ೧೯೮೬ : ಕೆಳದಿ ಅರಸರ...ಕಲೆ, ಸಂಪುಟ-5, ಭಾಗ-2 ; ದಿ ಶಿವಪ್ಪನಾಯಕ ಪ್ಯಾಲೇಸ್ ಇನ್ ಶಿವಮೊಗ್ಗ ಪ್ರಾ. ಸಂ. ನಿ.

ದೇವಾಲಯಗಳನ್ನು ದಿನಾಂಕ ೪-೭-೯೩ ರಂದು, ಕೆಳದಿ ಇದರ ಸಮೀಪದ ಸಂಗಳದಲ್ಲಿ ಅಷ್ಟಾಗಿ ಬೆಳಕಿಗೆ ಬಾರದೆ ಇರದ ಕೆಲವು ಶಿಲ್ಪಗಳನ್ನು ಪರಿಶೀಲಿಸಿದೆನು. ತುಲನಾತ್ಮಕವಾಗಿ ಮೊದಲಿನ ಎರಡು ಸ್ಥಳಗಳಲ್ಲಿಯ ದೇವಾಲಯಗಳು ಕೊನೆಯ ಎರಡು ಸ್ಥಳಗಳಲ್ಲಿಯ ಮೂರ್ತಿ ಶಿಲ್ಪಗಳು ಅಪರೂಪದ ಲಕ್ಷಣಗಳಿಂದ ವಿಶಿಷ್ಟ ವಾಗಿಯೂ ಹಾಗೂ ಮಾದರಿಯದಾಗಿದೆ. ಇವುಗಳನ್ನು ಇಲ್ಲಿ ವಿವೇಚಿಸಲಾಗಿದೆ. ದೇವಾಲಯಗಳು ಯಾವುದೇ ರೀತಿಯಲ್ಲಿ ಭವ್ಯವಾಗಿರದೆ ತೀರ ಸರಳ ಹಾಗು ಚಿಕ್ಕ ನಿರ್ಮಿತಿಗಳು.

### ೧. ದೇವಾಲಯಗಳು

ವೀರಭದ್ರ ದೇವಾಲಯ ಕುವೆಂಪು ವಿಶ್ವ ವಿದ್ಯಾಲಯ ಸಮೀಪ ಲಕ್ಕವಳ್ಳಿಯ ವೀರಭದ್ರ ದೇವಾಲಯವು ಗ್ರಾಮದ ಸಮೀಪ ಭದ್ರಾ ನದಿಯ ಸೇತುವೆ ಬಳಿಯಲ್ಲಿ ಒಂದು ಹೊಲದಲ್ಲಿದೆ. ಇದರಲ್ಲಿ ಕೇವಲ ಒಂದು ಚೌಕೋನ ಗರ್ಭಗೃಹ ಮತ್ತು ಮುಂಭಾಗದಲ್ಲಿ ಕಿರುದಾದ ತೆರೆದ ಮಚಬಂಧ ಮಾದರಿಯ ಅಧಿಷ್ಠಾನ, ಯಾವುದೇ ರೀತಿಯ ಅಲಂಕರಣವಿಲ್ಲದ ಗೋಡೆ, ಸ್ವಲ್ಪ ಇಳಿಜಾರಿನ ಮಾಡು; ಮಾಡಿನ ಮೇಲೆ ಮೂಲೆ ಮತ್ತು ಮಧ್ಯ ಭಾಗದಲ್ಲಿ ಪುಷ್ಪ ಬೋದಿಗೆಗಳು, ಇವುಗಳ ನಡುವೆ ಚಿತ್ರಪಟ್ಟಿ ಮೇಲೆ ತ್ರಿದಳಾಕೃತಿಯ ಕಂಗುರಗಳ ಸಾಲು ಇವಿಷ್ಟು ಊರ್ಧ್ವಮುಖವಾಗಿ ದೇವಾಲಯದ ಭಾಗಗಳು; ಗರ್ಭ ಗುಡಿಯ ಮೇಲೆ ಶಿಖರವಿಲ್ಲ.

ಮುಖ ಮಂಟಪದ ಮುಂಭಾಗದಲ್ಲಿ ಸಿಂಹ ಕೈಪಿಡಿಗಳುಳ್ಳ ಸೋಪಾನ, ಮಂಟಪದ ಮುಂಬದಿ ಮೂಲೆಗಳಲ್ಲಿ ಒಂದೊಂದು ಕಂಬ; ಮಂಟಪದಿಂದ ಗರ್ಭಗುಡಿಗೆ ನೇರ ಪ್ರವೇಶವಿದೆ. ಗರ್ಭಗುಡಿಯ ಮಧ್ಯದಲ್ಲಿ ಪೀಠದ ಮೇಲೆ ಬಹುಶಃ ಮೂಲ ಮೂರ್ತಿ ಯಲ್ಲದ ಅನಂತರ ಕಾಲದ ಒಂದು ಸಣ್ಣ ವೀರಭದ್ರ ಮೂರ್ತಿ ಇದೆ.

ಅಧಿಷ್ಠಾನದ ಅತ್ಯಂತ ಕೆಳ ಹಂತದಲ್ಲಿ ಮತ್ತು ಮೇಲಿನ ಹಂತದಲ್ಲಿ ಉದ್ದಕ್ಕೂ ಕ್ರಮವಾಗಿ ಮೇಲ್ಮುಖ ವಾಗಿ ಮತ್ತು ಕೆಳಮುಖವಾಗಿ ಬಿಡಿಸಿರುವ ಸರಳ ಚೂಪಾದ ಮೊನೆಯುಳ್ಳ ಅರ್ಧ ಚಂದ್ರಾಕೃತಿ ತೆನೆಗಳಿವೆ. ಬುಡದಿಂದ ತುದಿಯವರೆಗೆ ಎಲೆ ಹೂವುಗಳ ಚಿತ್ರಗಳು, ಇಲ್ಲವೇ ಅಲಂಕೃತ ಪಟ್ಟಿಕೆ ಮತ್ತು ಮೇಲ್ಭಾಗದಲ್ಲಿ ಪುಷ್ಪ ಬೋದಿಗೆಗಳಿಂದ ಕೂಡಿವೆ. ಮುಂಭಾಗದ ಎಡಮೂಲೆಯ ಕಂಬದ ಮಧ್ಯಭಾಗದಲ್ಲಿ ಪೀಠದ ಮೇಲಿರುವ ಪೂರ್ಣ ಕುಂಭ ಮತ್ತು ಮೇಲ್ಭಾಗ ದಲ್ಲಿ ಮೇಲ್ಮುಖವಾಗಿ ನಿಮಿರಿ ನಿಂತಿರುವ ಪುಷ್ಪ ದಳಗಳು ಆಕರ್ಷಕವಾಗಿವೆ ಅದರಂತೆಯೇ ಈ ಮೂಲೆಗಂಬದ ಪಕ್ಕದಲ್ಲಿಯ ಅರ್ಧಗಂಬದ ಮೇಲೆ ರೇಖಾ ಚಿತ್ರವು ಮತ್ತು ಶ್ರೀ ವತ್ಸ ಚಿಹ್ನೆಯ ಚಿತ್ರವು ಕೂಡ ವಿಶೇಷ ವಾಗಿವೆ. ದೇವಾಲಯದ ಬಲಬದಿಯ ಗೋಡೆಯ ಮೇಲೆ ಗಣೇಶನ ರೇಖಾ ಚಿತ್ರವು ಎಡಬದಿಯ ಗೋಡೆಯ ಮೇಲೆ ಥೋತ್ರವನ್ನುಟ್ಟ ಕೈಗಳಲ್ಲಿ ಅಸ್ಪಷ್ಟ ವಾಗಿ ಒಂದು ವಸ್ತುವನ್ನು ಹಿಡಿದುಕೊಂಡು, ಅರಳಿದ ಅಗಲವಾದ ಮೂಗು, ದೊಡ್ಡ ದೊಡ್ಡ ಬಿರುಗಣ್ಣುಗಳು ಅತ್ಯಂತ ಕಿರಿದಾದ ಹಣೆ, ಬುಡದ ಮೇಲೆ ಇಳಿಬಿಟ್ಟ ನೀಳ ಕೇಶರಾಶಿ, ಬಲಿಷ್ಠ ಮೈಕಟ್ಟಿನ ಪುರುಷಾ ಕೃತಿಯ ಚಿತ್ರವು ಇವೆ. ಹಿಂಬದಿಯ ಗೋಡೆಯ ಮೇಲ್ಭಾಗ ದಲ್ಲಿ ಮಾಡಿನ ಕೆಳಗೆ ಪವಿತ್ರ ಗಂಟನ್ನು ಹಾಕಿಕೊಂಡಿ ರುವ ಜೋಡಿ ನಾಗರಗಳ ಉಬ್ಬು ಶಿಲ್ಪಗಳಿವೆ. ಮಾಡಿನ ಮೇಲಿನ ಫಲಕದ ಮೇಲೆ ವಿವಿಧ ಭಂಗಿಗಳಲ್ಲಿರುವ ಪುರುಷಾಕೃತಿಗಳ, ಪಕ್ಷಿಗಳ, ಹೂವು ಮೊಗ್ಗಿನ ಅಲಂಕರಣವಿದೆ. ಸೋಪಾನದ ಕೈಪಿಡಿಗಳಲ್ಲಿ ಸಾಮಾನ್ಯ ವಾಗಿರುವಂತೆ, ಬಾಲವನ್ನು ಬೆನ್ನಿನ ಮೇಲೆತ್ತಿ ಮುಂದಿನ ಬಲಗಾಲನ್ನು ಮೇಲಕ್ಕೆತ್ತಿ ಹಿಂದುರುಗಿ ನೋಡುವಂತಿ ರುವ ಸಿಂಹ ಶಿಲ್ಪದ ಕೈಪಿಡಿ. ಮಂಟಪದ ಮುಂಭಾಗದ ಕಂಬಗಳು ಸ್ವಲ್ಪಮಟ್ಟಿಗೆ ವಿಶಿಷ್ಟವಾಗಿವೆ. ಅಧಿಷ್ಠಾನ ಮಾದರಿಯ ಪೀಠ, ಉಬ್ಬು ಶಿಲ್ಪ ಸಹಿತ ಕೆಳಭಾಗ ಚೌಕೋನ, ಮಧ್ಯಭಾಗ ಅಷ್ಟಕೋನ, ಮೇಲ್ಭಾಗ ಚೌಕೋನದ ಕಾಂಡ ಇದರ ಮೇಲೆ ಅಷ್ಟಕೋನದ ಕಲಶದ ಮಾದರಿ. ಇದರ ಮೇಲೆ ಅಷ್ಟಕೋನ ಫಲಕದಂತಿರುವ ಕುಂಭ, ಇದಜೆ ಮತ್ತು ಫಲಕಗಳಿವೆ. ಫಲಕದ ಮೇಲೆ ಪುಷ್ಪ ಬೋದಿಗೆಗಳಿವೆ. ಕಂಬದ ಮುಂಭಾಗದಿಂದ ಚಾಚಿದ ಅದಕ್ಕೆ ಅಂಟಿಕೊಂಡಂತೆ ಒಂದು ಸಣ್ಣ ಕಿರುಗಂಬವಿದೆ. ಸ್ವಲ್ಪ ಮಟ್ಟಿಗೆ ವಿಜಯ ನಗರ ಕಾಲದ ಕಂಬ ಸಮುಚ್ಚಯದ ಮಾದರಿಯನ್ನು

ಹೋಲುತ್ತದೆ. ಮುಖಮಂಟಪದ ಛತ್ತಿನ ಕೇಂದ್ರದಲ್ಲಿ ಅರಳಿದ ಕಮಲ ಪುಷ್ಪದ ಫಲಕವಿದೆ. ದ್ವಾರಬಂಧದಲ್ಲಿ ದ್ವಾರಪಾಲಕೋಷ್ಠ, ಅಲಂಕೃತ ಪಟ್ಟಿಕೆಯುಳ್ಳ ಸ್ತಂಭ ಶಾಖೆ, ಪುಷ್ಪಶಾಖೆ ಇದರ ಕೆಳಗೆ ಮತ್ತೊಂದು ಚಿಕ್ಕ ದ್ವಾರಪಾಲ ಕೋಷ್ಠ, ಲಲಾಟ ಬಿಂಬದಲ್ಲಿ ಗಣೇಶ ಹಾಗೂ ಇದರ ಮೇಲಿನ ಉತ್ತರಾಂಗದಲ್ಲಿ ಮಕರ ತೋರಣದ ಮಧ್ಯದಲ್ಲಿ ಕುಳಿತ ಸಿಂಹದ ಉಬ್ಬು ಶಿಲ್ಪ ವಿದೆ.

ಗರ್ಭಗುಡಿಯ ಛತ್ತಿನಲ್ಲಿ ಒಂಭತ್ತು ಚೌಕೋನ ಗಳಲ್ಲಿ ಒಂದೊಂದರಲ್ಲಿ ಒಂದೊಂದು ವಿವಿಧ ರೀತಿಯ ಅರಳಿದ ಕಮಲ ಪುಷ್ಪ ಫಲಕಗಳಿವೆ. ದೇವಾಲಯದ ಮುಂಭಾಗದಲ್ಲಿ ಪ್ರಾಯಶಃ ಕಟ್ಟೆಯ ಮೇಲೆ ಕುಳಿತ ನಂದಿಯ ದುಂಡು ಶಿಲ್ಪವಿದ್ದಿರಬೇಕು. ಅದು ಪೀಠ ದಿಂದ ಬೇರ್ಪಟ್ಟು ಅಲ್ಲಿಯೇ ಒಂದೆಡೆಯಲ್ಲಿ ಭಗ್ನವಾಗಿ ಬಿದ್ದಿದೆ.

### ಶಿಲ್ಪಗಳು

ಮುಖಮಂಟಪದ ಬಲಬದಿಯ ಕಂಬದ ಮೇಲೆ ಎಡಗೈಯನ್ನು ಮೇಲಕ್ಕೆತ್ತಿದ ಬಲಗೈಯನ್ನು ಒಂದು ಕಲಶದ ಮೇಲಿಟ್ಟು ನಿಂತ ಒಬ್ಬ ರಾಜಪುರುಷ, ಮತ್ತೊಂದು ಬದಿಯಲ್ಲಿ ಕೈಮುಗಿದು ನಿಂತ ರಾಜಪುರುಷ ಇನ್ನೊಂದು ಬದಿಯಲ್ಲಿ ರಾಣಿಯನ್ನು ತನ್ನ ಬಲ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಬಲಗೈಯಿಂದ ಅವಳ ಸೊಂಟವನ್ನು ಬಳಸಿ ಕುಳಿತ ರಾಜಪುರುಷ ಈ ರೀತಿ ಸಣ್ಣ ಸಣ್ಣ ಉಬ್ಬು ಶಿಲ್ಪಗಳಿವೆ. ಇವೆಲ್ಲವು ಸಾಂಪ್ರದಾಯಿಕ ಶೈಲಿಯಲ್ಲಿವೆಯೇ ಹೊರತು ಅಷ್ಟೇನು ಚೆಲುವಾಗಿಲ್ಲ.

ಈ ದೇವಾಲಯಕ್ಕೆ ಸಂಬಂಧಿಸಿದ ಯಾವುದೇ ಶಾಸನವಿಲ್ಲ. ಕೇವಲ ಶೈಲಿಯನ್ನವಲಂಬಿಸಿ ಹೇಳುವು ದಾದರೆ ಇದು ಬಹುಶಃ ಕೆಳದಿ ರಾಜ್ಯದ ಕೊನೆಯ ಹಂತದ ಅಂದರೆ ೧೮ನೇ ಶತಮಾನದ ಆದಿ ಭಾಗದ್ದೆಂದು ಹೇಳಬಹುದು.

### ಗೆಣಸಿನ ಕುಣಿಯ ಸಿದ್ಧೇಶ್ವರ ದೇವಾಲಯ*

ಈ ದೇವಾಲಯವು ಗ್ರಾಮದ ಪೂರ್ವಕ್ಕೆ ಸುಮಾರು ಅರ್ಧ ಕಿ.ಮೀ. ದೂರದಲ್ಲಿ ಒಂದು ಕೆರೆಯ ದಂಡೆಯ ಮೇಲೆ ಪೂರ್ವಾಭಿಮುಖವಾಗಿದೆ. ಇದು ಕೂಡ ಒಂದು ಸಾಧಾರಣ ಸಣ್ಣ ದೇವಾಲಯ. ಆದರೆ ಇದರ ತಳವಿನ್ಯಾಸವು ಮತ್ತು ಇದರ ಶಿಖರದ ಮಾದರಿಯು ಇದುವರೆಗೆ ತಿಳಿದಮಟ್ಟಿಗೆ ಕೆಳದಿ ರಾಜ್ಯದ ಉಳಿದೆಲ್ಲ ದೇವಾಲಯಗಳಿಗಿಂತ ತೀರಾ ಭಿನ್ನವಾಗಿದೆ. ಆದ್ದರಿಂದ ಇದು ಕೆಳದಿ ರಾಜ್ಯ ಕಾಲದ ಒಂದು ಹೊಸ ಮಾದರಿಯ ದೇವಾಲಯ. ಮುಂಭಾಗ ಮಧ್ಯದಲ್ಲಿ ಸೋಪಾನವುಳ್ಳ ಒಂದು ಚೌಕೋನದ ಕಟ್ಟೆಯ ಮೇಲೆ ಸುತ್ತಲೂ ಪ್ರದಕ್ಷಿಣೆ ಹಾಕಲು ಸ್ಥಳಾವಕಾಶವಿದ್ದು ಮಧ್ಯದಲ್ಲಿ ಚೌಕೋನದ ಒಂದು ಗರ್ಭಗೃಹ. ಗರ್ಭಗೃಹದ ಮಾಡಿನ ಮೇಲೆ ಮಧ್ಯದಲ್ಲಿ ಹೊಸ ಮಾದರಿಯ ಶಿಖರ.

ಕಟ್ಟೆಯ ಅಂಚಿನಲ್ಲಿ ಉದ್ದಕ್ಕೂ ಎಲ್ಲ ಬದಿಗಳಲ್ಲಿ ಸಮಾನ ಅಂತರದಲ್ಲಿ ಒಂದೇ ಮಾದರಿಯ ಒಟ್ಟು ೧೭ ಸರಳ ಕಂಬಗಳಿವೆ. ಮುಂಬದಿಯ ಪ್ರತಿಯೊಂದು ಕಂಬದ ಮೇಲ್ಭಾಗದಿಂದ ಮಾಡಿಗೆ ಸೇರಿಸಲ್ಪಟ್ಟ ರೋಮನ್ ಅಕ್ಷರ 'ಎಸ್' ಆಕೃತಿಯ ಊರ್ಧ್ವ ಪಟ್ಟಿಕೆ ಯಿದೆ. ಗರ್ಭಗುಡಿಯ ಮುಂಬದಿಯ ಎರಡೂ ಮೂಲೆ ಗಳಿಂದ ಗೋಡೆಯನ್ನು ಕಟ್ಟೆಯ ಮೇಲೆ ಅಡ್ಡಲಾಗಿ ವಿಸ್ತರಿಸಲಾಗಿದೆ. ಹೀಗೆ ಪ್ರತ್ಯೇಕಿಸಲ್ಪಟ್ಟ ಮುಂಭಾಗ ದಿಂದ ಪ್ರದಕ್ಷಿಣಾ ಪಥಕ್ಕೆ ಹೋಗಲು ಎರಡು ಬದಿಗಳ ಅಡ್ಡ ಗೋಡೆಗಳಲ್ಲಿ ಕಮಾನಿನಾಕೃತಿಯ ಪ್ರವೇಶ ದ್ವಾರ ವಿದೆ. ಎಲ್ಲೆಡೆಯ ಮಾಡಿನ ಛತ್ತು ಸಮತಲವಾಗಿದೆ. ಗರ್ಭಗುಡಿಯ ಮುಂಭಾಗದ ಛತ್ತಿನಲ್ಲಿ ರಂಗೋಲಿ ತರಹದ ವಕ್ರ ರೇಖಾಚಿತ್ರವಿದೆ. ಮಧ್ಯದಲ್ಲಿ ವಿಶಿಷ್ಟ ಪ್ರಕಾರದ ಅರಳಿದ ಕಮಲ ಪುಷ್ಪ ಫಲಕವಿದೆ.

* ತಮ್ಮ ವಿದ್ಯಾರ್ಥಿಗಳಿಂದ ಇಲ್ಲಿ ಈ ದೇವಾಲಯವಿದ್ದ ಮತ್ತು ಉಳಿದ ಶಿಲ್ಪಗಳ ಬಗ್ಗೆ ಪಡೆದ ಮಾಹಿತಿಯನ್ನು ಕುವೆಂಪು ವಿಶ್ವವಿದ್ಯಾಲಯದ ಶ್ರೀಮತಿ ಸರ್ವಮಂಗಳಾ ಅವರು ನನಗೆ ಒಂದು ವರ್ಷದ ಮುಂಚೆ ತಿಳಿಸಿದ್ದರು. ಆ ಮಾಹಿತಿಯ ಮೇಲೆ ನಾವು ದೇವಾಲಯವನ್ನು ಶಿಲ್ಪವನ್ನು ಪರಿಶೀಲಿಸಿವೆ. ಮಾಹಿತಿ ಕೊಟ್ಟ ಶ್ರೀಮತಿ ಸರ್ವಮಂಗಳಾ ಅವರಿಗೆ ನಾವು ಕೃತಜ್ಞ.

ಗರ್ಭಗುಡಿಯ ದ್ವಾರಬಂಧವು ತೀರ ಸರಳವಾಗಿದ್ದು ಕೆಳಭಾಗದಲ್ಲಿ ಶೈವ ದ್ವಾರಪಾಲಕರು, ಲಲಾಟ ಬಿಂಬ ದಲ್ಲಿ ಪದ್ಮಾಸನದಲ್ಲಿರುವ ಗಣೇಶ ಬಿಂಬವಿದೆ. ಪ್ರತಿ ಚತುರ್ಭುಜ ದ್ವಾರಪಾಲಕನ ಬದಿಯಲ್ಲಿ ಹಿಂದಿನ ಕಾಲುಗಳ ಮೇಲೆ ನಿಂತ ಜಿಂಕೆ (ನಾಯಿ) ಇದೆ. ಹಿಂದಿನ ಕೈಗಳಲ್ಲಿ ತ್ರಿಶೂಲ, ಡಮರು ಮುಂದಿನ ಬಲ/ಎಡ ಕೈಯಲ್ಲಿ ಗದೆ ಇದೆ. ಒಬ್ಬರು ರುಂಡ ಮಾಲಾಧಾರಿ. ಆದ್ದರಿಂದ ಇವು ವೀರಭದ್ರ ಶಿಲ್ಪಗಳು. ಗಣೇಶನ ಹಿಂದಿನ ಕೈಗಳಲ್ಲಿರುವುದು ಚಕ್ರ/ಶಂಖಗಳೆಂದು ತೋರು ವುದು. ಈ ಬಿಂಬದ ಮೇಲ್ಭಾಗದ ಉತ್ತಿರಾಂಗದಲ್ಲಿ ಪದ್ಮಾಸನದಲ್ಲಿ ಕುಳಿತ ಯೋಗಿಯ ಉಬ್ಬು ಶಿಲ್ಪವಿದೆ.

ಗರ್ಭಗುಡಿಯೊಳಗೆ ಒಂದು ಚೌಕೋನ ಸ್ತಂಭ ಮಂಟಪವಿದೆ. ಇದರ ಮಧ್ಯದಲ್ಲಿ ಅಷ್ಟಕೋನ ಕಟ್ಟೆ ಇದರ ಮೇಲೆ ಶಿವಲಿಂಗ ಪೀಠವಿದೆ. ಮಂಟಪದ ಕಂಬ ಗಳು ಮಾತ್ರ ತುಂಬ ಅಚ್ಚುಕಟ್ಟಾಗಿ ಪ್ರಮಾಣಬದ್ಧ ವಾಗಿ ಆಕರ್ಷಕವಾಗಿವೆ. ಮಂಟಪದೊಳಗಿನ ಛತ್ತು ನಕ್ಷತ್ರಾಕೃತಿಯಲ್ಲಿದ್ದು ಮಧ್ಯದಲ್ಲಿ ಕಮಲ ಪುಷ್ಪದ ಫಲಕವಿದೆ. ಈ ದೇವಾಲಯದ ಮುಂದಿನ, ಕೈಪಿಡಿ ಮತ್ತು ಅಧಿಷ್ಠಾನಗಳು ಕ್ರಮವಾಗಿ ಲಕ್ಕವಳ್ಳಿಯ ವೀರಭದ್ರ ದೇವಾಲಯವನ್ನು ಹೋಲುತ್ತದೆ.

ಗರ್ಭಗುಡಿಯ ಮಾಡಿನ ಮೇಲೆ ಜಂಬಿಟ್ಟಿಗೆ ಮತ್ತು ವಜ್ರಗಾರೆಯಿಂದ ಕಟ್ಟಿದ ಶಿಖರವಿದೆ. ಒಂದರ ಮೇಲೊಂದು ಕಿರಿದಾಗುತ್ತ ಹೋಗಿರುವ ಆರು ಸಮ ಚೌಕೋನ ಕಟ್ಟೆಗಳಿದ್ದು ಅತ್ಯಂತ ಮೇಲಿನ ಕಟ್ಟೆಯ ಮೇಲೆ ಬುಡದ ಭಾಗದಲ್ಲಿ ಸುತ್ತಲೂ ಪುಷ್ಪ ದಳಾಕೃತಿ ಗಳುಳ್ಳ ನೆಲ್ಲಿಕಾಯಿಯಾಕಾರದ ಗುಮ್ಮಟವಿದೆ. ಇದರ ತುದಿಯಲ್ಲಿ ಕಲಶವನ್ನು ಹೊತ್ತ ಸಣ್ಣ ಸ್ತಂಭವಿದೆ.

ಇದು ಕಂಬ ಪ್ರಧಾನವಾದ ದೇವಲಯ. ದೇವಾಲಯದ ಅಧಿಷ್ಠಾನ, ಕಂಬಗಳು ಕಣ ಶಿಲೆಯ ದಾದರೆ, ಗೋಡೆಗಳು ಜಂಬಿಟ್ಟಿಗೆ ಕಲ್ಲಿನದು. ಶಿಖರವೂ ಜಂಬಿಟ್ಟಿಗೆ ಕಲ್ಲಿನದು. ಮೇಲೆ ವಜ್ರಗಾರೆಯ ಲೇಪನ ವಿದೆ. ರಚನೆ, ಶೈಲಿ ಹಾಗೂ ವಿನ್ಯಾಸದ ಆಧಾರದ ಮೇಲೆ, ಇದು ೧೮ನೇ ಶತಮಾನದ್ದೆಂದು ಹೇಳಬಹುದು.

ಈ ದೇವಾಲಯದ ಉತ್ತರಾಂಗದಲ್ಲಿಯ ಯೋಗಿಯ ಶಿಲ್ಪವು ಇದಕ್ಕೆ 'ಸಿದ್ಧೇಶ್ವರ' ಎಂದು ಹೆಸರು ಬರಲು ಕಾರಣವಾಗಿರಬಹುದು.

ಮೇಲೆ ವಿವೇಚಿಸಿದ ದೇವಾಲಯಗಳಲ್ಲಿ ಒಟ್ಟಾರೆ ಮುಖ್ಯವಾಗಿ ಎರಡು ಗಮನಾರ್ಹ ಅಂಶಗಳಿವೆ.

೧) ಸಿದ್ಧೇಶ್ವರ ದೇವಾಲಯದ ತಳ ವಿನ್ಯಾಸ ಮತ್ತು ಶಿಖರವೂ ಕೆಳದಿ ಹಾಗೂ ಹಿಂದಿನ ಕಾಲದ ಶಿಷ್ಟಾಚಾರದ ದೇವಾಲಯಗಳಿಗಿಂತ ಸ್ಪಷ್ಟವಾಗಿ ಭಿನ್ನ ವಾಗಿ ಹೊಸ ಮಾದರಿಯದಾಗಿದೆ. ಇದಕ್ಕೆ ಹೋಲುವ ಒಂದೇ ಒಂದು ಕಟ್ಟಡವೆಂದರೆ, ಸಮಕಾಲೀನ ಸೋದೇ ರಾಜ್ಯದ ಸೋದೆಯಲ್ಲಿರುವ 'ಗದ್ದಿಗೆ ಮಠ'. ಬಿಜಾಪುರ ದಲ್ಲಿ ಈ ಪ್ರಕಾರದ 'ಆತಿಲ್ ಷಾಹಿ' ಕಾಲದ ಕೆಲವು ನಿರ್ಮಿತಿಗಳಿವೆ.

೨) ಇವೆರಡು ದೇವಾಲಯಗಳಲ್ಲಿಯ ಅಧಿ ಷ್ಠಾನವು ವೀರಭದ್ರ ದೇವಾಲಯದ ಗೋಡೆಗಳ ಮೂಲೆ ಗಂಬಗಳ ಮಾದರಿಗಳು ಮತ್ತು ಅವುಗಳ ಮೇಲಿನ ರೇಖಾ ಮತ್ತು ಪುಷ್ಪ ಚಿತ್ರಗಳ ಪಟ್ಟಿಕೆಗಳು, ಮಾಡಿನ ಮೇಲಿನ ತ್ರಿದಳ ಕಂಗುರಗಳ ಸಾಲು ಮತ್ತು ಸಿದ್ಧೇಶ್ವರ ದೇವಾಲಯದ ವಿನ್ಯಾಸ, ಮುಂಭಾಗದ ಕಂಬಗಳನ್ನು ಮಾಡನ್ನು ಜೋಡಿಸಿದ 'ಎಸ್' ಆಕೃತಿಯ ಊರ್ಧ್ವ ಪಟ್ಟಿಯು ಬಿಜಾಪುರದ 'ಆದಿಲ್ ಷಾಹಿ' ಕಾಲದ ನಿರ್ಮಿತಿಗಳ ವಿಶಿಷ್ಟ ಲಕ್ಷಣಗಳಾಗಿವೆ. ಆದ್ದರಿಂದ ಭಾರತೀಯ ಇಸ್ಲಾಂ ವಾಸ್ತು ಸಂಪ್ರದಾಯದ ಆದಿಲ್ ಷಾಹಿ ಶೈಲಿಯ ಗಂಭೀರ ಪ್ರಭಾವವನ್ನು ಈ ದೇವಾಲಯ ಗಳಲ್ಲಿ ನೋಡುತ್ತೇವೆ.

ಇಲ್ಲಿ ಸಂಬಂಧಪಟ್ಟ ಒಂದು ಅಂಶವನ್ನು ಗಮನಿಸ ಬೇಕು. ವಿಶೇಷವಾಗಿ ೧೬-೧೭ನೇ ಶತಮಾನದ ಇಕ್ಕೇರಿ ಅಘೋರೇಶ್ವರ ದೇವಾಲಯ, ಕವಲೆದುರ್ಗ ದಲ್ಲಿಯ ಕಾಶಿವಿಶ್ವೇಶ್ವರ, ನಗರದಲ್ಲಿಯ ನೀಲಕಂಠೇಶ್ವರ ದೇವಾಲಯಗಳಲ್ಲಿನ ಮೊನೆಚಾದ ತುದಿಯುಳ್ಳ ಕಮಾನು, ಮಾಡಿನ ಮುಂದಿನ ಮೂಲೆಗಳಲ್ಲಿಯ ಮಿನ ರೆಟ್ಟುಗಳು, ಮಾಡಿನಂಚಿನ ಕಂಗುರಸಾಲು, ಒಂದೊಂದು ವೇಳೆ ಗುಮ್ಮಟಗಳು ಭಾರತೀಯ ಇಸ್ಲಾಂ ವಾಸ್ತುಶಿಲ್ಪ

ಸಂಪ್ರದಾಯದ ಪ್ರಭಾವವನ್ನು ಸ್ಪಷ್ಟಪಡಿಸುತ್ತವೆ. ಇದು ಮೊದಲನೆಯ ಹಂತ.

ಮೇಲೆ ವಿವೇಚಿಸಿದ ದೇವಾಲಯುಗಳಲ್ಲಿ ಈ ಸಂಪ್ರದಾಯ ಪ್ರಭಾವದ ಎರಡನೇ ಹಂತವನ್ನು ಸೂಚಿಸುತ್ತವೆ.

**೨. ಮಿಥುನ ಶಿಲ್ಪಗಳು :**

ಇದುವರೆಗೆ ನಾನು ನೋಡಿದ ಕೆಳದಿ ರಾಜ್ಯ ಶಿಲ್ಪಗಳಲ್ಲಿ ೧೯೯೦ರ ಶುರುವಿನಲ್ಲಿ ಇಟ್ಟಿಗೆಹಳ್ಳಿ (ಶಿವಮೊಗ್ಗ ತಾ.)ಯಲ್ಲಿ ದಿನಾಂಕ ೪-೦೭-೧೯೯೩ರಂದು ಉಳವಿ (ಸೊರಬ ತಾ.) ಯಲ್ಲಿ ಮತ್ತು ದಿನಾಂಕ ೭-೦೭-೧೯೯೩ರಂದು ಸಂಗಳ (ಸಾಗರ ತಾ.) ದಲ್ಲಿ ನೋಡಿದ ಮಧ್ಯಮ ಪ್ರಮಾಣದ ಒಂದೊಂದು ಸ್ತ್ರೀ-ಪುರುಷ ವಿಗ್ರಹಗಳ ಒಂದೊಂದು ಜೊತೆ ಕುತೂಹಲ ಕಾರಿಯಾಗಿಯೂ ಮತ್ತು ಸ್ವಲ್ಪ ಹೆಚ್ಚು ಕಡಿಮೆ ಬೇರೆಡೆಗಳಲ್ಲಿ ಸರಿಸಾಟಿಯಿಲ್ಲದಾಗಿಯೂ ಇವೆ. ಈ ಮೂರೆಡೆಗಳಲ್ಲಿಯೂ ಅಲ್ಲಲ್ಲಿಯ ದೊಡ್ಡ ದೊಡ್ಡಕೆರೆ ದಂಡೆಯ ಮೇಲೆ ಬಯಲಿನಲ್ಲಿ ಒಂದರಪಕ್ಕದಲ್ಲೊಂದು ಈ ಜೋಡಿ ಶಿಲ್ಪಗಳಿವೆ. ಇವುಗಳು ಯಾವುದೇ ನಿರ್ಮಿತಿಯ ಭಾಗಗಳಲ್ಲ ಅಥವಾ ಇವುಗಳಿಗೆ ಯಾವುದೇ ನಿರ್ಮಿತಿಯಿಲ್ಲದೆ ಬಯಲಿನಲ್ಲಿವೆ. ಇವುಗಳಲ್ಲಿ ಬಿಂಬಿಸಿದ ಸ್ತ್ರೀಯ ಮತ್ತು ಪುರುಷನ ರೂಪವು ಒಂದೊಂದೆಡೆಯಲ್ಲಿ ಒಂದೊಂದು ರೀತಿಯವು. ಇವುಗಳ ಉಡುಪು, ಆಭರಣ, ಕೇಶ ವಿನ್ಯಾಸ, ಹಣೆಯ ಮೇಲಿನ ತಿಲಕ ತುಂಬ ಆಕರ್ಷಕವಾಗಿದ್ದು ಇವು ಆಗಿನ ಕಾಲದ ಸಮಾಜದ ಪ್ರತಿಷ್ಠಿತ ವ್ಯಕ್ತಿಗಳ ಮಾದರಿಗಳೆಂಬುದು ಸುಸ್ಪಷ್ಟ. ಆದರೆ ನಿಂತ ಭಂಗಿಯಲ್ಲಿಯ ಈ ನಗ್ನ ವ್ಯಕ್ತಿಗಳ ಕಾರ್ಯಾಚರಣೆಯ ರೂಪಣ ತುಂಬ ಕುತೂಹಲಕಾರಿಯಾಗಿದೆ. ಪುರುಷನು ಊರ್ಧ್ವಮುಖವಾಗಿ ಸೆಟೆದು ನಿಂತ ತನ್ನ ಶಿಶ್ನವನ್ನು ಎರಡೂ ಕೈಗಳಲ್ಲಿ ಹಿಡಿದುಕೊಂಡಿದ್ದಾನೆ. ಸ್ತ್ರೀಯು ತನ್ನ ಮರ್ಮಸ್ಥಾನವನ್ನು ಲಜ್ಜೆಯೇ ಇಲ್ಲವೆಂಬಂತೆ ತನ್ನ ಎರಡೂ ಕೈಗಳಿಂದ ಬಿಡಿಸಿದ್ದಾಳೆ. ಸಂಭೋಗಕ್ಕೆ ಸನ್ನದ್ಧರಾಗಿರುವ ಭಂಗಿಯಲ್ಲಿ ಇವೆ. ಸಂಗಳದ ಪುರುಷನ ವಿಗ್ರಹವು ಮುಷ್ಟಿ ಮೈಥುನ ಭಂಗಿಯಲ್ಲಿದೆ. ಆದ್ದರಿಂದ ಸಾಮಾನ್ಯವಾಗಿ ಈ ಶಿಲ್ಪಗಳನ್ನು ಲೈಂಗಿಕ ಶಿಲ್ಪಗಳೆಂದು ಹೇಳಲು ಸಾಧ್ಯ.

ವಿಶೇಷವಾಗಿ ಮಧ್ಯಕಾಲೀನ ಯುಗದಲ್ಲಿ ಶೈವ, ವೈಷ್ಣವ, ಅಪರೂಪವಾಗಿ ಜೈನ, ಬೌದ್ಧ ನಿರ್ಮಿತಿಗಳ ಹೊರಗೋಡೆಗಳ ಮೇಲೆ, ಕಂಬಗಳ ಮೇಲೆ, ಬೇರೆ ಬೇರೆ ಪ್ರಕಾರಗಳ ಶಿಲ್ಪಗಳೊಡನೆ ಸಂಭೋಗಾಸಕ್ತಿಯನ್ನು ಸೂಚಿಸುವ ಇಲ್ಲವೇ ಸಂಭೋಗ ಕ್ರಿಯೆಯಲ್ಲಿ ನಿರತರಾದ ಸಣ್ಣ ದೊಡ್ಡ ಪ್ರಮಾಣದ ಶಿಲ್ಪಗಳೂ ಇರುತ್ತವೆ. ಧಾರ್ಮಿಕ ನಿರ್ಮಿತಿಗಳಲ್ಲಿ ಇಂಥ ಶಿಲ್ಪಗಳನ್ನು ತೋರಿಸುವುದರ ಔಚಿತ್ಯದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ.[4] ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಮತ್ತು ಪರಂಪರಾನುಗತ ಐತಿಹಾಸಿಕ ಹಿನ್ನೆಲೆಯ ಕಾರಣಗಳನ್ನು ಕೊಡಲಾಗಿದೆ. ಈ ವಿಷಯದಲ್ಲಿ ಇನ್ನೂ ಜಿಜ್ಞಾಸೆ ನಡೆ-ಯುತ್ತಲಿದೆ.

ಇದು ಹೇಗೆ ಇರಲಿ, ಪ್ರಸ್ತುತ ಶಿಲ್ಪಗಳು, ಮೇಲೆ ಹೇಳಿದಂತೆ ಯಾವುದೇ ಕಟ್ಟಡಗಳ ಭಾಗಗಳಲ್ಲ; ಅಥವಾ ಪೂಜಾಮೂರ್ತಿಗಳಿಗಿರುವಂತೆ, ಇವುಗಳ ಪ್ರತ್ಯೇಕ ಸಣ್ಣ ಗುಡಿಯಿಲ್ಲ. ಎಲ್ಲರಿಗೂ ದಿಟ್ಟವಾಗಿ ಕಾಣುವಂತೆ ಬಯಲಿನಲ್ಲಿ ಆದರೆ ಎಲ್ಲೆಡೆಗಳಲ್ಲಿಯೂ ಕೆರೆ ದಂಡೆಯ ಮೇಲಿರುವುದು ಗಮನಿಸಬೇಕಾದ ವಿಷಯ. ನಮ್ಮ ಸಂಪ್ರದಾಯದಲ್ಲಿ ಸ್ತ್ರೀಯನ್ನು ಪ್ರಕೃತಿದತ್ತವಾದ ಅವಳ ತಾಯಿತನವನ್ನು ಗಮನಿಸಿ ಕ್ಷೇತ್ರವೆಂದೂ ವರ್ಣಿಸಲಾಗಿದೆ. ಇದನ್ನು ಅನುಲಕ್ಷಿಸಿ ಕೆರೆ ದಂಡೆಯ ಒಂದು ಬದಿಯಲ್ಲಿ ನೀರು ಮತ್ತೊಂದು ಬದಿಯಲ್ಲಿ ಕೃಷಿಭೂಮಿ (ಕ್ಷೇತ್ರ) ಇದ್ದು ಬೇಕಾದಾಗ ಬೆಳೆಯುವ ಪೈರಿಗೆ ನೀರನ್ನು ಹಾಯಿಸಿದಾಗ ಉತ್ತಮ ಬೆಳೆ ಆಗುವುದು. ಆದ್ದರಿಂದ ಕೆರೆ ತುಂಬ ನೀರು ಇರಬೇಕು ; ಭೂಮಿ ಫಲವತ್ತಾಗಿರಬೇಕು. ಸಮೃದ್ಧಿ ಉತ್ತಮ ಬೆಳೆಯನ್ನು ಪಡೆಯಲು ಕ್ರಮವಾಗಿ ಇವೆಲ್ಲವನ್ನು ಸಂಕೇತಿಸುವ ಸಾಲಂಕೃತ ಆರೋಗ್ಯವಂತ ಪುರುಷ-ಸ್ತ್ರೀ ವಿಗ್ರಹಗಳನ್ನು ಕೆರೆಯ ದಂಡೆಯ ಮೇಲಿಟ್ಟು, ಸಮಯೋಚಿತ

---

4 ದೇವಾಂಗನಾ ದೇಸಾಯಿ : ದಿ ಇರಾಟಿಕ್ ಸ್ಕಲ್ಪ್‌ಚರ್ ಇನ್ ಇಂಡಿಯಾ

ವಾಗಿ ಅಂದರೆ ಬಿತ್ತನೆ, ಮೊದಲು ನೀರು ಹಾಯಿಸುವ ಮತ್ತು ಕೊಯ್ಲಿನ ಕಾಲದಲ್ಲಿ ರೈತಾಪಿ ಜನರು ಪೂಜೆ ಮಾಡುವ ಕಟ್ಟಳೆ ಕೆಳದಿ ರಾಜ್ಯ ಕಾಲದಲ್ಲಿ ಈ ಪ್ರದೇಶ ದಲ್ಲೆಲ್ಲ ಇದ್ದಿತೆಂದು ಕಾಣುತ್ತದೆ. ಆದ್ದರಿಂದ ಈ ಮೂರ್ತಿಗಳು ಸಮಕಾಲೀನ ಯಾವುದೇ ಗಣ್ಯವ್ಯಕ್ತಿ ಗಳನ್ನು ಸೂಚಿಸದೆ ಭೂಮಿಯ ಫಲವತ್ತತೆ ಮತ್ತು ಸಮೃದ್ಧಿ ಬೆಳೆಗೆ ಸಂಬಂಧಿಸಿದ ಕೃಷಿ ಕಟ್ಟಳೆಯ ಸಾಂಕೇತಿಕ ಮೂರ್ತಿಗಳೆಂದು ತರ್ಕಿಸಬಹುದು. ಇಂಥ ಶಿಲ್ಪಗಳು ಇನ್ನೂ ಬೇರೆಡೆಗಳಲ್ಲಿ ಕೆರೆ ದಂಡೆಗಳ ಮೇಲಿರುವ ಸಾಧ್ಯತೆ ಇದೆ.

ವ್ಹಿ. ಎಸ್. ಬಡಿಗೇರ*

# ಬಸವನ-ಬಾಗೇವಾಡಿ ತಾಲೂಕಿನಲ್ಲಿಯ ಪುರಾತತ್ವ ಅವಶೇಷಗಳು ಒಂದು ವರದಿ

ವಿಜಾಪೂರ ಜಿಲ್ಲೆಯ ಬಸವನ-ಬಾಗೇವಾಡಿ ತಾಲೂಕು ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಸ್ಥಳವಾಗಿದೆ. ಕ್ರಿ.ಶ. ೧೩ನೇ ಶತಮಾನದ ಪೂರ್ವಾರ್ಧಿಯಲ್ಲಿ ಬಸವನ-ಬಾಗೇವಾಡಿಯು ಒಂದು ಮಹಾಗ್ರಹಾರವಾಗಿತ್ತು. ಕ್ರಿ.ಶ. ೧೨ನೇ ಶತಮಾನದಲ್ಲಿ ಜೀವಿಸಿದ್ದ ಬಸವಣ್ಣನವರಿಂದ ಇದೊಂದು ವೀರಶೈವ ಧಾರ್ಮಿಕ ಕ್ಷೇತ್ರವಾಯಿತು.

ಈಗಿರುವ ಬಸವನ-ಬಾಗೇವಾಡಿ ತಾಲೂಕವು ೧೨೦ ಹಳ್ಳಿಗಳನ್ನೊಳಗೊಂಡ ವಿಶಾಲವಾದ ಪ್ರದೇಶ. ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚುರಿಗಳು ಮತ್ತು ಯಾದವರ ಕಾಲದಲ್ಲಿ "ತರ್ದವಾಡಿ ಸಾಸಿರ"ವೆಂದು ಪ್ರಸಿದ್ಧವಾದ ಇಂಡಿ ತಾಲೂಕಿನ ಭೀಮಾ ನದಿಯ ದಕ್ಷಿಣ ದಂಡೆಯ ಮೇಲಿರುವ ಇಂದಿನ ತದ್ದೇವಾಡಿಯೇ ಅಂದು ಸಾವಿರ ಹಳ್ಳಿಗಳನ್ನೊಳಗೊಂಡ ಆಡಳಿತದ ಕೇಂದ್ರವಾಗಿತ್ತು. ಹಾಗೂ ಆಡಳಿತದ ಅನುಕೂಲಕ್ಕಾಗಿ ೨೧ ಕಂಪಣಗಳನ್ನಾಗಿ ವಿಭಾಗ ಮಾಡಲಾಗಿತ್ತು. ಅವುಗಳಲ್ಲಿ ಮುತ್ತಗಿ ಮೂವತ್ತು, ಹೆಬ್ಬಾಳು ಹನ್ನೆರಡು ಮತ್ತು ತುಂಬದಾರುಬಾಂಡ, ಇವು ಹೆಸರಿಗೆ ತಕ್ಕಂತೆ ಗ್ರಾಮಗಳನ್ನೊಳಗೊಂಡು ಇಂದಿನ ಬಾಗೇವಾಡಿ ತಾಲೂಕಿನಲ್ಲಿಯ ಪ್ರಮುಖ ಕಂಪಣಗಳಾಗಿದ್ದವು.

ಈ ಹಿಂದೆ ಶೋಧಿಸಿದ ಹಿಪ್ಪರಗಿ ಮತ್ತು ಕೃಷ್ಣಾ ನದಿಯ ದಂಡೆಯ ಮೇಲಿರುವ ಕೊಲ್ಹಾರವು ಆದಿ-ಮಧ್ಯ-ಹಳೆಯ ಶಿಲಾಯುಗದ ನೆಲೆಗಳಾಗಿವೆ. ನನ್ನ ಶೋಧನೆಯಲ್ಲಿ ಬೆಳಕಿಗೆ ಬಂದ ಡೋಣಿ ನದಿಯ ದಕ್ಷಿಣ ದಂಡೆಯ ಮೇಲಿರುವ ಡೋಣೂರು ಬಾಗೇವಾಡಿಯಿಂದ ಒಂಬತ್ತು ಕಿ.ಮೀ. ಉತ್ತರಕ್ಕಿರುವ ಇಂಗಳೇಶ್ವರ ಸೂಕ್ಷ್ಮ ಶಿಲಾಯುಗದ ನೆಲೆಗಳಾಗಿವೆ. ಇಂಗಳೇಶ್ವರ, ಕೊಲ್ಹಾರ, ಚಿಮ್ಮಲಗಿ, ವಡ್ಡವಡಿಗೆ ಮತ್ತು ಹೆಬ್ಬಾಳ ಇವು ಇತಿಹಾಸ ಆರಂಭಕಾಲದ ನೆಲೆಗಳಾಗಿವೆ ಮತ್ತು ಇನ್ನುಳಿದವು (ಕೆಲವನ್ನು ಬಿಟ್ಟು) ಮಧ್ಯಯುಗೀನ ಇತಿಹಾಸ ಕಾಲದ ನೆಲೆಗಳಾಗಿವೆ.

ಈ ತಾಲೂಕಿನಲ್ಲಿ ಈವರೆಗೆ ೨೬ ಹಳ್ಳಿಗಳಲ್ಲಿ ೮೪ ಶಾಸನಗಳು ದೊರೆತಿವೆ. ಅವುಗಳಲ್ಲಿ ಎರಡು ಅಪ್ರಕಟಿತ, ಪ್ರಕಟಗೊಂಡ ಎಲ್ಲ ಶಾಸನಗಳು ರಾಷ್ಟ್ರಕೂಟ, ಕಲ್ಯಾಣ ಚಾಲುಕ್ಯ, ಕಲಚುರಿ, ಮತ್ತು ಯಾದವ ಅರಸರ ರಾಣಿಯರ, ರಾಜಕುಮಾರರ, ಅಧಿಕಾರಿಗಳ ಮತ್ತು ಪ್ರಮುಖ ವ್ಯಕ್ತಿಗಳ ಮೇಲೆ ಬೆಳಕನ್ನು ಚೆಲ್ಲುತ್ತವೆ. ಧಾರ್ಮಿಕವಾಗಿ ಇಂಗಳೇಶ್ವರ, ಮನಗೂಳಿ, ಸಾಲವಾಡಿಗೆ ಪ್ರಮುಖ ಜೈನ ಧರ್ಮದ ಕೇಂದ್ರಗಳಾಗಿದ್ದವು. ಮುತ್ತಗಿ, ಇಂಗಳೇಶ್ವರ, ಮನಗೂಳಿ ಮೊದಲಾದವುಗಳು ಶೈವ ಧರ್ಮದ ಕೇಂದ್ರಗಳು. ಪಾಶುಪತ

* ಎಂ. ಫಿಲ್. ವಿದ್ಯಾರ್ಥಿ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕ.ವಿ.ವಿ. ಧಾರವಾಡ-೫೮೦ ೦೦೩

ಕಾಳಾಮುಖ ಪಂಥಕ್ಕೆ ಸಂಬಂಧಿಸಿದಂತೆ ಮುತ್ತಗಿಯಲ್ಲಿ ಶಕ್ತಿ ಪರ್ಷೆಯು ಮತ್ತು ಮನಗೂಳಿ ಇಂಗಳೇಶ್ವರದಲ್ಲಿ ಸಿಂಹ ಪರ್ಷೆಯು ಸ್ಥಾನಾಚಾರ್ಯರ ಗುರು ಪರಂಪರೆ ಬೆಳೆದು ಬಂದ ಬಗ್ಗೆ ಅಲ್ಲಿಯ ಶಾಸನಗಳು ಉಲ್ಲೇಖಿಸುತ್ತವೆ. ವೈಷ್ಣವ ಧರ್ಮಕ್ಕೆ ಸಂಬಂಧಿಸಿದಂತೆ ಹೂವಿನ-ಹಿಪ್ಪರಗಿ, ಬಾಗೇವಾಡಿ, ಮನಗೂಳಿ, ಇಂಗಳೇಶ್ವರ, ಕೊಲ್ಹಾರ ಇವೆಲ್ಲವು ಮಹದಗ್ರಹಾರಗಳಾಗಿದ್ದವು. ಅಲ್ಲಿಯ ಮಹಾಜನರು ಯಜನ-ಯಾಜನ, ಅಧ್ಯಯನ-ಅಧ್ಯಾಪನದೊಂದಿಗೆ ಆಡಳಿತ ನೋಡಿಕೊಳ್ಳುತ್ತಿದ್ದರು. ಸಾಮಾಜಿಕವಾಗಿ, ಪ್ರಭುವರ್ಗ, ಮಹಾಜನರು, ಸ್ಥಾನಾಚಾರ್ಯರು, ಜಿನಮುನಿಗಳು, ಶ್ರಮಿಕವರ್ಗದವರು, ಸಮಾಜದಲ್ಲಿ ವಾಸವಾಗಿದ್ದರು. ಅಲ್ಲಿಯ ವರ್ತಕರು ಅವರ ಸಂಘ ಸಂಸ್ಥೆಗಳಾದ ಐಹೊಳೆಯ ಐನೂರು ಸ್ವಾಮಿಗಳು, ದೇಡರ ಸೆಣಿಗ ಕೊತ್ತಳಿಗಳು, ಸಾಲಿನ ಮುನ್ನೂರ್ವರು, ತಂಬುಲಿಗ ಸಾಸಿರ್ವರು ಮೊದಲಾದವು ಉತ್ಪಾದನೆ, ವಿತರಣೆಯಲ್ಲಿ ತೊಡಗಿದ್ದವು. ಕಲೆ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದಂತೆ ವಾಸ್ತು-ಮೂರ್ತಿಶಿಲ್ಪಗಳ ನಿರ್ಮಾಣ, ಕವಿ ಮತ್ತು ಲಿಪಿಕಾರರಿಂದ ಶಾಸನಗಳ ಪಾಠ ರಚನೆ, ಅಗ್ಗಳ ಕವಿಯ ಚಂದ್ರಪ್ರಭ ಪುರಾಣ ಇವೆಲ್ಲ ಪ್ರಮುಖವಾದವು.

ಹೀಗೆ ಸಾಂಸ್ಕೃತಿಕವಾಗಿ ಅಭಿವೃದ್ಧಿ ಹೊಂದಿದ ಈ ಪ್ರದೇಶದಲ್ಲಿ ೧೮ ಹಳ್ಳಿಗಳಲ್ಲಿ ಕ್ಷೇತ್ರ ಕಾರ್ಯ ಕೈಗೊಂಡಿದ್ದು ಅವುಗಳಲ್ಲಿ ಕೆಲವು ಹಳ್ಳಿಗಳಲ್ಲಿ ದೊರೆತ ಪುರಾತತ್ವ ಅವಶೇಷಗಳು ಈ ರೀತಿಯಾಗಿವೆ : ೧) ಸೂಕ್ಷ್ಮ ಶಿಲಾಯುಗದ ನೆಲೆಗಳು, ೨) ಇತಿಹಾಸ ಆರಂಭ ಮತ್ತು ಮಧ್ಯಯುಗೀನ ಕಾಲದ ನೆಲೆಗಳು ೩) ಪ್ರಾಚೀನ ದೇವಾಲಯಗಳು ಮತ್ತು ೪) ಮೂರ್ತಿ-ಶಿಲ್ಪಗಳು.

**೧. ಸೂಕ್ಷ್ಮ ಶಿಲಾಯುಗದ ನೆಲೆಗಳು :**

ಇಂಗಳೇಶ್ವರ ಗ್ರಾಮ (ಬಾಗೇವಾಡಿ ತಾಲೂಕ) ದಿಂದ ದಕ್ಷಿಣಕ್ಕೆ ಒಂದು ಕಿ.ಮಿ. ದೂರದಲ್ಲಿ ಗುಡ್ಡವಿದೆ. ಗುಡ್ಡದ ಈಶಾನ್ಯ ಭಾಗದಲ್ಲಿ ಬೆಣಚುಕಲ್ಲು ಹರಡಿದೆ. ಈ ಕಲ್ಲಿನಲ್ಲಿ ತಯಾರಿಸಿದ ಸೂಕ್ಷ್ಮ ಶಿಲಾಯುಗದ ಉಪಕರಣಗಳು ಈಗಿರುವ ಇಂಗಳೇಶ್ವರ ಗ್ರಾಮ ಮತ್ತು ಗುಡ್ಡದ ಮಧ್ಯದ ಪ್ರದೇಶದಲ್ಲಿ ಹರಡಿವೆ. ಸಪೂರ ನೀಳವಾದ ಚಕ್ಕೆಗಳು, ಕೆರೆಯುವ ಉಪಕರಣಗಳು, ಮೊನೆಗಳು, ತ್ರಿಕೋನಾಕೃತಿಯ ಬಾಣದ ಮೊನೆಗಳು, ಮೊದಲಾದ ವಿವಿಧ ಆಯುಧಗಳು ದೊರೆಯುತ್ತವೆ. ಈ ಗುಡ್ಡದಲ್ಲಿ ಬೆಣಚುಕಲ್ಲು ಸಹಜವಾಗಿ ದೊರೆಯುವುದರಿಂದ ಹಾಗೂ ಉಪಕರಣಗಳನ್ನು ತೆಗೆದ ಉಳಿದ ಪಟ್ಟಿ ಪಟ್ಟಿಕೆಯ ಶಿಲೆಗಳು ಬಹಳಷ್ಟು ಹರಡಿರುವುದರಿಂದ ಇದೊಂದು ಸೂಕ್ಷ್ಮಶಿಲಾಯುಗದ ಉಪಕರಣಗಳನ್ನು ತಯಾರಿಸುವ ಕಾರ್ಯಾಗಾರವಾಗಿತ್ತೆಂದು ಹೇಳಬಹುದು. ಈ ಗುಡ್ಡದ ದಕ್ಷಿಣ ಭಾಗದಲ್ಲಿ ಅಂದರೆ ಇಂಗಳೇಶ್ವರದಿಂದ ದಕ್ಷಿಣಕ್ಕೆ ಎರಡು ಕಿ.ಮಿ. ದೂರದಲ್ಲಿ ಬಾಗೇವಾಡಿಗೆ ಹೋಗುವ ರಸ್ತೆಯ ಎಡ-ಬಲ ಭಾಗಗಳಲ್ಲಿ ಸೂಕ್ಷ್ಮಶಿಲಾಯುಗದ ಉಪಕರಣಗಳು ಹರಡಿದ ನೆಲೆಗಳಿವೆ. ಪ್ರತಿಯೊಂದು ನೆಲೆಯು ಸು. ಎರಡು ಎಕರೆ ಪ್ರವೇಶವಿದ್ದು ಈ ಮೇಲೆ ಹೇಳಿದ ಆಯುಧಗಳು ಕಂಡುಬರುತ್ತವೆ. ಡೋಣಿ ನದಿಯ ದಂಡೆಯಲ್ಲಿರುವ ಡೋಣೂರು ಮತ್ತು ಸುತ್ತ ಮುತ್ತ ಸೂಕ್ಷ್ಮಶಿಲಾಯುಗದ ಉಪಕರಣಗಳು ದೊರೆಯುತ್ತವೆ.

**೨. ಆರಂಭ ಮತ್ತು ಮಧ್ಯಯುಗೀನ ಇತಿಹಾಸ ಕಾಲದ ನೆಲೆಗಳು :**

ಈ ತಾಲೂಕಿನ ಇಂಗಳೇಶ್ವರ, ಕೊಲ್ಹಾರ, ಚಿಮ್ಮಲಗಿ, ವಡ್ಡವಡಿಗೆ, ಹೆಬ್ಬಾಳ ಗ್ರಾಮಗಳು ಆರಂಭ ಮತ್ತು ಮಧ್ಯಯುಗೀನ ಇತಿಹಾಸ ಕಾಲದ ನೆಲೆಗಳಾಗಿವೆ. ಬಾಗೇವಾಡಿ, ಮುತ್ತಗಿ, ಮನಗೂಳಿ, ವಂದಾಲ, ಹೂವಿನ-ಹಿಪ್ಪರಿಗಿ, ಇವು ಮಧ್ಯಯುಗೀನ ಕಾಲದ ನೆಲೆಗಳಾಗಿವೆ. ಈ ಎಲ್ಲ ಪ್ರದೇಶಗಳಲ್ಲಿ ಹಾಳು ಮಣ್ಣು, ಗೋಡೆಯ ತಳಪಾಯ, ಮಡಿಕೆಯ ಚೂರು, ಬಳೆಚೂರು, ಮೊದಲಾದ ಪುರಾತತ್ವ ಅವಶೇಷಗಳು ಕಂಡುಬರುತ್ತವೆ.

**೩. ದೇವಾಲಯಗಳು**

ಶೈವ-ವೈಷ್ಣವ ದೇವಾಲಯಗಳು ಇಂಗಳೇಶ್ವರದಲ್ಲಿ ಸೋಭಾನ ದೇವರು, ಸೋಮನಾಥ, ಕಲ್ಮೇಶ್ವರ, ನಾರಾಯಣ ; ಬಾಗೇವಾಡಿಯಲ್ಲಿ ಸಂಗಮೇಶ್ವರ, ಈಶ್ವರ ; ಮುತ್ತಗಿಯಲ್ಲಿ ಮುಕ್ತೇಶ್ವರ, ಲಕ್ಷ್ಮಿ-ನಾರಾಯಣ, ಸಂಗಮೇಶ್ವರ, ಈಶ್ವರ, ಕಲ್ಮೇಶ್ವರ ; ಮನಗೂಳಿಯಲ್ಲಿ ರಾಮೇಶ್ವರ ; ವಡ್ಡವಡಿಗಿಯಲ್ಲಿ ಸಂಗಮೇಶ್ವರ ; ಹೂವಿನ-ಹಿಪ್ಪರಗಿಯಲ್ಲಿ ಕಲ್ಮೇಶ್ವರ ;

ಹೆಬ್ಬಾಳದಲ್ಲಿ ಮಹದೇವ, ರಾಮಲಿಂಗ, ಈಶ್ವರ ದೇವಾಲಯಗಳು ಕಂಡು ಬರುತ್ತವೆ.

ಹೆಬ್ಬಾಳದಲ್ಲಿ ರಾಮಲಿಂಗ ದೇವಾಲಯದ ದಕ್ಷಿಣ ಭಾಗದಲ್ಲಿ ಉತ್ತರಕ್ಕೆ ಮುಖ ಮಾಡಿ ನಿರ್ಮಿತವಾದ ಹಳೆಯ ಕಾಲದ ದೇವಾಲಯವಿದೆ. ಮುಂದಿನ ಭಾಗ ಹಾಳಾಗಿದ್ದು ಸಭಾ ಮಂಟಪ, ಗರ್ಭಗೃಹ ಮಾತ್ರ ಇವೆ. ಸಭಾ ಮಂಟಪದಲ್ಲಿ ಕಲ್ಯಾಣ ಚಾಲುಕ್ಯ ಕಾಲದ ಕಂಬಗಳಿವೆ. ಗರ್ಭಗೃಹದಲ್ಲಿ ಯಾವುದೇ ಮೂರ್ತಿ ಇರುವುದಿಲ್ಲ. ಇದನ್ನು ಈಗ ಉಗ್ರಾಣ ಮಳಿಗೆ ಎಂದು ಸ್ಥಳೀಯ ಜನರು ಕರೆಯುತ್ತಾರೆ.

## ೪. ಮೂರ್ತಿ ಶಿಲ್ಪಗಳು

ಮೇಲೆ ಹೇಳಿದ ಎಲ್ಲ ಗ್ರಾಮಗಳಲ್ಲಿ ಜಿನಮೂರ್ತಿಗಳು, ಈಶ್ವರ ಲಿಂಗಗಳು, ವೀರಭದ್ರ, ಉಮಾ-ಮಹೇಶ್ವರ, ನಂದಿ, ಗಣೇಶ, ಕಾಳಿಕಾ, ಲಕ್ಷ್ಮಿ ನಾರಾಯಣ, ಲಕ್ಷ್ಮಿವಿಷ್ಣು, ಅನಂತಶಯನ, ನಾರಾಯಣ, ಸಪ್ತಮಾತೃಕೆಯರು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ನಿಸದಿಗಲ್ಲುಗಳು ಮೊದಲಾದ ಮೂರ್ತಿಶಿಲ್ಪಗಳು ಕಂಡು ಬರುತ್ತವೆ.

### ಉಮಾ-ಮಹೇಶ್ವರ, ಲಕ್ಷ್ಮಿ-ವಿಷ್ಣು ಮೂರ್ತಿಗಳು

ವಡ್ಡವಡಿಗಿಯ ಸಂಗಮೇಶ್ವರ ದೇವಾಲಯದ ಗರ್ಭಗೃಹದಲ್ಲಿ ಒಂದು ಅಡಿ ಎತ್ತರದ ಪೀಠದ ಮೇಲೆ ಬಲಭಾಗ ಉಮಾ-ಮಹೇಶ್ವರ, ಎಡಭಾಗ ಲಕ್ಷ್ಮಿ ವಿಷ್ಣುವಿನ ಮೂರ್ತಿಗಳಿವೆ. ಮಧ್ಯದಲ್ಲಿ ಈಗ ಪ್ರತಿಷ್ಠಾಪಿಸಿದ ಒಂದು ಲಿಂಗವಿದೆ. ಈಗ ಲಿಂಗವಿರುವ ಸ್ಥಳದಲ್ಲಿ ಹಿಂದೆ ಬ್ರಹ್ಮನ ಮೂರ್ತಿ ಇದ್ದಿರಬಹುದು. ಹಾಗಿದ್ದಲ್ಲಿ ಇದು ಬ್ರಹ್ಮ, ವಿಷ್ಣು, ಮಹೇಶ್ವರ ಎಂಬ ತ್ರಿಮೂರ್ತಿಗಳ ದೇವಾಲಯವೆಂದು ಸ್ಪಷ್ಟವಾಗುತ್ತದೆ.

### ನೇಮಿನಾಥನ ಮೂರ್ತಿ

ಇಂಗಳೇಶ್ವರದ ಗುಡ್ಡದ ಗವಿಯಲ್ಲಿರುವ ಈ ಮೂರ್ತಿಗೆ ರೇವಣಸಿದ್ಧ ಎಂದು ಸ್ಥಳೀಯ ಜನರು ಕರೆಯುತ್ತಾರೆ. ನಾಲ್ಕು ಅಡಿ ಎತ್ತರ ಮೇಲೆ ಏಳು ಹೆಡೆಗಳುಳ್ಳ ಸರ್ಪ, ಜಟಾಮುಕುಟ, ಕೊರಳ, ಕಿವಿ ಆಭರಣಗಳು, ಪದ್ಮಾಸನ, ಯೋಗ ಮುದ್ರೆ, ಎರಡೂ ಕೈಗಳಿಗೆ ಸರ್ಪಗಳು ಸುತ್ತಿಕೊಂಡಿರುವ ಇದು ಜೈನ ನೇಮಿನಾಥನ ಮೂರ್ತಿ ಎಂದು ಸ್ಪಷ್ಟವಾಗುವುದು.*

### ಆಧಾರ ಗ್ರಂಥಗಳು


೧. ನನ್ನ ಕ್ಷೇತ್ರಕಾರ್ಯದಲ್ಲಿ ದೊರೆತ ಪುರಾತತ್ವ ಅವಶೇಷಗಳು
೨. ಎಪಿಗ್ರಾಫಿಯ ಇಂಡಿಕಾ ಸಂಪುಟ-೫ ; ೧೮೯೮-೯೯, ೧೯೬೦.
೩. ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್ : ಸಂಪುಟ ೧೧, ೧೯೪೦, ಸಂ. ೧೫, ೧೯೬೫.
೪. ಗೆಜೆಟೀಯರ್ ಆಫ್ ಇಂಡಿಯಾ ಮೈಸೂರು ಸ್ಟೇಟ್ ಬಿಜಾಪೂರ ಡಿಸ್ಟ್ರಿಕ್ಟ್ ೧೯೬೬, ಬೆಂಗಳೂರು.
೫. ಇಂಡಿಯನ್ ಆರ್ಕಿಯಾಲಜಿ ರಿವ್ಯೂ ಪು-೨೩, ೧೯೬೩-೬೪
೬. ಗುರವ, ಆರ್.ಎನ್., ತರ್ದವಾಡಿನಾಡು : ೧೯೭೯
೭. ಕೊಪ್ಪಾ ಎಸ್.ಕೆ., ತರ್ದವಾಡಿ ನಾಡು ಒಂದು ಅಧ್ಯಯನ ೧೯೯೦ ಪಿಎಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ
೮. ಶಿರಹಟ್ಟಿ ಲ.ಅ., ಬಸವನ-ಬಾಗೇವಾಡಿಯ ಕ್ಷೇತ್ರ ದರ್ಶನ ೧೯೭೪
೯. ದಯಾನಂದ ಎಸ್., ಶ್ರೀ ಕ್ಷೇತ್ರ ಬಸವನ ಬಾಗೇವಾಡಿ ೧೯೮೮ ಬಸವಪಥ ಸಂಪುಟ-೧೦, ಸಂಚಿಕೆ-೯


* ಈವರ್ಣನೆಯಿಂದ ಇದು ಶೈವ ಧರ್ಮದ ದೇವತಾಮೂರ್ತಿ ಎಂಬುದು ಸ್ಪಷ್ಟ, ನೇಮಿನಾಥನದಲ್ಲ, ತೀರ್ಥಂಕರರು ನಿರಾಭರಣರು. (ಸಂ).

–ಡಾ॥ ರು. ಮ ಷಡಕ್ಷರಯ್ಯ*

# ಧಾರವಾಡ ಜಿಲ್ಲೆಯಲ್ಲಿ ದೊರೆತ ರಾಷ್ಟ್ರಕೂಟರ ಕಾಲದ ಶಿಲ್ಪ-ದೇವಾಲಯಗಳು

ಧಾರವಾಡ ಜಿಲ್ಲೆಯ ಕ್ರಿ.ಶ. ೧೦ನೇ ಶತಮಾನದ ವರೆಗಿನ ದೇವಾಲಯ ಶಿಲ್ಪಗಳ ಅನ್ವೇಷಣೆಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ೧೯೯೧–೯೩ರವರೆಗೆ ಕೈಗೊಂಡಾಗ ಈ ಕಾಲದ ಹಲವಾರು ದೇವಾಲಯ–ಶಿಲ್ಪಗಳು ಬೆಳಕಿಗೆ ಬಂದವು. ಪ್ರಸ್ತುತ ಲೇಖನದಲ್ಲಿ ಮುಖ್ಯವಾಗಿ ೧೯೯೩ರಲ್ಲಿ ಕಂಡುಬಂದ ಕೆಲವು ದೇವ–ದೇವತೆಯರ ಶಿಲ್ಪ, ಗೋಸಾಸ ಹಾಗೂ ವೀರಗಲ್ಲುಗಳ ಅಧ್ಯಯನ ವನ್ನು ಮಾಡಲಾಗಿದೆ.

### ಗಣೇಶ

ರಾಣಿಬೆನ್ನೂರು ತಾಲ್ಲೂಕಿನ ಇಟಗಿ ಗ್ರಾಮದ ಬಸವಣ್ಣನ ಗುಡಿ ಬದಿಗೆ ಒಂದು ಅಪೂರ್ವ ಗಣೇಶ ಶಿಲ್ಪ ದೊರೆತಿದ್ದು ಈಗ ಅದನ್ನು ಕನ್ನಡ ಸಂಶೋಧನ ಸಂಸ್ಥೆಗೆ ತರಲಾಗಿದೆ. ಪ್ರಸ್ತುತ ಶಿಲ್ಪದಲ್ಲಿ ಗಣೇಶನ ಉದರದ ಮುಂಭಾಗ ಇಡೀ ಮೂರ್ತಿಯ ಹಿಂಭಾಗ ಹಾಗೂ ಸೊಂಟದ ಕೆಳಗಿನ ಭಾಗ ಭಗ್ನವಾಗಿದೆ. ಈ ಬಿಂಬವು ಆಸೀನ ಭಂಗಿಯಲ್ಲಿದ್ದು ದ್ವಿಭುಜವುಳ್ಳದ್ದಾಗಿದೆ. ಬಲಗೈ ಮುಷ್ಟಿಯಲ್ಲಿ ದಂತ ಮತ್ತು ಎಡಗೈ ಮುಷ್ಟಿಯಲ್ಲಿ ಪದ್ಮ ವನ್ನು ಹಿಡಿದಿದೆ. ಎಡಭಾಗಕ್ಕೆ ಬಾಗಿರುವ ಸೊಂಡಿಲು ಎಡಗೈಯಲ್ಲಿರುವ ಅರಳದ ಪದ್ಮವನ್ನು ಸ್ಪರ್ಶಿಸಿದೆ. ಈ ಪುಷ್ಪವನ್ನು ಮೋದಕ ಪಾತ್ರೆ ಹಿಡಿದ ರೀತಿಯಲ್ಲಿ ತೋರಿ ಸಿರುವುದು ಕುತೂಹಲಕಾರಿಯಾಗಿದೆ. ದಕ್ಷಿಣ ಭಾರತದ ಪ್ರಾಚೀನ ಗಣೇಶ ಶಿಲ್ಪಗಳಲ್ಲಿ ಈ ಮಾದರಿ ಪ್ರಥಮ ವೆಂದು ತರ್ಕಿಸಬಹುದು. ಜಟಾಮುಕುಟವಾಗಲೀ, ಕಿರೀಟ ಮುಕುಟವಾಗಲೀ ಮೂರ್ತಿಗೆ ಇಲ್ಲ. ಅದಕ್ಕೆ ಬದಲಾಗಿ ಹಣೆಯುಪಟ್ಟೆಯಲ್ಲಿ ಮಧ್ಯ ಹೆಡೆ ತೆರೆದಿರುವ ನಾಗಪಟ್ಟ ಯಿದೆ. ಕೊರಳಲ್ಲಿ ಉದ್ದನೆಯ ಗಂಟೆಗಳ ಹಾರವನ್ನು ಕಟ್ಟಲಾಗಿದೆ. ಉದರಕ್ಕೆ ನಾಗನನ್ನು ಸುತ್ತಲಾಗಿದೆ. ಹಾಗೂ ಮೂರು ಎಳೆಗಳ ಯಜ್ಞೋಪವೀತವಿದೆ. ಆಭರಣಗಳ ಲಕ್ಷಣಗಳಿಂದ ಈ ಶಿಲ್ಪವನ್ನು ಸುಮಾರು ಕ್ರಿ.ಶ. ೮–೯ನೇ ಶತಮಾನಕ್ಕೆ ಸೇರಿಸಬಹುದಾಗಿದೆ.

### ಮಹಿಷಮರ್ಧಿನಿ ಶಿಲ್ಪಗಳು

ಸಿಡೆನೂರು ಗ್ರಾಮದ ಕಲ್ಲೇಶ್ವರ ಗುಡಿಯಲ್ಲಿ ಒಂದು ಮಹಿಷಮರ್ಧಿನಿ ಶಿಲ್ಪವಿದ್ದು, ಅದನ್ನು ಕನ್ನಡ ಸಂಶೋಧನ ಸಂಸ್ಥೆಗೆ ತರಲಾಗಿದೆ. ಚತುರ್ಭುಜ ಧಾರಿಯಾದ ದೇವಿಯು ಬಲಗೈಯ ತ್ರಿಶೂಲದ ತುದಿ ಯಿಂದ ಕೋಣನ ತಲೆಗೆ ತಿವಿದಿದ್ದು, ಎಡಗೈಯಲ್ಲಿ ಮಹಿಷನ ಮೂತಿಯನ್ನು ಹಿಡಿದಿದ್ದಾಳೆ. ಉಳಿದ ಕೈಗಳಲ್ಲಿ ಚಕ್ರ, ಶಂಖಗಳಿವೆ. ಎಡಗಾಲನ್ನು ಕೋಣದ ಬಾಲದ ಮೇಲೆ ಮೆಟ್ಟಿರುವಳು. ತಲೆಗೆ ಕರಂಡ ಮಕುಟ, ಕಿವಿಗೆ ಓಲೆ, ಕೊರಳಲ್ಲಿ ಹಾರ, ದೇಹದಲ್ಲಿ ಬಲಭುಜದದಿಂದ ಇಳಿಬಿದ್ದ ದಪ್ಪ ಹಗ್ಗ, ತೋಳಲ್ಲಿ ಪಟ್ಟಿ, ಕೈಗಳಲ್ಲಿ ಬಳೆ, ವಸ್ತ್ರ ಇತ್ಯಾದಿ ಆಭರಣಗಳನ್ನು ಧರಿಸಿದ್ದಾಳೆ. ತಲೆಯ ಹಿಂಬದಿಯ ಚಕ್ರದಾಕಾರದಲ್ಲಿ ಪದ್ಮ ದಳಗಳ ಪ್ರಭಾಮಂಡಳವಿದೆ. ದುರದೃಷ್ಟವಶಾತ್ ಈ ಶಿಲ್ಪವು ಹೊಟ್ಟೆಭಾಗದಲ್ಲಿ ಒಡೆದು ಎರಡು ಭಾಗ

* ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ–೫೮೦ ೦೦೩

ವಾಗಿದೆ. ದೇಹದ ಅಂಗಾಂಗ, ವೇಷಭೂಷಣಗಳ ಶೈಲಿಯಿಂದ ಈ ಶಿಲ್ಪವು ಸುಮಾರು ಕ್ರಿ.ಶ. ಎಂಟನೇ ಶತಮಾನದ್ದೆಂದು ತರ್ಕಿಸಬಹುದು.

ಹಾವೇರಿ ತಾಲ್ಲೂಕು ಹಳೇರಿತ್ತಿಯ ಆದಿಶಕ್ತಿ ದೇವಾಲಯದಲ್ಲಿ ಒಂದು ಅಪರೂಪದ ಮಹಿಷಮರ್ಧಿನಿ ಶಿಲ್ಪವಿದೆ. ದೇವಿಯ ಮುಂದೆ ಕುಳಿತ ಮನುಷ್ಯ ರೂಪದ ಅಸುರನ ಭಂಗಿಯು ಆಂಧ್ರಪ್ರದೇಶದ ಚಿತ್ತೂರ ಜಿಲ್ಲೆಯ ಗುಡಿಮಲ್ಲಂ ಅಪಸ್ಮಾರನಂತೆ ತೋರಿಸಿರುವುದು ಅಪರೂಪ ವೆನಿಸಿದೆ. ದೇವಿಯು ತನ್ನ ಎಡಗಾಲನ್ನು ಕುಳಿತ ಸುರನ ಎಡಭುಜದ ಮೇಲೆ ಮೆಟ್ಟುತ್ತಿದ್ದಾಳೆ. ಮಹಿಷನು ತನ್ನ ಬಲಗೈಯಲ್ಲಿ ಖಡ್ಗ ಮತ್ತು ಎಡಗೈಯಲ್ಲಿ ದುಂಡಾದ ಗುರಾಣಿಗಳನ್ನು ಹಿಡಿದಿದ್ದಾನೆ. ಇವನ ಕಿವಿಗಳಲ್ಲಿ ಓಲೆ, ಕೊರಳಲ್ಲಿ ಮಣಿಸರ, ಹೊಟ್ಟೆ ಮೇಲೆ ಪಟ್ಟಿ, ಸೊಂಟದಲ್ಲಿ ವಸ್ತ್ರ ಮತ್ತು ಕಾಲಲ್ಲಿ ಕಡಗಗಳಿವೆ. ಇವನನ್ನು ಪೂರ್ಣವಾಗಿ ಮಾನವ ಆಕಾರದಲ್ಲಿ ತೋರಿಸಿದೆ. ಕೋಣನ ಯಾವ ಅಂಗವೂ ಇಲ್ಲ.

ಚತುರ್ಭುಜಧಾರಿಯಾದ ಈಕೆ ಬಲಗೈಯ ತ್ರಿಶೂಲದ ಬುಡದ ತುದಿಯಿಂದ ಮಹಿಷನ ತಲೆಗೆ ಚುಚ್ಚಿದ್ದು, ಎಡಗೈಯಲ್ಲಿ ಅವನ ತಲೆಕೂದಲನ್ನು ಬಿಗಿಯಾಗಿ ಹಿಡಿದಿದ್ದಾಳೆ. ಉಳಿದ ಕೈಗಳಲ್ಲಿ ಚಕ್ರ ಮತ್ತು ಶಂಖಗಳಿವೆ. ಕಿರೀಟಧಾರಿಯಾದ ಈಕೆಯ ಉದ್ದವಾದ ಕಿವಿಗಳಲ್ಲಿ ದುಂಡಾಕಾರದ ಓಲೆಗಳಿವೆ. ಚಿಕ್ಕ ಗಂಟೆಗಳ ಸರಮಾಲೆ ಮತ್ತು ಯಜ್ಞೋಪವೀತವಿದೆ. ಕಡಗಗಳು, ನಾಗಮುರಿಗೆ, ಬಿಗಿದು ಕಟ್ಟಿರುವ ವಸ್ತ್ರದಿಂದ ಇಳಿಬಿದ್ದಿರುವ ಇಳಿಬಟ್ಟೆ ಇದೆ. ಕಾಲುಗಳಲ್ಲಿ ಮಣಿಗಳ ಕಡಗವಿದೆ. ತ್ರಿಶೂಲದ ಮೂರು ಕಡ್ಡಿಗಳಲ್ಲಿ ಮಧ್ಯದ ತುದಿ ಚೂಪಾಗಿದೆ. ಕುತ್ತಿಗೆಯ ಬದಿಗಳಲ್ಲಿ ಹಾಗೂ ಕೆಳಗಿನ ಕೈಗಳ ಕೆಳಗಡೆ ರಂಧ್ರಗಳಿವೆ. ಅರ್ಧವೃತ್ತಾ-ಕಾರದ ಪ್ರಭಾಮಂಡಳವಿದ್ದು ಶಿಲ್ಪದ ಹಿಂಭಾಗದಲ್ಲೂ ಇದನ್ನು ಬಿಡಿಸಿದ್ದು ಅದರಿಂದ ಕೂದಲು ಕೆಳಗೆ ಇಳಿಬಿದ್ದಿದೆ. ಶಿಲ್ಪದ ಹಿಂಬದಿಯನ್ನು ವಸ್ತ್ರಾಭರಣಗಳಿಂದ ಅಲಂಕರಿಸಿದೆ. ಒಟ್ಟಾರೆ ಈ ಶಿಲ್ಪವನ್ನು ದುಂಡು ಶಿಲ್ಪವೆಂದು ಹೇಳಬಹುದು. ಶಿಲ್ಪದ ಲಕ್ಷಣಗಳಿಂದ ಇದನ್ನು ಸುಮಾರು ಕ್ರಿ. ಶ. ಎಂಟನೇ ಶತಮಾನದ್ದೆಂದು ತರ್ಕಿಸಬಹುದು.

ರಾಣಿಬೆನ್ನೂರ ತಾಲ್ಲೂಕಿನ ಇಟಗಿ ಗ್ರಾಮದ ಬಸವಣ್ಣ ಗುಡಿಯಲ್ಲಿರುವ ಮಹಿಷಾಸುರಮರ್ಧಿನಿ ಶಿಲ್ಪವು ಮೊದಲು ಅದೇ ಊರಿನ ಕರೆಮ್ಮ ದೇಗುಲದಲ್ಲಿತ್ತು. ಇದು ಭಿನ್ನವಾಗಿರುವುದರಿಂದ ಇದಕ್ಕೆ ಪೂಜೆ ಇಲ್ಲ. ಈ ಶಿಲ್ಪದಲ್ಲಿ ದೇವಿಯ ಕಿರೀಟ ಮಕುಟದ ಮೇಲಿನ ಭಾಗದಲ್ಲಿ ಜೋರಲಾಗಿ ಕಮಲವನ್ನು ಅಲಂಕರಿಸಿರುವುದು ಇಲ್ಲಿ ವಿಶೇಷವಾಗಿದೆ. ಇಲ್ಲಿ ದೇವಿಯು ಕೋಣಮುಖದ ಮನುಷ್ಯ ದೇಹಾಂಗದ ಮಹಿಷನನ್ನು ಸಂಹಾರ ಮಾಡುತ್ತಿರುವಂತಿದೆ. ದೇವಿಯು ಚತುರ್ಭುಜಳಾಗಿದ್ದು ಬಲಗೈಯಲ್ಲಿ ಹಿಡಿದ ತ್ರಿಶೂಲದ ತುದಿಯಿಂದ ಮಹಿಷನ ಕುತ್ತಿಗೆಗೆ ತಿವಿದಿರುತ್ತಾಳೆ. ಮೇಲಿನ ಬಲಗೈಯಲ್ಲಿ ಚಕ್ರ ಮತ್ತು ಎಡಗೈಯಲ್ಲಿ ಶಂಖ ಹಿಡಿದಿದ್ದಾಳೆ. ಮತ್ತು ಎಡಗೈಯಲ್ಲಿ ಬಿಗಿಯಾಗಿ ಕೋಣನ ಬಲ-ಕೋಡನ್ನು ಒತ್ತಿಹಿಡಿದಿರುವಳು. ಉಳಿದ ಕೈಗಳಲ್ಲಿ ಶಂಖ ಚಕ್ರಗಳಿವೆ. ಬಲಗಾಲನ್ನು ಸುರನ ತೊಡೆಯ ಮೇಲೆ ಮೆಟ್ಟಿರುವಳು. ಉಳಿದ ವಸ್ತ್ರಾಭರಣದ ಅಲಂಕಾರಗಳಲ್ಲಿ ಹಳೇ ರಿತ್ತಿಯ ಶಿಲ್ಪವನ್ನು ಹೋಲುತ್ತದೆ.

ಹಿರೇಕೆರೂರು ತಾಲ್ಲೂಕಿನ ಹಂಸಬಾವಿಯ ಕೆರೆ ದಂಡೆಯ ಮೇಲೆ ತುಂಡುತುಂಡಾದ ಮಹಿಷಾಸುರ ಮರ್ಧಿನಿ ಶಿಲ್ಪವಿದ್ದು ಇದು ಸುಮಾರು ಕ್ರಿ. ಶ. ಎಂಟು ಒಂಭತ್ತನೇ ಶತಮಾನಕ್ಕೆ ಸೇರಿದುದಾಗಿದೆ.

**ವಿಷ್ಣು :**

ಹಿರೇಕೆರೂರು ತಾಲ್ಲೂಕಿನ ಅಬ್ಬಲೂರು ಗ್ರಾಮದ ಬಸವಣ್ಣ ದೇವಾಲಯದ ಪಕ್ಕದ ಒಂದು ಚಿಕ್ಕ ಗುಡಿಯಲ್ಲಿ ಕ್ರಿ. ಶ. ನಾಲ್ಕು-ಐದನೇ ಶತಮಾನದ ಒಂದು ಪ್ರಾಚೀನ ವಿಷ್ಣು ವಿಗ್ರಹವಿದೆ. ಇದೊಂದು ದುಂಡು-ಶಿಲ್ಪ. ಈ ಶಿಲ್ಪದಲ್ಲಿ ವಿಷ್ಣು ಸಮಭಂಗದಲ್ಲಿದ್ದು ಚತುರ್ಭುಜಧಾರಿಯಾಗಿದ್ದಾನೆ. ಕೆಳಗಿನ ಕೈಯಲ್ಲಿ ಫಲವಿದೆ. ಬಲಗೈಯಲ್ಲಿ ಚಕ್ರ ಮತ್ತು ಎಡಗೈಯಲ್ಲಿ ಶಂಖವಿದ್ದು, ಮುಂದಿನ ಕೈ ಸೊಂಟದ ಮೇಲಿದೆ. ಅರ್ಧ ವೃತ್ತಾಕಾರದ ಶಿರಶ್ಚಕ್ರ, ಕಿರೀಟ ಮಕುಟ, ಓಲೆಗಳು, ಎರಡು ರೀತಿಯ ಕೊರಳ ಸರಗಳು, ಯಜ್ಞೋಪವೀತ ಇತ್ಯಾದಿ ವಸ್ತ್ರಾಭರಣಗಳನ್ನು ಧರಿಸಿರುವನು. ಶಿರ

ಮತ್ತು ಕೆಳಗಿನ ಕೈಗಳ ಬದಿಗೆ ರಂಧ್ರಗಳಿವೆ. ಇದೊಂದು ಆದಿ ಕದಂಬರ ಕಾಲದ ವಿಷ್ಣು ಶಿಲ್ಪವೆಂದು ತರ್ಕಿಸಲಾಗಿದೆ.

**ಶೈವ ದ್ವಾರಪಾಲಕರು :**

ಹಾವೇರಿ ತಾಲ್ಲೂಕಿನ ಕಿತ್ತೂರ ಗ್ರಾಮದ ಸಂಗಮೇಶ್ವರ ದೇವಾಲಯ ಬದಿಗೆ ಶೈವ ದ್ವಾರಪಾಲಕರ ಎರಡು ಶಿಲ್ಪಗಳಿವೆ. ಇವು ಸಮೀಪದ ವರದಾ ನದಿಯಲ್ಲಿ ಸಿಕ್ಕಿದುದಾಗಿ ಸ್ಥಳೀಯರ ಹೇಳಿಕೆ. ಈ ಬಿಂಬಗಳಲ್ಲಿ ಒಂದು ತಲೆಯಿಂದ ಹೊಟ್ಟೆಯವರೆಗೆ ಒಡೆದು ಹೋಗಿದೆ. ಎರಡೂ ಕಾಲುಗಳು ಮತ್ತು ಕೈಗಳು ಮುರಿದಿವೆ. ಇನ್ನೊಂದರಲ್ಲಿ ಕಾಲುಗಳು ಮತ್ತು ಕೆಳಗಿನ ಎಡಗೈ ಮುರಿದುಹೋಗಿವೆ. ತ್ರಿಭಂಗಿಯಲ್ಲಿರುವ ಈ ಶಿಲ್ಪಗಳು ಚತುರ್ಭುಜಗಳನ್ನು ಹೊಂದಿದ್ದು ಗದೆ, ಢಮರು, ತ್ರಿಶೂಲಗಳನ್ನು ಹಿಡಿದಿರುತ್ತಾರೆ. ಶೈಲಿಯ ದೃಷ್ಟಿಯಿಂದ ಇವು ಸುಮಾರು ಕ್ರಿ. ಶ. ಹತ್ತನೇ ಶತಮಾನ.

**ಶೈವದ್ವಾರ :**

ಹಿರೇಕೆರೂರು ತಾಲ್ಲೂಕಿನ ಮತ್ತಿಹಳ್ಳಿ ಗ್ರಾಮದ ಸೋಮೇಶ್ವರ ದೇವಾಲಯದ ಈಗಿನ ಮೂಲ ದ್ವಾರ ಬದಿಗೆ ಹಾಗೂ ಇದರ ನವರಂಗ ಭಾಗದ ಬಲಗಡೆ ಕ್ರಿ. ಶ. ಸುಮಾರು ೧೧ನೆಯ ಶತಮಾನಕ್ಕೆ ಸೇರಿದ ಒಂದು ದ್ವಾರವಿದೆ. ಈ ದ್ವಾರ ಫಲಕಗಳಲ್ಲಿ ತ್ರಿಭಂಗದಲ್ಲಿ ನಿಂತ ಶೈವ ದ್ವಾರಪಾಲಕರಿದ್ದು ಇವರ ಕೈಗಳಲ್ಲಿ ಅಭಯ, ಢಮರು, ಶೂಲ ಮತ್ತು ಗದೆಗಳಿವೆ. ಈ ದ್ವಾರಪಾಲಕರನ್ನು ಎರಡು ದುಂಡಾಕಾರದ ಅರ್ಧಗಂಭಗಳ ಮಧ್ಯ ತೋರಿಸಲಾಗಿದೆ. ಈ ಫಲಕಗಳಲ್ಲಿ ರತ್ನ ಶಾಖೆ, ವಲ್ಲೀಶಾಖೆ, ಸ್ತಂಭಶಾಖೆ ಮತ್ತು ಪತ್ರಶಾಖೆಗಳಿವೆ. ಲಲಾಟಪಟ್ಟಿಯಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಈ ಭಾಗದಲ್ಲಿ ಶಾಸನವಿದೆ.

**ಯತಿ :**

ಹಿರೇಕೆರೂರು ತಾಲ್ಲೂಕಿನ ಚಿಕ್ಕೇರೂರ ಗ್ರಾಮ ಹೊರಗಿನ ಮಾರುತಿ ಮಂದಿರ ಗೋಡೆಯಲ್ಲಿ ಒಂಬತ್ತನೆಯ ಶತಮಾನಕ್ಕೆ ಸೇರಬಹುದಾದ ಒಬ್ಬ ಯತಿಯ ಶಿಲ್ಪವಿದೆ. ಈ ಯತಿಯನ್ನು ಒಂದು ಪೀಠದ ಮೇಲಿರುವ ವೃತ್ತಾಕಾರ ಪಟ್ಟಿಕೆಯಲ್ಲಿ ತೋರಿಸಲಾಗಿದೆ. ಈತನ ತಲೆಯ ಕೂದಲು ಸಿಂಬೆಯಂತೆ ಸುತ್ತಿದೆ. ಆರಾಮಾಸಾನದಲ್ಲಿ ಕುಳಿತಿರುವ ಈ ವ್ಯಕ್ತಿಯ ಭಾವವು ಹಟಯೋಗವನ್ನು ಸೂಚಿಸುವಂತಿದೆ.

**ತೀರ್ಥಂಕರರು :**

ಹಾವೇರಿ ತಾಲ್ಲೂಕಿನ ದೇವಗಿರಿಯ ದಕ್ಷಿಣಕ್ಕಿರುವ ಹೊಲದಲ್ಲಿ ಪದ್ಮಾಸನದಲ್ಲಿ ಕುಳಿತ ತೀರ್ಥಂಕರ ಶಿಲ್ಪವಿದೆ. ಮಕರಗಳಿಂದ ಅಲಂಕೃತವಾದ ಚಾಮರಧಾರಿಯರನ್ನು ಒಳಗೊಂಡ ಸುಂದರವಾದ ಕಟಾಂಜನದ ಒರಗು ಪೀಠಕ್ಕೆ ಒರಗಿ ಕುಳಿತಿರುವಂತೆ ಇದೆ. ಒಂಬತ್ತನೆಯ ಶತಮಾನಕ್ಕೆ ಸೇರಬಹುದಾದ ಈ ಬಿಂಬದ ತಲೆಯ ಸುತ್ತ ಅರ್ಧ ವೃತ್ತಾಕಾರದ ಪ್ರಭಾಮಂಡಳವಿದೆ. ಚಾಮರಧಾರಿಯರು ಕಿರೀಟಮಕುಟ, ಕರ್ಣಕುಂಡಲ, ಮಣಿಗಳ ಸರ, ಯಜ್ಞೋಪವೀತ, ಬಳೆ, ತೋಳಬಳೆ, ಪಟ್ಟಿ, ಉದರ ಬಂಧ ಮತ್ತು ವಸ್ತ್ರಾಭರಣಗಳಿಂದ ಭೂಷಿತರಾಗಿದ್ದಾರೆ.

ಇದೇ ಗ್ರಾಮದ ಮಕರ ತೋರಣ ಕಟ್ಟೆ ಎದುರಿಗೆ ಇರುವ ಪದ್ಮಾಸನದಲ್ಲಿ ಕುಳಿತ ತೀರ್ಥಂಕರನ ಕೈಗಳು ಒಡೆದಿವೆ. ದುಂಡಾಕಾರದ ದಿಂಬಿಗೆ ಒರಗಿ ಕುಳಿತಂತಿರುವ ಈ ಬಿಂಬದ ಅಕ್ಕಪಕ್ಕಗಳಲ್ಲಿ ಚಾಮರಧಾರಿಯರಿದ್ದಾರೆ. ಈ ಬಿಂಬಗಳ ಮುಂದೆ ಮಕರ ಪಟ್ಟಿಕೆಯ ಮೇಲೆ ಇಬ್ಬರು ಸೇವಕರು ಕುಳಿತ್ತಿದ್ದಾರೆ ಮತ್ತು ದಿಂಬಿನ ಬದಿಗಳಲ್ಲಿ ಮುಂದಿನ ಕಾಲುಗಳನ್ನು ಮೇಲಕ್ಕೆತ್ತಿ ನಿಂತ ಸಿಂಹಗಳಿವೆ. ತಲೆಯ ಸುತ್ತ ಅರ್ಧ ವೃತ್ತಾಕಾರದ ಪ್ರಭಾಮಂಡಳವಿದೆ. ತಲೆಯ ಮೇಲೆ ಮುಕ್ಕೊಡೆಯಿದ್ದು ಇದರ ಮೇಲೆ ಗಿಡದ ಅಲಂಕಾರವಿದೆ. ಗೂಡುಗಳಲ್ಲಿ ಸಿಂಹಗಳಿವೆ. ಮಧ್ಯದ ಗೂಡಿನಲ್ಲಿ ಮಾತ್ರ ಎದುರಿಗೆ ಮುಖಮಾಡಿ ಸಿಂಹ ನಿಂತಿರುವುದು. ಇದರ ಕಾಲವನ್ನು ಸುಮಾರು ಕ್ರಿ.ಶ. ೧೧ನೆಯ ಶತಮಾನಕ್ಕೆ ಸೇರಿಸಬಹುದು.

**ಗೋಸಾಸ ಕಂಬಗಳು[1] :**

ಗೋಸಾಸ ಕಂಬಗಳು ಹಾವೇರಿ ತಾಲ್ಲೂಕಿನ ದೇವೀಹೊಸೂರಿನ ಹಟ್ಟಿನ ಗಿರಣಿ ಹತ್ತಿರ ಆರು, ದೇವಗಿರಿಯಲ್ಲಿ ಎಂಟು, ಹಳೆರಿತ್ತಿಯ ಕೆರೆದಂಡೆ ಮೇಲೆ

1 ಈ ಬಗ್ಗೆ ಡಾ|| ಫ್ಲೀಟ್, ಡಾ|| ಲಕ್ಷ್ಮೀನಾರಾಯಣರಾವ್, ಡಾ|| ಚಿದಾನಂದಮೂರ್ತಿ, ಡಾ|| ಎಂ. ಎಂ. ಕಲಬುರ್ಗಿ, ಡಾ|| ರಘುನಾಥಭಟ್, ಡಾ|| ಎಲ್. ಟಿ. ಶರ್ಮ ಅವರು ಗೋಸಹಸ್ರದಾನವೆಂಬ ಅರ್ಥ ನೀಡಿರುತ್ತಾರೆ.

ಎರಡು ಬ್ಯಾಡಗಿ ತಾಲ್ಲೂಕಿನ ಸೂಡಂಬಿ ಕೆರೆ ದಂಡೆ ಮೇಲೆ ಮೂರು, ರಾಣಿಬೆನ್ನೂರು ತಾಲ್ಲೂಕಿನ ಹಳೇ ಹೊನ್ನತ್ತಿಯಲ್ಲಿ ಒಂದು ಹೂಲಿಹಳ್ಳಿಯ ರಾಮಲಿಂಗ ದೇವಾಲಯ ಮುಂದೆ ಹನ್ನೆರಡು, ಹಿರೇಮಾಗನೂರಿನ ಕಲ್ಲೇಶ್ವರ ದೇವಾಲಯದ ಎದುರು ಒಂಬತ್ತು, ಹಿರೇ-ಕೆರೂರು ತಾಲ್ಲೂಕಿನ ಹಿರೇಕೆರೂರು ಗ್ರಾಮದ ವೀರ ಭದ್ರಗುಡಿ ಹಿಂದೆ ಎರಡು, ಸಿರಗುಂಬಿ ಈಶ್ವರ ಗುಡಿ ಬಳಿ ಆರು, ಸಾತೇನಹಳ್ಳಿ ಮಾರುತಿ ಮಂದಿರದ ಎದುರು ಮೂರು, ಶಿಗ್ಗಾಂವ ತಾಲ್ಲೂಕಿನ ಹನುಮನಳ್ಳಿ ಗ್ರಾಮ ಮಧ್ಯದಕಟ್ಟೆಯಲ್ಲಿ ಮೂರು ಮತ್ತು ಕುಂದಗೋಳ ತಾಲ್ಲೂಕಿನ ಗುಡಗೇರಿಯಲ್ಲಿ ಒಂದು ಕಂಡುಬಂದಿದೆ. ಈ ಗೋಸಾಸಗಳ ಬಳಿ ಮೂರು ಅಪ್ರಕಟಿತ ಶಾಸನಗಳು ಪತ್ತೆಯಾಗಿವೆ. ಈ ಅಧ್ಯಯನವು ಧಾರವಾಡ ಜಿಲ್ಲೆಗೆ ಮಾತ್ರ ಸೀಮಿತವಾಗಿದೆ.

**ಗೋಸಾಸ ಲಕ್ಷಣ :**

ಗೋಸಾಸಗಳು ಕಂಬಗಳ ಆಕಾರದಂತಿರುವುದರಿಂದ ಇವನ್ನು ಕಂಬ, ಮೇಂಟಿ ಎಂದು ಕರೆಯುತ್ತಾರೆ.[2] ಈ ಕಂಬಗಳಿಗೆ ಸಾಮಾನ್ಯವಾಗಿ ನಾಲ್ಕು ಮೈಗಳಿದ್ದು ಇವುಗಳನ್ನು ನಾಲ್ಕು ಸ್ಥರಗಳಿಂದ ವಿಭಾಗಿಸಲಾಗಿದೆ. ಇವುಗಳು ಸುಮಾರು ನಾಲ್ಕೂವರೆ ಅಡಿಯಿಂದ ಐದೂವರೆ ಅಡಿ ಎತ್ತರ ಇವೆ. ಈ ಕಂಬಗಳ ಕೆಳಗಿನ ಭಾಗ ನಾಲ್ಕು ಮೈಯುಳ್ಳ ಕಡಿಮೆ ಎತ್ತರದ್ದು ಮೊದಲನೇ ಸ್ಥರ. ಇದರ ಮೇಲೆ ಕಡಿಮೆ ಎತ್ತರದ ಅಷ್ಟ ಮೈಗಳುಳ್ಳ ಎರಡನೇ ಸ್ಥರ. ಎರಡನೇ ಸ್ಥರದ ನಾಲ್ಕು ಮೈಗಳಲ್ಲಿ ಹೆಚ್ಚಾಗಿ ಅಲಂಕೃತ ಕಲಶ ಅಥವಾ ಚೈತ್ಯ ನಮೂನೆಯ ಉಬ್ಬುಶಿಲ್ಪಗಳಿರುತ್ತವೆ. ಇದರ ಮೂಲೆಯ ನಾಲ್ಕು ಭಾಗಗಳು ಅತಿ ಕಡಿಮೆ ಎತ್ತರ. ಈ ಸ್ಥರವು ೪ ಮೈಯುಳ್ಳದ್ದಾಗಿದ್ದು ಈ ಭಾಗದಲ್ಲಿ ಶಾಸನಗಳಿರುತ್ತವೆ. ಕೆಲವೊಮ್ಮೆ ರಂಟೆಯ ಚಿತ್ರವಿರುತ್ತದೆ. ನಾಲ್ಕನೆಯ ಸ್ಥರವು ಸುಮಾರು ಎರಡು ಮೂರು ಅಡಿ ಎತ್ತರದ ತ್ರಿಪಟ್ಟದಿಂದಿದ್ದು ಅರ್ಧ ವರ್ತುಲಾಕೃತಿ ಭಾಗವಿದ್ದು ಇದು ಉಳಿದವುಗಳಿಗಿಂತ ಅತ್ಯಂತ ಎತ್ತರದಾಗಿರುತ್ತದೆ. ಅರ್ಧ ವರ್ತುಲದ ಭಾಗದ ಉದ್ದ ಭಾಗದಲ್ಲಿ ಎರಡು ಮೈಗಳು ಮಾತ್ರ ಹೆಚ್ಚು ಅಗಲ. ಅಲ್ಲಿ ವಿವಿಧ ರೀತಿಯ ಅಲಂಕೃತ ಪೂರ್ಣಕಲಶಗಳ (ಕುಂಬಗಳ)ನ್ನು ಮತ್ತು ಇದರ ಕೆಳಗೆ ಅಥವಾ ಮೇಲೆ ರಂಟೆ ಚಿತ್ರವಿರುತ್ತದೆ. ಅಗಲ ಭಾಗದಲ್ಲಿ ಸಮಾಂತರ ಒಂದೇ ಅಳತೆಯ ಆರು ಮೈಗಳಿರುತ್ತವೆ. ಈ ಮೈಗಳ ಮಧ್ಯದ ಬುಡದಲ್ಲಿ ಚೈತ್ಯದ ಮಾದರಿಯ ಚಿತ್ರ ಮತ್ತು ಅದಕ್ಕೆ ಹೂಗೊಂಚಲುಗಳ ಅಲಂಕೃತ ಅಥವಾ ಪಂಚತಂತ್ರ ಕಥೆಯ ನಿರೂಪಣೆ, ಉದಾಹರಣೆಗೆ ಎರಡು ಮಂಗಗಳು ಮರಹತ್ತಿ ಹಣ್ಣು ತಿನ್ನುವ ಚಿತ್ರ ಇರುತ್ತವೆ.

**ನೆಲೆಗಳು :**

ಶಿಗ್ಗಾವಿ ತಾಲ್ಲೂಕಿನ ಹನುಮನಹಳ್ಳಿ ಗ್ರಾಮ ಮಧ್ಯ ಒಂದು ಕಟ್ಟೆಯಲ್ಲಿ ಸಾಲಾಗಿ ಮೂರು ಗೋಸಾಸ ಕಂಬಗಳಿವೆ. ಇವುಗಳ ಬದಿಯಲ್ಲಿ ಒಂದು ಗಜಲಕ್ಷ್ಮಿ ಶಿಲ್ಪ (ಕ್ರಿ.ಶ. ಒಂಬತ್ತನೇ ಶತಮಾನ) ಹಾಗೂ ಒಂದು ಚತುರ್ಮುಖ ಶಿವಲಿಂಗ (ಕ್ರಿ. ಶ. ಹನ್ನೆರಡನೆಯ ಶತಮಾನ)ಗಳಿವೆ. ಒಂದನೆಯ ಗೋಸಾಸ ಕಂಬದಲ್ಲಿ ಶಾಸನವಿದೆ. ಇವುಗಳನ್ನು ಕಟ್ಟೆಗೆ ಹೊಂದಿಸಿ ಕಟ್ಟಿರುವುದರಿಂದ ಇವುಗಳ ತಳಭಾಗ ಮುಚ್ಚಿಕೊಂಡಿವೆ. ಈ ಕಂಬಗಳಲ್ಲಿ ಈ ಮೇಲೆ ಹೇಳಿದಂತೆ ನಾಲ್ಕು ಸ್ಥರಗಳುಂಟು. ಎರಡನೇ ಸ್ಥರ ಮತ್ತು ನಾಲ್ಕನೇ ಸ್ಥರಗಳಲ್ಲಿ ಚಿತ್ರಗಳಿವೆ. ಈ ಕಂಬಗಳನ್ನು ಕಟ್ಟೆಗೆ ಹೊಂದಿಸಿ ಕಟ್ಟಿರುವುದರಿಂದ ಎರಡನೇ ಸ್ಥರ ಚಿತ್ರಗಳು ಸ್ಪಷ್ಟವಾಗಿ ತಿಳಿಯುವುದಿಲ್ಲ.ನಾಲ್ಕನೇ ಸ್ಥರದಲ್ಲಿ ಅರ್ಧವೃತ್ತಾಕೃತಿಯ ಒಂದರ ಉದ್ದ ಮೈಯಲ್ಲಿ ಕಲಶವಿದೆ. ಈ ಕಲಶಕ್ಕೆ ಅಲಂಕೃತ ಪೀಠವಿದೆ. ಕಲಶದ ಮಧ್ಯಭಾಗವನ್ನು ದಾರದಿಂದ ಬಿಗಿಯಲಾಗಿದೆ. ಅದರ ಅಂಚುಗಳು ಅಲಂಕೃತಗೊಂಡಿವೆ. ಕಂಠಭಾಗದಲ್ಲಿ ಹಾರವಿದೆ. ಕಂಟದ ಬಾಯಿಯಲ್ಲಿ ಎರಡು ಅಲಂಕೃತ ಹೂಗೊಂಚಲುಗಳ ಮಧ್ಯೆ ತೆಂಗಿನಕಾಯಿ (?)ಯಿದೆ. ಅರ್ಧ ವರ್ತುಲಾಕೃತಿಯ ಅಗಲ ಮೈಗಳ ಮಧ್ಯಭಾಗಗಳಲ್ಲಿ ಚೈತ್ಯ ನಮೂನೆ ಚಿತ್ರಗಳಿವೆ. ಒಂದು ಕಂಬದಲ್ಲಿ ಎರಡನೇ ಸ್ಥರದ ಉದ್ದಭಾಗದ ಮೈಯಲ್ಲಿ ದುಂಡಾಕೃತಿಯ ಉಬ್ಬುಶಿಲ್ಪವಿದೆ. ಇಲ್ಲಿ ಒಂದೇ ಸಾಲಿನಲ್ಲಿ ಸುಮಾರು ಮೂರು ಅಡಿ ಅಂತರದಲ್ಲಿ ಮೂರು ಗೋಸಾಸಗಲ್ಲುಗಳನ್ನು ನಿಲ್ಲಿಸಿರುವುದು ವಿಶೇಷ ಹಾಗೂ ಇವುಗಳ ಬದಿಗೆ ಗಜಲಕ್ಷ್ಮಿ ಶಿಲ್ಪವಿರುವುದು ಗಮನೀಯ.

2 ಕಲ್ಬುರ್ಗಿಯವರು ಗೋಸಾಸವನ್ನು ಮೂರು ವರ್ಗ ಮಾಡಿರುತ್ತಾರೆ. ಮಾರ್ಗ II, ಪು. ೧೧-೨೦

ಹಾವೇರಿ ತಾಲ್ಲೂಕಿನ ದೇವಗಿರಿಯ ಬನಶಂಕರಿ ಗುಡಿ ಪಕ್ಕದಲ್ಲಿ ಗೋಸಾಸ ಕಂಬಗಳನ್ನು ಎರಡು ಸಾಲುಗಳಲ್ಲಿ ನಿಲ್ಲಿಸಲಾಗಿದೆ. ಇಲ್ಲಿಯ ಕೆಲವು ಗೋಸಾಸ ಕಂಬಗಳನ್ನು ಬುಡದವರೆಗೆ ಕಾಣಬಹುದು. ಇದರಿಂದ ಇವುಗಳಲ್ಲಿ ನಾಲ್ಕು ಸ್ತರಗಳನ್ನು ಸ್ಪಷ್ಟವಾಗಿ ಕಾಣ-ಬಹುದಾಗಿದೆ. ಸುಮಾರು ಐದೂವರೆ ಅಡಿ ಎತ್ತರ ಇರುವ ಇವನ್ನು ಒಂದು ಸಾಲಿನಲ್ಲಿ ಮೂರು ಕಂಬಗಳಂತೆ ಸುಮಾರು ನಾಲ್ಕು-ಐದು ಅಡಿ ಅಂತರದಲ್ಲಿ ನಿಲ್ಲಿಸಲಾಗಿದೆ. ಇವುಗಳ ಮೂಲ ರೂಪ ಒಂದೇ ಆಗಿವೆ. ಇಲ್ಲಿನ ಗೋಸಾಸ ಕಲ್ಲುಗಳಲ್ಲಿ ಕೆಲವು ಒಡೆದಿವೆ. ಒಂದರ ಶಾಸನದಲ್ಲಿ ತಿವುಳರ ಮಾರಮ್ಮ ಎಂಬಾತ ಗೋವಿಂದಬ್ಬೆ ಎಂಬವಳು ದೇವಂಗೇರಿ ಆಳುವಾಗ ಗೋಸಾಸಿಮೇಂಟ ನಿಲ್ಲಿಸಿದಳೆಂದು ಉಲ್ಲೇಖಿಸಲಾಗಿದೆ. ಈ ಗೋಸಾಸ ಕಂಬಗಳ ಬದಿಗಳ ಹತ್ತಿರ ದೇವಿಯ ದೇಗುಲ ಮತ್ತು ಕ್ರಿ. ಶ. ಹನ್ನೆರಡನೇ ಶತಮಾನದ ನಾಲ್ಕು ಕಂಬಗಳು ಅಲ್ಲಿವೆ.

ದೇವೀಹೊಸೂರು ಗ್ರಾಮದ ಒಂದು ಹಿಟ್ಟಿನ ಗಿರಣಿ ಹತ್ತಿರ ಆರು ಗೋಸಾಸ ಕಂಬಗಳಿದ್ದು ಕೆಲವು ಒಡೆದಿವೆ. ಇವು ಮೂಲತಃ ಎಷ್ಟಿದ್ದುವೆಂದು ತಿಳಿಯುವುದಿಲ್ಲ. ಇವುಗಳ ಬಲಬದಿಗೆ ಒಂದು ಮನೆಯಿದೆ ಹಾಗೂ ಎದುರಿಗೆ ತಿಪ್ಪೆಗುಂಡಿಗಳಿವೆ. ಇವುಗಳಲ್ಲಿ ಕೆಲವುಗಳು ಸುಮಾರು ಐದು ಅಡಿಗಿಂತ ಹೆಚ್ಚು ಎತ್ತರ ವಿದ್ದು ನಾಲ್ಕು ಸ್ತರಗಳಿವೆ. ಅವುಗಳಲ್ಲಿ ಮೂರು ಗೋಸಾಸ ಕಂಬಗಳಲ್ಲಿ ಹೊಸದಾಗಿ ಶಾಸನಗಳು ಸಿಕ್ಕಿವೆ. ಒಂದರಲ್ಲಿ ಕಲಶವು ಅಲಂಕೃತ ತ್ರಿಕೋಣದಲ್ಲಿದ್ದರೆ ಇನ್ನೊಂದರಲ್ಲಿ ಮೇಲಿನ ವರ್ತುಲಾಕಾರ ಭಾಗದಲ್ಲಿ ಒಂದು ವೃತ್ತದೊಳಗೆ ಕಮಲದ ಹೂವಿನ ಕೆತ್ತನೆ ಇದೆ. ಇವುಗಳಲ್ಲಿರುವ ಶಾಸನಗಳಲ್ಲಿ ರಾಷ್ಟ್ರಕೂಟ ಮೂರನೇ ಇಂದ್ರ, ಅಮೋಘವರ್ಷ, ಅಕಾಲವರ್ಷ ಇವರ ಆಳ್ವಿಕೆಯಲ್ಲಿ ಗೋಸಾಸಿ ಮೇಂಟಿ ನಿಲ್ಲಿಸಿದರೆಂದು ಉಕ್ತವಾಗಿದೆ. ಹಾಗೂ ಪೂಸವೂರ ಸಾಸಿರರನ್ನು ಸೂಚಿಸುತ್ತದೆ.

ಹಿರೇಮಾಗನೂರಿನ ರಾಮಲಿಂಗ ದೇವಸ್ಥಾನದ ಎದುರಿಗೆ ಬಲಗಡೆ ಒಂದು ಸಾಲಿನಲ್ಲಿ ಮೂರರಂತೆ ಮೂರು ಸಾಲುಗಳಲ್ಲಿ ಒಟ್ಟು ಒಂಬತ್ತು ಗೋಸಾಸ ಕಂಬಗಳನ್ನು ನೆಡಲಾಗಿದೆ. ಕೆಲವು ಕಂಬಗಳ ಶಿಲ್ಪಗಳು ಶಿಥಿಲಗೊಂಡಿವೆ. ಹೆಚ್ಚಿನ ಭಾಗ ಮಣ್ಣಲ್ಲಿ ಹೂತು ಹೋಗಿವೆ. ಒಂದು ಕಲ್ಲಿನಲ್ಲಿ ಅಲಂಕೃತ ಕಲಶ ಅದರ ಬಾಯಿಯಲ್ಲಿ ಬೋರಲಾಗಿ ಇಟ್ಟ ತೆಂಗಿನ ಕಾಯಿಯೂ (?) ಇನ್ನೊಂದೆಡೆ ಅಲಂಕೃತ ಚೈತ್ಯಾಕೃತಿಯನ್ನು ಬಿಡಿಸಿದೆ. ಇವಲ್ಲದೆ ನೇಗಿಲನ್ನು, ಉಬ್ಬು ಶಿಲ್ಪವನ್ನು ಬಿಡಿಸಲಾಗಿದೆ.

ಹೂಲಿಹಳ್ಳಿಯಿಂದ ದಕ್ಷಿಣಕ್ಕೆ ಸುಮಾರು ಅರ್ಧ ಕಿ. ಮೀ. ಅಂತರದಲ್ಲಿ ಕಲ್ಲೇಶ್ವರ ದೇವಾಲಯವಿದೆ. ಈ ದೇವಾಲಯ ಎದುರಿಗೆ ಬಲಕ್ಕೆ ಮೂರು ಸಾಲುಗಳಲ್ಲಿ ಹನ್ನೆರಡು ಗೋಸಾಸ ಕಂಬಗಳನ್ನು ನೆಡಲಾಗಿದೆ. ಎಲ್ಲಾ ಕಂಬಗಳು ಮೇಲಿನ ಒಂದೆರಡು ಸ್ಥರಗಳು ಬಿಟ್ಟು ಉಳಿದ ಭಾಗ ಮಣ್ಣಲ್ಲಿ ಹೂತಿವೆ. ಅರ್ಧ ವರ್ತುಲಾಕೃತಿಯ ಈ ಕಂಬಗಳಲ್ಲಿ ಕಲಶಗಳಿದ್ದು ಅವುಗಳಿಗೆ ಪೀಠಗಳು ಇವೆ. ಜೋಡು ದಾರದ ಪಟ್ಟಿಯನ್ನು ಕಲಶದ ಹೊಟ್ಟೆಗೆ ಸುತ್ತಲಾಗಿದೆ. ಕಂಠಕ್ಕೆ ಹಾರವಿದೆ. ಕಂಠದ ಬಾಯಲ್ಲಿ ವೀಳೆಯದೆಲೆಗಳನ್ನಿಟ್ಟು ಮಧ್ಯೆ ತೆಂಗಿನ ಕಾಯಿ (?)ಯನ್ನು ಇಟ್ಟು ಅಲಂಕರಿಸಲಾಗಿದೆ.

ಸಾತೇನಹಳ್ಳಿ ಮಾರುತಿ ಮಂದಿರದ ಎದುರು ಮೂರು ಹಾಗೂ ಹಿರೇಕೆರೂರು ವೀರಭದ್ರ ದೇವಾಲಯ ಹಿಂದೆ ಎರಡು ಗೋಸಾಸ ಕಂಬಗಳಿವೆ. ಇದಲ್ಲದೆ ಹಳೇ ರಿತ್ತಿಯ ಕೆರೆ ದಂಡೆಯಲ್ಲಿ ಎರಡು ಗೋಸಾಸ ಕಂಬಗಳು ಬಿದ್ದಿವೆ. ಹಳೇ ಹೊನ್ನತ್ತಿಯಲ್ಲಿ ಒಡೆದ ಒಂದು ಗೋಸಾಸ ಕಂಬದ ಚಕ್ಕೆ ಕಂಡುಬಂದಿದ್ದು ಅದರಲ್ಲಿ ಅಲಂಕೃತ ಕಲಶವಿದೆ.

ಸಿರಗುಂಬಿಯ ಈಶ್ವರನ ಗುಡಿ ಬದಿಗೆ ಆರು ಗೋಸಾಸ ಕಂಬಗಳಿವೆ. ಇಲ್ಲಿನ ಒಂದು ಗೋಸಾಸ ಕಂಬದ ಅರ್ಧ ವರ್ತಲಾಕೃತಿಯ ಮೈಮೇಲೆ ಎರಡು ಪೂರ್ಣಕಲಶಗಳನ್ನು ತೋರಿಸಿರುವುದು ವಿಶೇಷ ಹಾಗೂ ಇನ್ನೊಂದು ಕಂಬದ ಬದಿಗಿನ ಪಟ್ಟಿಕೆಯಲ್ಲಿ ಹಣ್ಣನ್ನು ತಿನ್ನಲು ಎರಡು ಮಂಗಗಳು ಗಿಡವನ್ನು ಏರುವುದನ್ನು ತೋರಿಸಲಾಗಿದೆ. ಇದಲ್ಲದೆ ಒಂದರಲ್ಲಿ ಕಲಶವನ್ನು ಬೋರಲಾಗಿಟ್ಟಿರುವುದನ್ನು ತೋರಿಸಲಾಗಿದೆ. ಗೋಸಾಸ ಕಲ್ಲುಗಳನ್ನು ಹೆಚ್ಚಾಗಿ ಒಂದು, ಮೂರು, ಆರು, ಒಂಬತ್ತು, ಹನ್ನೆರಡು ಈ ರೀತಿ ಹೆಚ್ಚಾಗಿ ಬೆಸ ಸಂಖ್ಯೆಯ ಅನುಕ್ರಮದಲ್ಲಿ ನೆಡುವ ಪದ್ಧತಿ ಇದ್ದಿರಬಹುದೆಂಬ ಸಂಶಯ ಬರುತ್ತದೆ. ಕೆಲವು

ಕಡೆ ಸರಿ ಸಂಖ್ಯೆಯಲ್ಲಿ ಗೋಸಾಸ ಕಂಬಗಳನ್ನು ನೆಟ್ಟಿರುವುದು ಕಂಡುಬಂದಿದ್ದರೂ ಆ ಸ್ಥಳಗಳನ್ನು ಕೂಲಂಕಷ ಪರಿಶೀಲನೆ ಮಾಡುವುದು ಆವಶ್ಯಕವೆನಿಸುತ್ತದೆ.

ಹಿರೇಮಾಗನೂರಿನ ಗೋಸಾಸವೊಂದರಲ್ಲಿ 'ಚಿತ್ರ ಗೋಸಾಸ ಮಿಳ್ದು' ಎಂಬ ವಿಷಯವನ್ನು ಇಲ್ಲಿ ವಿವೇಚಿಸಬಹುದು. ಸಿರಗುಂಬಿಯ ಒಂದು ದೊಡ್ಡ ಫಲಕದಲ್ಲಿ ದೊಡ್ಡ ಗಾತ್ರದ ಕಲಶ ಮತ್ತು ನೇಗಿಲಿನ ಚಿತ್ರಗಳಿವೆ. ಹಾಗೂ ಅದರಲ್ಲಿ "ಸ್ವಸ್ತಿ ಶ್ರೀ ಗೆಣ್ಡಸ್ಥಣರ ಶ್ರೀ ನೇಗಿನಿಂದು ಸುತ್ತುಸು" ಎಂಬ ಶಾಸನವಿರುವುದು.

**ಗೋಸಾಸ ಕಂಬಗಳ ಪಟ್ಟಿ ಈ ಕೆಳಕಂಡಂತಿವೆ**

| | ಗ್ರಾಮದ ಹೆಸರು | ಗೋಸಾಸ ಕಂಬಗಳ ಸಂಖ್ಯೆ | ಅರಸ | ಕಾಲಮಾನ | ಸ್ಥೂಲ ವಿವರ |
|---|---|---|---|---|---|
| ೧. | ಹನುಮನಹಳ್ಳಿ | ಮೂರು | ರಾ. ಕನ್ನರ | — | ತ್ರುಟಿತ, ರೇವಡಿ ಎಂಬ ಉಲ್ಲೇಖ.[3] |
| ೨. | ಶಿರಗುಂಬಿ | ಆರು | —— | ಸು.ಕ್ರಿ.ಶ. ೯೦೦ | — |
| ೩. | ಗುಡಗೇರಿ | ಒಂದು | ಅಮೋಘವರ್ಷ | ಸು.ಕ್ರಿ.ಶ. ೮೦೦ | ಅಪೂರ್ಣ, ಗೋಸಾಸ ಹಾಗೂ ಶುಭಚಂದ್ರ[4] ಪಂಡಿತರ ಉಲ್ಲೇಖ. |
| ೪. | ದೇವಗಿರಿ | ಎಂಟು | — | " ೯೦೦ | ತ್ರುಟಿತ, ಅಮ್ಮಕೀರ್ತಿಯಿಂದ ಗೋಸಾಸ[5] ದಾನ |
| | | | — | " | ತ್ರುಟಿತ, ರಾಜಾದಿತ್ಯನ ಉಲ್ಲೇಖ[6] |
| | | | ರಾ. ಅಮೋಘವರ್ಷ" | ? | ಗೋವಿಂದಬ್ಬೆಯುಂ ದೇವಂಗೇರಿಯು[7] ನ್ನಾಳುವಾಗ ತಿವುಳರ ಮಾರಮ್ಮ ಗೋಸಾಸಿ ಮೇಂಟೆನಿಲ್ಲಿಸಿದ ಉಲ್ಲೇಖ. |
| ೫. | ಹೇಳೆರಿತ್ತಿ | ಎರಡು | ರಾ. ನಿರುಪಮ | ಕ್ರಿ.ಶ. ೯೨೯ | ತ್ರುಟಿತ, ಮಹಾಸಾಮಂತ ಬಂಕೆಯ[8] ಬನವಾಸಿ ನಾಡನ್ನಾಳುವಾಗ ಗೋಸಹಸ್ರ ದಾನ ಮಾಡಿದ ಉಲ್ಲೇಖ. |
| ೬. | ಹಿರೆಮಾಗನೂರ | ಒಂಬತ್ತು | ರಾ. ಮೂರನೆ ಇಂದ್ರ | ಕ್ರಿ.ಶ. ೯೧೮ | ಅಪೂರ್ಣ, ಬಂಕೆಯನು ಬನವಾಸಿ ನಾಡ[9] ನಾಳುವಾಗ ಮಾಗುಂದರದ ಗಾಮುಂಡನಿಂದ ಚಿತ್ರ ಗೋಸಾಸದಾನ |
| | | | ರಾ. ಪ್ರಭೂತವರ್ಷ | — | ಅತಿ ಅಸ್ಪಷ್ಟ, ದಾನವೊಂದರ ಉಲ್ಲೇಖ[10] |

3 ಎಸ್. ಐ.ಐ. XX, ೧೨

4 ಎಆರ್ಐಇ ೧೯೩೨-೩೩, ನಂ. ೨೨

5 ಅದೇ, ನಂ. ೨೩

6 ಅದೇ, ನಂ. ೨೪

7 ಎಆರ್ಐಇ ೧೯೩೩-೩೪, ನಂ. ೫೭

8 ಅದೇ ೧೯೩೪-೩೫, ನಂ. ೨೨

9 ಅದೇ, ನಂ. ೨೨

10 ಎಆರ್ಐಇ ೧೯೩೪-೩೫, ನಂ. ೯೭

| ಗ್ರಾಮದ ಹೆಸರು | ಗೋಸಾಸ ಗೋಸಾಸ ಸಂಖ್ಯೆ | ಅರಸ | ಕಾಲಮಾನ | ಸ್ಥೂಲ ವಿವರ |
|---|---|---|---|---|
| ೭. ಹೂಲಿಹಳ್ಳಿ | ಹನ್ನೆರಡು | — | — | ಪೊನ್ನಮಾರನಿಂದ ಗೋಸಾಸದಾನ[11] |
| | | — | — | ಮುಳ್ಳಾದರ ಮಾರನಿಂದ ಗೋಸಾಸ[12] ಮತ್ತು ಭೂಮಿ ದಾನ |
| | | — | — | ಮಾರಮ್ಮನ ಪುಡಾರ (?) ನಿಂದ [3] ಮೆಂಟ ಸ್ಥಾಪನೆ |
| ೮. ಸಾತೇನಹಳ್ಳಿ | ಮೂರು | — | — | — |
| ೯. ಹಿರೇಕೆರೂರು | ಎರಡು | — | ಕ್ರಿ.ಶ. ೯೬೦ | ಕಹರಿ ಮಾರಸಿಂಗನು ಗೋಸಾಸವನ್ನಿತ್ತು[14] ಕಂಬ ನಿಲ್ಲಿಸಿದ ಉಲ್ಲೇಖ. |
| | | — | " | ತ್ರುಟಿತ, ವ್ಯಕ್ತಿಯೊಬ್ಬನು ಗೋಸಾಸ[15] ದಾನಮಾಡಿದ ಉಲ್ಲೇಖ. |
| ೧೦. ದೇವೀಹೊಸೂರ | ಆರು | — | ಸು. ೮-೯ನೇಶ. | ಮುಳ್ಳಾಡರ ಮಾರಪುಲಿ ಭೂಮಿ ಮತ್ತು[16] ಗೋಸಾಸ ದಾನ ಉಲ್ಲೇಖ. |

**ವೀರಗಲ್ಲುಗಳು**

ಕ್ರಿ. ಶ. ೮-೧೦ ನೇ ಶತಮಾನದವರೆಗಿನ ವೀರಗಲ್ಲುಗಳು ಈ ಪ್ರದೇಶದಲ್ಲಿ ಕಂಡು ಬಂದಿವೆ. ದೇವೀಹೊಸೂರಿನಲ್ಲಿ ಕ್ರಿ. ಶ. ೮ ಮತ್ತು ಕ್ರಿ. ಶ. ೯೦೭ರ ಮತ್ತು ಸು. ೧೦ ನೇ ಶತಮಾನದ ಮೂರು ವೀರಗಲ್ಲುಗಳಿವೆ. ಇಲ್ಲಿಯ ಬನಶಂಕರಿ ದೇವಾಲಯದ ಬಳಿ ಹಾಗೂ ಕೂಡಲ ಗದಿಗೆಪ್ಪನ ಮನೆಯ ಮುಂದೆ ವೀರಗಲ್ಲುಗಳಿದ್ದು ಅವುಗಳಲ್ಲಿ ಮೂರು ಭಾಗಗಳಿದ್ದು ಕೆಳಗಿನ ಭಾಗದಲ್ಲಿ ಶತ್ರುಗಳೊಡನೆ ವೀರನು ಹೋರಾಡುವ ದೃಶ್ಯದ ಭಾಗ ಮಣ್ಣಲ್ಲಿ ಹೂತಿದೆ. ಎರಡನೇ ಫಲಕದಲ್ಲಿ ಶಿಖರವುಳ್ಳ ದೇವಾಲಯ ಮಾದರಿಯಿದ್ದು ಇದರಲ್ಲಿ ಮಡಿದ ವೀರನು ಕಮಲಗಳನ್ನು ಹಿಡಿದು ಸಮಭಂಗದಲ್ಲಿ ನಿಂತಿರುವನು. ಇದರ ಎಡಬದಿಯಲ್ಲಿ ಅಪ್ಸರೆಯರಿಬ್ಬರು ಒಂದು ಕೈಯಲ್ಲಿ ಚೌರಿಯನ್ನು ಹಿಡಿದು ಇನ್ನೊಂದು ಕೈಯಲ್ಲಿ ಮಡಿದ ವೀರನ ತೋಳನ್ನು ಹಿಡಿದು ದೇವಲೋಕಕ್ಕೆ ಒಯ್ಯಲು ನಿಂತಿರುವರು. ಇವರ ಎಡಬದಿಗೆ ಮತ್ತು ಕೆಳಗಡೆ ಒಟ್ಟು ಏಳು ಮಂದಿ ವಾದ್ಯಮೇಳದವರಿದ್ದಾರೆ. ಕೊಳಲು, ತಾಳ ಮೃದಂಗ, ಬಾರಿಸುತ್ತ ವಾದ್ಯಮೇಳ ಸಾಗಿರುವ ದೃಶ್ಯವಿದೆ. ಮೇಲಿನ ಫಲಕದಲ್ಲಿ ಮಡಿದ ವೀರನು ಕಾಲುಗಳುಳ್ಳ ಮಂಚದ ಮೇಲೆ ಪದ್ಮಾಸನದಲ್ಲಿದ್ದು ಕೈಗಳನ್ನು ತೊಡೆಯ ಬದಿಯಲ್ಲಿ ಇಟ್ಟಿರುವನು. ದೇವೀ ಹೊಸೂರಿನ ಎಲ್ಲಾ ವೀರಗಲ್ಲುಗಳ ಕೆಳಭಾಗ ಮಣ್ಣಿನಲ್ಲಿ ಸೇರಿದ್ದು ಮೇಲಿನ ಹಂತಗಳಲ್ಲಿ ವೀರನು ಸ್ವರ್ಗಕ್ಕೆ ಹೋಗುತ್ತಿರುವ ಹಾಗೂ ಸ್ವರ್ಗದಲ್ಲಿ ಪದ್ಮಾಸನ ಹಾಕಿಕೊಂಡು ಪೀಠವೊಂದರ ಮೇಲೆ ಕುಳಿತಿರುವಂತೆ ಬಿಡಿಸಲಾಗಿದೆ. ಮಧ್ಯದ ಫಲಕದಲ್ಲಿ ಇಬ್ಬರು ಅಪ್ಸರೆಯರೊಂದಿಗೆ

---

11 ಅದೇ, ನಂ. ೯೬

12 ಅದೇ, ನಂ, ೯೭

13 ಅದೇ, ನಂ. ೯೮

14 ಅದೇ, ೧೯೫೮-೫೯ ನಂ. ೫೫೭

15 ಅದೇ, ನಂ. ೧೯೫೧-೫೨, ನಂ. ೭೬

16 ಅದೇ, ೧೯೩೨-೩೩, ನಂ. ೩೯ ಹಾಗೂ ೩೮

ಮತ್ತಿಬ್ಬರು ನೃತ್ಯ ಗಾತಿಯನ್ನು ಬಿಡಿಸಿದೆ. ವೀರಗಲ್ಲಿನ ತುದಿಗಳನ್ನು ದೇವಾಲಯದ ಮಾದರಿಯಲ್ಲಿ ಬಿಡಿಸಿರುವುದು ಇಲ್ಲಿನ ವಿಶೇಷ.

ಈ ವೀರಗಲ್ಲುಗಳು ಅಕಾಲವರ್ಷನ ಆಳ್ವಿಕೆಯವಾಗಿದ್ದು ಅವುಗಳಲ್ಲಿ ಒಂದು ಕ್ರಿ. ಶ. ೯೦೭ ಕ್ಕೆ[17] ಸೇರಿದುದಾಗಿದೆ.

ಅರಳಿಕಟ್ಟೆ ಗ್ರಾಮದಲ್ಲಿ ಈ ಕಾಲದ ನಾಲ್ಕು ವೀರಗಲ್ಲುಗಳಿವೆ. ಕಲ್ಲೇಶ್ವರ ಗುಡಿ ಎದುರಿನ ಒಂದು ವೀರಗಲ್ಲು ಕುರುಗಾಳೆಗದ್ದಾಗಿದ್ದು ಮೂರು ಹಂತಗಳನ್ನು ಹೊಂದಿದೆ[18] ಕ್ರಿ. ಶ. ೯೩೧ರ ನಾಲ್ಕನೆಯ ಗೋವಿಂದನ ಕಾಲದ ಈ ವೀರಗಲ್ಲಿನ ಕೆಳಗಡೆಯ ಫಲಕದಲ್ಲಿ ಎರಡು ಗುಂಪಿನ ಸೈನ್ಯ ಯುದ್ಧ ಮಾಡುತ್ತಿದ್ದು ಬಲಗಡೆಗೆ ಕೆಲವು ಆಕಳುಗಳಿವೆ. ಇಬ್ಬರುಯೋಧರನ್ನು ದೊಡ್ಡದಾಗಿ ತೋರಿಸಲಾಗಿದೆ. ಒಬ್ಬನು ಬಿಲ್ಲನ್ನು ಎಡಗೈಯಲ್ಲಿ ಹಿಡಿದು ಬಾಣ ಪ್ರಯೋಗ ಮಾಡುತ್ತಿದ್ದರೆ ಇನ್ನೊಬ್ಬ ವೀರನು ಎಡಗೈಯಲ್ಲಿ ಉದ್ದವಾದ ಈಟಿಯನ್ನು ವೈರಿಗಳ ಕಡೆ ಹಿಡಿದು ನಿಂತಿದ್ದಾನೆ. ಹಲವಾರು ಬಾಣಗಳು ಇವನಿಗೆ ನಾಟಿವೆ. ಬಲಗೈಯಲ್ಲಿ ಗುರಾಣಿ ಎತ್ತಿ ಹಿಡಿದಿದ್ದಾನೆ. ಇವನ ಕಾಲಿನ ಮುಂದೆ ನಿಂತ ಇನ್ನೊಬ್ಬ ಯೋಧನ ಕೈಯಲ್ಲಿ ಉದ್ದವಾದ ಬರ್ಚಿ ಹಿಡಿದು ವೈರಿಗಳ ಕಡೆ ಪ್ರಯೋಗಿಸುತ್ತಿರುವನು. ಈ ಮೂವರ ಕೆಳಗಡೆ ಮೂವರ ವಾದ್ಯಮೇಳವಿದೆ. ಒಬ್ಬನು ತನ್ನ ಕೈಗಳಲ್ಲಿ ಉದ್ದ ಈಟಿ ಹಿಡಿದು ಪ್ರಯೋಗಿಸುತ್ತಿರುವನು. ಅವನ ಹಿಂದೆ ಕೆಳಗೆ ಆನೆ, ಕುದರೆ, ಕಾಲ್ದಳಗಳಿವೆ ಇದರ ಕಾಲುಗಳ ಬಳಿ ಯುದ್ಧದಲ್ಲಿ ಮಡಿದ ವೀರನು ಬಿದ್ದಿದ್ದಾನೆ. ಇದರ ಎರಡನೇ ಫಲಕದಲ್ಲಿ ಮಡಿದ ಮೂವರು ಯೋಧರನ್ನು ನಾಲ್ಕು ಮಂದಿ ಅಪ್ಸರೆಯರು ಹೆಗಲ ಮೇಲೆ ಕೈಗಳನ್ನು ಹಾಕಿಕೊಂಡು ಸಾಲಾಗಿ ನಿಂತು ಹಾರುವ ಭಂಗಿಯಲ್ಲಿರುವರು. ಇವರ ಕೊನೆಯಲ್ಲಿ ನಿಂತ ಅಪ್ಸರೆಯರು ಇನ್ನೊಂದು ಕೈಗಳಲ್ಲಿ ಕುಂಭಗಳನ್ನು ಹಿಡಿದಿರುವರು. ಇವರ ಮಧ್ಯದ ಪಾದ ಕೆಳಗಡೆ ಒಂದು ನೇಗಿಲಿದೆ. ಇದಲ್ಲದೆ ಇವರೆಲ್ಲರ ತಲೆಯ ಮೇಲೆ ಎಲೆಗಳ ಗೊಂಚಲನ್ನು ಧರಿಸಿರುವುದು ಕುತೂಹಲ ಸಂಗತಿ. ಇಂದಿಗೂ ಮಡಿದವರನ್ನು ಮೆರವಣಿಗೆ ಮಾಡಿಕೊಂಡು ಒಯ್ಯುವಾಗ ಎದುರಾಗಿ ಹಲವಾರು ಜನ ತಲೆಯಲ್ಲಿ ಮಾವಿನ ಎಲೆ ಗೊಂಚಲನ್ನು ಧರಿಸಿ ಶವವನ್ನು ಇಲ್ಲಿ ಸ್ವೀಕರಿಸಲು ಬಂದು ವಾದ-ವಿವಾದ ಮಾಡುವುದನ್ನು ನೆನೆಯಬಹುದಾಗಿದೆ. ಮೇಲಿನ ಮೂರನೇಯ ಫಲಕದಲ್ಲಿ ಮೂವರು ವೀರರಿಗೆ ಮೂರು ಪ್ರತ್ಯೇಕ ಗೂಡುಗಳನ್ನು ಒಂದೇ ಸಾಲಾಗಿ ತೋರಿಸಲಾಗಿದೆ. ಮಧ್ಯದ ವೀರನ ಪಾದದ ಕೆಳಗಡೆ ಒಂದು ಪ್ರಾಣಿ ಚಿತ್ರ ಇರುವುದು ಗಮನೀಯ.

ಇದೇ ಗ್ರಾಮದ ಮತ್ತೊಂದು ವೀರಗಲ್ಲಿನ ವೀರನು ಬಿಲ್ಲು ಹಿಡಿದಿದ್ದು ಬಿಲ್ಲಿನಿಂದ ಬಾಣ ಪ್ರಯೋಗ ಮಾಡುತ್ತಿರುವಂತಿದೆ ಈತನ ಕುತ್ತಿಗೆ, ತಲೆ, ಹೊಟ್ಟೆಗೆ ಒಟ್ಟು ನಾಲ್ಕು ಬಾಣಗಳು ನೆಟ್ಟು ಇನ್ನೊಂದು ಕಡೆ ಹೊರಬಂದಿವೆ. ಈ ಫಲಕದಲ್ಲಿ ವಾದ್ಯಗಾರರು, ಕುದುರೆ ಮೇಲೆ ಕುಳಿತ ಶತ್ರುಗಳನ್ನು ಬಿಡಿಸಿದೆ. ಈ ಫಲಕದ ಮೇಲೆ ಒಂದು ನೇಗಿಲ ಶಿಲ್ಪವಿದೆ. ಉಳಿದ ಫಲಕಗಳಲ್ಲಿ ಅಪ್ಸರೆಯರೊಂದಿಗೆ ಸ್ವರ್ಗಾರೋಹಣ ಹಾಗೂ ವೀರನು ಸ್ವರ್ಗದಲ್ಲಿರುವ ದೃಶ್ಯಗಳಿವೆ.

ಅರಳೀಕಟ್ಟೆಯ ಈ ಮೇಲೆ ತಿಳಿಸಿದ ವೀರಗಲ್ಲುಗಳ ಹತ್ತಿರದ ಇನ್ನೊಂದು ವೀರಗಲ್ಲಿದ್ದು ಅದರ ಕೆಳಗಿನ ಫಲಕವು ಹೆಚ್ಚು ತ್ರುಟಿತವಾಗಿದೆ. ಕೇವಲ ಮಡಿದ ವೀರನು ಮಲಗಿರುವ ಚಿತ್ರ ಉಳಿದಿದೆ. ಇನ್ನೊಂದು ವೀರಗಲ್ಲಿನ ವೀರನು ಬಲಗೈಯಲ್ಲಿ ಚಕ್ರದಂತೆ ವಸ್ತು ಹಿಡಿದಿರುವುದು ವಿಶೇಷವೆನ್ನಬಹುದು. ಚೌರಿ ಹಿಡಿದ ಇಬ್ಬರು ಸೇವಕಿಯರು ನಿಂತಿದ್ದಾರೆ. ವೀರನ ಹಾಗೂ ಸೇವಕಿಯರ ಈ ಇಬ್ಬರ ತಲೆ ಮಧ್ಯ ಇನ್ನಿಬ್ಬರು ಸೇವಕಿಯರ ಕೇವಲ ಮುಖಗಳನ್ನು ತೋರಿಸಿದೆ. ಈ ಫಲಕದಲ್ಲಿ ಮೇಲೆ ಮೂರು ವಿಮಾನ (ದೇವಾಲಯ-ಶಿಖರ) ಗಳನ್ನು ಸಾಲಾಗಿ ಚಿತ್ರಿಸಲಾಗಿದೆ. ಮಧ್ಯದ ವಿಮಾನಕ್ಕೆ

17 ಅದೇ ೧೯೫೩-೫೪, ನಂ. ೫೩೮

18 ಅದೇ ೧೯೬೦-೬೧, ನಂ. ೪೪೦

ದ್ವಿತಳಗಳಿವೆ. ಇದೇ ಗ್ರಾಮದ ಇನ್ನೊಂದು ವೀರಗಲ್ಲಿನಲ್ಲಿ ಶಂಖ, ಸೂರ್ಯ, ಚಂದ್ರ ಹಾಗೂ ಮಂಗಳ ಚಿಹ್ನೆಗಳಿವೆ.

ಹೂಲಿಹಳ್ಳಿ ಗ್ರಾಮದ ರಾಮಲಿಂಗ ದೇವಾಲಯದ ಹೊರಗಡೆ ಒಂದು ವೀರಗಲ್ಲಿದೆ. ಇದರ ಕೆಳಗಿನ ಮೂರನೇ ಫಲಕ ಮಣ್ಣಲ್ಲಿ ಮುಚ್ಚಿದ್ದು ಇದರಲ್ಲೂ ನೇಗಿಲನ್ನು ಬಿಡಿಸಿರುತ್ತಾರೆ.

ಬ್ಯಾಡಗಿ ತಾಲೂಕಿನ ಮಾಸಣಗಿಯ ವೀರಭದ್ರ ಗುಡಿ ಹೊರಗಡೆಯಿರುವ ರಾಷ್ಟ್ರಕೂಟ ಅರಸ ಅಮೋಘವರ್ಷನ ಕ್ರಿ. ಶ. ೯೩೫[19] ಒಂದು ವೀರಗಲ್ಲಿನ ಮೂರು ಫಲಕಗಳಿದ್ದು ಕೆಳಗಿನ ಮೂರನೇ ಫಲಕದ ಕೆಳಗಡೆ ನೇಗಿಲ ಚಿತ್ರವಿದೆ. ಮೂರನೇ ಫಲಕದಲ್ಲಿ ಖಡ್ಗಧಾರಿ ವೀರನನ್ನು ದೊಡ್ಡದಾಗಿ ಬಿಡಿಸಿದ್ದು, ಮಡಿದಯೋಧರ ಶಿಲ್ಪಗಳನ್ನು ಬಿಡಿಸಿದೆ. ಆನೆಗಳಿಗೆ ಝೂಲನ್ನು ಧರಿಸಿ ಅಲಂಕೃತ ಮಾಡಲಾಗಿದೆ. ಕೆಲವು ಆನೆ-ಕುದುರೆ ಮೇಲಿನ ಸವಾರರು ಇದ್ದ ಸ್ಥಳದಲ್ಲೇ ಬಿದ್ದಿರುವುದನ್ನು ತೋರಿಸಲಾಗಿದೆ. ಉಳಿದ ವಿವರಗಳು ಹಿಂದಿನ ವೀರಗಲ್ಲುಗಳಂತಿದ್ದು ಈ ಫಲಕದ ಮೇಲೆ ಸೂರ್ಯ ಚಂದ್ರ ಚಿನ್ಹೆಗಳಿವೆ.

ಹಾವೇರಿ ತಾಲೂಕು ಕಿತ್ತೂರಿನ ಸಂಗಮೇಶ್ವರ ದೇವಾಲಯ ಬದಿಗಿನ ರಾಷ್ಟ್ರಕೂಟ ಖೊಟ್ಟಿಗನ ಕ್ರಿ.ಶ. ೯೭೩ರ[20] ಒಂದು ಬಹು ಉದ್ದವಾದ ತುರುಗಾಳಗದ ವೀರಗಲ್ಲಿನಲ್ಲಿ ಮೂರು ಫಲಕಗಳಿವೆ. ಕೆಳಗಿನ ಮೂರನೇ ಫಲಕದ ಯುದ್ಧ ದೃಶ್ಯದಲ್ಲಿ ಇಬ್ಬರು ವೀರರನ್ನು ದೊಡ್ಡದಾಗಿ ಬಿಡಿಸಿದ್ದು ಇವರು ಬಿಲ್ಲು ಬಾಣಗಳನ್ನು ಹಿಡಿದು ಎದುರಾಳಿಗಳ ಸಂಗಡ ಯುದ್ಧ ಮಾಡುತ್ತಿರುವರು. ಇವರ ತೊಡೆಗಳಿಗೆ ಬಾಣಗಳು ನೆಟ್ಟಿವೆ. ಇವರ ಎದುರಿಗೆ ಎದುರಾಳಿಗಳು ಬಿಲ್ಲು-ಬಾಣ ಹಿಡಿದು ಯುದ್ಧ ಮಾಡುತ್ತಿದ್ದಾರೆ. ಎರಡನೇ ಫಲಕದ ಕೆಳಗೆ ಎರಡು ಮೇಳಗಳನ್ನು ತೋರಿಸಲಾಗಿದೆ. ಇದರಲ್ಲಿ ಇಬ್ಬರು ಮಡಿದ ಯೋಧರನ್ನು ಅಪ್ಸರೆಯರು ತಲಾ ಇಬ್ಬರು ತೋಳಲ್ಲಿ ಕೈಗಳನ್ನು ಹಾಕಿಕೊಂಡು ಒಯ್ಯುತ್ತಿರುವರು. ಇದರ ಮೇಲೆ ಸೂರ್ಯ ಚಂದ್ರರ ಚಿನ್ಹೆಗಳಿವೆ.

ಸಿಡೆನೂರಿನ ಕಲ್ಲೇಶ್ವರ ಗುಡಿ ಹತ್ತಿರದಲ್ಲಿ ಬಾದಾಮಿ ಚಾಲುಕ್ಯ ವಿಕ್ರಮಾದಿತ್ಯ (ಇಮ್ಮಡಿ)ನ ಕಾಲದ[21] ಒಂದು ಬೃಹತ್ ವೀರಗಲ್ಲಿದೆ. ಅದರಲ್ಲಿ ಮೂರು ಫಲಕಗಳಿದ್ದು, ಕೆಳಗಿನ ಫಲಕದಲ್ಲಿ ಯುದ್ಧದೃಶ್ಯ. ಈ ದೃಶ್ಯದಲ್ಲಿ ಯುದ್ಧ ಮಾಡುವ ಎರಡು ಗುಂಪಿನ ಯೋಧರನ್ನು (ಸುಮಾರಾಗಿ ಮನುಷ್ಯರ) ಹೆಚ್ಚು ಎತ್ತರದಲ್ಲಿ ಚಿತ್ರಿಸಿರುವುದು ವಿಶೇಷ. ಬಲಗಡೆಯ ಗುಂಪಿನಲ್ಲಿ ಮೂವರು ಯೋಧರಿದ್ದು ಕೈಗಳಲ್ಲಿ ಖಡ್ಗ ಗುರಾಣಿಗಳಿವೆ. ಎರಡನೇಯ ಫಲಕದಲ್ಲಿ ಅಪ್ಸರೆಯರ ಜೊತೆಗೆ ಅಲಂಕೃತವಾಗಿರುವ ಎರಡು ದೊಡ್ಡ ಪೂರ್ಣ ಕುಂಭಗಳನ್ನು ಬಿಡಿಸಿದೆ.

ಇದೇ ಗ್ರಾಮದ ಇನ್ನೊಂದು ೧೦ ನೇಯ ಶತಮಾನದ ವೀರಗಲ್ಲು ವಿಶೇಷವಾಗಿದೆ. ಇದರಲ್ಲಿ ಮೂರು ಫಲಕಗಳಿದ್ದು ತಲಾ ಒಂದು ಫಲಕದಲ್ಲಿ ಅರ್ಧ ಗಂಭಗಳನ್ನು ಚಿತ್ರಿಸಿ ಒಂದೇ ಫಲಕಗಳಲ್ಲಿ ಪ್ರತ್ಯೇಕ ಭಾಗಗಳನ್ನು ವಿಂಗಡಿಸಲಾಗಿದೆ. ಕೆಳಗಿನ ಮೂರನೇಯ ಫಲಕದಲ್ಲಿ ಬಲಗಡೆ ಆಕಳುಗಳನ್ನು, ಅವುಗಳ ಎದುರಿಗೆ ಅರ್ಧಗಂಬವಿದೆ. ಈ ಕಂಬ ಎಡಭಾಗದಲ್ಲಿ ಇಬ್ಬರು ವೀರರು ಬಿಲ್ಲು ಬಾಣಗಳನ್ನು ಹಿಡಿದು ನಿಂತಿರುವರು, ಎಡೆಗಡೆಯ ವೀರನ ಚಿತ್ರ ಒಡೆದಿವೆ. ಎರಡನೇ ಫಲಕದ ಮಧ್ಯ ಎರಡು ಅರ್ಧಗಂಬಗಳಿಂದ ಅಲಂಕೃತಗೊಂಡ ವಿಮಾನದಲ್ಲಿ ಇಬ್ಬರು ಮಡಿದ ವೀರರು ಕುಳಿತಿರುವರು. ಮೂರನೇ ಫಲಕದಲ್ಲಿ ಮೂರು ಪ್ರತ್ಯೇಕ ಭಾಗಗಳಿವೆ. ಇದರಲ್ಲಿ ಎರಡು ಅರ್ಧಗಂಬಗಳಿವೆ. ಬಲಗಡೆಯ ಭಾಗ ಒಡೆದಿದೆ. ಮಧ್ಯಭಾಗದಲ್ಲಿ ಲಿಂಗ ಹಾಗೂ ಅದರ ಎದುರು ಒಬ್ಬ ಯತಿ ಗಂಟೆ ಹಿಡಿದು ನಿಂತಿದ್ದಾನೆ. ಅದರ ಎಡಗಡೆ ಭಾಗದಲ್ಲಿ ನಂದಿ ಶಿಲ್ಪವಿದೆ.

ನಿಡಗುಂದಿಯ ಒಂದು ಆತ್ಮ ಬಲಿ ವೀರಗಲ್ಲಿನಲ್ಲಿ

19 ಎಸ್. ಐ. ಐ. xviii. ನಂ-೪೪

20 ಅದೇ, xx, ನಂ. ೮

ಎರಡು ಫಲಕಗಳಿದ್ದು ಕೆಳಗಿನ ಫಲಕದಲ್ಲಿ ಒಬ್ಬ ವ್ಯಕ್ತಿ ಬಹುಶಃ ಕುಳಿತು ಬಲಗೈಯಲ್ಲಿ ಖಡ್ಗವಿಡಿದು ಹೊಟ್ಟೆಗೆ ತಿವಿದುಕೊಳ್ಳುವ ಭಂಗಿಯಲ್ಲಿದ್ದಾನೆ, ಎಡಗೈಯಲ್ಲಿಡಿದ ವಸ್ತು ಅಸ್ಪಷ್ಟ. ಮೇಲಿನ ಎರಡನೇ ಫಲಕದಲ್ಲಿ ಒಬ್ಬ ವ್ಯಕ್ತಿ ಕುಳಿತಿರುವನು.

ಮೋಟಳ್ಳಿ, ಹಿರೆಬಿದರಿ ಗ್ರಾಮಗಳಲ್ಲಿ ಕ್ರಿ. ಶ. ೧೧ನೇ ಶತಮಾನ ಅಂತ್ಯದ ವೀರಗಲ್ಲುಗಳಿದ್ದು ಅವುಗಳ ಕೆಳಗಿನ ಭಾಗ ಮಣ್ಣಲ್ಲಿ ಹೂತಿರುವುದರಿಂದ ಹೆಚ್ಚಿನ ವಿವರಗಳು ತಿಳಿಯುವುದಿಲ್ಲ. ಮೂರನೇ ಫಲಕದಲ್ಲಿ ಲಿಂಗ, ಅರ್ಚಕ, ಮಡಿದವೀರ, ಸೂರ್ಯ, ಚಂದ್ರ, ಆಕಳು–ಕರು ಇವೆ. ಇದರ ಮೇಲೆ ಅಲ್ಪ ವಿಮಾನ ಚಿತ್ರವಿದೆ.

ಈ ಮೇಲಿನ ಶಿಲ್ಪಗಳ ಅಧ್ಯಯನದಿಂದ ಕೆಲವು ವೈಶಿಷ್ಟ್ಯಗಳನ್ನು ಗಮನಿಸಬಹುದು.

ಇಟಗಿಯ ಗಣೇಶನ ಕೈಯಲ್ಲಿ ದಂತ, ಮತ್ತು ಕಮಲವಿದ್ದು, ಇತಂಹ ವಿಗ್ರಹ ದಕ್ಷಿಣಭಾರತ ಗಣೇಶ ಶಿಲ್ಪಗಳಲ್ಲಿ ಅಪೂರ್ವದ್ದು. ಇಲ್ಲಿಯ ಮಹಿಷಾಸುರ ಮರ್ದಿನಿಯ ಕಿರೀಟಮುಕುಟದಲ್ಲೂ ಕಮಲದ ಅಲಂಕಾರ ಹಾಗೂ ಹಳಿರಿತ್ತಿಯ ಮಹಿಷಾಸುರ ಮರ್ದಿನಿಯ ಕೈಯಲ್ಲಿಡಿದ ತ್ರಿಶೂಲ ಮತ್ತು ಅಸುರನನ್ನು ಗುಡಿಮಲ್ಲಂನ ಶಿವಲಿಂಗದಲ್ಲಿ ತೋರಿಸಿದ ಅಪಸ್ಮಾರನಂತೆ ತೋರಿಸಿರುವುದು ವಿಶಿಷ್ಟದ್ದಾಗಿವೆ. ಅಬ್ಬಲೂರಿನ ವಿಷ್ಣುವಿಗ್ರಹ ಆದಿಪೂರ್ವ ಕದಂಬರ ದ್ದೆಂಬುದು ಸ್ಪಷ್ಟವಾದರೆ ಈ ನಾಡಿನ ವೈಷ್ಣವ ಧರ್ಮ ಇತಿಹಾಸ ರಚನೆಗೆ ಮಹತ್ವದ ಆಕರ ಆಗುವುದು ಮಹಿಷಾಸುರಮರ್ಧಿನಿ ಶಿಲ್ಪಗಳು ಸು. ಕ್ರಿ. ಶ ಎಂಟು–ಹತ್ತನೇ ಶತಮಾನಕ್ಕೆ ಸೇರಿದವು ಈ ಭಾಗದಲ್ಲಿ ಹಲವಾರು ಕಡೆ ದೊರೆತಿರುವುದರಿಂದ ದೇವೀ ಆರಾದನೆಯು ಈ ಕಾಲದಲ್ಲಿ ಖ್ಯಾತಿ ಹೊಂದಿತ್ತೆಂದು ತರ್ಕಿಸಬಹುದು.

ಈ ಅಧ್ಯಯನದಲ್ಲಿ ವೀರಗಲ್ಲುಗಳು ಸುಮಾರು ಕ್ರಿ. ಶ. ಎಂಟು–ಹತ್ತನೇ ಶತಮಾನದ ಮಧ್ಯಭಾಗಕ್ಕೆ ಸೇರಿದ್ದಾಗಿವೆ. ಇವುಗಳಲ್ಲಿ ಕೆಲವು ಲಕ್ಷಣಗಳನ್ನು ಗಮನಿಸಬಹುದು.

೧. ಸುಮಾರು ಕ್ರಿ. ಶ. ಎಂಟು–ಒಂಬತ್ತನೇ ಶತಮಾನದ ಹೆಚ್ಚಿನ ಸಂಖ್ಯೆಯ ವೀರಗಲ್ಲುಗಳು ಗಾತ್ರದಲ್ಲಿ ದೊಡ್ಡವು. ವೀರಗಲ್ಲಿನಲ್ಲಿ ಮೂರು ಪ್ರತ್ಯೇಕ ಫಲಕಗಳಿರುತ್ತವೆ. ಕೆಳಗಿನ ಮೊದಲನೇ ಫಲಕದಲ್ಲೂ ಯುದ್ಧ ದೃಶ್ಯ ಜತೆಯಲ್ಲಿ ವಾದ್ಯಮೇಳವಿರುವುದು ಗಮನೀಯ (ಅರಳೀಕಟ್ಟೆಯ ವೀರಗಲ್ಲು). ಯುದ್ಧ ದೃಶ್ಯದಲ್ಲಿ ಮಡಿದ ವೀರನ ಚಿತ್ರದ ಗಾತ್ರ ದೊಡ್ಡದಿರುತ್ತದೆ. ಎರಡನೇಯ ಫಲಕದಲ್ಲಿ ಮಡಿದ ವೀರನನ್ನು ಅಪ್ಸರೆಯರು ಹೆಗಲ ಮೇಲೆ ಅಥವಾ ಕೈಗಳನ್ನು ಹಿಡಿದುಕೊಂಡು ಹಾಗೂ ಅಪ್ಸರೆಯರ ಬದಿಗಳಲ್ಲಿ ಕಲಶಗಳನ್ನು ಪ್ರತ್ಯೇಕವಾಗಿ ದೊಡ್ಡದಾಗಿ ತೋರಿಸಿರುವುದು ವಿಶೇಷ. (ಸಿಡೆನೂರ ವೀರಗಲ್ಲು) ಕ್ರಿ. ಶ. ಒಂಬತ್ತು–ಹತ್ತನೇ ಶತಮಾನದ ವೀರಗಲ್ಲುಗಳಲ್ಲಿ ಗೋಗ್ರಹಣ ಸನ್ನಿವೇಶದಲ್ಲಿ ವೀರರ ಬದಿಗೆ ಸಾಮಾನ್ಯವಾಗಿ ಆಕಳುಗಳನ್ನು ಚಿತ್ರಿಸಲಾಗಿದೆ. ಮಡಿದ ವೀರನನ್ನು ಒಯ್ಯುವ ಕೆಲವು ಕುರುಹುಗಳು ಇನ್ನೊಂದು ರೀತಿಯಲ್ಲಿ ಇಂದಿಗೂ ಅಲ್ಲಲ್ಲಿ ರೂಢಿಯಲ್ಲಿರುವುದನ್ನು ಕಾಣುತ್ತೇವೆ. ಕೆಲವೊಮ್ಮೆ ಈ ದೃಶ್ಯದಲ್ಲಿ ಬದಿಗೆ ವಿಮಾನ ಹಾಗೂ ಇದರಲ್ಲಿ ಕೈಗಳನ್ನು ಹೆಗಲ ಮೇಲೆ ಹಾಕಿಕೊಂಡ ಅಥವಾ ಕೈಗಳನ್ನು ಹಿಡಿದುಕೊಂಡು ಹಾರುವ ದೃಶ್ಯವಿರುತ್ತದೆ. ಇನ್ನೊಂದು ಕೈಗಳಲ್ಲಿ ಅಪ್ಸರೆಯರು ಕಲಶಗಳನ್ನು ಹಿಡಿದಿರುತ್ತಾರೆ. ಅಪ್ಸರೆಯರ ಬದಿಗೆ ಪ್ರತ್ಯೇಕ ಕಲಶಗಳನ್ನು ತೋರಿಸಲಾಗಿದೆ. (ಸಿಡೆನೂರ ವೀರಗಲ್ಲು).

ಗೋಸಾಸಕಂಬಗಳು ಸು. ಕ್ರಿ. ಶ. ಒಂಬತ್ತು–ಹತ್ತನೇ ಶತಮಾನದ ಮಧ್ಯಭಾಗಕ್ಕೆ ಸೇರಿದ್ದು ಇವುಗಳು ಹೆಚ್ಚಾಗಿ ಗುಂಪಾಗಿ ಕಾಣುವುದನ್ನು ಇಲ್ಲಿ ಚರ್ಚಿಸಲಾಗಿದೆ. ಇವುಗಳಲ್ಲಿ ಕಾಣುವ ನೇಗಿಲ ಚಿತ್ರವನ್ನು ಸಮಕಾಲೀನ ಶಾಸನಗಳ ಹಾಗೂ ವೀರಗಲ್ಲುಗಳಲ್ಲೂ ಮತ್ತು ಸಾಮಾನ್ಯವಾಗಿ ನೇಗಿಲು ಮತ್ತು ಕಲಶಗಳನ್ನು ಈ ಕಾಲದ ಶಾಸನಗಳಲ್ಲಿ ಶುಭ ಸಂಕೇತವನ್ನಾಗಿ ಬಳಸಲಾಗಿದೆ. ಇದರಿಂದ ಈ ಗೋಸಾಸ ಕಂಬಗಳು ಈಗಾಗಲೇ ಹಲವಾರು ವಿದ್ವಾಂಸರ ಅಭಿಮತದಂತೆ ಈ ಚಿನ್ಹೆಗಳಿಂದ ಗೋಸಹಸ್ರದಾನವನ್ನು ನಿರೂಪಿಸುತ್ತವೆ ಎಂಬುದನ್ನು ಒಪ್ಪಬಹುದಾಗಿದೆ. ಆದರೆ ಒಂದು ಸ್ಥಳದಲ್ಲಿ ಈ ಗೋಸಾಸ ಕಂಬಗಳು ಒಂದೇ ಸಮೂಹದಲ್ಲಿ ಉದ್ದ ಮತ್ತು ಅಡ್ಡವಾಗಿ ಒಂದು, ಎರಡು,

ಮೂರು, ಐದು ಸಾಲುಗಳಲ್ಲಿ ಸುಮಾರು ೩ ರಿಂದ ೪ ಅಡಿ ಅಂತರದಲ್ಲಿ ನಿಲ್ಲಿಸುವ ವೈಶಿಷ್ಟ್ಯವಿತ್ತೆಂದು ಕಾಣುತ್ತದೆ. ಹಾಗೂ ಇವುಗಳು ಸಮಕಾಲೀನ ದೇವಾಲಯಗಳ ಹತ್ತಿರ ನಿಲ್ಲಿಸಿರುವುದು ಕೆಲವು ಕಡೆಗಳಲ್ಲಿ ಕಾಣಿಸುತ್ತವೆ. ಇದರಿಂದ ದೇವಾಲಯಗಳ ಹತ್ತಿರ ಗೋಸಾಸ ಕಂಬಗಳನ್ನು ನಿಲ್ಲಿಸುವ ಪದ್ಧತಿ ಇತ್ತೆಂಬ ಅಭಿಪ್ರಾಯ ಮೂಡುತ್ತದೆ.

## ಶಾಸನಗಳು

**೧) ಚಿಕ್ಕೇರೂರು ಗ್ರಾಮ (ಹಿರೆಕೆರೂರು ತಾಲೂಕ)ಮಾರುತಿ ಮಂದಿರದ ಪೂರ್ವ ದಿಕ್ಕಿನ ಕಾಲುವೆಯಲ್ಲಿ ದೊರೆತ ತೃಟಿತ ಶಾಸನ ಕಾಲ ಕ್ರಿ. ಶ. ಸು. ಎಂಟನೇ ಶತ.**

೧ ....ಪರಿಹರಾಸನ....
೨ ....ಸದ್ದೊಲ್ಲಟಕಾನ್ತದೇವರ....
೩ ಜನ್ಮದೊಮೆಕ ಅನಾ....
೪ ....ಷು ಶ್ರಿಮ ಕಾವನಾತಿದಿ ಇದ್ಮೆರಳ....
೫ ....ಪದೆ ದೋಷ ಮತಿಲಯರಂ....
೬ ... ಷನಿಸಾಸಿರ್ವ್ವರುಪೇಸು....
೭ ....ಸೇಕ ಇರ ಳುವ. ತ....
೮ ....ಮನಾದಿ....ನಾ

ಈ ಶಾಸನದಲ್ಲಿ ಕಾನ್ತದೇವರ ಉಲ್ಲೇಖವಿದೆ.

**೨ ಹಾವೇರಿ ತಾಲೂಕಿನ ದೇವಿ ಹೊಸೂರ ಗ್ರಾಮದ ಮೆಣಸಿನಕಾಯಿ ಪೇಟೆಯಲ್ಲಿ ಗಿರಣಿ ಹತ್ತಿರದ ಒಂದು ಗೋಸಾಸ ಕಂಬದ ಮೇಲಿನ ಶಾಸನ. ನೇಗಿಲ ಚಿತ್ರ ಶಾಸನ ಮೇಲಿದೆ ಕಾಲ ಕ್ರಿ. ಶ. ೯೦೮ ;**

೧ ಸ್ವಸ್ತಿ [೧] ಶಕನೃಪಕಾಲಾ
೨ ತೀತ ಸಂವಛ್ಚರಂ ಎನ್ಟುನೂರ ಮು–
೩ ವತ್ತವರನೆಯ ಭಾವಸಂವಛ್ಚರಂ
೪ ಪ್ರವರ್ತ್ತಿಸೆ ಶ್ರೀಮಾನಿನ್ದರದೇವಂ ಪ್ರ–
೫ ಥುವೀರಾಜ್ಯಂಗೆಯ್ಯೆ ದೋರಂ ಬನವಾಸಿ ಆ–
೬ ಱು ಸಾಸಿರವಂ.... ಹೊಸವುರಸಾಸಿ–
೭ ರ್ಬ್ಬರು ರಾಹೊ ಶ್ರೀಮನ್ನ ಸಂವರಕನ್ದಮ್ಮಂಸುಳಿ
೮ ಣ್ಣಿ ಗೋಸಾಸಿಯ ಮೇಣ್ಟಿಯಂಗೆಲವ
೯ ....ರಿ ಮಹದೇವಯ್ಯನ
೧೦ ಲಿಖಿತಂ

ಈ ಶಾಸನದಲ್ಲಿ ಕ್ರಿ. ಶ. ೯೦೮ ರಲ್ಲಿ ರಾಷ್ಟ್ರಕೂಟ ದೊರೆ ಮುಮ್ಮಡಿ ಇಂದ್ರ ಅರಸನ ಆಳ್ವಿಕೆಯ ಕಾಲದಲ್ಲಿ ದೋರನು ಬನವಾಸಿಯ ಆರು ಸಾವಿರ ನಾಡನ್ನು ಆಳುತ್ತಿದ್ದನು. (ಈ ಶಾಸನದ ಕೆಳಗೆ ಕಮಲ ಚಿತ್ರವಿದೆ) ಹೊಸವುರ ಸಾಸಿರ್ಬ್ಬರು ಸಂತರ ಕನ್ದಮ್ಮನು ಗೋಸಾಸಿ ಮೇಂಟಿಯನ್ನು ನಿಲ್ಲಿಸಿದರೆಂದು ಕಾಣುತ್ತದೆ. ಈ ಶಾಸನವನ್ನು ಮಹದೇವಯ್ಯನೆಂಬವನು ಬರೆದನೆಂದು ಉಕ್ತವಾಗಿದೆ. ಹೊಸವೂರ ಈಗಿನ ಹೆಸರು ದೇವಿ ಹೊಸೂರೆಂದು ಗುರ್ತಿಸಬಹುದು.

೩) ಅದೇ ಊರಿನ ಅದೇ ಸ್ಥಳದ ಇನ್ನೊಂದು ಕಂಬ

ಭಾಗ–೧

೧ ಪಣಕೊಟ್ಟು ಕೊಂಡ್ಡಿ
೨ ಇಳನ ಹಿಟೊ
೩ ನ್ದಲಿ ಯನ
೪ ....ರಿಚಿ ಲೋಕ
೫ ... ವೊಲ

ಭಾಗ ೨

೧ ಶ್ರೀ ಅಕಾಲವರ್ಷ ಪೃಥಿವೀರಾಜ್ಯಂಗೆಯ್ಯೆಗ
೨ ಹಸಾಸಿರ್ವ್ವರು ರಾಹೊ ಶಕಕಾಳಾ ತೀತಸಂ
೩ ದ ಎಣ್ನೂನೂಱ ಮೂವತ್ತೆರಡನೆಯ ಸಂವ
೪ ತಿಸೆ ...ಣಕೆಯಮ....
೫ ....ಮೆಟ್ಟ್ದಲಾತ
೬ ಗಂ....ದ ಸುವರ್ಣ್ಣ ಗೋಸಾನಮೇ
೭ ಣ್ಪೆ ಪೆಸರು ಸೌಮ್ಯ ಮು....ಲ್ಲಕೆಲ್ಲ
೮ ರಾಂ ಭಂಗಮು
೯ ವುಣಿ ಸಾಸಿ ಮಾಡಿದೊ

ಈ ಶಾಸನದಲ್ಲಿ ಕ್ರಿ. ಶ. ೯೧೪ ರಲ್ಲಿ ರಾಷ್ಟ್ರಕೂಟ ದೊರೆ ಅಕಾಲವರ್ಷನ ಆಳ್ವಿಕೆಯಲ್ಲಿ ಗೋಸಾಸಿಮೇಂಟ ನಿಲ್ಲಿಸಿದರೆಂದು ಹೇಳಲಾಗಿದೆ.

೪ ಅದೇ ಸ್ಥಳದಲ್ಲಿ ಮೂರನೆಯ ಶಾಸನ

ಭಾಗ–೧

೧ © ಸ್ವಸ್ತಿ ಶ್ರೀ ಅಮೋಘವರ್ಷ ಪೃತುವೀ–
೨ ವಲ್ಲಭ ಮಹಾರಾಜಾಧಿರಾಜ
೩ ಪರಮೇಶ್ವರ ಪರಮಭಟ್ಟಾರಕ–
೪ ಪೃಥುವೀರಾಜ್ಯಂಗೆಯ್ಯು ಸ್ವಸ್ತಿ ಸಮ
೫ ದಿಗತಪಞ್ಚ ಮಹಾ ಶಬ್ಧ ಮಹಾ
೬ ಸಾಮನ್ತಾಧಿಪತಿ ಪುಸಿ. ನಿಪ್ಪ–
೭ ಸರಭಲ್ಲ ಟನಿಡಿಪಯ್ಯರದಿ
೮ ಪೊಣನ್ದತಯ್ಯ ಬನವಾಸಿ
೯ ಸಾಸಿರಮಹಾಚತುರ್ವ್ವರ ಚಞ್ಚದಾಗಂ
೧೦ ಂರಗ ಪೊಸವೊರ ಸಾಸಿರ್ಬ್ಬರಾಮು
೧೧ ....ಲಗಲ ನ ಪಾಲಾನ ಸ್ವರ್ಣ್ಣ
೧೨ ಗೋಸಾಸಿಯ ಮೆಣ್ಪೆ

೧ ....ಣ್ಣ್ರವಜರ

## ವಿವರ

ಈ ಶಾಸನ ಎರಡು ಭಾಗದಲ್ಲಿದೆ. ಮೊದಲ ಭಾಗದಲ್ಲಿ ರಾಷ್ಟ್ರಕೂಟ ದೊರೆ ಅಮೋಘ ವರ್ಷನ ಆಳ್ವಿಕೆಯ ಕಾಲದಲ್ಲಿ ಮಹಾಸಾಮಾನ್ತ, ಸರ ಭಲ್ಲಟ, ಇಳಿಪಯ್ಯ ಮೊಣನ್ದತಯ್ಯ ಇತ್ಯಾದಿ ಮತ್ತು ಬನವಾಸಿ ಸಾವಿರ ನಾಡಿನ ಪೊಸವೂರ ಸಾವಿರ ಮಹಾಜನರು ಸ್ವರ್ಣದಾನವನ್ನೂ ಹಾಗೂ ಗೋಸಾಸಿ ಮೇಂಟಿಯನ್ನು ನಿಲ್ಲಿಸಿದರೆಂದು ಉಕ್ತವಾಗಿದೆ. ಪೊಸವೂರ ಅಂದರೆ ಈಗಿನ ದೇವಿ ಹೊಸೂರು ಗ್ರಾಮದ ಹೆಸರಾಗಿದೆ.

(ಕನ್ನಡ ಸಂಶೋಧನಾ ಸಂಸ್ಥೆಯ ವತಿಯಿಂದ ಪ್ರವಾಸ ಮಾಡಲು ನೆರವು ನೀಡಿದ ಕರ್ನಾಟಕ ವಿಶ್ವ ವಿದ್ಯಾಲಯದ ಕುಲಪತಿಗಳಾದ ರಾಮೇಗೌಡರಿಗೆ, ಕುಲಸಚಿವ ಕನಿರಾಮ್, ಡಾ|| ಅ. ಸುಂದರ, ಇಟಗಿಯ ದೈವಸ್ಥರಿಗೆ, ಹಿರೇಕೆರೂರು ತಾಲೂಕಿನ ಮತ್ತಿ ಹಳ್ಳಿಯ ಸೋಮೇಶ್ವರ ದೇವಾಲಯದ ಕಮಿಟಿಯವರಿಗೆ ಕೃತಜ್ಞತೆಗಳು ಸಲ್ಲುತ್ತವೆ.

ಕೃ.ಸು. ಸುಬ್ರಹ್ಮಣ್ಯ*

# ಮೈಸೂರು ಕೋಟೆ-ನಗರ

ಹಳೆಯ ಮೈಸೂರು ರಾಜ್ಯದ ರಾಜಧಾನಿ ಮೈಸೂರಿನ ಕೋಟೆ ಸುವರ್ಮಾರು ೪೦೦ ವರ್ಷಗಳಿಗಿಂತಲೂ ಪ್ರಾಚೀನವಾದುದು.

ಪ್ರಾರಂಭದಲ್ಲಿ ಮೈಸೂರಿನ ಕೋಟೆ ಜೇಡಿ ಮಣ್ಣು, ಇಟ್ಟಿಗೆ ಮತ್ತು ಕಲ್ಲು ಚೂರುಗಳ ಮಿಶ್ರಣದಿಂದ ಕಟ್ಟಿದ ಸಾಧಾರಣ ರಕ್ಷಣಾ ಗೋಡೆಯಂತಿತ್ತು. ೧೫೭೪ರ ವೇಳೆಗೆ ನಾಲ್ಕನೇಯ ಚಾಮರಾಜರು ನಗರವನ್ನು ಸುತ್ತುವರಿದಿದ್ದ ಕೋಟೆಗೊಂದು ರೂಪ ಕೊಟ್ಟುದಲ್ಲದೆ ಮೈಸೂರಿನ ಕೆರೆಯನ್ನು ('ಚೋಳಕೆರೆ') ಬತ್ತಿಸಿದಾಗ ಅಲ್ಲಿ ಸಿಕ್ಕಿದ ಲಿಂಗವನ್ನು ತಂದು ತ್ರಿನಯನೇಶ್ವರ ದೇವಾಲಯವನ್ನು ಕಟ್ಟಿಸಿದರು.

ವಾಸ್ತವವಾಗಿ ಕೋಟೆಯನ್ನು ಬಲಪಡಿಸಿ ವಿಸ್ತರಿಸಿದವರು ರಣಧೀರ ಕಂಠೀರವ ನರಸರಾಜರು. ೧೬೪೨–೪೫ರ ಸುಮಾರಿನಲ್ಲಿ, ನಳಸಂವತ್ಸರದಲ್ಲಿ ಕೋಟೆಯೊಂದನ್ನೇ ಅಲ್ಲದೆ ಅದರೊಳಗಿದ್ದ ಅರಮನೆಯನ್ನೂ ವಿಸ್ತರಿಸಿ, ಜಂತದ ತೊಟ್ಟಿ, ಸಮ್ಮುಖದ ತೊಟ್ಟಿ, ಸೌಂದರ್ಯ ವಿಲಾಸ ತೊಟ್ಟಿ, ನಾಮತೀರ್ಥದ ತೊಟ್ಟಿಗಳೆಂಬ ಹರವುಗಳನ್ನೂ, ಅರಮನೆಯ ಒಳ ಬಾಗಿಲ ಬಳಿ ಸಾಲಗೇರಿಗಳನ್ನೂ ನಿರ್ಮಾಣ ಮಾಡಿಸಿದರು.

ಅಂದಿನ ಮೈಸೂರು ಕೋಟೆ ಉದ್ದ ಹೆಚ್ಚಿರುವ ದೀರ್ಘ ಚತುರಸ್ರ ಆಕಾರದಲ್ಲಿ ಪೂರ್ವ–ಪಶ್ಚಿಮ ಮತ್ತು ಉತ್ತರಗಳಲ್ಲಿ ೧೪೫೦ ಅಡಿಗಳು ಹಾಗೂ ದಕ್ಷಿಣದ ಕಡೆ ೧೩೦೦ ಅಡಿಗಳಷ್ಟಿತ್ತೆಂದು ರಾಜವಂಶಾವಳಿ ತಿಳಿಸುತ್ತದೆ. ಕೋಟೆಯ ಪೂರ್ವದಿಕ್ಕಿನಲ್ಲಿರು ತ್ರಿನಯನೇಶ್ವರ ದೇವಾಲಯ ಅಂದು ಕೋಟೆಯ ಹೊರಗಿತ್ತು. ಕಂಠೀರವ ನರಸರಾಜರು ಕೋಟೆಯನ್ನು ವಿಸ್ತರಿಸಿದಾಗ ಈ ದೇವಾಲಯವನ್ನು ಕೋಟೆಯೊಳಗೆ ಸೇರಿಸಿಕೊಂಡು ಅದನ್ನು ಮತ್ತೆ ೧೦೦ ಅಡಿಗಳಷ್ಟು ವಿಸ್ತರಿಸಿದರು. ಕೋಟೆಯ ಹೊರಾವರಣಕ್ಕೆ ಕಲ್ಲಿನ ಜೋಡಣೆ ಮಾಡಿಸಿ, ಅದಕ್ಕೊಂದು ಮೆರುಗು ಕೊಟ್ಟರು. ಕೋಟೆಗೆ ೧೨ ಕೊತ್ತಲಗಳನ್ನು ಕಟ್ಟಿಸಿ, ಆ ಪೈಕಿ ೧೦ ಕೊತ್ತಲಗಳ ಮೇಲೆ ವಿವಿಧಾಕಾರದ ಫಿರಂಗಿಗಳನ್ನು ಇಡಿಸಿದ್ದರು.

ಕೋಟೆಯ ಪಶ್ಚಿಮದಲ್ಲಿ ದಕ್ಷಿಣೋತ್ತರ ಮಧ್ಯ ಬಿಂದುವು ಒಂದು ಸೇರುವ ಕಡೆ ಅರಮನೆಯನ್ನು ಪುನಾರಚಿಸಿ ವಿಸ್ತರಿಸಿದರು. ಕೋಟೆಯ ಒಳಭಾಗದಲ್ಲಿ ಸುತ್ತಲೂ ರಸ್ತೆ ಮಾಡಿಸಿ ಅಲ್ಲಲ್ಲಿ ಕೋಟೆ ಹತ್ತಲು ಮೆಟ್ಟಲುಗಳನ್ನು ಕಲ್ಲಿನಲ್ಲಿ ಕಟ್ಟಿಸಿದ್ದರು. ಅರಮನೆಗೆ ಎದುರಾಗಿ ಪೂರ್ವ ಪಶ್ಚಿಮವಾಗಿ ಒಂದು ಮಾರ್ಗ ಮತ್ತು ಉತ್ತರ ದಕ್ಷಿಣ ಮಹಾ ದ್ವಾರಗಳನ್ನು ಸಂಧಿಸುವ ಮಾರ್ಗವನ್ನೂ ಮಾಡಿಸಿದ್ದರು. ಕೋಟೆಯೊಳಗೆ ಒತ್ತಾಗಿ ಒಂದಕ್ಕೊಂದು ಅಂಟಿಕೊಂಡಂತೆ ಮನೆಗಳೂ, ದಕ್ಷಿಣೋತ್ತರವಾಗಿ ಹಬ್ಬಿದ್ದ ಕಿರಿದಾದ ದಾರಿಗಳೂ ಇದ್ದವು. ಈಗ ದೊಡ್ಡ ಕೆರೆಯೆಂದು ಕರೆಯುವ ದೇವರಾಯನ ಕೆರೆಯ ಕೋಡಿಯ ಬಳಿ ಶೃಂಗಾರ ತೋಟವನ್ನೂ ತ್ರಿನಯನೇಶ್ವರ ದೇವಾಲಯಕ್ಕೆ

---

* ಕೃ.ಸು. ಸುಬ್ರಹ್ಮಣ್ಯ, ನಂ. ೫ ಒಂದನೆಯ ಅಡ್ಡರಸ್ತೆ, ಶ್ರೀರಾಮಪುರ, ಬೆಂಗಳೂರು–೫೬೦ ೦೨೧

ಸೇರಿದಂತೆ ಈಶಾನ್ಯದಲ್ಲಿ ಕೊಳವನ್ನೂ ನಿರ್ಮಿಸಿದ್ದರು. ಕೋಟೆಯೊಳಗಡೆ ಈಗಲೂ ಇರುವ ಪುರಾತನ ಲಕ್ಷ್ಮೀರಮಣಸ್ವಾಮಿ ದೇವಾಲಯಕ್ಕೆ ಹೊಂದಿಕೊಂಡಿದ್ದಂತೆ ಅರ್ಚಕರ ಮತ್ತಿತರರ ಮನೆಗಳಿದ್ದವು. ಇದೇ ದೇವಾಲಯದ ಹಿಂಭಾಗದಲ್ಲಿರುವ ಕಲ್ಯಾಣ ಮಂಟಪವನ್ನು ಕಟ್ಟಿಸಿದವರೂ ಕಂಠೀರವ ಅರಸರೇ. ತ್ರಿನಯನೇಶ್ವರ ದೇವಾಲಯದಲ್ಲಿರುವ ೨೭ ಅಂಕಣದ ಕಲ್ಲು ಮಂಟಪ ದೊಡ್ಡ ದೇವರಾಜರ ಕಾಲದ್ದು. ನಗರದ ನೀರಿನ ಸಮಸ್ಯೆಯನ್ನು ಪರಿಹರಿಸುವ ಉದ್ದೇಶದಿಂದ ಕಂಠೀರವ ನರಸರಾಜರು ಕಟ್ಟಿಸಿದ ಕೆರೆಯನ್ನೇ ವಿಸ್ತರಿಸಿ, ಸೋಪಾನ ಕಟ್ಟೆಯನ್ನು ನಿರ್ಮಿಸಿ ದೊಡ್ಡ ಕೆರೆಯನ್ನು ಕಟ್ಟಿಸಿದರು. ನರಸೀಪುರದ ರಸ್ತೆಯ ದಿಬ್ಬ, ಚಾಮುಂಡಿ ಬೆಟ್ಟದ ಇಳಿಜಾರು, ಬಸವನ ತಿಟ್ಟಿನ ಸುತ್ತಮುತ್ತ ಬಿದ್ದ ಮಳೆಯ ನೀರೆಲ್ಲವೂ ವ್ಯವಸ್ಥಿತವಾಗಿ ಕಾರಂಜಿ ಕೆರೆಗೆ ಹರಿಯುವಂತೆ ಮಾಡಿ, ಹೆಚ್ಚಿನ ನೀರು ದೊಡ್ಡ ಕೆರೆಗೂ, ಸುಟ್ಟ ಮಣ್ಣಿನ ಕೊಳವೆಗಳ ಮೂಲಕ ಕೋಟೆಯೊಳಕ್ಕೂ ನೀರು ಬರುವಂತೆಯೂ, ತನ್ಮೂಲಕ ಅಂತರ್ಜಲ ಯಥೇಚ್ಛವಾಗಿರುವಂತೆಯೂ ವ್ಯವಸ್ಥೆ ಮಾಡಿದರು. ಅಂದವರು ನಾಮಕರಣ ಮಾಡಿದ್ದ "ದೇವಾಂಬುಧಿ-"ಇಂದಿನ ದೊಡ್ಡ ಕೆರೆಯೆಂದೇ ನಿರ್ದೇಶಿಸಲಾಗುತ್ತಿದೆ.

ಪ್ರಾರಂಭದಿಂದಲೂ ಮೈಸೂರಿನ ಕೋಟೆಗೆ ಉತ್ತರ-ದಕ್ಷಿಣಗಳಲ್ಲಿ ಎರಡು ಮಹಾದ್ವಾರಗಳೂ, ಪೂರ್ವದಲ್ಲಿ ಒಂದು, ಪಶ್ಚಿಮದಲ್ಲಿ ಎರಡುದಿಡ್ಡೀ ಬಾಗಿಲುಗಳಿದ್ದುವು. ಕೋಟೆಯ ಸುತ್ತ ಕಂದಕವಿದ್ದು ಸದಾ ನೀರಿನಿಂದ ತುಂಬಿರುತ್ತಿತ್ತು.

ಮೈಸೂರಿನ ಮೂರನೆಯ ಯುದ್ಧಾನಂತರ (ಸುಮಾರು ೧೭೯೩–೯೪) ಕೊಯಮುತ್ತೂರು ಮತ್ತು ಕೊಡಗುಗಳ ಕಡೆಯಿಂದ ಇಂಗ್ಲೀಷರೇನಾದರೂ ದಂಡೆತ್ತಿಬಂದಲ್ಲಿ ಅವರಿಗೆ ಠಾಣ್ಯ ಹೂಡಲು, ಅಡಗಿಕೊಳ್ಳಲು ನೆಲೆಸಿಗಬಾರದೆಂದು ; ಟೀಪು ಮೈಸೂರು ಕೋಟೆಯನ್ನು ಒಡೆಸಿ ಹಾಕಿದ. ನೀರಿನ ಆಸರೆ ಇರಬಾರದೆಂದು ದೇವರಾಯ ಕೆರೆಯನ್ನು ಹಾಳುಗೆಡವಿಸಿದ.

ಹಳೇಕೋಟೆಗೆ ಪೂರ್ವದಲ್ಲಿ ಬಸವನ ತಿಟ್ಟಿನ ಮೇಲೆ ೧೭೯೭ರ ಸುಮಾರಿನಲ್ಲಿ ಚಿಕ್ಕ ಕೋಟೆಯೊಂದನ್ನು ಕಟ್ಟಿಸಿ ಅದಕ್ಕೆ "ನಜರ್ ಬಾದ್" ಎಂದು ಹೆಸರಿಟ್ಟ. ಮೈಸೂರಿನ ಕೋಟೆಯೊಳಗಿದ್ದ ಅರಮನೆಯನ್ನೂ ಪ್ರಮುಖರ ಮನೆಗಳನ್ನೂ ನೆಲಸಮ ಮಾಡಿಸಿದನಾದರೂ ಕೋಟೆಯ ಒಳಗಿದ್ದ ಲಕ್ಷ್ಮೀರಮಣಸ್ವಾಮಿ, ತ್ರಿನಯನೇಶ್ವರ ಮತ್ತಿತರ ದೇವಾಲಯಗಳನ್ನು ಭಂಗಗೊಳಿಸಲಿಲ್ಲ. ಹಳೇ ಕೋಟೆಗೆ ಉತ್ತರದಲ್ಲಿ ಸುಮಾರು ಎರಡುವರೆ ಮೈಲಿ ದೂರದಲ್ಲಿ ಸುಬೇದಾರ್ ವೀರಣ್ಣನ ತೋಟದ ಬಳಿ ಹೊಸ ನಗರವನ್ನು ನಿರ್ಮಾಣ ಮಾಡಿಸಿದ.

ಟೀಪುವಿನ ಪತನಾನಂತರ ಸಿದ್ಧಾರ್ಥಿನಾಮ ಸಂವತ್ಸರ ಜ್ಯೇಷ್ಠ ಬಹುಳ ತ್ರಯೋದಶಿ, ೧೭೯೯ನೇ ಜೂನ್ ೩೦ ರಂದು ಮುಮ್ಮಡಿ ಕೃಷ್ಣರಾಜರ ಪಟ್ಟಾಭಿಷೇಕವನ್ನು ಮೈಸೂರು ಅರಸರ ಪ್ರಾಚೀನ ರಾಜಧಾನಿಯಲ್ಲಿಯೇ ನಡೆಸಬೇಕೆಂಬ ಮಹಾರಾಣಿ ಲಕ್ಷಮ್ಮಣ್ಣಿಯವರ ಅಪೇಕ್ಷೆಯಂತೆ ಕೋಟೆಯೊಳಗಿರುವ ಲಕ್ಷ್ಮೀರಮಣ ದೇವಾಲಯದ ಮಂಟಪವೊಂದರಲ್ಲಿಯೇ ವಿಧ್ಯುಕ್ತವಾಗಿ ಪಟ್ಟಾಭಿಷೇಕೋತ್ಸವವನ್ನು ನೆರವೇರಿಸಲಾಯಿತು. ನಜರ್ ಬಾದಿನಲ್ಲಿ ತಾತ್ಕಾಲಿಕವಾಗಿ ನಿರ್ಮಿಸಲಾಗಿದ್ದ ಸಭಾಮಂಟಪದಲ್ಲಿ ರಾಜಸಭೆಯನ್ನು ಸಮಾವೇಶಗೊಳಿಸಲಾಯಿತು.

ಮುಮ್ಮಡಿಯವರು ಪಟ್ಟಾಭಿಷಿಕ್ತರಾದ ಎರಡು ವರ್ಷಗಳ ಒಳಗಾಗಿ ಮೈಸೂರಿನ ಕೋಟೆಯನ್ನು ಅ ಹಿಂದಿನ ಪಾಯದ ಮೇಲೆಯೇ ಪುನಾರಚಿಸಲಾಯಿತು. ಅರಮನೆ ಮತ್ತು ಕೋಟೆಯೊಳಗಿನ ನಗರದ ನಿರ್ಮಾಣ ಕಾರ್ಯ ತ್ವರಿತ ಗತಿಯಿಂದ ಸಾಗಿತು. ಪ್ರಾಚೀನ ಅರಮನೆ ಇದ್ದ ಸ್ಥಳದಲ್ಲಿಯೇ ಹೊಸ ಅರಮನೆಯನ್ನೂ, ಅದಕ್ಕೆ ಸಮೀಪವೇ ಅರಮನೆಗೆ ಸೇರಿದಂತೆ ಕಛೇರಿಗಳನ್ನೂ ನಿರ್ಮಿಸಲಾಯಿತು. ಅರಮನೆಗೆ ದಕ್ಷಿಣದಲ್ಲಿ ಒಂದು ಚಿಕ್ಕ ಉದ್ಯಾನವನವನ್ನೂ ಕೊಳವನ್ನೂ ನಿರ್ಮಿಸಲಾಯಿತು. ಕೋಟೆಯೊಳಗೆ ಅಳಿದು ಉಳಿದಿದ್ದ ಮನೆಗಳ ನವೀಕರಣ, ಹೊಸ ಮನೆಗಳ ನಿರ್ಮಾಣ ಕಾರ್ಯ ಪ್ರಾರಂಭವಾಯಿತು.

ಕೋಟೆಯ ಉತ್ತರದ ಕಡೆ ಇಂದು ಆಂಜನೇಯ ದೇವಾಲಯವಿರುವ ಭಾಗದಲ್ಲಿ ಗೋಳಾಕಾರವಾಗಿ ಮುಂಚಾಚಿದ್ದ ಪ್ರವೇಶ ದ್ವಾರವಿದ್ದು ಮಕರಾಕಾರ ವಾಗಿತ್ತು. ಅಂದರೆ ಕೋಟೆಯ ದ್ವಾರದಿಂದ ಸ್ವಲ್ಪ ಬಳಸಿಕೊಂಡು ಒಳ ಪ್ರವೇಶ ಮಾಡಬೇಕಾಗಿತ್ತು. ನೇರವಾಗಿ ಪ್ರವೇಶಿಸುವಂತಿರಲಿಲ್ಲ. ದಕ್ಷಿಣದ ಕೋಟೆಯ ಬಾಗಿಲೂ ಬಹುತೇಕ ಉತ್ತರ ಮಹಾದ್ವಾರವನ್ನೇ ಹೋಲುತ್ತಿತ್ತು. ಎರಡೂ ಬಾಗಿಲುಗಳ ಇಬ್ಬದಿಗಳಲ್ಲೂ ಸುಭದ್ರವಾದ ಕಾವಲು ಗೂಡುಗಳಿದ್ದು ಕೋಟೆಯ ಬಾಗಿಲುಗಳ ಮೇಲೆ ಗಾರೆ ಇಟ್ಟಿಗೆಯಿಂದ ಕಟ್ಟಿದ ಗೋಪುರವಿದ್ದು ಕಳಶಗಳಿಂದ ಕೂಡಿತ್ತು. ಪೂರ್ವದ ಕಡೆಯೂ ಮುಂಚಾಚಿದ್ದ ಕೋಟೆಯ ಬಹುತೇಕ ಭಾಗವನ್ನು ಒಡೆದು ಹಾಕಿ ಇಂದಿನ ನವೀನ ಮಾದರಿಯ ಮಹಾದ್ವಾರ ನಿರ್ಮಿಸಿದ್ದಾರೆ. ವಾಸ್ತವವಾಗಿ ಈ ಭಾಗದಲ್ಲಿ ಕೋಟೆ ಮುಂಚಾಚಿದ್ದು ಇಂದಿನ ನೀಲಗಿರಿ ರಸ್ತೆಯವರೆವಿಗೂ ವಿಸ್ತರಿಸಿಕೊಂಡಿದ್ದು ದಿಡ್ಡೀ ಬಾಗಿಲಿನಿಂದ ಕೂಡಿತ್ತು. ಅದರ ಎರಡೂ ಕಡೆ ಬಲವಾದ ಕಾವಲು ಗೂಡುಗಳು ಉಪ್ಪರಿಗೆಯಿಂದ ಕೂಡಿತ್ತು. ಈ ದಿಡ್ಡೀ ಬಾಗಿಲಿಗೆ ಈಶಾನ್ಯದಲ್ಲಿ ದೊಡ್ಡಗರಡೀ ಮನೆಯೂ, ನೈರುತ್ಯದಲ್ಲಿ ಅರಮನೆಗೆ ಸಮೀಪ ಮತ್ತೊಂದು ಗರಡೀ ಮನೆಯೂ ಇದ್ದಿತು. ಪೂರ್ವದ ದಿಡ್ಡೀ ಬಾಗಿಲನ್ನು ದಾಟುತ್ತಿದ್ದಂತೆಯೇ ದೊಡ್ಡ ಕೆರೆಯ ಸೋಪಾನ ಕಟ್ಟೆ ಸಿಗುತ್ತಿತ್ತು. ಕಟ್ಟೆಯ ಆಗ್ನೇಯ ಭಾಗದಲ್ಲಿ ಕೋಟೆಗೆ ಸೇರಿದಂತೆ ಆಂಜನೇಯನ ಪುಟ್ಟಗುಡಿಯಿತ್ತು.

### ಕೋಟೆಯೊಳಗಿನ ನಗರ ರಚನೆ

ಕೋಟೆಯ ಉತ್ತರ ಮಹಾದ್ವಾರದಿಂದ ದಕ್ಷಿಣ ದ್ವಾರಕ್ಕಿದ್ದ ಬೀದಿಯೇ ಪ್ರಧಾನ ರಾಜಮಾರ್ಗ ಅದರ ಎರಡೂ ಕಡೆ ಅರ್ಧ ದೂರದವರೆವಿಗೆ ಸುವಾಸನೆಯನ್ನು ಬೀರುತ್ತಿದ್ದ ಹೂವಿನ ಮತ್ತು ಸುಗಂಧ ದ್ರವ್ಯಗಳನ್ನು ಮಾರುತ್ತಿದ್ದ ಅಂಗಡಿಗಳ ಸಾಲು. ತ್ರಿಣೇಶ್ವರ ದೇವಾಲಯದ ಬೀದಿಯ ಪ್ರಾರಂಭದಲ್ಲಿ, ಅರಮನೆಗೆ ಅಭಿಮುಖವಾಗಿ, ಉತ್ತರ ದಕ್ಷಿಣ ರಸ್ತೆ ಸೇರುವ ಕಡೆ ಉಪ್ಪರಿಗೆಯ ಕಟ್ಟಡವಿದ್ದು ಅದನ್ನು "ನಗಾರಿಖಾನೆ" ಎಂದು ಕರೆಯುತ್ತಿದ್ದರು. ಪ್ರತೀದಿನ ಪ್ರಾತಃಕಾಲ, ಸಂಜೆ ಮತ್ತು ಕ್ಲುಪ್ತಕಾಲಗಳಲ್ಲಿ ನಗಾರಿಯನ್ನು ಬಾರಿಸಲಾಗುತ್ತಿತ್ತು.

ಈ ನಗಾರಿ ಖಾನೆಗೂ ಪೂರ್ವದ ದಿಡ್ಡೀ ಬಾಗಿಲಿಗೂ ಮಧ್ಯೆ ಇದ್ದ ನಗರ ಭಾಗದಲ್ಲಿ ಉತ್ತರದಿಂದ ದಕ್ಷಿಣಕ್ಕೆ ನಾಲ್ಕು ರಸ್ತೆಗಳಿದ್ದು ಎರಡೂ ಕಡೆ ಒಂದಕ್ಕೊಂದು ಅಂಟಿಕೊಂಡಂತೆ ಮನೆಗಳಿದ್ದುವು. ಕೋಟೆಯ ಸುತ್ತಲೂ ಆಳವಾದ ಕಂದಕವಿದ್ದು ಕೋಟೆಯೊಳಗೆ ಪ್ರವೇಶಿಸಲು ಸರಪಣಿಗಳಿಂದ ಸೆಳೆದು ಕೊಳ್ಳಬಹುದಾದ ಮರದ ಸೇತುವೆಗಳಿದ್ದುವು. ಈ ಸೇತುವೆಗಳ ಮೂಲಕವೇ (Draw Bridges)ನಗರ ಪ್ರವೇಶ ಮಾಡಬೇಕಾಗಿತ್ತು.

ಕೋಟೆಯೊಳಗೆ ಚಿಕ್ಕವೂ ದೊಡ್ಡವೂ ಸೇರಿ ಸುಮಾರು ೩೦೦೦ ಮನೆಗಳಿದ್ದುವೆಂದು ಅಂದಾಜು. ಅರಮನೆಯ ಭಾಗದಲ್ಲೂ ಉತ್ತರ ದಕ್ಷಿಣಗಳ ಎರಡೂ ಕಡೆ ಮನೆಗಳೂ ಕಛೇರಿಗಳೂ ಇದ್ದುವು. ಅರಮನೆಗೆ ಸೇರಿದಂತೆ ಖಜಾನೆ, ಅಂಚೆ ಕಛೇರಿ, ಕೊತ್ವಾಲನ ಕಛೇರಿ, ಗಿಡ್ಡಂಗಿ, ಅರಮನೆಗೆ ದೀಪವನ್ನು ಸರಬರಾಜು ಮಾಡುತ್ತಿದ್ದ ಇಂಜಿನ್ ಹೌಸ್ ಮುಂತಾದುವುಗಳಿದ್ದವು. ಈ ಭಾಗದಲ್ಲಿನ ಬಹುತೇಕ ರಸ್ತೆಗಳು ಕಿರಿದೂ ಅಂಕು ಡೊಂಕೂ ಆಗಿದ್ದವು.

ಕೋಟೆಯೊಳಗೆ ಆಶ್ರಯ ಪಡೆದವರಲ್ಲಿ ಪ್ರಧಾನವಾಗಿದ್ದ ಮನೆಗಳೆಂದರೆ ತ್ರಿನಯನೇಶ್ವರ ರಸ್ತೆಯ ಉತ್ತರದ ಕಡೆ ದೇವ ಪಾರ್ಥಿವರ ಮನೆ, ನಂಜುಂಡ ಪಂಡಿತರು, ದೇವರಾಜೇ ಅರಸು, ಕೃಷ್ಣೇ ಅರಸು, ನಂಜುಂಡೇ ಅರಸು, ವೀಣೆ ಶೇಷಣ್ಣನವರ ಮನೆಗಳು ಕೋಟೆಯ ದಕ್ಷಿಣ ಭಾಗದಲ್ಲಿ ವರಾಹಸ್ವಾಮಿ ದೇವಾಲಯಕ್ಕೆ ತಾಗಿದಂತೆ ಅದರ ಹಿಂಭಾಗದಲ್ಲಿ ಹೊಸ ಪಂಡಿತರ ಮನೆ ಎರಡನೆಯ ರಸ್ತೆಯ ಮೂಲೆಯಲ್ಲಿ ಪೂರ್ವಾಭಿಮುಖವಾಗಿ ದೇವುಡುನರಸಿಂಹ ಶಾಸ್ತ್ರಿಗಳ ತಂದೆ ಶ್ರೀ ಕೃಷ್ಣಶಾಸ್ತ್ರಿಗಳ ಮನೆ. ಅದರ ಪಕ್ಕದಲ್ಲಿ ನನ್ನ ಮಾತಾಮಹರಾದ ಗಂಜಾಂಗುಂಡಪ್ಪನವರ ಮನೆ. ಈ ಮನೆಗೆ ಎರಡು ತೊಟ್ಟಿಗಳಿದ್ದುವಂತೆ. ಶ್ರೀ ಕೃಷ್ಣ ಶಾಸ್ತ್ರಿಗಳ ಮನೆಯ ಮಹಡಿಯ ಮೇಲೆ ಪ್ರಖ್ಯಾತ ವರದಾಚಾರ್ಯರ ನಾಟಕ ಕಂಪೆನಿಯಲ್ಲಿ ಸ್ತ್ರೀಪಾತ್ರ

ಮಾಡುತ್ತಿದ್ದ ಬೋಧರಾಯರು ತಮ್ಮ ಚಿಕ್ಕಮ್ಮ ನರಸೂಬಾಯಿ, ಸರಸ್ವತೀಬಾಯಿ, ಮಗಳು ಕೃಷ್ಣಾರೊಡನೆ ವಾಸವಾಗಿದ್ದರು. ಈ ಸಾಲು ಮತ್ತು ಮುಂದಲ ಸಾಲುಗಳಲ್ಲಿ ಗರಳಪುರಿ ಶಾಸ್ತ್ರಿಗಳು, ಗುಂಡ್ಲು ಪಂಡಿತರು, ವ್ಯಾಸಾಚಾರ್ಯರು, ಗುರುಮೂರ್ತಿ ಪಂಡಿತರು ಮತ್ತು ಜಿ.ಎಸ್. ಸುಬ್ಬರಾಯರು ವಾಸ ಮಾಡುತ್ತಿದ್ದರು. ತ್ರಿನಯನೇಶ್ವರ ದೇವಾಲಯಕ್ಕೆ ಅಭಿಮುಖವಾಗಿದ್ದ ಎರಡನೆಯ ರಸ್ತೆಯಲ್ಲಿ ಪಂಚಾಂಗ ಕರ್ತ ಕ್ಯಾತನಹಳ್ಳಿ ಜೋಯಿಸರು, ಆಸ್ಥಾನ ಜೋಯಿಸರಾದ ಕೊರಟಗೆರೆ ಕೃಷ್ಣಾ ಜೋಯಿಸರು, ಬಕ್ಷಿ ಭೀಮರಾಯರು ಮುಂತಾದವರ ಮನೆಗಳಿದ್ದವು.

ದೊಡ್ಡ ಕೆರೆಯ ನೈಋತ್ಯಕ್ಕೆ ಮಧುವನದ ಸಮೀಪದಲ್ಲಿ ಪೂರ್ಣಯ್ಯನವರ ಛತ್ರವಿದ್ದು ಅದರ ಪಾರುಪತ್ತೆಗಾರರಾಗಿದ್ದ ಪಂತೋಜಿ ಲಕ್ಷ್ಮಣರಾಯರ ಮನೆ ಕೋಟೆಯೊಳಗೆ ಗರಡೀ ಮನೆಗೆ ಸಮೀಪವಿತ್ತು. ಅನಂತರ ಅವರು ಸುಣ್ಣಕಲ್ ಪೇಟೆಯ ಬಳಿ ಹಳೇ ಅಗ್ರಹಾರಕ್ಕೆ ಸ್ಥಳಾಂತರವಾದರು.

## ಕಾಣೆಯಾದ ನಗರ

೧೮೯೮ ರಿಂದ ಪ್ಲೇಗ್ ಉಪದ್ರವ ಪ್ರಾರಂಭವಾಗಿ ಅಪಾರ ಜೀವ ಹಾನಿಯಾಯಿತು. ಇದೇ ವೇಳೆ ೧೮೯೭ನೇ ಫೆಬ್ರುವರಿ ೨೮ನೇ ಭಾನುವಾರ ಸಂಜೆಯ ವೇಳೆಗೆ ಅರಮನೆಯ ನೈಋತ್ಯಭಾಗದಲ್ಲಿ ಬೆಂಕಿ ಕಾಣಿಸಿಕೊಂಡು ಅರಮನೆಯ ದಕ್ಷಿಣ ಪಾರ್ಶ್ವದ ಬಹುಭಾಗ ಭಸ್ಮವಾಗಿ ಹೋಯಿತು. ಮಂಗಳವಾರ ರಾತ್ರಿ ಅರಮನೆಯ ಕಳಶವೂ ಉರುಳಿ ಬಿತ್ತು. ಕೂಡಲೇ ರಾಜ ಕುಟುಂಬದವರನ್ನು ಜಗನ್ಮೋಹನ ಅರಮನೆಗೆ ಸ್ಥಳಾಂತರಿಸಲಾಯಿತು. ಈ ಕಾರಣದಿಂದ ಹಳೆಯ ಅರಮನೆಯನ್ನು ಕೆಡವಲಾಯಿತು. ಈಗಿರುವ ಹೊಸ ಅರಮನೆಯನ್ನು ಪ್ರಾಚೀನ ಅರಮನೆಯ ತಳಹದಿಯ ಮೇಲೆಯೇ ಕಟ್ಟಲಾಗಿದೆಯಾದರೂ ಅರಮನೆ ಹಿಂದಿಗಿಂತ ಸುಮಾರು ೧೦೦-೧೫೦ ಅಡಿಗಳಷ್ಟು ಮುಂಚಾಚಿ ಕೊಂಡಿದೆ. ಬೊಂಬೆಯ ತೊಟ್ಟಿ ಇರುವ ಭಾಗ ಈಗಿರುವಂತೆ ಇರಲಿಲ್ಲ. ನಾನು ೧೯೩೪-೧೯೩೭ರಲ್ಲಿ ಅರಮನೆಯನ್ನು ಕಂಡಾಗಲೂ ಅರಮನೆಯ ಸಜ್ಜೆ ಈಗಿರುವಂತೆ ಇರಲಿಲ್ಲ. ಸಜ್ಜೆಯು ಮುಂದೆ ಮುಂಚಾಚಿದ ಮಂಟಪದಂತಹ ಕಟ್ಟಡವಿತ್ತು. ಅದನ್ನೂ ಒಡೆದು ಹಾಕಿ ರಾಜಸಭೆ (ದರ್ಬಾರ್) ಎಲ್ಲಾ ಕಡೆಯಿಂದಲೂ ಪ್ರಶಸ್ತವಾಗಿ ಕಾಣುವಂತಾಗಲು ಈಗಿರುವಂತೆ ಭಾರಿ ಭಾರಿ ಕಂಭಗಳನ್ನೂ, ಕಮಾನುಗಳನ್ನೂ ರಚಿಸಿ, ಮಧ್ಯದಲ್ಲಿ ಪಟ್ಟದಾನೆಯೂ ನಡೆದು ಹೋಗುವಂತಹ ಮಾರ್ಗವನ್ನು ಮಾಡಿಸಲಾಯಿತು.

೧೯೦೫ರಲ್ಲಿ ಮತ್ತೆ ಪ್ಲೇಗ್ ಉಪದ್ರವ ಪ್ರಾರಂಭವಾದುದರಿಂದ ಅರಮನೆಯ ಬಳಿ ನೆರೆಮನೆಯೇ ಬೇಡವೆಂದು ಕೋಟೆಯಲ್ಲಿದ್ದವರನ್ನೆಲ್ಲಾ ಜಾಗ ಖಾಲಿ ಮಾಡುವಂತೆ ಆಜ್ಞಾಪಿಸಲಾಯಿತು. ವೀಣೆ ಶೇಷಣ್ಣನವರು ಹಸುವಿನ ಕರುಹಟ್ಟಿಯ ಬಳಿಗೂ, ನಂಜುಂಡೇ ಅರಸರು ನರಸಿಂಹರಾಜಾ ಜೋಡು ರಸ್ತೆಯು ಲಕ್ಷ್ಮೀಪುರಕ್ಕೆ ತಿರುಗುವ ಮೂಲೆಯ ನಿವೇಶನಕ್ಕೂ, ನಮ್ಮ ಮಾತಾಮಹರು ಕೆಂಪು ನಂಜಾಂಬಾ ಅಗ್ರಹಾರಕ್ಕೂ ಸ್ಥಳಾಂತರ ಗೊಂಡರು. ಕೋಟೆಯೊಳಗಿದ್ದ ಮನೆಗಳನ್ನೆಲ್ಲಾ ೧೯೧೧-೧೨ರ ವೇಳೆಗೆ ನೆಲಸಮ ಮಾಡಲಾಯಿತು. ಅಲ್ಲಿದ್ದವರೆಲ್ಲಾ ವಿವಿಧ ಅಗ್ರಹಾರಗಳಿಗೆ ಚದುರಿದರು. ೧೯೫೧ರಲ್ಲಿ ಭುವನೇಶ್ವರಿ ದೇವಾಲಯವನ್ನೂ, ೧೯೫೩ರಲ್ಲಿ ಗಾಯಿತ್ರಿ ದೇವಾಲಯವನ್ನೂ ಕೋಟೆಯೊಳಗೆ ಶ್ರೀ ಜಯಚಾಮರಾಜ ಒಡೆಯರು ಕಟ್ಟಿಸಿದರು. ನಾಲ್ವಡಿ ಕೃಷ್ಣರಾಜರ ಕಾಲಕ್ಕೇ ಹಿಂದಿದ್ದ ಕೋಟೆಯ ಸ್ವರೂಪವೇ ಬದಲಾಗಿ, ಪೂರ್ವದ ಕಡೆ ದಿಡ್ಡೀ ಬಾಗಿಲಿದ್ದ ಜಾಗಕ್ಕೂ ತುಂಬಾ ಹಿಂದಕ್ಕೆ ಈಗಿರುವ ಜಯಮಾರ್ತಂಡ ದ್ವಾರವನ್ನೂ, ಉತ್ತರ ದಕ್ಷಿಣಗಳಲ್ಲಿ ಜಯರಾಮ-ಬಲರಾಮ ಮತ್ತು ವರಾಹ ಬಾಗಿಲುಗಳನ್ನೂ ಪಶ್ಚಿಮದಲ್ಲಿದ್ದ ದಿಡ್ಡೀ ಬಾಗಿಲುಗಳಿಗೆ ಬದಲಾಗಿ ಕರೀಕಲ್ಲು ತೊಟ್ಟಿ ದ್ವಾರ ಮತ್ತು ಬ್ರಹ್ಮಪುರಿ ಬಾಗಿಲುಗಳನ್ನೂ ಪುನಾರಚಿಸಲಾಯಿತು. ಕಂದಕಗಳನ್ನೆಲ್ಲಾ ಮುಚ್ಚಿಸಿ, ಕೋಟೆಯ ಹೊರಗೆ ತೋಟವನ್ನೂ ಮಾಡಿಸಲಾಯಿತು.

## ಹಳೇ ಮೈಸೂರಿನ ಹರವುಗಳು

ಹಿಂದೆ ಇದ್ದ ದೊಡ್ಡ ಪೇಟೆ ರಸ್ತೆ ಇಂದು ಅಶೋಕ ರಸ್ತೆಯಾಗಿದೆ. ದೇವರಾಜಾ ಮಾರ್ಕೆಟ್ ರಸ್ತೆ ಸಯ್ಯಾಜಿರಾವ್ ರಸ್ತೆಯಾಗಿದೆ. ಇವೂ ಗುರುತಿಸಲಾರದಷ್ಟು ಬದಲಾಗಿವೆ. ಹಿಂದೆ ಮೈಸೂರು ಜೈಲಿನಿಂದ ಪ್ರಾರಂಭವಾಗಿ ಈರನ ಗೆರೆಯನ್ನು ಬಳಸಿ ಸರ್ಕಾರದ

ಗೆಸ್ಟ್ ಹೌಸ್‌ವರೆವಿಗೂ ಬರುತಿದ್ದ ಕೋಟೆಯ ಹೊರ ಪ್ರಾಕಾರದ ಅವಶೇಷಗಳನ್ನು ಇಂದು ಅಶೋಕಾ ರಸ್ತೆಗೆ ಬಂದು ಸೇರುವ ಕಡೆ ಜೈಲುಗೋಡೆಗೆ ಸೇರಿದಂತೆ ಗುರುತಿಸಬಹುದಾಗಿದೆ. ಈ ಜಾಗದಲ್ಲಿ, ಜೈಲಿನ ಸಮೀಪ ನಗರ ಪ್ರವೇಶಕ್ಕೆ ಪ್ರಧಾನ ದ್ವಾರವಿತ್ತು. ಇಂದಿನ ದೇವರಾಜ ಮೊಹಲ್ಲಾ, ರಮಾವಿಲಾಸ ಅಗ್ರಹಾರ, ಶ್ರೀರಾಮಪೇಟೆ ಕೆಂಪು ನಂಜಾಂಬಾ ಅಗ್ರಹಾರ, ರಾಮಾನುಜ ರಸ್ತೆಯ ಸುತ್ತಮುತ್ತಲ ಅಗ್ರಹಾರಗಳು ಹಳ್ಳದ ಕೇರಿ, ಹಳೇ ಅಗ್ರಹಾರ, ಕೃಷ್ಣರಾಜ ಮೊಹಲ್ಲಾ, ಚಾಮರಾಜಪುರ, ಲಕ್ಷ್ಮೀಪುರಗಳು ತುಂಬಾ ಬದಲಾಗಿವೆ. ಸೀತಾವಿಳಾಸ ಛತ್ರವಂತೂ ವಿರೂಪಗೊಂಡಿದೆ. ಸೋಪಾನ ಕಟ್ಟೆಯಿಂದ ಕಂಗೊಳಿಸುತ್ತಿದ್ದ ಸುಬ್ಬರಾಯನ ಕೆರೆ ಹಾಳು ಸುರಿಯುತ್ತಿದೆ.

## ನಗರಕ್ಕೆ ನೀರಿನ ವ್ಯವಸ್ಥೆ

ಮೈಸೂರು ನಗರಕ್ಕೆ ನೀರು ಸರಬರಾಜು ಮಾಡಲು ಲೆಕ್ಕವಿಲ್ಲದಷ್ಟು ಕೆರೆಗಳು ಪ್ರತಿ ಮೂರುಕ್ಕಾಲು ಮೈಲಿಗೊಂದರಂತೆ ಇದ್ದವು. ಇವುಗಳಲ್ಲಿ ಪ್ರಮುಖವಾದುವು ಜೀವನ ರಾಯನ ಕಟ್ಟೆ ಶ್ರೀರಾಮಪೇಟೆ, ದೇವರಾಜಾ ಮೊಹಲ್ಲಾಗಳಿಗೂ, ಕಾರಂಜಿ ಕೆರೆ ನಜರಬಾದ್ ಮತ್ತು ಕೋಟೆಗೂ, ದೊಡ್ಡಕೆರೆ ಅಗ್ರಹಾರಗಳಿಗೂ, ಸುಬ್ಬರಾಯನ ಕೆರೆ ಕೆಂಪು ನಂಜಾಂಬಾ ಅಗ್ರಹಾರ ಲಕ್ಷ್ಮೀಪುರಗಳಿಗೂ, ಕುಕ್ಕನಹಳ್ಳಿ ಕೆರೆ ಪಡುವಾರಹಳ್ಳಿ ಸುತ್ತಮುತ್ತಲಿಗೂ, ಇವಲ್ಲದೆ ಕನ್ನೇಗೌಡನ ಕೊಪ್ಪಲು, ಸಿದ್ದಲಿಂಗಪುರ, ಈರನಗೆರೆಗಳ ಬಳಿ ಇದ್ದ ಕೆರೆಗಳು ಉಳಿದ ಪ್ರದೇಶಗಳಿಗೂ ನೀರುಣಿಸುತ್ತಿದ್ದುವು. ನಾನು ಈ ಶತಮಾನದ ನಾಲ್ಕನೆಯ ದಶಕದ ಪ್ರಾರಂಭದಲ್ಲಿ ಮೈಸೂರಿನಲ್ಲಿ ಓದುತ್ತಿದ್ದಾಗಲಂತೂ ಸ್ವಚ್ಛವಾದ ರಸ್ತೆಗಳು ಮಿರುಗುವಷ್ಟು ಶುಭ್ರವಾಗಿದ್ದುವು. ರಸ್ತೆಯ ಎರಡೂ ಕಡೆಗಳಲ್ಲೂ ಗಗನಚುಂಬಿ ಸಾಲು ಮರಗಳಿದ್ದು ಮೈಸೂರಿನ ಯಾವ ದಿಕ್ಕಿನಿಂದ ಗಾಳಿ ಬೀಸಿದರೂ ತಂಪಾದ, ಆಹ್ಲಾದಕರವಾದ ವಾತಾವರಣವನ್ನುಂಟು ಮಾಡುತ್ತಿತ್ತು.

## ಈ ಲೇಖನಕ್ಕೆ ಆಧಾರಗಳು

ಮೈಸೂರು ಅರಸರ ರಾಜವಂಶಾವಳಿ, ಕಂಠೀರವ ನರಸರಾಜ ವಿಜಯ, ಚದುರಿ ಹೋಗಿರುವ ಕೆಲವು ಆಂಗ್ಲ ಅಧಿಕಾರಿಗಳ ಲೇಖನಗಳು.

ಪ್ರಧಾನವಾಗಿ ಈ ಕೋಟೆಯ ಮನೆಯಲ್ಲಿಯೇ ಹುಟ್ಟಿ, ಬೆಳೆದು ಇತ್ತೀಚೆಗೆ ನಿಧನರಾದ ನನ್ನ ತಾಯಿ ಶ್ರೀಮತಿ ಜಯಲಕ್ಷಮ್ಮನವರು, ದಿ॥ ದೇವುಡುನರಸಿಂಹ ಶಾಸ್ತ್ರಿಗಳು, ಪೂಜ್ಯ ಶ್ರೀ ವಿ. ಸೀತಾರಾಮಯ್ಯನವರುಗಳಿಂದ ಕೇಳಿ, ಸಂಗ್ರಹಿಸಿಟ್ಟು ಕೊಂಡ ದಾಖಲೆಗಳು. ನಮ್ಮ ಮತಾಮಹರಿಗೆ ಅತ್ಯಂತ ಆಪ್ತರಾಗಿದ್ದ ಸುಪ್ರಸಿದ್ಧ ವಾಗ್ಗೇಯಕಾರ ಸಂಗೀತ ರತ್ನ ಕೆ. ವಾಸುದೇವಾಚಾರ್ಯರ ಲೇಖನಗಳು, ಹಯವದನರಾಯರ ಮೈಸೂರು ಗೆಜೆಟಿಯರ್ ಮತ್ತು ಸ್ವಂತ ಅನುಭವಗಳು.

ತುಂಕೂರು ಸುನಂದಾ*

# ತುಮಕೂರು ಜಿಲ್ಲೆಯ ಜಿನ ದೇವಾಲಯಗಳು

'ಸುಜನ ಜನಪದ'ವೆಂದು ಖ್ಯಾತಿವೆತ್ತಿರುವ ತುಮಕೂರು ಜಿಲ್ಲೆಯು ಇತಿಹಾಸದಲ್ಲಿ ನೊಳಂಬರು, ಗಂಗರು, ಹೊಯ್ಸಳರು, ವಿಜಯನಗರದ ಅರಸರು, ಚೋಳರು, ಮೈಸೂರು ಒಡೆಯರು ಮುಂತಾದವರ ಆಡಳಿತ ಮಂಡಲವಾಗಿದ್ದು ಆಯಾಯ ಕಾಲಕ್ಕೆ ಶೈವ-ವೈಷ್ಣವ ಧರ್ಮಕ್ಕೆ ಮಾನ್ಯತೆ ನೀಡಿರುವುದರೊಂದಿಗೆ ಜೈನಧರ್ಮಕ್ಕೂ ಅಷ್ಟೇ ಮಾನ್ಯತೆ ನೀಡಲಾಗಿತ್ತೆಂಬುದಕ್ಕೆ ಈ ಜಿಲ್ಲೆಯಲ್ಲಿ ಅಲ್ಲಲ್ಲೇ ಕಾಣಬರುವ ಜಿನ ದೇವಾಲಯಗಳು ಸಾಕ್ಷಿಯಾಗಿವೆ. ಚೋಳ ಮತ್ತು ಹೊಯ್ಸಳರ ಕಾಲಕ್ಕೆ ಇಲ್ಲಿ ಹೆಚ್ಚು ಜಿನ ದೇವಾಲಯಗಳು ನಿರ್ಮಿತವಾಗಿವೆ ಎನ್ನಬಹುದು. ಈ ಜಿನ ಮಂದಿರಗಳಲ್ಲಿ ನಿಟ್ಟೂರು ಮಂದಿರ ಹೊಯ್ಸಳ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತು.

**ನಿಟ್ಟೂರು :**

ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ ೧೨ ಗುಬ್ಬಿ ೧೧ ಕ್ರಿ. ಶ. ೧೨೨೬ರ ಶಾಸನದ ಪ್ರಕಾರ ಈ ಊರನ್ನು ದಕ್ಷಿಣದ ಆಯ್ಯಾವೊಳೆ ಎಂದು ಕರೆಯಲಾಗಿದೆ. ಇಲ್ಲಿ ಚಿಕ್ಕದಾದ ಗರ್ಭಗುಡಿಯಲ್ಲಿ ಶಾಂತೀಶ್ವರಜಿನಮೂರ್ತಿ ಬಿಂಬವಿದೆ. ಮುಖಮಂಟಪ, ನವರಂಗ, ಸುಖನಾಸಿ, ಗರ್ಭಗೃಹಗಳಿದ್ದು ಕಲಾತ್ಮಕವಾಗಿದೆ. ಮುಖಮಂಟಪದ ಕಂಬಗಳು ದುಂಡಾಗಿವೆ. ಪಕ್ಕದಲ್ಲಿ ಪದ್ಮಾವತಿ ಗುಡಿ ಮತ್ತು ಅಭಯಪ್ರಧಾಯಕವಾದ ಜ್ವಾಲಾಮಾಲಿನಿ ಮೂರ್ತಿಗಳಿವೆ. ಕಂಬ-ತೊಲೆಗಳಲ್ಲಿ ಎಂಟು, ಹದಿನಾರು-ಮೂವತ್ತೆರಡು ಕೋನಗಳ ನಕ್ಷತ್ರಗಳು, ಕಮಲದ ದಳಗಳು, ಗೋಡೆ ಮೇಲಿನ ಪಟಿಕೆಗಳು, ಹೂ-ಬಳ್ಳಿಗಳು, ವಾದ್ಯಗಾರರ, ತೀರ್ಥಂಕರರ, ಯಕ್ಷ-ಯಕ್ಷಿಯ ಶಿಲ್ಪಗಳನ್ನು ಶಿಲ್ಪಿಯು ಸುಂದರವಾಗಿ ಕುಂಡರಿಸಿದ್ದಾನೆ. ಗುಬ್ಬಿ ಶಾಸನ ರೀತ್ಯಾ "ಈ ರೇಖೆಯ ಪ್ರತುಮೆಯ ಕಂಡರಿಸಿದ ಮಳವೆಯ ಮಲಯ" (ಮಳೋಸಿ ಮಲ್ಲಯ್ಯ) ಎಂದು ತಿಳಿದು ಬರುತ್ತದೆ. ನವರಂಗದಿಂದ ಮುಂದಕ್ಕೆ ಪದ್ಮಾವತಿ ದೇವಿಯ ಗುಡಿ ಇದೆ. ಕಮಲಾಕಾರ ಪೀಠಸ್ಥಿತಳಾಗಿರುವಳು. ಈ ಅಂಕಣದಲ್ಲಿ ದುಂಡುಕಂಬಗಳು ಶಿಲ್ಪಗಳ ಕೆತ್ತನೆಯಿಂದ ಅಲಂಕೃತವಾಗಿವೆ. ನವರಂಗದಲ್ಲಿ ಒಂದು ನಿಶದಿ ಶಾಸನವಿದ್ದು, ಅದರಲ್ಲಿ ಇಬ್ಬರು ಸ್ತ್ರೀಯರು ಪದ್ಮಾಸನದಲ್ಲಿ ಕುಳಿತಿರುವ ಚಿತ್ರವಿದೆ. ನಿಟ್ಟೂರಿನ ಬಸದಿಯಲ್ಲಿನ ಶಾಸನದರೀತ್ಯಾ ಈ ಬಸದಿಯು ಮೂಲಸಂಘದ ಬಸದಿಯಾಗಿದ್ದು ೧೨೯೯ರಲ್ಲಿ ಮಲಧಾರಿ ದೇವರಗುಡ್ಡಿ ಮಾಳವಸೆಟ್ಟಿಕಬ್ಬೆಯರ ಮಗ ಮಲ್ಲಸೆಟ್ಟಿ ಈ ಚೈತ್ಯಾಲಯದ ಹೊರಬಿತ್ತಿಯ ಸುತ್ತಣ ಪ್ರತಿಮೆಯನ್ನು ಮಾಡಿಸಿದಂತೆ ಹೇಳಿದೆ.

**ಮಂದರಗಿರಿ (ಬಸದಿಬೆಟ್ಟ) :**

ತುಮಕೂರು ನಗರಕ್ಕೆ ಎಂಟು ಕಿ.ಮೀ. ದೂರವಿರುವ (ಬೆಂಗಳೂರು ರಸ್ತೆಯಲ್ಲಿ) ಮಂದರಗಿರಿ ಮೇಲೆ

* ನಂ.೬, ೧ನೆಯ ರಸ್ತೆ, ಎಂ. ಸಿ. ಕಾಲೋನಿ, ತುಮಕೂರು-೨

ನಾಲ್ಕು ಜಿನ ದೇವಾಲಯಗಳು (ಪಾರ್ಶ್ವನಾಥ, ಅಜಿತ ನಾಥ ಮತ್ತು ಬ್ರಹ್ಮದೇವರ ಗುಡಿ ಇವೆ.) ಇವುಗಳನ್ನು ಕ್ರಿ.ಶ. ೧೨ನೆಯ ಶತಮಾನದಲ್ಲಿ ಹೊಯ್ಸಳ ನರಸಿಂಹನ ಸೇನಾಧಿಪತಿ ಈಶ್ವರ ಚಮೂಪತಿ ತನ್ನ ಹೆಂಡತಿ ಮಾಚಿಯಕ್ಕಳ ಪ್ರೇರಣೆಯಿಂದ ನಿರ್ಮಿಸಿದನೆಂದು ತಿಳಿದು ಬರುತ್ತದೆ.

**ನಿಡುಗಲ್ :**

ಪಾವಗಡದ ಬೆಟ್ಟಗುಡ್ಡಗಳ ನಡುವಿರುವ ನಿಡುಗಲ್ ಒಂದು ಜೈನ ಕೇಂದ್ರವಾಗಿತ್ತೆಂಬ ಐತಿಹ್ಯ ವಿದೆ. ನೇಮಿಚಂದ್ರಮುನಿ ಅತ್ತ ಬಂದಾಗ ಇರುಂಗೋಳ ಚೋಳನ ರಾಣಿಯರಾಗಿದ್ದ ಒಬ್ಬಣಬ್ಬೆ-ಚಂದ್ರವ್ವೆ, ಮುನಿಗಳ ಉಪದೇಶದಿಂದ ಪ್ರಭಾವಿತರಾಗಿ ಜೈನಧರ್ಮ ವನ್ನು ಸ್ವೀಕರಿಸಿ ಇಲ್ಲಿ ಪಾರ್ಶ್ವನಾಥ ಬಸದಿ ನಿರ್ಮಿಸಲು ಪ್ರೇರೇಪಿಸಿದರು. ಈ ಊರ ಉತ್ತರಕ್ಕೆ ಬಾಹುಬಲಿ ಮೂರ್ತಿ ಮತ್ತು ಎದುರಿಗೆ ಮಾನಸ್ತಂಭ ಹಾಗೂ ಎರಡು ಜೀರ್ಣ ಜಿನ ಮಂದಿರಗಳಿವೆ. ಇದರ ಜೀರ್ಣೋ ದ್ಧಾರವಾಗುವ ಅವಶ್ಯಕತೆಯಿದೆ.

**ಹಚ್ಚಣ :**

ತಿಪಟೂರು ತಾಲ್ಲೂಕಿಗೆ ಸೇರಿದ ಹಚ್ಚಣದಲ್ಲಿ ತ್ರಿಭುವನಮಲ್ಲ ಎರೆಯಂಗ ಹೊಯ್ಸಳದೇವ-ಏಚಲಾ ದೇವಿಯರ ಮಗ ಬಲ್ಲಾಳನ ಮಂತ್ರಿ ಮರಿಯಾನೆ ದಂಡ ನಾಯಕನಿಂದ ನಿರ್ಮಿಸಿದ ಜಿನ ಮಂದಿರವಿದೆ.

**ಇತರ ಸ್ಥಳಗಳಲ್ಲಿರುವ ಜಿನ ಮಂದಿರಗಳು :**

ತುಮಕೂರು ನಗರದಲ್ಲಿ ಇತ್ತೀಚೆಗೆ ಸುಮಾರು ಮೂರು ದಶಕಗಳಿಂದ ಶ್ವೇತಾಂಬರ ಪಂಥದವರು ಅಜಿತ ನಾಥ ಬಸದಿಯನ್ನು ನಾಗರ ಶೈಲಿಯಲ್ಲಿ ಆಧುನೀಕರಿಸಿ ನಿರ್ಮಿಸಿದ್ದಾರೆ ಮತ್ತು ಪಾರ್ಶ್ವನಾಥ ಬಸದಿ ಸಹ ಇಲ್ಲಿದೆ. ಸುಂದರವಾದ ಪಂಚಲೋಹಮೂರ್ತಿಗಳು ಇಲ್ಲಿವೆ. ಹರಿಯಾಳಾದೇವಿ ವ್ರತಸ್ಥಳಾಗಿ ನಿರ್ವಾಣ ಹೊಂದಿದ ಕರಡಾಳಿನಲ್ಲಿ (ತಿಪಟೂರು ತಾಲ್ಲೂಕು)ನಲ್ಲಿ ಒಂದು ಜೈನ ಶಾಸನವಿದೆ. ಇದಲ್ಲದೆ ಬಿದರೆ ಮಲ್ಲಿಸು ಪಾರ್ಶ್ವನಾಥ ಬಸದಿ, ತೋವಿನಕೆರೆಯಲ್ಲಿ ಚಂದ್ರನಾಥ ಬಸದಿ, ಅಕ್ಕಿಂರಾಂಪುರದಲ್ಲಿ ಅನಂತನಾಥಸ್ವಾಮಿ ಬಸದಿ, ಗುಬ್ಬಿಯಲ್ಲಿ ಆದಿನಾಥತೀರ್ಥಸ್ವಾಮಿ,ಮಧುಗಿರಿ ಯಲ್ಲಿ ಮಲ್ಲಿನಾಥ ಮತ್ತು ಇತ್ತೀಚೆಗೆ ಅಮೃತಶಿಲೆಯಲ್ಲಿ ಮಾಡಿರುವ ಬಾಹುಬಲಿಸ್ವಾಮಿ ಮೂರ್ತಿ ಬಸದಿಗಳಿವೆ. ತುಮಕೂರು ನಗರಕ್ಕೆ ಆರು ಕಿ.ಮೀ. ಇರುವ ಕುಪ್ಪಂಗಿ ಯಲ್ಲಿ ಪಾರ್ಶ್ವನಾಥ ಬಸದಿ ೧೧೪೦ರಲ್ಲಿ ಕೇಸರಿಶೆಟ್ಟಿ ಎಂಬುವನು ಕಟ್ಟಿದನೆಂದು ತಿಳಿದುಬರುತ್ತದೆ. ಚಿಕ್ಕ ನಾಯಕನಹಳ್ಳಿ ತಾಲ್ಲೂಕಿನಲ್ಲಿ ಕ್ರಿ. ಶ. ೧೧೬೦ರಲ್ಲಿ ಹೊಯ್ಸಳ ನರಸಿಂಹದೇವನ ಮಹಾ ಸಾಮಂತ ಗೋವಿದೇವನೆಂಬುವನು ಚೆನ್ನಪಾರ್ಶ್ವನಾಥ ಮಂದಿರ ವನ್ನು ನಿರ್ಮಿಸಿ ದತ್ತಿ ಬಿಟ್ಟನೆಂದು ತಿಳಿದಿದೆ. ಮಾಯ ಸಂದ್ರದಲ್ಲಿ ಪಾರ್ಶ್ವನಾಥಸ್ವಾಮಿ, ಕಂದಿಕೆರೆ ಶಾಂತಿನಾಥ ಸ್ವಾಮಿ, ಕೊತ್ತಿಗೆರೆಯಲ್ಲಿ ವಿಷ್ಣುವರ್ಧನನ ಕಾಲದಲ್ಲಿ ನಿರ್ಮಿತವಾದ ಸಂಯುಕ್ತ ಜೈನವಿಗ್ರಹಗಳ ಬಸದಿ, ತೋವಿನಕೆರೆ ಸಮೀಪವಿರುವ ಶೀತಘಟ್ಟನಲ್ಲು ಒಂದು ಬಸದಿ ಇದೆ.

ತುಮಕೂರು ಜಿಲ್ಲೆಯ ಜೈನಮಂದಿರಗಳು ವಾಸ್ತು ಶಿಲ್ಪ ವೈಭವ ವೈಶಿಷ್ಟ್ಯತೆಯನ್ನು ಹೊಂದಿಲ್ಲವಾದರೂ, ಧಾರ್ಮಿಕ ಹಿನ್ನೆಲೆಯಲ್ಲಿ ಮುಖ್ಯವಾಗಿವೆ. ಬಹು-ಮಟ್ಟಿಗೆ ಹೊಯ್ಸಳರ ಆಳ್ವಿಕೆಯಲ್ಲೇ ಜೈನಧರ್ಮ ಪ್ರಬಲವಾಗಿದ್ದು ಹೆಚ್ಚು ಜಿನ ಮಂದಿರಗಳು ಆ ಕಾಲದಲ್ಲಿ ನಿರ್ಮಿತವಾಯಿತೆಂಬುದು ಸ್ಪಷ್ಟ.

ಹೆಚ್.ಟಿ. ತಳವಾರ್*

# ಸನ್ನತಿಯ ಕೆಲವು ಸುಟ್ಟ ಮಣ್ಣಿನ ಗೊಂಬೆಗಳು

ಕರ್ನಾಟಕ ರಾಜ್ಯದ ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲ್ಲೂಕಿನ ಗ್ರಾಮವಾದ ಸನ್ನತಿಯಲ್ಲಿ ಕ್ರಿ. ಶ. ೧–೨ನೇ ಶತಮಾನಕ್ಕೆ ಸೇರಿದ ಪ್ರಾಚೀನ ಬೌದ್ಧನೆಲೆ ಇರುವುದು ಎಲ್ಲರಿಗೂ ತಿಳಿದ ವಿಷಯ. ಈ ಹಳ್ಳಿಯು ಕೃಷ್ಣಾ ನದಿಯ ಉಪನದಿಯಾದ ಭೀಮಾ ನದಿಯ ಎಡದಂಡೆಯ ಮೇಲಿದ್ದು, ಯಾದಗಿರಿಯ ವಾಯುವ್ಯ ದಿಕ್ಕಿಗೆ ೫೦ ಕಿ.ಮೀ. ದೂರ ರಾಯಚೂರು ವಾಡಿ ರೈಲುಮಾರ್ಗದ–ನಲ್ವಾರ ರೈಲ್ವೆ ನಿಲ್ದಾಣದಿಂದ ೪೦ ಕಿ.ಮೀ. ದೂರದಲ್ಲಿದೆ.

ಈ ಪ್ರದೇಶದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಕರ್ನಾಟಕ ಮತ್ತು ಭಾರತದ ಪುರಾತತ್ವ ಇಲಾಖೆ ನಿವೇಶನಾನ್ವೇಷಣೆ ನಡೆಸಲಾಗಿ, ಇಲ್ಲಿ ಹಲವಾರು ಶಾಸನಗಳು, ವಿಗ್ರಹಗಳು ಮತ್ತು ಸುಟ್ಟ ಮಣ್ಣಿನಗೊಂಬೆಗಳು ದೊರೆತವು. ಈ ದೆಶೆಯಲ್ಲಿ ಭೂಮಿಯ ಮೇಲೆ ದೊರೆತ ಸುಟ್ಟ ಮಣ್ಣಿನ ಗೊಂಬೆಗಳ ಅವಶೇಷಗಳಲ್ಲಿ ಸ್ತ್ರೀಯರ, ಪುರುಷರ ಹಾಗೂ ಪ್ರಾಣಿಗಳ ಗೊಂಬೆಗಳು ಗಮನ ಸೆಳೆಯು ವಂತವುಗಳಾಗಿವೆ.

ಅವುಗಳಲ್ಲಿ ಮನುಷ್ಯನ ಶಿರಸ್ಸು ಒಂದು ದೊರೆತಿದ್ದು, ಅದು ಅಗಲವಾದ ಮುಖ, ಅಗಲವಾದ ಕಣ್ಣು, ದಪ್ಪದಾದ ತುಟಿಗಳು, ಚಪ್ಪಟೆ ಮೂಗಿನಿಂದ ಕೂಡಿದೆ. ಮತ್ತೊಂದು ಸ್ತ್ರೀಯ ಗೊಂಬೆಯು ನಗು ಮುಖ, ಬೊಗಸೆ ಕಣ್ಣಿನ, ದಪ್ಪದ ತುಟಿಗಳನ್ನು ಹೊಂದಿದ್ದು, ಅರ್ಧಭಾಗ ಭಿನ್ನವಾಗಿರುವುದು ದುರದೃಷ್ಟಕರವಾದ ಸಂಗತಿ. ಯಕ್ಷನಗೊಂಬೆ ಮುಗುಳು ನಗೆಯಿಂದ, ಮುದ್ದಾದ ತುಟಿಗಳಿಂದ ಕೂಡಿದ್ದು, ವಿಶಿಷ್ಟವಾದ ಮಕುಟ, ಕರ್ಣ ಕುಂಡಲಗಳನ್ನು ಹೊಂದಿದ್ದು, ಕೈಬಳೆ, ಬಹು ವಿಶಿಷ್ಟವಾದ ತಾಯತದ ತರಹದ ಕಂಠಹಾರ ಹಾಗೂ ಯಜ್ಞೋಪವೀತ ಇವುಗಳಿಂದ ಅಲಂಕೃತವಾಗಿದೆ ಮತ್ತು ಸೊಂಟಕ್ಕೆ ಗಂಟು ಹಾಕಿ ಕಟ್ಟಿದ ಪಟ್ಟಿಯ ರೀತಿಯು ಗಮನಾರ್ಹ. ಅಲಂಕರಿಸಿ ನಿಂತ ಕುದುರೆಗೊಂಬೆ, ಕೊಬ್ಬಿನಿಂತ ಗೂಳಿ, ಆನೆ, ಕತ್ತು ತಿರುಗಿಸಿ ನಿಂತ ಜಿಂಕೆ, ನಿಂತಿರುವ ಎತ್ತು, ಕೊಂಬಿರುವ ಎಮ್ಮೆಯ ತಲೆ, ಕೊಂಬು ಮತ್ತು ಕಣ್ಣು ಸುಂದರವಾಗಿ ಮೂಡಿವೆ. ಪ್ರಾಣಿಯ ಬಾಯಿ, ಅಲ್ಲದೆ ಮನುಷ್ಯನು ಹಲಗೆ ಬಡಿಯುತ್ತಿರುವ ಗೊಂಬೆ ವಿಶಿಷ್ಟವಾಗಿದ್ದು ಇಲ್ಲಿ ಹಲಗೆ ಬಾರಿಸುವ ಭಂಗಿಯನ್ನು ಚೆನ್ನಾಗಿ ಚಿತ್ರಿಸಿದೆ. ಹಲಗೆ ಹಿಡಿಯುವ ಶೈಲಿ ಹಾಗೂ ಹಲಗೆ ಬಾರಿಸುವ ಕೋಲುಗಳನ್ನು ನೋಡುವುದು ಹಾಗೂ ಎಡಗಡೆ ಸೊಂಟದ ಮೇಲೆ ಇಟ್ಟು ಸೊಗಸಾಗಿ ಬಾರಿಸಲು ದಾರದ ವ್ಯವಸ್ಥೆ ಇದೆ. ವೇಷಭೂಷಣಗಳು ಗಮನಾರ್ಹ. ಪ್ರಾಚೀನ ಜಾನಪದ ಕಲೆಗೆ ಒಂದು ಒಳ್ಳೆಯ ಕುರುಹಾಗಿದೆ. ಇವುಗಳಲ್ಲದೆ ಧರ್ಮಕ್ಕೆ ಸಂಬಂಧಪಟ್ಟ ಮಹಿಷಮರ್ಧಿನಿ ಹಾಗೂ ಲಜ್ಜಾಗೌರಿಯ ಗೊಂಬೆಗಳು ಹೆಸರಿಸುವಂತಹವುಗಳು.

* ತಾಂತ್ರಿಕ ಸಹಾಯಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು-೫೭೦ ೦೦೧

**ತಾಂತ್ರಿಕತೆ :**

ಹೆಚ್ಚಾಗಿ ಎಲ್ಲಾ ಗೊಂಬೆಗಳು ಪೊಳ್ಳಾಗಿದ್ದು, ವಿವಿಧ ಭಾಗಗಳಾಗಿ ತಯಾರಿಸಿ ಜೋಡಿಸಲಾಗಿರುವುದು. ಕರ್ನಾಟಕದ ಪ್ರಾಚೀನ ಶಿಲ್ಪಿಗಳು ಮೇಲಿನ ರೀತಿಯ ತಾಂತ್ರಿಕತೆಯನ್ನು ಅಳವಡಿಸಿಕೊಂಡು ವಿವಿಧ ಅಂಗಗಳ ಅಚ್ಚುಗಳನ್ನು ತಯಾರಿಸಲು ಪ್ರಯತ್ನಿಸಿರುವುದು ಮೊದಲ ಬಾರಿಗೆ ಬೆಳಕಿಗೆ ಬಂದಿದೆ ಎಂದು ಹೇಳ ಬಹುದು. ಈ ರೀತಿಯ ಸುಟ್ಟ ಮಣ್ಣಿನಿಂದ ತಯಾರಿ ಸಲಾದ ಗೊಂಬೆಗಳು ವಡಗಾಂ–ಮಾಧವಪುರ ಹಾಗೂ ಬನವಾಸಿ ಪ್ರದೇಶಗಳಲ್ಲಿ ನಡೆಸಿದ ಉತ್ಖನನದಲ್ಲಿ ದೊರೆತಿವೆ. ಸದ್ಯದಲ್ಲೆ ರಾಜ್ಯ ಪುರಾತತ್ವ ಇಲಾಖೆಯು ಉತ್ಖನನದ ಕಾರ್ಯಕ್ರಮವನ್ನು ಹಮ್ಮಿಕೊಳ್ಳುವುದು. ಸುಟ್ಟ ಮಣ್ಣಿನ ಗೊಂಬೆಗಳ ಬಗ್ಗೆ ಇನ್ನೂ ಹೆಚ್ಚಿನ ವಿಷಯಗಳು ಬೆಳಕಿಗೆ ಬರಬಹುದು.

ಈ ಪ್ರದೇಶದಲ್ಲಿ ದೊರೆತಿರುವ ಸುಟ್ಟ ಮಣ್ಣಿನ ಗೊಂಬೆಗಳು ಶಾತವಾಹನ ಕಾಲದ ಜನರ ಆರ್ಥಿಕ ಸ್ಥಿತಿ, ನುರಿತ ಕಲೆಗಾರಿಕೆ ಹಾಗೂ ಸಾಮಾಜಿಕ ಜೀವನದ ಮೇಲೆ ಸಾಕಷ್ಟು ಬೆಳಕನ್ನು ಚೆಲ್ಲುತ್ತದೆ.

ಡಾ|| ಎಸ್.ಕೆ. ಕೊಪ್ಪಾ*

# ಒಂದು ಅಪೂರ್ವ ಶಿವಲಿಂಗ

ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆ ಮತ್ತು ತಾಲ್ಲೂಕಿಗೆ ಸೇರಿದ 'ಕೂಡಲ', ಸೋಲಾಪುರ–ವಿಜಾಪುರ ರಾಷ್ಟ್ರೀಯ ಹೆದ್ದಾರಿ ಮೇಲಿರುವ ಟಾಕಳಿಯಿಂದ ೧೮ ಕಿ. ಮೀ. ಪೂರ್ವ–ದಕ್ಷಿಣಕ್ಕಿದೆ. ಈ ಕೂಡಲ ಗ್ರಾಮದಿಂದ ದಕ್ಷಿಣಕ್ಕೆ ಅರ್ಧ ಕಿ.ಮೀ. ದೂರದಲ್ಲಿ 'ಸಿನಾ' ನದಿ ಪೂರ್ವಾಭಿಮುಖವಾಗಿ ಹರಿಯುವ ಭೀಮಾ ನದಿಗೆ ಕೂಡುತ್ತದೆ. ಇದರಿಂದಾಗಿಯೇ ಅಲ್ಲಿನ ಊರಿಗೆ ಕೂಡಲ ಎಂಬ ಹೆಸರು ಬಂದಿದೆ. ಎರಡು ನದಿಗಳು ಕೂಡುವ ಸ್ಥಳ (ಕೂಡಲ)ಗಳು ಇಂದಿಗೂ ನಮ್ಮ ಜನರಿಗೆ ಪವಿತ್ರ ಕ್ಷೇತ್ರಗಳೆನಿಸಿವೆ. ಪ್ರಸ್ತುತ ಕೂಡಲದಲ್ಲಿ ೧೨ನೇ ಶತಮಾನದ ವಾಸ್ತುಶೈಲಿಯ ದೊಡ್ಡ ಗಾತ್ರದ ಸಂಗಮೇಶ್ವರ ದೇವಾಲಯವಿದೆ. ಈ ದೇವಾಲಯದ ಪೂರ್ವಭಾಗದಲ್ಲಿ ಸ್ವಲ್ಪ ಕೆಳಗೆ ಇದಕ್ಕಿಂತ ಪ್ರಾಚೀನವಾದ ಮತ್ತು ಸುಂದರ ವಾಸ್ತುಶೈಲಿಯಿಂದೊಡಗೂಡಿದ, ಜೀರ್ಣಗೊಂಡ ಇನ್ನೊಂದು ದೇವಾಲಯದೆ. ಎರಡು–ಮೂರು ವರ್ಷಗಳ ಹಿಂದೆ ಇದರ ಉತ್ತರ ಭಾಗದ ನೆಲವನ್ನು ಅಗೆಯುತ್ತಿರುವಾಗ ಸದ್ಯದ ಅಪೂರ್ವ ಶಿವಲಿಂಗ ದೊರಕಿದ್ದು, ಈಗ ಅದನ್ನು ಸಂಗಮೇಶ್ವರ ದೇವಾಲಯದ ಉತ್ತರಭಾಗದ ಆವರಣದ ಹೊರಗೆ ರಕ್ಷಿಸಿಡಲಾಗಿದೆ.

ಶಿವನನ್ನು ಲಿಂಗರೂಪದಲ್ಲಿ ಆರಾಧಿಸುವ ಪರಂಪರೆ ಬಹಳ ಪುರಾತನವಾದುದು. ಲಿಂಗಗಳಲ್ಲಿ ಚಲ, ಅಚಲ, ಚಲಾಚಲ ಎಂದು ಭೇದವಿದ್ದುದು ಶಿಲ್ಪಶಾಸ್ತ್ರಗಳಿಂದ ತಿಳಿದುಬರುತ್ತದೆ. ಇವುಗಳಲ್ಲಿ ಅಚಲಲಿಂಗ ಅಲ್ಲಾಡದಂತೆ ಒಂದೆಡೆ ಸ್ಥಾಪಿಸುವ ಮೂಲಕ ಸ್ಥಾವರ ಗುಣವನ್ನು ಪಡೆದಿದೆ. ಅಂತೆಯೇ ಅದಕ್ಕೆ ಸ್ಥಾವರಲಿಂಗ ವೆಂಬ ಹೆಸರೂ ಇದೆ. ಪುರಾಣ ಮತ್ತು ಆಗಮಗಳು ಸ್ಥಾವರಲಿಂಗದಲ್ಲಿ ಮತ್ತೆ ಭಿನ್ನತೆ ಕಲ್ಪಿಸಿವೆ. ಲಿಂಗ ಪುರಾಣ, ವ್ಯಕ್ತ, ಅವ್ಯಕ್ತ, ವ್ಯಕ್ತಾವ್ಯಕ್ತ ಎಂದು ತ್ರಿವಿಧ ಲಿಂಗವನ್ನು ಹೇಳಿದೆ. ಅಲ್ಲಿಯೇ ವ್ಯಕ್ತವು ಸಕಲಾಕಾರವೆಂದೂ (ಶಿವಲೀಲಾ ಮೂರ್ತಿಗಳೆಂದೂ), ಅವ್ಯಕ್ತವು ಲಿಂಗವೆಂದೂ, ವ್ಯಕ್ತಾವ್ಯಕ್ತವು ಮುಖಲಿಂಗವೆಂದೂ ವಿವರಣೆಯಿದೆ (೧,೩) ಸುಪ್ರಭೇದಾಗಮ ಸ್ವಯಂಭುವ, ಪೂರ್ವ (ಪುರಾಣ), ದೈವತ, ಗಾಣಪತ್ಯ, ಸುರ, ಆರ್ಷ, ರಾಕ್ಷಸ, ಮಾನುಷ, ಬಾಣ ಎಂದು ಒಂಬತ್ತು ಭೇದಗಳನ್ನು ಹೆಸರಿಸಿದೆ. ಸ್ಥಾವರಲಿಂಗಗಳಲ್ಲಿ ಹೆಚ್ಚಿನವುಗಳು ವ್ಯಕ್ತಾವ್ಯಕ್ತ ರೂಪದ ಮಾನುಷ ಲಿಂಗಗಳೇ ಆಗಿದ್ದು, ಅವುಗಳಲ್ಲಿ ಅಷ್ಟೋತ್ತರ ಶತಲಿಂಗ, ಸಹಸ್ರಲಿಂಗ, ಧಾರಲಿಂಗ, ಶೈವೇಷ್ಟ್ಯಾಲಿಂಗ, ಮುಖಲಿಂಗ ಎಂಬ ಐದು ಪ್ರಭೇದಗಳಿವೆ. ಮುಖಲಿಂಗದಲ್ಲಿ ಮಾನುಷ ಮುಖ, ಲಿಂಗದೊಂದಿಗೆ ಹೊಂದಿಕೊಂಡಿರುತ್ತದೆ. ಇದು ಮನುಷ್ಯಾಕಾರದ ಶಿವನ ಪ್ರತೀಕ. ಈಗ ದೊರಕಿರುವ ಮುಖಲಿಂಗಗಳಲ್ಲಿ ಏಕಮುಖ, ಚತುರ್ಮುಖ, ಮತ್ತು ಪಂಚಮುಖಗಳಿದ್ದು, ಅವು ಶಿವನ ಪಂಚಮುಖಗಳಾದ ವಾಮದೇವ, ತತ್ಪುರುಷ, ಅಘೋರ, ಸದ್ಯೋಜಾತ ಮತ್ತು ಈಶಾನಗಳೆಂದು ಭಾವಿಸಲಾಗುತ್ತದೆ.

* ಉಪನ್ಯಾಸಕರು, ಜಿ.ಆರ್.ಜಿ. ಕಲಾ ಹಾಗೂ ವಾಣಿಜ್ಯ ಕಾಲೇಜು, ಇಂಡಿ-೫೮೬ ೨೦೯

ಆದರೆ ಈಚಿಗೆ ಕೂಡಲದಲ್ಲಿ ದೊರಕಿರುವ ಅಪೂರ್ವ ಮುಖಲಿಂಗ ಇವೆಲ್ಲಕ್ಕಿಂತ ಭಿನ್ನವಾಗಿ ವಿಶಿಷ್ಟವಾಗಿದೆ. ಅಖಂಡ ಕರಿಕಲ್ಲಿನಲ್ಲಿ ಕಡೆದ ಈ ಬೃಹತ್ ಲಿಂಗಕ್ಕೆ ಪಾಣೀಪೀಠವಿಲ್ಲ. ಇಷ್ಟಲಿಂಗದ ಆಕಾರದಂತಿರುವ ಈ ಲಿಂಗದ ತಳಭಾಗ ಸಮತಟ್ಟಾಗಿದೆ. ಸುಮಾರು ಎರಡೂವರೆ ಅಡಿ ಎತ್ತರ, ಒಂಬತ್ತು ಅಡಿ ವೃತ್ತಾಕಾರವಾದ ಈ ಲಿಂಗದ ಸುತ್ತಲೂ ಮಾನುಷಮುಖ ಮತ್ತು ಲಿಂಗಗಳು ಹೀಗಿವೆ. ಕೆಳಭಾಗದಲ್ಲಿ ಅಂದರೆ ಬ್ರಹ್ಮ ಭಾಗದಲ್ಲಿ ಬಿಡಿಬಿಡಿಯಾಗಿ ಲಿಂಗದ ಸುತ್ತ ಎಂಟು ಮಾನುಷ ಮುಖಗಳು. ಆದರ ಮೇಲೆ ವಿಷ್ಣು ಭಾಗದಲ್ಲಿ ಒತ್ತಾಗಿ ೪೦ ಮುಖಗಳ ೪ ಸಾಲುಗಳು ; ಇನ್ನೂ ಆದರ ಮೇಲೆ ರುದ್ರಭಾಗದಲ್ಲಿ ೪೦ ಲಿಂಗಗಳ ೪ ಸಾಲುಗಳಿವೆ. ಕೆಳಗಿನಿಂದ ಮೇಲೆ ಹೋದಂತೆ ಇಲ್ಲಿನ ಮುಖ ಮತ್ತು ಲಿಂಗಗಳು ಸಣ್ಣವಾಗುತ್ತ ಹೋಗಿವೆ. ಈ ವಿಶಿಷ್ಟ ಅಪೂರ್ವ ಲಿಂಗದ ಮೇಲೆ ೧೬೮ ಮುಖಗಳು, ೧೬೦ ಲಿಂಗಗಳು ಸೇರಿ ಒಟ್ಟು ೩೨೮ ಮುಖಗಳಾಗುತ್ತವೆ. ಇಲ್ಲಿನ ಮುಖಲಿಂಗದ ಮುಖಗಳ ಸಾಂಕೇತಿಕತೆ, ಇಲ್ಲವೆ ಪೂರ್ವಾಪರ ಏನು ? ಎಂಬುದು ಗೊತ್ತಾಗುವುದಿಲ್ಲ. ಕೂಡಲದಂಥ ಪವಿತ್ರ ಕ್ಷೇತ್ರದಲ್ಲಿ ದೊರಕಿರುವ ಪ್ರಸ್ತುತ ಅಪೂರ್ವ ಮುಖಲಿಂಗದ ಮೇಲೆ ನಮ್ಮ ಇತಿಹಾಸಕಾರರು, ವಾಸ್ತುಶಿಲ್ಪ ಶಾಸ್ತ್ರಜ್ಞರು ಬೆಳಕು ಚೆಲ್ಲಬೇಕಾಗಿದೆ.

## ಗ್ರಂಥಋಣ


1 Gopinath Rao, T.A. : *Elements of Hindu Iconography* Vol. II, part I, Delhi-1968

2 Jitendranath Banerjea : *The Development of Hindu Iconography*, Delhi-1974

೩ ರಾಮಚಂದ್ರರಾವ್, ಎಸ್.ಕೆ. : ಮೂರ್ತಿಶಿಲ್ಪ ನೆಲೆ-ಹಿನ್ನೆಲೆ ಬೆಂಗಳೂರು-೧೯೬೫

ಝಿಂಡ್. ಮಹಮದ್ ಜಫ್ರುಲ್ಲಾ*

# ನಾಯ್ಕನ ಹಟ್ಟಿ ಒಳ ಮಠ-ದೇವಾಲಯಗಳಲ್ಲಿ ಯೂರೋಪಿಯನ್ ಗಾರೆ ಶಿಲ್ಪಗಳು

ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನ ನೈಋತ್ಯಕ್ಕೆ ೨೨ ಕಿ. ಮೀ. ದೂರದಲ್ಲಿ ಇರುವ ಪ್ರಸಿದ್ಧ ಐತಿಹಾಸಿಕ ಸ್ಥಳ ನಾಯಕನ ಹಟ್ಟಿ. ಈ ಹಟ್ಟಿಯ ಮೂಲ ಸ್ಥಾಪಕ ಮಲ್ಲಪ್ಪನಾಯಕ. ಮುಂದೆ ಇದು ಚಿತ್ರದುರ್ಗ ಪಾಳೆ ಪಟ್ಟನೊಡನೆ ವಿಲೀನಗೊಂಡು ದುರ್ಗದ ಪತನದವರೆಗೂ ಮುಂದುವರೆಯಿತು. ಹಟ್ಟಿಯನ್ನು ತರುವಾಯ ನಾಯ್ಕನ ಹಟ್ಟಿ ಎಂದು ಕರೆದರು. ಈ ಹಟ್ಟಿಯು ಪ್ರಸಿದ್ಧವಾದ ಒಂದು ಪುಣ್ಯಕ್ಷೇತ್ರವೂ ಆಗಿದೆ. ಇದು ಸಂತರಾದ ಶ್ರೀ ತಿಪ್ಪೇರುದ್ರ ಸ್ವಾಮಿಯವರು ನೆಲೆಸಿದ ಸ್ಥಳ. ಈ ಕ್ಷೇತ್ರಕ್ಕೆ ಜಾತ್ರೆಯ ಸಮಯದಲ್ಲಿ ಕರ್ನಾಟಕದಾದ್ಯಂತ ಯಾತ್ರಿಕರು ಬಂದು ಹೋಗುತ್ತಾರೆ. ಇಲ್ಲಿ ತಿಪ್ಪೇರುದ್ರ ಸ್ವಾಮಿಯವರ ಒಳ ಮಠ, ದೇವಾಲಯ ಮತ್ತು ಹೊರ ಮಠ ಎಂಬುವುಗಳಿವೆ. ಹೊರ ಮಠವು ಅರ್ಧ ಗೋಳಾಕಾರದ ಇಂಡೋ-ಇಸ್ಲಾಮಿಕ್ ಶೈಲಿಯ ಗುಮ್ಮಟವನ್ನು ಹೊಂದಿದೆ. ಒಳ ಮಠದ ದೇವಾಲಯವು ವಿಜಯನಗರ ಶೈಲಿಯಲ್ಲಿ ಸುಮಾರು ಹದಿನೆಂಟನೆಯ ಶತಮಾನದಲ್ಲಿ ನಿರ್ಮಾಣಗೊಂಡಿದೆ. ಈ ದೇವಾಲಯವು ಪೌಳಿ ಗೋಡೆ ಹೊಂದಿದ್ದು ಪೂರ್ವಾಭಿಮುಖವಾಗಿ ಮಹಾದ್ವಾರವನ್ನು ಹೊಂದಿದ್ದು ಅದು ಪಾಂಡ್ಯ ಶೈಲಿಯ ಗೋಪುರವನ್ನು ಹೊಂದಿದೆ.

ಈ ಗೋಪುರವು ಸುಮಾರು ೪೦ ಅಡಿ ಎತ್ತರವಿದ್ದು ಅನೇಕ ಪೌರಾಣಿಕ ದೃಶ್ಯಗಳನ್ನು ಗಾರೆಯಲ್ಲಿ ಬಿಡಿಸಿದ್ದಾರೆ. ಈ ಗೋಪುರವನ್ನು ಬಸೆಟ್ಟಪ್ಪನೆಂಬ ಭಕ್ತನೊಬ್ಬನು ನಿರ್ಮಿಸಿದನು. ದೇವಸ್ಥಾನದ ಒಳಗೆ ಮತ್ತು ಮಹಾದ್ವಾರದ ಮೇಲಿರುವ ಅನೇಕ ಶಿಲ್ಪಗಳ ಜೊತೆಗೆ ಗೋಪುರದ ಮೊದಲನೆಯ ಪಟ್ಟಿಕೆಯಲ್ಲಿ ಮತ್ತು ಒಳಗೆ ಗಾರೆಗಚ್ಚಿನಲ್ಲಿ ಯೂರೋಪಿಯನ್ನರ ಕೆಲವು ಶಿಲ್ಪಗಳನ್ನು ಮೂಡಿಸಲಾಗಿದೆ. ಮಹಾದ್ವಾರದ ಮುಂಭಾಗದ ಎಡದಿಂದ ಮೊದಲನೆಯ ಗಾರೆಯ ಶಿಲ್ಪ ಹೀಗಿದೆ.

ಕುದುರೆಬಂಡಿಯೊಂದನ್ನು ಎಳೆಯುತ್ತಿರುವ ಕುದುರೆಯು ಅಲಂಕರಿಸಲ್ಪಟ್ಟಿದೆ. ಸಾರಥಿಯು ಯೂರೋಪಿಯನ್ ವ್ಯಕ್ತಿಯಾಗಿದ್ದಾನೆ. ಈ ವ್ಯಕ್ತಿಯು ತನ್ನ ಎಡಗೈಯಲ್ಲಿ ಕುದುರೆಯ ಲಗಾಮುವನ್ನು ಬಲಗೈಯಲ್ಲಿ ಚಾವಟಿಯನ್ನು ಹಿಡಿದಿರುವನು. ಕುದುರೆಯ ಕಾಲುಗಳಿಂದ ಈ ಬಂಡಿಯು ಚಲನೆಯಲ್ಲಿರುವುದು ವ್ಯಕ್ತವಾಗುವುದು. ಬಂಡಿಗೆ ಕಿಟಕಿಯೂ ಇರುವುದು. ಅದರ ಒಳಗಿರುವ ಒಬ್ಬ ವ್ಯಕ್ತಿ ಯೂರೋಪಿಯನ್ ಹ್ಯಾಟ್ ಧರಿಸಿರುವುದನ್ನು, ಅವನು ಹಾಕಿಕೊಂಡಿರುವ ಅಂಗಿಯು ಕತ್ತಿನವರೆಗೂ ಇದ್ದಂತೆ ಕಾಣುವುದು. ಆತನ ಮುಂದೆ ಇನ್ನೊಬ್ಬ ವ್ಯಕ್ತಿಯು ಕುಳಿತಿದ್ದು ತಲೆಯ ಮೇಲೆ ಯಾವ ತರಹದ ಹ್ಯಾಟ್ ಇಲ್ಲದಿದ್ದು ಆ ವ್ಯಕ್ತಿ ಸ್ತ್ರೀ ಎನ್ನಬಹುದು. ಬಂಡಿಯ ಚಕ್ರವನ್ನು ಸುಂದರವಾಗಿ ಮೂಡಿಸಿದ್ದಾರೆ. ಬಂಡಿಯ ಮುಂದೆ ಮೇನೆ

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ-೫೭೭ ೫೦೧

ಒಂದನ್ನು ಹೊತ್ತುಕೊಂಡು ಹೋಗುತ್ತಿರುವ ದೃಶ್ಯವೂ ಇದೆ. ಮೇನೆಯನ್ನು ಹೊತ್ತಿರುವವರು ಸ್ಥಳೀಯರು ಎಂಬುದು ಅವರು ಧರಿಸಿರುವ ಉಡುಪಿನಿಂದ ವ್ಯಕ್ತವಾಗುತ್ತದೆ. ಮೇನೆಯ ಒಳಗೆ ಇಬ್ಬರು ಇದ್ದು ಗಾತ್ರದಲ್ಲಿ ಸಣ್ಣದಾಗಿದ್ದು ತಲೆಯ ಮೇಲೆ ಹ್ಯಾಟನ್ನು ಧರಿಸಿರುವುದರಿಂದ ಆ ವ್ಯಕ್ತಿ ಒಬ್ಬ ಚಿಕ್ಕ ಹುಡುಗ ಇದ್ದಂತೆ ಕಾಣುತ್ತದೆ. ಹಾಗೂ ಆ ಬಾಲಕನೊಡನೆ ಇರುವ ವ್ಯಕ್ತಿಯೂ ಯೂರೋಪಿಯನ್ ಎಂಬುದಾಗಿ ತಲೆ ಕೂದಲಿನಿಂದ ಗುರುತಿಸಬಹುದು. ಪ್ರಾಯಶಃ ಸ್ತ್ರೀ ಇದ್ದರೂ ಇರಬಹುದು.

ಮೂರನೆಯದಾಗಿ ಮೇನೆಯ ಮುಂದೆ ಸುಂದರವಾಗಿ ಅಲಂಕರಿಸಿರುವ ಕುದುರೆಯೊಂದು ಇದ್ದು ಅದರ ಸವಾರನು ಯೂರೋಪಿಯನ್ ಎಂಬುದು ಅವನು ಧರಿಸಿರುವಕೋಟು ಹ್ಯಾಟು ಮತ್ತು ಕೂದಲುಗಳಿಂದ ಕಂಡುಬರುವುದು. ಅವನ ಬಲಗೈಯಲ್ಲಿ ಚಾಟಿ, ಎಡ ಕೈಯಲ್ಲಿ ಲಗಾಮು ಇರುವುವು ಮತ್ತು ಈ ಕುದುರೆಯ ಮುಂದೆ ಒಂಟೆಯೊಂದು ಸಾಗುತ್ತಿರುವ ದೃಶ್ಯ ಪ್ರಮುಖವಾದದ್ದು. ಅಲಂಕರಿಸಲ್ಪಟ್ಟ ಒಂಟೆಯ ಚಿತ್ರಣ ಪ್ರಮಾಣಬದ್ಧ ತಲೆಯ ಮೇಲೆ ಸವಾರ ಚಪ್ಪಟೆಯಾದಂತಹ ಟೋಪಿಯನ್ನು ಧರಿಸಿರುವವನು. ಒಂಟೆಯ ಬಾಯಿ ತೆಗೆದಿದ್ದು ಹಲ್ಲುಗಳು ಸಹ ಕಂಡುಬರುತ್ತದೆ.

ನಾಲ್ಕನೆಯದಾಗಿ ಮೇಲೆ ಹೇಳಿರುವ ಯೂರೋಪಿಯನ್ನರನ್ನು ಸ್ವಾಗತಿಸಲು ಬಂದ ಹಾಗೆ ಸ್ಥಳೀಯ ವಾದ್ಯಗಾರರು ಇಬ್ಬರು ಇರುವರು. ಅವರಲ್ಲಿ ಮುಂದೆಯಿರುವವನು ತಮಟೆಯನ್ನು ಬಾರಿಸುತ್ತಾ, ಹಿಂದೆಯಿರುವವರನ್ನು ಕಹಳೆಯನ್ನು ಊದುತ್ತಿದ್ದಾನೆ. ಇವರ ಹಿಂದೆ ಅತ್ಯಂತ ಸುಂದರವಾಗಿ ಕುದುರೆಯ ಮೇಲೆ ಸ್ಥಳೀಯ ಪ್ರಮುಖನೆನ್ನಬಹುದಾದ ಇಬ್ಬರ ಚಿತ್ರಣವಿದೆ. ಇವರು ಸೊಂಟಪಟ್ಟಿ ಧರಿಸಿದ್ದಾರೆ. ಕುದುರೆಯ ಮೇಲೆ ಅಲಂಕೃತ ಬಟ್ಟೆಯ ತರಹದ ವಸ್ತ್ರವಿದೆ. ಈ ವ್ಯಕ್ತಿಯ ಬಲಗೈ ತುಂಡಾಗಿದೆ. ಇವನು ಧರಿಸಿರುವ ತಲೆಯ ಮೇಲಿನ ಟೋಪಿಯು ಚಪ್ಪಟೆಯಾಗಿದೆ. ಈ ಕುದುರೆ ಸವಾರನೂ ಸಹ ಉದ್ದನೆಯ ಅಂಗಿ ಧರಿಸಿರುವ ಹಾಗೆ ಶಿಲ್ಪಿಸಿದ್ದಾರೆ. ಕುದುರೆಯ ಕತ್ತಿನ ಮೇಲಿನ ಕೂದಲಿನ ಎಳೆಗಳನ್ನು ಸೂಕ್ಷ್ಮವಾಗಿ ಗಾರೆಯಲ್ಲಿ ಮೂಡಿಸಿದ್ದಾರೆ. ಈ ಕುದುರೆಯ ಹಿಂದೆ ಇನ್ನೊಬ್ಬ ಕುದುರೆ ಸವಾರನು ಇದ್ದು ಕುದುರೆಯು ಮುಂದಿನ ಎಡಗಾಲನ್ನು ಎತ್ತಿದೆ. ಕುದುರೆ ಸವಾರನ ಬಲಗೈಯು ಮುಂದಿದ್ದು ಸವಾರನ ಸೊಂಟದ ಪಟ್ಟಿಯೊಂದಿಗೆ ಕತ್ತಿಯೂ ಸಹ ಕಾಣುತ್ತದೆ. ಬಹುಶಃ ಇವರುಗಳು ಸ್ಥಳೀಯರು ಹಾಗೂ ಮೇಲೆ ಹೇಳಿರುವ ಯೂರೋಪಿಯನ್ನರನ್ನು ಸ್ವಾಗತಿಸಲು ಬಂದವರೆಂದು ಭಾವಿಸಬಹುದು. ಗೋಪುರದ ಎಡಭಾಗದ ಕೆಳಪಟ್ಟಿಯಲ್ಲಿ ಯೂರೋಪಿಯನ್ ಸವಾರನು ಒಬ್ಬನಿದ್ದು ತನ್ನ ಬಲಗೈಯಲ್ಲಿ ರಹದಾರಿ ಪತ್ರವೆನ್ನುವ ಹಾಗೆ ಇರುವ ವಸ್ತುವೊಂದನ್ನು ಹಿಡಿದು ಮುಂದೆ ಸಾಗುತ್ತಿದ್ದಾನೆ. ತಲೆಯ ಮೇಲೆ ಯೂರೋಪಿಯನ್ ಹ್ಯಾಟ್ ಧರಿಸಿರುವನು. ಎಡಗೈಯಲ್ಲಿ ಲಗಾಮಿದ್ದು ಕೋಟಿನ ತರಹದ ಬಟ್ಟೆಯನ್ನು ಧರಿಸಿರುವುದು ಕಾಣಬರುತ್ತದೆ. ಇವನ ಮುಂದೆ ಇಬ್ಬರೂ ತುತ್ತೂರಿ (ಶಹನಾಯಿ) ಬಾರಿಸುತ್ತಾ ನಿಂತಿರುವ ವಾದ್ಯಗಾರರಿದ್ದಾರೆ. ಇವರ ಉಡುಪು ೧೭ ಅಥವಾ ೧೮ನೇ ಶತಮಾನದ ಯೂರೋಪಿಯನ್ನರ ವಸ್ತ್ರಗಳಂತಿದ್ದು, ಅಗಲವಾದ ಸೊಂಟಪಟ್ಟಿಗಳನ್ನು ಧರಿಸಿದ್ದಾರೆ. ತಲೆಯ ಮೇಲೆ ಯೂರೋಪಿಯನ್ ಮಾದರಿಯ ಹ್ಯಾಟುಗಳು ಇರುವುವು. ಅವರ ಮುಂದೆ ವಾದ್ಯಗಳನ್ನು ನುಡಿಸುತ್ತಾ ನಿಂತಿರುವ ಇಬ್ಬರೂ ಪುರುಷರಾಗಿದ್ದು, ಇವರು ಧರಿಸಿರುವ ವಸ್ತ್ರಗಳು ಮತ್ತು ಎದೆಯ ಮೇಲಿರುವ ಭುಜದಿಂದ ಸೊಂಟದವರೆಗೂ ಇರುವ ಪಟ್ಟಿಗಳು ಮತ್ತು ನಿಂತಿರುವ ಭಂಗಿಯನ್ನು ಸೂಕ್ಷ್ಮವಾಗಿ ಅಭ್ಯಾಸಿಸಿದರೆ ಯೂರೋಪಿಯನ್ ವಾದ್ಯವೃಂದ ಎಂಬುದಾಗಿ ಹೇಳಬಹುದು. ಈ ವಾದ್ಯವೃಂದದ ಮುಂದೆ ಯೂರೋಪಿಯನ್ ಸೈನ್ಯದ ಪ್ರಮುಖನೆಂದು ಹೇಳಬಹುದಾದ ವ್ಯಕ್ತಿಯೊಬ್ಬ ನಿಂತಿದ್ದಾನೆ. ಇವನಿಗೆ ಭುಜಕೀರ್ತಿಗಳು ಇವೆ. ಎದೆಯ ಭಾಗದಲ್ಲಿ ಎಡಬಲ ಭುಜದಿಂದ ಸೊಂಟದವರೆಗೂ ಇರುವ ಪಟ್ಟಿಗಳಿವೆ. ಇವನು ಧರಿಸಿರುವ ತಲೆಯ ಟೋಪಿಯು ಭಿನ್ನವಾಗಿದ್ದು ಸ್ವಲ್ಪ ಉದ್ದವಾಗಿದೆ. ಇವನ ಮುಂದೆ ಹತ್ತು ಜನ ಸೈನಿಕರು ಪಥ ಸಂಚಲನದಲ್ಲಿದ್ದಾರೆ. ಇವರುಗಳು ತಮ್ಮ ಎಡಗೈ ಮತ್ತು ಎಡಗಾಲುಗಳನ್ನು ಮುಂದಿಟ್ಟು ಸಾಗುತ್ತಿರುವ ಹಾಗೆ, ತಮ್ಮ ಬಲಗೈಗಳಲ್ಲಿ ಚಾಕುವನ್ನು ಹೊಂದಿರುವಂತಹ ಕೋವಿಗಳನ್ನು ಬಲಭುಜದ

ಮೇಲಿಟ್ಟುಕೊಂಡು ಮುಂದೆ ಸಾಗುತ್ತಿದ್ದಾರೆ. ಇವರ ಸೊಂಟಪಟ್ಟಿಯ ಜೊತೆಗೆ ಕೋವಿ ಗುಂಡುಗಳ ಸಣ್ಣ ಚೀಲವೊಂದು ಇದ್ದಂತೆ ಇರುವುದು. ಇವರ ಹಿಂದೆ ಯೂರೋಪಿಯನ್ ಕುದುರೆ ಸವಾರನು ಇದ್ದು ಸೊಂಟ ಪಟ್ಟಿಯೂ ಕಂಡುಬರುತ್ತದೆ. ಇವನೂ ಸಹ ಯೂರೋಪಿಯನ್ ಹ್ಯಾಟನ್ನು ಧರಿಸಿ ಸೈನಿಕರ ಹಿಂದೆ ಸಾಗುತ್ತಿರುವನು.

ಗೋಪುರದ ಹಿಂದಿನ ಭಾಗದ ಕೆಳಪಟ್ಟಿಯಲ್ಲಿ ಯೂರೋಪಿಯನ್ನರು ಶಿಕಾರಿ ಮಾಡುತ್ತಿರುವ ದೃಶ್ಯವೂ ಕೆತ್ತಲ್ಪಟ್ಟಿದೆ. ಒಬ್ಬ ಯೂರೋಪಿಯನ್ ಕುದುರೆ ಸವಾರನು ಕಾಡು ಹಂದಿಯನ್ನು ಶಿಕಾರಿ ಮಾಡುತ್ತಿರುವ ಈ ದೃಶ್ಯದಲ್ಲಿ, ಕಾಡು ಹಂದಿಯ ಆಯಕಟ್ಟಿನ ಜಾಗದಲ್ಲಿ ಎರಡು ಬೇಟೆ ನಾಯಿಗಳು ಕಚ್ಚಿ ಹಿಡಿದಿರುವುದು ಈ ಕಾಡುಹಂದಿಯ ಮುಂಭಾಗದಲ್ಲಿ ಸ್ಥಳೀಯನೊಬ್ಬ ಅದನ್ನು ಭರ್ಜಿಯಿಂದ ಇರಿಯುತ್ತಿದ್ದಾನೆ ಅಥವಾ ಆಕ್ರಮಣ ಮಾಡುತ್ತಿದ್ದಾನೆ. ಇಲ್ಲಿ ಯೂರೋಪಿಯನ್ ಕುದುರೆ ಸವಾರ ಹುಲಿಬೇಟೆಯಾಡುತ್ತಿದ್ದು, ಆ ಹುಲಿಯು ಒಬ್ಬ ಮನುಷ್ಯನನ್ನು ಬಾಯಲ್ಲಿ ಹಿಡಿದಿದ್ದು, ಆ ಹುಲಿಯನ್ನು ಯೂರೋಪಿಯನ್ ಸವಾರನು ಕೋವಿಯಿಂದ ಹೊಡೆಯುತ್ತಿರುವ ದೃಶ್ಯವನ್ನು ರೂಪಿಸಲಾಗಿದೆ. ಅದರಲ್ಲೇ ಯೂರೋಪಿಯನ್ ವ್ಯಕ್ತಿಯೊಬ್ಬನಿದ್ದು ಅವನನ್ನು ಸ್ಥಳೀಯ (?) ಸ್ತ್ರೀಯರು ಸುತ್ತುವರೆದಿರುವಂತೆ ಹಾಗೂ ಆ ವ್ಯಕ್ತಿ ಆ ಸ್ತ್ರೀಯರ ಕೈಗಳನ್ನು ಎಳೆಯುತ್ತಿರುವಂತೆ ಅಶ್ಲೀಲವೆನ್ನಿಸುವ ಗಾರೆಯ ಶಿಲ್ಪವೊಂದಿದೆ.

ಈ ಮೇಲಿನ ಯೂರೋಪಿಯನ್ನರ ಗಾರೆ ಶಿಲ್ಪಗಳಿಂದ ಇವರುಗಳು ಫ್ರೆಂಚರೆಂಬಂತೆ, ೧೮ನೆಯ ಶತಮಾನದಲ್ಲಿ ಗಾರೆ ಕೆಲಸದ ಶಿಲ್ಪಿಗಳು ಅವರನ್ನು ಬಿಡಿಸಿರುವಂತೆ ಕಾಣುತ್ತದೆ ಮತ್ತು ಸ್ಥಳೀಯ ಜನತೆ ಇವರ ಪ್ರಭಾವಕ್ಕೆ ಎಷ್ಟರಮಟ್ಟಿಗೆ ಒಳಗಾಗಿದ್ದರು ಮತ್ತು ಇವರನ್ನು ಓಲೈಸುತ್ತಿದ್ದರು, ಎಂಬುದು ಮತ್ತು ದೇಶೀಯರ ಮೇಲೆ ಯೂರೋಪಿಯನ್ನರು ಹೇಗೆ ರಾಜಕೀಯ ಪ್ರಭಾವ ಬೀರಿದ್ದರು ಎಂಬುದು ಈ ಶಿಲ್ಪಗಳಿಂದ ವ್ಯಕ್ತವಾಗುತ್ತದೆ. ಇದಲ್ಲದೆ ಬೇಟೆಯಂತಹ ಕ್ರೀಡೆಗಳಲ್ಲೂ ಸಹ ಯೂರೋಪಿಯನ್ನರೂ ದೇಶೀಯರೊಟ್ಟಿಗೆ ಹೇಗೆ ತೊಡಗುತ್ತಿದ್ದರು ಎಂಬ ಶಿಲ್ಪವೂ ಸಹ ಇಲ್ಲಿ ಕಾಣಬರುತ್ತದೆ.

[ಈ ವಿಷಯದ ಅಧ್ಯಯನದ ಸಂದರ್ಭದಲ್ಲಿ ಸಹಕರಿಸಿದ ಚಿತ್ರದುರ್ಗದ ಗೆಳೆಯರಾದ ಸರ್ವಶ್ರೀ ಎಂ. ಅಬ್ದುಲ್ ರಜಾಕ್, ಬಿ. ರಾಜಶೇಖರಪ್ಪ, ರಾಮರೆಡ್ಡಿ ಮತ್ತು ನದೀಮ್ ಜಫರ್ ಅವರಿಗೆ ಕೃತಜ್ಞತೆಗಳು ಸಲ್ಲುತ್ತವೆ.]

ಶ್ರೀ ಕೆ. ಜಿ. ಭಟ್‌ಸೂರಿ*

# ಉತ್ತರ ಕನ್ನಡ ಜಿಲ್ಲೆಯ ಕಾಷ್ಟ ಶಿಲ್ಪಕಲೆ-ಒಂದು ಟಿಪ್ಪಣಿ

ಕರ್ನಾಟಕ, ಅದರಲ್ಲೂ ಉತ್ತರ ಕನ್ನಡ ಜಿಲ್ಲೆ ಹಲವು ತೆರನಾದ ಕಲೆಗಳ ತವರೂರು. ರೂವಾರಿ ತನ್ನ ಕಲೆಯ ನಿರ್ಮಾಣಕ್ಕೆ ಮರವನ್ನಾಗಲೀ, ಕಲ್ಲನ್ನಾಗಲೀ ಅಥವಾ ಮಣ್ಣನ್ನಾಗಲೀ ಬಳಸಿ ಒಂದು ಆಕೃತಿಯನ್ನೋ ಅಥವಾ ಒಂದು ಸಾಂಕೇತಿಕ ಮೂರ್ತಿಯನ್ನೋ ನಿರ್ಮಿಸುತ್ತಾನೆ. ಹೀಗೆ ನಿರ್ಮಿಸುವ "ಶಿಲ್ಪಕಲೆ ಬರೀ ಪ್ರತಿಮೆ ಅಥವಾ ದೇವತೆಯ ವಿಗ್ರಹವನ್ನು ರೂಪಿಸುವ ಕಲೆಗೆ" ಸೀಮಿತವಾಗಿಲ್ಲ. ತನ್ನ ಮನಸ್ಸಿನ ಭಾವನೆಗಳನ್ನು ಒಂದು ಸ್ಥಿರ ಮಾಧ್ಯಮದ ಮೂಲಕ ತೋರಿಸುವುದುಂಟು.[1] ಒಂದಲ್ಲ ಒಂದು ರೀತಿಯಿಂದ ಸೌಂದರ್ಯ ಪ್ರಜ್ಞೆ, ಉಪಯುಕ್ತತೆ ಮತ್ತು ಆಧ್ಯಾತ್ಮಿಕತೆಯ ಸಮನ್ವಯ ಧರ್ಮವು ಕಲೆಯಲ್ಲಿ ಕಾಣುವ ವೈಶಿಷ್ಟ್ಯ. ಇಲ್ಲಿ ಗುಡಿಗಾರಿಕೆ ಅಥವಾ ಗುಡಿಗಾರರ ಕಲೆಯನ್ನು ಪ್ರಧಾನವಾಗಿರಿಸಿಕೊಂಡು ಅವರ ಕಲಾ ಸಂಪ್ರದಾಯವನ್ನು ಉತ್ತರ ಕನ್ನಡ ಜಿಲ್ಲೆಗೆ ಸೀಮಿತ ಮಾಡಿ, ಒಂದು ಪರಿಚಯವನ್ನು ಮಾತ್ರ ಇಲ್ಲಿ ಮಾಡುತ್ತಿದ್ದೇನೆ.

ಗಂಧದ ಕೆತ್ತನೆ, ಬೆಂಡಿನಹಾರ, ತುರಾಯಿ (ಸುಗ್ಗಿ ಕುಣಿತದಲ್ಲಿ ಬಳಸುವ ಬೆಂಡಿನ ತುರಾಯಿ) ಗುಡಿಗೋಪುರದ ಮರದ ವಿನ್ಯಾಸ, ಶಿಲ್ಪಕಲೆ, ಸ್ಥಂಬಗಳ ನಿರ್ಮಾಣ, ಕೆಲವು ಅಲಂಕೃತ ಗೃಹೋಪಯೋಗಿ ಪೀಠೋಪಕರಣ ಭಿತ್ತಿಫಲಕ ಮುಂತಾದವುಗಳಲ್ಲಿ ಈ ಗುಡಿಗಾರ ಕಲಾಕೌಶಲ್ಯ ಎದ್ದು ಕಾಣುತ್ತದೆ.

ಮರದ ಕೆತ್ತನೆಕಲೆಯ ಸಂಪ್ರದಾಯ ಹೆಚ್ಚಿನ ಮಟ್ಟಿಗೆ ದೇವಾಲಯ ರಥಗಳಲ್ಲಿ ಕಾಣಬಹುದು. ರಥಗಳ ಪಟ್ಟಿಕೆಯಲ್ಲ ರಾಮಾಯಣ, ಮಹಾಭಾರತ ಹಾಗೂ ಪೌರಾಣಿಕ ವಿಷಯಕ್ಕೆ ಸಂಬಂಧಪಟ್ಟ ಕಥಾನಕಗಳು, ಯಾಳಿ, ಶಾರ್ದೂಲ, ಗಜ ಮತ್ತು ಹಂಸಗಳ ಕಲಾತ್ಮಕ ನಿರೂಪಣೆ ಕಂಡು ಬರುತ್ತದೆ. ಉದಾಹರಣೆಗಾಗಿ ಕುಮಟಾ ತಾಲ್ಲೂಕಿನ ಧಾರೇಶ್ವರ ದೇವಾಲಯ, ಶಿರಸಿ ತಾಲ್ಲೂಕಿನ ಬನವಾಸಿ, ಹೊನ್ನಾವರದ ರಾಮಮಂದಿರದ ಹೊರಾವರಣದಲ್ಲಿ ನಿಲ್ಲಿಸಿರುವ ರಥ, ಇವುಗಳಲ್ಲಿ ಇಂಥ ಕೆಲವು ಅಪೂರ್ವ ಕಲಾಕೃತಿಗಳು ಪ್ರತಿಬಿಂಬಿತವಾಗಿವೆ. ಹಿಂದಿನ ಸೂಪಾ ತಾಲ್ಲೂಕಿನ (ಇಂದಿನ ಜೋಯಡಾ) ದೂಧಗಾಳಿಯಲ್ಲಿ ರಾಮೇಶ್ವರ ದೇವಾಲಯಗಳ ಸ್ತಂಬದ ಮೇಲೆ ದಶಾವತಾರ ಮತ್ತು ಕಾಮಸೂತ್ರದ ಸ್ವಾರಸ್ಯಕರ ಪಟ್ಟಿಕೆ ಇದೆ. ಕುಮಟಾದ ಮಹಾಲಸ ನಾರಾಯಣ ದೇವಾಲಯದ ಭುವನೇಶ್ವರಿಯು ಸುಂದರ ಕೆತ್ತನೆಯಿಂದೊಡಗೂಡದೆ.

ಮುರುಡೇಶ್ವರದಿಂದ ಒಂದೂವರೆ ಕಿ. ಮೀ.

---

* ಶಾಸನ ತಜ್ಞ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು-೫೭೦ ೦೦೧

1 ಶಿವರಾಮ ಕಾರಂತ, ಕೆ. ೧೯೭೫ : ಭಾರತೀಯ ಶಿಲ್ಪ ಬೆಂಗಳೂರು ವಿಶ್ವವಿದ್ಯಾನಿಲಯ ಬೆಂಗಳೂರು ಪುಟ-೧

ಅಂತರದಲ್ಲಿ ತೂದಳವೇ ನದಿಯ ದಂಡೆಯ ಮೇಲೆ ಮರದಿಂದ ಕೆತ್ತಲ್ಪಟ್ಟ ಹದಿನಾರು ಮೂರ್ತಿಗಳು ದೊರೆತಿವೆ.[2] ಇವುಗಳಲ್ಲಿ ಮುಖ್ಯವಾದುದು ನೇತ್ರಾಣಿ ಜಟಕ. ನೇತ್ರಾಣಿ ಬಹುಶಃ ಸಮೀಪದ ಗುಡ್ಡದ ಹೆಸರಿರಬೇಕು. ನೇತ್ರಾಣಿ ಜಟಕ ಎನ್ನುವ ಮಾತು ನೇತ್ರಾಣಿ ಗುಡ್ಡದ ಪಾಲಕನಿರಬೇಕು. ನೇತ್ರಾಣಿ ಜಟಕ ೧೨೦ ಸೆಂ. ಮೀ. ಎತ್ತರವಿದ್ದು, ನಿಂತಭಂಗಿಯಲ್ಲಿದ್ದು, ತಲೆಯ ಮೇಲೆ ಹಾವಿನ ಹೆಡೆಯಿದೆ. ಕೈಯಲ್ಲಿ ದಾಂಡು ಹಿಡಿದಿದೆ. ಗಡ್ಡ, ಮೀಸೆ ಎದ್ದು ಕಾಣುತ್ತದೆ. ವೀರಮಾಸ್ತಿ, ಮಲ್ಲಿಮಾಸ್ತಿ ಮತ್ತು ಮಾಮಾಸ್ತಿ ನೇತ್ರಾಣಿ ಜಟಕನ ಪತ್ನಿಯರು. ಐದನೆಯದು ಬಾಳಬಂಟ, ಆರನೆಯದು ಕುದುರೆ ವೀರಪ್ಪನೆಂದು, ಲೋಕಾರೂಢಿಯಲ್ಲಿರುವ ಮಾತು. ಕುದುರೆ ವೀರಪ್ಪ ಹೆಸರಿಗೆ ತಕ್ಕಂತೆ ಕುದುರೆಯ ಮೇಲೆ ಕುಳಿತು ಸವಾರಿ ಮಾಡುತ್ತಿರುವ ದೈವವಾಗಿದ್ದು, ನಿಜಕ್ಕೂ ಸುಂದರವಾಗಿದೆ. ಈತ ಉದ್ದನೆಯ ನಿಲುವಂಗಿ ಧರಿಸಿದ್ದಾನೆ. ಟೋಪಿಯನ್ನು ಧರಿಸಿದ ರೀತಿ ಇಂಗ್ಲೀಷ್ 'ಹ್ಯಾಟ್' ಮಾದರಿಯದು. ಏಳನೆಯದು ಯಕ್ಷಿಕಂಬ ಈ ಕಂಬದ ಸುತ್ತಲೂ ಹಾವಿನ ಹೆಡೆಯ ಲಾಂಛನವಿದೆ. ಇದರ ಹೊರತಾಗಿ ಮಾಸ್ತಿ ಮನೆಯಲ್ಲಿ ಇನ್ನೂ ಮೂವತ್ತು ಮರದ ಮೂರ್ತಿಗಳಿವೆ. ಇವುಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಹಾಗೇ ಕಲಾತ್ಮಕತೆಯ ದೃಷ್ಟಿಯಿಂದ ಮತ್ತು ಪ್ರಾದೇಶಿಕ ಜಾನಪದದ ಐತಿಹ್ಯದ ದೃಷ್ಟಿಯಿಂದ ಮಹತ್ವದ್ದಾಗಿದೆ.

ಕರ್ನಾಟಕ ವಿಶ್ವವಿದ್ಯಾನಿಲಯದ ವಸ್ತು ಸಂಗ್ರಹಾಲಯದಲ್ಲಿ ೧೬–೧೭ನೇ ಶತಮಾನಕ್ಕೆ ಸೇರಿದ ಕಿನ್ನರಿ, ಮೂಲತ : ಹೊನ್ನಾವರ ತಾಲ್ಲೂಕಿನ ಔಂಸಹಳ್ಳಿ ಗ್ರಾಮಕ್ಕೆ ಸೇರಿದೆ. ಇದು ೪೦ ಸೆಂ. ಮೀ. ಎತ್ತರವಿದ್ದು, ಕೈಬಳೆ, ತೋಳಬಂದಿ, ಕಿರೀಟ ಮತ್ತು ಆಭರಣಗಳಿಂದ ಅಲಂಕರಿಸಲ್ಪಟ್ಟಿವೆ. ಮೇಲ್ಭಾಗ ಹೆಂಗಸಿನ ರೂಪ, ಕೆಳಭಾಗ ಒಂದು ಪಕ್ಷಿಯ ಬಾಲದಂತಿದ್ದು ಮೇಲಕ್ಕೇರಿ ನಿಂತಿದ್ದು, ನೃತ್ಯ ಭಂಗಿಯಲ್ಲಿದೆ. ಕಿನ್ನರಿ ಧರಿಸಿದ ಕಿವಿಯೋಲೆಯ ಮೇಲ್ಭಾಗದಲ್ಲಿ ಬುಗುಡಿಯಾಕಾರ ಮತ್ತು ಎರಡು ಕಿವಿಗೂ ಲೋಲಕ ಮತ್ತು ಕೆಳಭಾಗದಲ್ಲಿ ಬೆಂಡೋಲೆ ಧರಿಸಿದೆ. ಕೊರಳಲ್ಲಿ ಹಲವಾರು ಪದಕಗಳಿವೆ. ಎಡಗೈಯಲ್ಲಿ ಉದ್ದ ದಂಟಿನ ಮೊಗ್ಗನ್ನು ಹಿಡಿದಿದೆ. ಎಡಕ್ಕೆ ತುಸು ವಾಲಿವಂತಿದೆ. ಬಲಗೈ ಮುಂದಿದೆ. ಕೆಳಭಾಗದಲ್ಲಿ ಕಟಿಬಂಧ ಮತ್ತಿತರ ಟೊಂಕದ ಆಭರಣಗಳಿವೆ. ಹಣೆಯಲ್ಲಿ ನಾಮದ ಲಂಬಾಕಾರದ ಗುರುತಿದೆ.

ಉತ್ತರ ಕನ್ನಡ ಜಿಲ್ಲೆಯಲ್ಲಿ ಗ್ರಾಮದೇವಿ ಪೂಜೆ ಹೆಚ್ಚು ಪ್ರಚಲಿತವಿದೆ. ಉದಾಹರಣೆಗಾಗಿ ಶಿರಸಿ ಮಾರಿಕಾಂಬೆ. ಮರಗೆತ್ತನೆಯ ಕಲಾಕೌಶಲ್ಯಕ್ಕೆ ಇದೊಂದು ಉತ್ತಮ ನಿದರ್ಶನ. ಸುಮಾರು ನಾಲ್ಕು ಮೀ. ಎತ್ತರದ ಈ ಮೂರ್ತಿ ನಿಂತ ಭಂಗಿಯಲ್ಲಿದ್ದು ಅಷ್ಟಭುಜಳಾಗಿ ಆಯುಧಗಳನ್ನು ಹಿಡಿದಿದ್ದಾಳೆ. ಈಕೆ ಸಿಂಹ ವಾಹನೆ. ಈ ಸುಂದರ ಮೂರ್ತಿಯ ಮುಖ ಭಾವದಲ್ಲಿ ಶಕ್ತಿ ಸ್ವರೂಪ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಮಾರೆಮ್ಮ ಮೂಲತಃ ಈ ಭಾಗದ ಜನಪ್ರಿಯ ಗ್ರಾಮದೇವತೆ.[3]

ಒಟ್ಟಿನಲ್ಲಿ ಮರದ ಕೆತ್ತನೆಯ ಈ ಕಲಾತ್ಮಕ ಕೃತಿಗಳು ಉತ್ತರ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಇದು ವಾಸ್ತವವಾಗಿ ಉತ್ತರ ಕನ್ನಡದ ಗುಡಿಗಾರರ ಶ್ರೀಮಂತ ಕಲಾಪರಂಪರೆಯನ್ನು ಪ್ರತಿನಿಧಿಸುತ್ತದೆ. ಇಲ್ಲಿ ಕೆಲವು ಮೂರ್ತಿಗಳ ಕಾಲವನ್ನು ನಿರ್ದಿಷ್ಟವಾಗಿ ಹೇಳಲಾಗದಿದ್ದರೂ ಕಲಾತ್ಮಕ ಕೆತ್ತನೆಯ ದೃಷ್ಟಿಯಿಂದ ಉತ್ತರ ಕನ್ನಡ ಜಿಲ್ಲೆ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿದೆ ಎಂಬುದು ಸ್ಪಷ್ಟವಾಗುತ್ತದೆ. ಸ್ಥಳೀಯವಾಗಿ ಲಭ್ಯವಿರುವ ಮರಮಟ್ಟುಗಳು ಈ

2 Panchamukhi, R. S. 1941 : Annual Report on Kannada Research in Bombay Province for the year 1939-40, Dharwar, P. 28.

3 Bhat Soori, K. G 1987 : Art and Architecture of North Kanara (Early Medieval Phase) (Unpublished Ph. D., Thesis) University of Mysore, PP. 301-303.

ಬಗೆಯ ಕಲೆಗಾರಿಕೆ ಬೆಳೆದು ಬರಲು ಪೂರಕವಾಗಿರಬಹುದು. ಇಷ್ಟಾದರೂ ಈ ಕಲಾಪರಂಪರೆಯಲ್ಲಿ ಆಗಮೋಕ್ತ ಪ್ರತಿಮಾ ಲಕ್ಷಣದ ಎಲ್ಲ ವಿವರಗಳು ಶಾಸ್ತ್ರಬದ್ಧವಾಗಿ ಪಡೆದಿದೆ ಎಂದು ಹೇಳಲಾಗುವುದಿಲ್ಲ. ಅಂತೆಯೇ ಇವುಗಳನ್ನು ಆಯಾ ಪ್ರದೇಶದ ವಿಶಿಷ್ಟ ಕಲೆಯಾಗಿ ಪ್ರತ್ಯೇಕವಾಗಿ ಅಧ್ಯಯನ ಮಾಡುವುದು ಅಗತ್ಯ ಎಂದು ತೋರಿಸುವುದಷ್ಟೆ ಈ ಪ್ರಬಂಧದ ಉದ್ದೇಶ.

---

ಈ ಲೇಖನವನ್ನು ಬರೆಯುವಾಗ ಸಲಹೆ ನೀಡಿದ ಡಾ: ಹೆಚ್. ರಘುನಾಥ್ ಭಟ್‌ರವರಿಗೆ ನನ್ನ ಕೃತಜ್ಞತೆಗಳು.

ಡಾ|| ಚನ್ನಬಸಪ್ಪ ಎಸ್. ಪಾಟೀಲ*

# ಬಳ್ಳಿಗಾವೆಯಲ್ಲಿ ಪಂಚತಂತ್ರದ ಮೂರು ಕಥಾ ಶಿಲ್ಪಗಳ ಶೋಧ

ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲೂಕಿನ ಬಳ್ಳಿಗಾವೆಯ ತ್ರಿಪುರಾಂತಕೇಶ್ವರ ದೇವಾಲಯದಲ್ಲಿ ಪಂಚತಂತ್ರ ಕಥೆಗಳ ಶಿಲ್ಪಗಳಿರುವುದು ಈಗಾಗಲೇ ತಿಳಿದಿರುವ ವಿಷಯ. ಹನ್ನೊಂದನೇ ಶತಮಾನದ ಈ ದೇವಾಲಯದಲ್ಲಿ ಡಾ|| ಎಂ.ಎಚ್. ಕೃಷ್ಣರು ಕೆಳಗಿನ ಮೂರು ಕಥೆಗಳ ಶಿಲ್ಪಗಳನ್ನು ಮೈಸೂರು ಪುರಾತತ್ವ ಇಲಾಖೆಯ ವಾರ್ಷಿಕ ವರದಿಯಲ್ಲಿ ಪ್ರಕಟಿಸಿದ್ದಾರೆ.[1] ೧. ಟಗರುಗಳ ಹೋರಾಟದಲ್ಲಿ ನರಿ ೨. ಹಂಸಗಳು ಮತ್ತು ಆಮೆ ಮತ್ತು ೩. ಮಂಗ ಮತ್ತು ಮೊಸಳೆ. ಡಾ|| ಎಂ. ಶೇಷಾದ್ರಿಯವರು ಈ ಮೂರು ಕಥೆಗಳಲ್ಲದೆ ಇನ್ನೂ ಎರಡು ಕಥೆಗಳನ್ನು ಗುರುತಿಸಿ ಅವರ ಲೇಖನದಲ್ಲಿ ಪ್ರಕಟಿಸಿದ್ದಾರೆ.[2] ಅವು ೧. ಕೀಲನುರ್ಚಿದ ಕೋಡಗ ಮತ್ತು ೨. ಬ್ರಾಹ್ಮಣಿಯು ಮುಂಗುಸಿಯನ್ನು ಕೊಂದದ್ದು. ಡಾ|| ಹೆಚ್.ಆರ್. ರಘುನಾಥ ಭಟ್ಟರು ಡಾ|| ಕೃಷ್ಣರು ಗುರುತಿಸಿದ ಮೂರು ಕಥೆಗಳನ್ನು ಮಾತ್ರ ತಮ್ಮ ಪ್ರೌಢ ಪ್ರಬಂಧದಲ್ಲಿ ಉಲ್ಲೇಖಿಸಿದ್ದಾರೆ.[3] ಈ ಐದು ಕಥೆಗಳಲ್ಲದೆ ಇನ್ನೂ ಮೂರು ಕಥೆಗಳ ಶಿಲ್ಪಗಳು ಈ ದೇವಾಲಯದಲ್ಲಿರುವುದು ನನ್ನ ಗಮನಕ್ಕೆ ಬಂದಿರುವುದರಿಂದ ಅವುಗಳನ್ನು ಇಲ್ಲಿ ವಿವರಿಸುತ್ತಿದ್ದೇನೆ.

### ಅತಿ ಲೋಭಿಯಾದ ನರಿ :

ದುರ್ಗಸಿಂಹನ ಪಂಚತಂತ್ರದಲ್ಲಿ ಈ ಕಥೆಯು ಕೆಳಗಿನಂತಿದೆ.[4] ಕಾಡಿನಲ್ಲಿ ವಾಸ ಮಾಡುತ್ತಿದ್ದ ಒಬ್ಬ ಬೇಟೆಗಾರನು ಆನೆಯನ್ನು ಕೊಂದು ನಿಂತಿರುತ್ತಾನೆ. ಆಗ ಇದ್ದಕ್ಕಿದ್ದಂತೆ ಒಂದು ಹೆಬ್ಬಾವು ಬರುತ್ತದೆ. ಬೇಟೆಗಾರನಿಗೆ ಅದರಿಂದ ತಪ್ಪಿಸಿಕೊಳ್ಳಲು ಅವಕಾಶವಿಲ್ಲದಂತಾಗಿ ವಿಷಪೂರಿತ ಬಾಣವನ್ನು ಅದರ ಮೇಲೆ ಪ್ರಯೋಗಿಸುತ್ತಾನೆ. ಹೆಬ್ಬಾವು ತಾನು ಸಾಯುವ ಮುನ್ನ ಬೇಟೆಗಾರನನ್ನು ಕೊಲ್ಲುತ್ತದೆ. ಬಹಳ ದಿನಗಳಿಂದ ಆಹಾರವನ್ನೇ ಕಾಣದ ನರಿಯೊಂದು ಅಲ್ಲಿಗೆ ಆಹಾರ ಹುಡುಕುತ್ತಾ ಬಂದು ಮೂರು ಶವಗಳು ಬಿದ್ದಿರುವುದನ್ನು ಕಂಡು ಸಂತೋಷಗೊಂಡು ಆನೆಯ ಮಾಂಸವನ್ನು ಆರು ತಿಂಗಳವರೆಗೆ, ಹೆಬ್ಬಾವಿನ ಮಾಂಸ

---

* ಉಪನಿರ್ದೇಶಕರು ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು-೫೭೦ ೦೦೧.

1 ಕೃಷ್ಣ ಎಂ.ಹೆಚ್., ೧೯೩೩, ಆ್ಯನುವಲ್ ರಿಪೋರ್ಟ್ ಆಫ್ ದಿ ಮೈಸರು ಅರ್ಕಿಯಾಲಜಿಕಲ್ ಡಿಪಾರ್ಟಮೆಂಟ್ ಫಾರ್ ದಿ ಇಯರ್ ೧೯೩೧, ಪು. ೫೮-೬೨.

2 ಶೇಷಾದ್ರಿ ಎಂ., ೧೯೬೦, "ಕರ್ನಾಟಕ ಶಿಲ್ಪದಲ್ಲಿ ಪಂಚತಂತ್ರದ ಕಥೆಗಳು" ಸವಿನೆನಪು : ದಿವಂಗತ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರ ಸ್ಮಾರಕ ಗ್ರಂಥ, ಸಂ. ಕುವೆಂಪು, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ಪು. ೫೮೧-೫೮೮.

3 ರಘುನಾಥ ಭಟ್ ಹೆಚ್.ಆರ್. ಬಳ್ಳಿಗಾವೆ-ಇಟ್ಸ್ ಹಿಸ್ಟರಿ ಆ್ಯಂಡ್ ಆ್ಯಂಟಿಕ್ವಿಟೀಸ್, ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರೌಢ ಪ್ರಬಂಧ, ಪು. ೫೮೧-೫೯೨. (ಅಪ್ರಕಟಿತ)

4 ಅನಂತರಂಗಾಚಾರ್ ಎನ್., ೧೯೭೩, ದುರ್ಗಸಿಂಹ ವಿರಚಿತ ಕರ್ಣಾಟಕ ಪಂಚತಂತ್ರಂ, ಶಾರದಾ ಮಂದಿರ, ಮೈಸೂರು, ಪು. ೨೨೧-೨೨೨.

ವನ್ನು ನಾಲ್ಕು ತಿಂಗಳವರೆಗೆ ಮತ್ತು ಮನುಷ್ಯನ ಮಾಂಸವನ್ನು ಮೂರು ತಿಂಗಳವರೆಗೆ ತಿಂದು ತನ್ನ ಆಹಾರ ಸಮಸ್ಯೆಯನ್ನು ಬಗೆಹರಿಸಿಕೊಳ್ಳಬಹುದೆಂದು ಯೋಚಿಸಿ ಆ ಕ್ಷಣಕ್ಕೆ ಬಿಲ್ಲಿಗೆ ಕಟ್ಟಿದ ಸ್ನಾಯುವಿನ (ಚರ್ಮದ) ದಾರವನ್ನು ತಿಂದರೆ ಸಾಕೆಂದು, ಬಿಲ್ಲಿನ ತುದಿಗೆ ಕಟ್ಟಿದ ದಾರವನ್ನು ತುಂಡರಿಸುತ್ತದೆ. ತಕ್ಷಣ ಬಾಗಿದ ಬಿಲ್ಲು ನೆಟ್ಟಗಾಗಿ ನರಿಯ ಬಾಯಿಯೊಳಗಿನಿಂದ ತಲೆಬುರುಡೆಯನ್ನು ಭೇದಿಸಿಕೊಂಡು ಹೊರಬರುತ್ತದೆ. ನರಿಯು ನೋವಿನಿಂದ ಸಾಯುತ್ತದೆ.

ಈ ಕಥೆಯನ್ನು ಸೂಚಿಸುವ ಶಿಲ್ಪದ ಹಿನ್ನೆಲೆಯಲ್ಲಿ ಬೇಟೆಗಾರನು ಕಾಡಿನಲ್ಲಿ ಸುತ್ತುತ್ತಿರುವ ಮೂರು ದೃಶ್ಯಗಳಿವೆ. ಒಂದರಲ್ಲಿ ಅವನು ಹೆಗಲಮೇಲೆ ಕೋಲನ್ನಿಟ್ಟುಕೊಂಡು ಹೋಗುತ್ತಿದ್ದಾನೆ. ಅವನು ಕೊಂದ ಮೊಲವೊಂದನ್ನು ಕೋಲಿನ ತುದಿಗೆ ನೇತು ಹಾಕಿಕೊಂಡಿದ್ದಾನೆ. ಎರಡನೇ ದೃಶ್ಯದಲ್ಲಿ ಅವನು ಕೊಳಲನ್ನು ನುಡಿಸುತ್ತಿದ್ದು ಮೂರನೇ ದೃಶ್ಯದಲ್ಲಿ ಆಯುಧವೊಂದನ್ನು ಹಿಡಿದುಕೊಂಡು ನಿಂತಿದ್ದಾನೆ. ಶಿಲ್ಪದ ಬಲಭಾಗದಲ್ಲಿ ಸತ್ತ ಆನೆಯಿದೆ. ಮಧ್ಯದಲ್ಲಿ ಬೇಟೆಗಾರ ಮತ್ತು ಹೆಬ್ಬಾವು ಸತ್ತುಬಿದ್ದಿವೆ. ಎಡಭಾಗದಲ್ಲಿದ್ದ ನರಿಯು ಬಿಲ್ಲಿನ ಒಂದು ತುದಿಗೆ ಕಟ್ಟಿದ ದಾರವನ್ನು ತುಂಡರಿಸುತ್ತಿದೆ.

ಆಂಧ್ರ ಪ್ರದೇಶದ ಮಹಬೂಬನಗರ ಜಿಲ್ಲೆಯ ಅಲಂಪುರದ ವಸ್ತು ಸಂಗ್ರಹಾಲಯದಲ್ಲಿಯು ಇಂತಹದೇ ಒಂದು ಶಿಲ್ಪದ ಮೇಲೆ ಒಂದು ಶಾಸನವಿದೆ. ಶಾಸನದ ಪಾಠ ಹೀಗಿದೆ.[5]

> ಅತಿ ಲೋಭೋ ನ ಕರ್ತವ್ಯಃ ಕರ್ತ್ತವ್ಯಃ ಇಚ್ಛ ಪ್ರಣಾಣತಃ |
> ಅತಿ ಲೋಭೇನ ದೋಷೇಣ ಜಂಬುಕೋ ಧನ್ವಾಪಾದಿತಃ ||

ಈ ಕಥೆಯ ನೀತಿಯನ್ನು ಬೋಧಿಸುವ ಈ ಶ್ಲೋಕದ ಅರ್ಥ : ಅತಿ ಆಸೆ ಪಡಬಾರದು. ಆಸೆಗೆ ಮಿತಿಯಿರಬೇಕು. ಅತಿ ಆಸೆಯ ದೋಷದಿಂದ ನರಿಯು ಬಿಲ್ಲಿನಿಂದ ಸತ್ತಿತು.

ಈ ಶ್ಲೋಕವು ಸಂಸ್ಕೃತ ತಂತ್ರೋಪಾಖ್ಯಾನದಲ್ಲಿರುವ ಶ್ಲೋಕವನ್ನು ಹೋಲುತ್ತದೆ.[6]

**ಬ್ರಾಹ್ಮಣ, ಏಡಿ ಮತ್ತು ಕಾಗೆ :**

ದುರ್ಗಸಿಂಹನ ಪಂಚತಂತ್ರದಲ್ಲಿ ಈ ಕಥೆಯು ಹೀಗಿದೆ.[7] ಬ್ರಾಹ್ಮಣನೊಬ್ಬನು ಒಮ್ಮೆ ತೀರ್ಥಯಾತ್ರೆಗೆ ಹೊರಡುತ್ತಾನೆ. ದಾರಿಯ ಮಧ್ಯದಲ್ಲಿ ಬತ್ತಿದ ಸರೋವರವೊಂದರಲ್ಲಿ ಒದ್ದಾಡುತ್ತಿದ್ದ ಏಡಿಯೊಂದನ್ನು ಕಂಡು, ಅದರ ಮೇಲೆ ಕನಿಕರಪಟ್ಟು ಅದರ ಜೀವವನ್ನು ಉಳಿಸಲು ಅದನ್ನು ತನ್ನ ನೀರಿನ ಪಾತ್ರೆಯಲ್ಲಿ ಹಾಕಿಕೊಂಡು ಮುಂದೆ ಹೋಗುತ್ತಾನೆ. ದಾರಿ ಮಧ್ಯದಲ್ಲಿ ಆಯಾಸಗೊಂಡು ಒಂದು ಮರದ ಕೆಳಗೆ ಮಲಗುತ್ತಾನೆ. ಆ ಮರದ ಮೇಲೆ ಒಂದು ಕಾಗೆ ಮತ್ತು ಕೆಳಗೆ ಪೊಟರೆಯಲ್ಲಿ ಒಂದು ಹಾವು ವಾಸವಾಗಿರುತ್ತವೆ. ಕಾಗೆಯು ಬ್ರಾಹ್ಮಣನ ಕಣ್ಣುಗಳನ್ನು ತಿನ್ನಬೇಕೆಂದು ಆಸೆಪಟ್ಟು ಅದನ್ನು ಹಾವಿಗೆ ತಿಳಿಸುತ್ತದೆ. ಕಾಗೆಗೆ ಸಹಾಯ ಮಾಡುವ ಉದ್ದೇಶದಿಂದ ಹಾವು ಬ್ರಾಹ್ಮಣನನ್ನು ಕಚ್ಚಿ ಸಾಯಿಸುತ್ತದೆ. ಮರದ ಮೇಲಿನಿಂದ ಹಾರಿದ ಕಾಗೆಯು ಕಣ್ಣುಗಳನ್ನು ತಿನ್ನುವುದಕ್ಕಿಂತ ಮೊದಲು ನೀರನ್ನು ಕುಡಿಯಲು ಪಾತ್ರೆಯ ಮೇಲೆ ಕುಳಿತು ತನ್ನ ಕತ್ತನ್ನು ಒಳಗೆ ಹಾಕುತ್ತದೆ. ಬ್ರಾಹ್ಮಣನ ಸಾವಿನಿಂದ ದುಃಖಿಯಾದ ಏಡಿಯು ಕಾಗೆಯ ಕತ್ತನ್ನು ತನ್ನ ಕೊಂಡಿಗಳಿಂದ ಬಲವಾಗಿ ಒತ್ತಿ ಹಿಡಿಯುತ್ತದೆ. ಏಡಿಯ ಹಿಡಿತದಿಂದ ತಪ್ಪಿಸಿಕೊಳ್ಳಲಾಗದ ಕಾಗೆಯು ಕೂಗಲಾರಂಭಿಸುತ್ತದೆ. ಕಾಗೆಯ ಕೂಗನ್ನು ಕೇಳಿದ ಹಾವು ಹತ್ತಿರ ಬಂದು ಏನು ನಡೆಯುತ್ತಿದೆ ಎಂದು ಕೇಳಿದಾಗ ಏಡಿಯು ಹಾವು ಬ್ರಾಹ್ಮಣನನ್ನು ಕೊಂದಿರುವುದರಿಂದ ತಾನು ಕಾಗೆಯನ್ನು ಕೊಲ್ಲುವುದಾಗಿ ಹೇಳಿ, ಒಂದು ವೇಳೆ ಹಾವು ತನ್ನ ವಿಷವನ್ನು ಹಿಂದಕ್ಕೆ

5 ಅಬ್ದುಲ್ ವಹೀದ್ ಖಾನ್, ೧೯೭೩, ಸ್ಟೋನ್ ಸ್ಕಲ್ಪಚರ್ಸ್ ಇನ್ ದಿ ಅಲಂಪುರ್ ಮ್ಯೂಸಿಯಂ, ಹೈದರಾಬಾದ, ಪು. ೧೧೦ ೧೧೨.

6 ಸಾಂಬಶಿವ ಶಾಸ್ತ್ರಿ ಕೆ., ೧೯೩೮, ತಂತ್ರೋಪಾಖ್ಯಾನಮ್, ತ್ರಿವೇಂದ್ರಮ್, ಪು. ೬೮

7 ಅನಂತರಂಗಾಚಾರ್, ಅದೇ, ಪು. ೨೧೯ ೨೨೦.

ಪಡೆದು ಬ್ರಾಹ್ಮಣನನ್ನು ಬದುಕಿಸಿದರೆ ತಾನು ಕಾಗೆಯನ್ನು ಬಿಡುವುದಾಗಿ ಹೇಳುತ್ತದೆ. ತಕ್ಷಣ ಹಾವು ಬ್ರಾಹ್ಮಣನ ದೇಹದಿಂದ ವಿಷವನ್ನು ಹೀರಿಕೊಂಡಾಗ ಬ್ರಾಹ್ಮಣನು ಜೀವವನ್ನು ಮರಳಿ ಪಡೆಯುತ್ತಾನೆ. ಏಡಿಯು ಕಾಗೆಯ ಕತ್ತನ್ನು ಬಿಡುತ್ತದೆ.

ಈ ಕಥೆಯನ್ನು ನಿರೂಪಿಸುವ ಶಿಲ್ಪದಲ್ಲಿ ಒಂದು ದೊಡ್ಡ ಮರವಿದೆ. ಮರದ ಕಾಂಡದ ಪೊಟರೆಯಲ್ಲಿ ಹಾವು ಹೆಡೆಯನ್ನು ಅಗಲ ಮಾಡಿಕೊಂಡು ಕುಳಿತಿದೆ. ಬ್ರಾಹ್ಮಣನು ತನ್ನ ಕೊಡೆಯನ್ನು ಮರಕ್ಕೆ ಒರಗಿಸಿಟ್ಟು ಮರದ ಕೆಳಗೆ ಮಲಗಿದ್ದಾನೆ. ಅವನ ಪಕ್ಕದಲ್ಲಿ ಪಾತ್ರೆಯೊಳಗಿರುವ ಏಡಿಯು ಕಾಗೆಯ ಕತ್ತನ್ನು ಹಿಡಿದಿದೆ. ಏಡಿಯು ಪಾತ್ರೆಯೊಳಗಿರುವುದರಿಂದ ಅದರ ಕೊಂಡಿಗಳು ಮಾತ್ರ ಮೇಲೆ ಕಾಣುತ್ತಿವೆ.

ಗುಲ್ಬರ್ಗ ಜಿಲ್ಲೆಯ ಶಹಪೂರ ತಾಲ್ಲೂಕಿನ ಸಿರಿವಾಳದಲ್ಲಿರುವ ಈಶ್ವರ ದೇವಾಲಯದ ಮೇಲಿರುವ ಇಂತಹ ಶಿಲ್ಪದೊಂದಿಗೆ ಇದೇ ಕಥೆಯ ಇನ್ನೊಂದು ದೃಶ್ಯವನ್ನು ಚಿತ್ರಿಸಲಾಗಿದೆ. ಅಲ್ಲಿ ನೆಲದ ಮೇಲಿರುವ ಏಡಿಯನ್ನು ಬ್ರಾಹ್ಮಣನು ಅದರ ಪಕ್ಕದಲ್ಲಿ ಕುಳಿತು ಅದರ ಪರಿಸ್ಥಿತಿಯನ್ನು ನೋಡುತ್ತಿದ್ದಾನೆ. ಆಲಂಪುರ ವಸ್ತು ಸಂಗ್ರಹಾಲಯದಲ್ಲಿರುವ ಶಿಲ್ಪವು ಬಳ್ಳಿಗಾವೆಯ ಶಿಲ್ಪದಂತೆಯೇ ಇದೆ. ಆದರೆ ಈ ಶಿಲ್ಪದ ಮೇಲ್ಭಾಗದಲ್ಲಿ "ಮನುಷ್ಯನ ಕರ್ತವ್ಯ" ಎಂದು ಬರೆದ ಶಾಸನವಿದೆ.[8] ಕಷ್ಟದಲ್ಲಿರುವವರಿಗೆ ಸಹಾಯ ಮಾಡುವುದು ಮನುಷ್ಯನ ಕರ್ತವ್ಯವೆಂಬ ನೀತಿಯನ್ನು ಬೋಧಿಸುವುದು ಈ ಶಿಲ್ಪ ಮತ್ತು ಶಾಸನದ ಉದ್ದೇಶ.

**ಬ್ರಾಹ್ಮಣ, ಕಳ್ಳ ಮತ್ತು ಬ್ರಹ್ಮ ರಾಕ್ಷಸ :**

ವಿಷ್ಣುಶರ್ಮನ ಪಂಚತಂತ್ರದಲ್ಲಿ ಈ ಕಥೆಯು ಹೀಗಿದೆ.[9] ಒಂದು ಊರಿನಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಅವನು ಬೇರೆಯವರು ಕೊಡುವ ದಕ್ಷಿಣೆಯಿಂದ ಜೀವನ ಸಾಗಿಸುತ್ತಿದ್ದನು. ಒಮ್ಮೆ ಯಾರೋ ಒಬ್ಬರು ಅವನಿಗೆ ಎರಡು ಹಸುವಿನ ಕರುಗಳನ್ನು ಕೊಟ್ಟರು. ಬ್ರಾಹ್ಮಣನು ಅವುಗಳಿಗೆ ಭಿಕ್ಷೆಯಲ್ಲಿ ಸಿಗುವ ತುಪ್ಪ ಬೆಣ್ಣೆ ಮುಂತಾದವುಗಳನ್ನು ತಿನ್ನಿಸಿ ಚೆನ್ನಾಗಿ ಬೆಳೆಸಿದನು. ಅವು ಬೆಳೆದು ದೊಡ್ಡವಾಗಿ ದಷ್ಟಪುಷ್ಟವಾದ ಹಸುಗಳಾದವು. ಒಂದು ದಿನ ಕಳ್ಳನೊಬ್ಬನು ಆ ಹಸುಗಳನ್ನು ಕದಿಯಬೇಕೆಂದು ಯೋಚಿಸಿ, ಹಗ್ಗವನ್ನು ತೆಗೆದುಕೊಂಡು ರಾತ್ರಿ ವೇಳೆಯಲ್ಲಿ ಬ್ರಾಹ್ಮಣನ ಮನೆಯ ಕಡೆಗೆ ಹೊರಟನು. ದಾರಿಯಲ್ಲಿ ಒಬ್ಬ ಬ್ರಹ್ಮರಾಕ್ಷಸನು ಅವನನ್ನು ನೋಡಿ ಎಲ್ಲಿಗೆ ಹೋಗುತ್ತಿದ್ದಾನೆಂದು ವಿಚಾರಿಸಿದ. ಕಳ್ಳನು ತಾನು ಬ್ರಾಹ್ಮಣನ ಹಸುಗಳನ್ನು ಕದಿಯಲು ಹೊರಟಿರುವುದನ್ನು ಹೇಳಿದ. ಆಗ ಬ್ರಹ್ಮರಾಕ್ಷಸನು ತಾನೂ ಸಹ ಅದೇ ಬ್ರಾಹ್ಮಣನನ್ನು ತಿನ್ನಲು ಹೊರಟಿರುವುದಾಗಿ ಹೇಳಿದ. ಇಬ್ಬರೂ ಒಂದೇ ಸ್ಥಳಕ್ಕೆ ಹೊರಟಿರುವುದರಿಂದ ಜೊತೆಯಲ್ಲಿಯೇ ಹೋಗಿ ಮನೆಯಲ್ಲಿ ಸುರಕ್ಷಿತವಾದ ಸ್ಥಳದಲ್ಲಿ ಬಚ್ಚಿಟ್ಟುಕೊಳ್ಳುತ್ತಾರೆ. ಒಳ್ಳೆಯ ಅವಕಾಶ ಸಿಕ್ಕಾಗ ಬ್ರಹ್ಮರಾಕ್ಷಸನು ಬ್ರಾಹ್ಮಣನನ್ನು ತಿನ್ನಲು ಹೋಗುತ್ತಾನೆ. ಆಗ ಕಳ್ಳನು ತನಗೆ ಅದರಿಂದ ತೊಂದರೆಯಾಗುತ್ತದೆ, ತಾನು ಹಸುಗಳನ್ನು ಕದ್ದುಕೊಂಡು ಹೋಗುವವರೆಗೆ ಸುಮ್ಮನಿರಬೇಕೆಂದು ಹೇಳುತ್ತಾನೆ. ಹಸುಗಳ ಶಬ್ದದಿಂದ ಬ್ರಾಹ್ಮಣನಿಗೆ ಎಚ್ಚರವಾಗಬಹುದು. ಆದುದರಿಂದ ಅವನು ಏಳುವ ಮೊದಲೇ ಅವನನ್ನು ತಾನು ತಿನ್ನುವುದಾಗಿ ಬ್ರಹ್ಮರಾಕ್ಷಸ ಹೇಳುತ್ತಾನೆ. ಹೀಗೆ ಇಬ್ಬರೂ ಜಗಳವಾಡುತ್ತಿದಾಗ ಬ್ರಾಹ್ಮಣನು ಎಚ್ಚರಗೊಂಡು ಇವರನ್ನು ನೋಡುತ್ತಾನೆ. ಆಗ ಕಳ್ಳನು ಬ್ರಹ್ಮರಾಕ್ಷಸನು ಬ್ರಾಹ್ಮಣನನ್ನು ತಿನ್ನಲು ಬಂದಿರುವನೆಂದು ಹೇಳುತ್ತಾನೆ. ಬ್ರಹ್ಮರಾಕ್ಷಸನು ಕಳ್ಳನು ಬ್ರಾಹ್ಮಣನ ಹಸುಗಳನ್ನು ಕದಿಯಲು ಬಂದಿರುವನೆಂದು ಹೇಳುತ್ತಾನೆ. ಆಗ ಬ್ರಾಹ್ಮಣನು ತನ್ನ ಇಷ್ಟದೇವತೆಯನ್ನು ಪ್ರಾರ್ಥಿಸಿ ಬ್ರಹ್ಮರಾಕ್ಷಸನಿಂದ ತನ್ನ ಪ್ರಾಣವನ್ನು ಉಳಿಸಿಕೊಂಡು ಕಳ್ಳನನ್ನು ದೊಣ್ಣೆಯಿಂದ ಓಡಿಸಿ ಹಸುಗಳನ್ನು ಕಾಪಾಡಿಕೊಳ್ಳುತ್ತಾನೆ.

ಕಥೆಯನ್ನು ನಿರೂಪಿಸುವ ಶಿಲ್ಪದ ಎಡಭಾಗದಲ್ಲಿ ಬ್ರಾಹ್ಮಣ ಮತ್ತು ಅವನ ಹೆಂಡತಿಯು ಮಂಚದ ಮೇಲೆ ಮಲಗಿದ್ದಾರೆ. ಬ್ರಾಹ್ಮಣನ ಹೆಂಡತಿಯು ತನ್ನ

8 ಅಬ್ದುಲ್‌ವಹೀದ್ ಖಾನ್, ಅದೇ, ಪು. ೧೧೨.

9 ನರಸಿಂಹಶಾಸ್ತ್ರಿ, ೧೯೭೪, ಕನ್ನಡ ಪಂಚತಂತ್ರ, ಕಾವ್ಯಾಲಯ, ಮೈಸೂರು, ಪು. ೨೧೫-೨೧೬.

ಬಲಗೈಯನ್ನು ತಲೆಗೆ ಆಸರೆಯಾಗಿಟ್ಟುಕೊಂಡು ತಲೆಯನ್ನು ಸ್ವಲ್ಪ ಮೇಲಕ್ಕೆತ್ತಿದ್ದಾಳೆ. ಬ್ರಾಹ್ಮಣನು ತನ್ನ ಬಲಗೈಯನ್ನು ಹಾಸಿಗೆಯ ಮೇಲಿಟ್ಟು ಮೇಲೆ ಏಳುತ್ತಿದ್ದಾನೆ. ಅವನ ಎಡಗೈ ಬಾಯಿಯ ಹತ್ತಿರವಿದ್ದು ಕಳ್ಳ ಮತ್ತು ಬ್ರಹ್ಮರಾಕ್ಷಸ ಒಳಗೆ ನುಗ್ಗಿದ್ದನ್ನು ನೋಡಿ ಭಯವನ್ನು ವ್ಯಕ್ತಪಡಿಸುತ್ತಿದ್ದಾನೆ. ದಂಪತಿಗಳಿಬ್ಬರೂ ಆಗಂತುಕರೆಡೆಗೆ ನೋಡುತ್ತಿದ್ದಾರೆ. ಬ್ರಹ್ಮರಾಕ್ಷಸನು ಎಡಗೈಯಲ್ಲಿ ಖಡ್ಗ ಮತ್ತು ಮೇಲಕ್ಕೆತ್ತಿರುವ ಬಲಗೈಯಲ್ಲಿ ಇನ್ನೊಂದು ಆಯುಧವನ್ನು ಹಿಡಿದು ದಂಪತಿಗಳ ಕಡೆಗೆ ನುಗ್ಗುತ್ತಿದ್ದಾನೆ. ಕಳ್ಳನು ಹಸುವಿನ ಹತ್ತಿರ ನಿಂತಿದ್ದು ಎಡಗೈಯಲ್ಲಿ ಕೋಲನ್ನು ಹಿಡಿದು, ಬಲಗೈಯನ್ನು ಮೇಲಕ್ಕೆತ್ತಿ ಬ್ರಹ್ಮರಾಕ್ಷಸನಿಗೆ ಮುಂದೆ ಹೋಗಬೇಡವೆಂದು ಹೇಳುತ್ತಿದ್ದಾನೆ.

ಈ ಶಿಲ್ಪವು ಬೋಧಿಸುವ ನೀತಿ ; ಶತ್ರುಗಳು ಪರಸ್ಪರ ಜಗಳವಾಡಿದರೆ ನಮಗೇ ಹಿತ. ಕಳ್ಳನು ಪ್ರಾಣವನ್ನು ಉಳಿಸಿದ. ರಾಕ್ಷಸನು ಗೋವುಗಳನ್ನು ಉಳಿಸಿದ.

[ಶಾಸನಗಳ ಪಡಿಯಚ್ಚುಗಳನ್ನು ನೀಡಿ ಅವುಗಳ ಪಾಠವನ್ನು ಓದಲು ನೆರವು ನೀಡಿದ ಭಾರತೀಯ ಪುರಾತತ್ವ ಸರ್ವೇಕ್ಷಣೆಯ ಶಾಸನ ವಿಭಾಗದ ನಿರ್ದೇಶಕರಾದ ಶ್ರೀ ಎಮ್. ಎನ್. ಕಟ್ಟಿಯವರಿಗೆ ನನ್ನ ಕೃತಜ್ಞತೆಗಳು.]

10 ಕರ್ನಾಟಕದಲ್ಲಿ ಪಂಚತಂತ್ರದ ೨೬ ಕತೆಗಳನ್ನು ನಿರೂಪಿಸುವ ಸುಮಾರು ೧೦೦ ಶಿಲ್ಪಗಳು ಪತ್ತೆಯಾಗಿವೆ. ಇವುಗಳ ಸಮಗ್ರ ವಿವರಣೆಗಳನ್ನೊಳಗೊಂಡ ಗ್ರಂಥವನ್ನು ಅಚ್ಚಿಗಾಗಿ ಸಿದ್ಧಪಡಿಸುತ್ತಿದ್ದೇನೆ.

ಡಾ|| ಶ್ರೀಮತಿ ರಾಧಾ ಕೃಷ್ಣಮೂರ್ತಿ*

# ಪ್ರಾಚೀನ ಭಾರತದ ಆಯುಧಗಳು

ಶಸ್ತ್ರವಿಜ್ಞಾನ ಅಥವಾ ಆಯುಧ ವಿಜ್ಞಾನವು ರಾಜರ, ರಾಜಕುಮಾರರ ಮತ್ತು ಯೋಧರ ಅಧ್ಯಯನದ ಒಂದು ಕಡ್ಡಾಯ ವಿಷಯವಾಗಿತ್ತೆಂದು ಬೇರೆ ಹೇಳಬೇಕಾಗಿಲ್ಲ. ಪ್ರಾಚೀನ ಮತ್ತು ಮಧ್ಯಕಾಲೀನ ಭಾರತದಲ್ಲಿ, ಧನುಸ್ಸು ಎಲ್ಲ ವರ್ಗದ ಜನರಿಂದಲೂ, ತಮ್ಮನ್ನು ರಕ್ಷಿಸಿಕೊಳ್ಳಲೂ, ಯುದ್ಧದಲ್ಲಿ ಶತ್ರುಗಳನ್ನು ಸಂಹರಿಸಲೂ ಮತ್ತು ಬೇಟೆಗಾಗಿಯೂ ಉಪಯೋಗಿಸಲಾಗುತ್ತಿತ್ತು. ಆದ್ದರಿಂದ, ಪ್ರಾಚೀನ ಭಾರತದ ಸಮಗ್ರ ಸೇನಾ ಕೌಶಲ್ಯ ಮತ್ತು ವಿಜ್ಞಾನವು, 'ಧನುರ್ವಿದ್ಯೆ' ಅಥವಾ 'ಧನುರ್ವೇದ' ಎಂಬ ಸಾಧಾರಣ ಪದದಿಂದಲೇ ತಿಳಿದುಬರುತ್ತದೆ. 'ಧನು' ಎಂಬುದು ಸಮಗ್ರ ಆಯುಧಗಳ ಮತ್ತು ಯುದ್ಧ ಕೌಶಲಗಳ ಪ್ರತೀಕ ಎಂದು ಪರಿಗಣಿಸಲ್ಪಡುತ್ತಿತ್ತು. 'ಧನುರ್ವಿಧ್ಯೆ'ಗೆ ಅಥವಾ ಆಯುಧ ವಿಜ್ಞಾನಕ್ಕೆ ಅಧಿಕ ಮಹತ್ವ ಕೊಡಲಾಗಿತ್ತು.

'ಧನುರ್ವಿದ್ಯೆ' ಎಂಬ ಪದವು 'ಆಯುಧ ವಿಜ್ಞಾನವೆಂಬರ್ಥವನ್ನು ಸೂಚಿಸುವುದರಿಂದ, ಈ ವಿಜ್ಞಾನವನ್ನು ಕ್ರಮಬದ್ಧ ರೀತಿಯಲ್ಲಿ ಕಲಿಸಬೇಕು ಮತ್ತು ಕಲಿಯಬೇಕು. ಧನುರ್ವೇದ ಸಂಹಿತೆ, ಅಗ್ನಿಪುರಾಣ ಹಾಗೂ ಮತ್ತಿತರ ಗ್ರಂಥಗಳು ಈ ವಿಜ್ಞಾನಕ್ಕೆ ಸಂಬಂಧಿಸಿದ ವಿದ್ಯಾರ್ಥಿಗಳ ಹಾಗೂ ಅಧ್ಯಾಪಕರುಗಳ ಯೋಗ್ಯತೆಗಳನ್ನು ವಿಶಿಷ್ಟೀಕರಿಸಿವೆ. ಸಮಾಜ ಹಾಗೂ ದೇಶ-ಕಲ್ಯಾಣಕ್ಕಾಗಿ ಮೀಸಲಾಗಿರುವ ಈ ಪವಿತ್ರ ವಿಜ್ಞಾನವನ್ನು ಲೋಭಿ, ದುಷ್ಟ, ಕೃತಘ್ನ ಹಾಗೂ ಮೂರ್ಖರಿಗೆ ಕಲಿಸಬಾರದು. ಸೈನಿಕ ವಿದ್ಯಾರ್ಥಿಗೆ ಉಪನಯನ ಮಹೋತ್ಸವವನ್ನೇರ್ಪಡಿಸಿದಾಗ, ಗುರುವು ಬ್ರಾಹ್ಮಣ ವಿದ್ಯಾರ್ಥಿಗೆ ಧನುಸ್ಸನ್ನೂ, ಕ್ಷತ್ರಿಯನಿಗೆ ಖಡ್ಗವನ್ನೂ ವೈಶ್ಯನಿಗೆ ಭಲ್ಲೆಯನ್ನೂ ಮತ್ತು ಶೂದ್ರನಿಗೆ ಗದೆಯನ್ನೂ (ದಂಡ) ಕೊಡುತ್ತಾನೆಂದು ಹೇಳಲಾಗಿದೆ.

**ಆಯುಧಗಳ ವರ್ಗೀಕರಣ**

ಸಾಮಾನ್ಯವಾಗಿ ಈ ಗ್ರಂಥಗಳಲ್ಲಿ ಆರು ಆಯುಧಗಳನ್ನು ಹೆಸರಿಸಲಾಗಿದೆ : ಉದಾಹರಣೆಗೆ, ಧನುಸ್ಸು, ಚಕ್ರ, ಭಲ್ಲೆ, ಖಡ್ಗ (ಕತ್ತಿ), ಚೂರಿ ಮತ್ತು ಗದೆ (ದಂಡ). ಏಳು ಪ್ರಕಾರದ ಯುದ್ಧಗಳನ್ನೂ ತಿಳಿಸಲಾಗಿದ್ದು, ಮೊದಲ ಆರು ಯುದ್ಧಗಳಲ್ಲಿ, ಶತ್ರುಗಳ ವಿರುದ್ಧ ಆಕ್ರಮಣ ಮಾಡಲು, ಮೇಲ್ಕಂಡ ಆರು ಆಯುಧಗಳ ಉಪಯೋಗವೂ ಮತ್ತು ಏಳನೆಯದರಲ್ಲಿ ಬಾಹುಬಲದ ಉಪಯೋಗವೂ ಆಗುತ್ತಿತ್ತು. ಆಚಾರ್ಯ ಅಥವಾ ಯುದ್ಧಕೌಶಲ ಪ್ರಾಚಾರ್ಯನೂ ಈ ಏಳೂ ವಿಧದ ಸಂಗ್ರಾಮ(ಕದನ)ಗಳಲ್ಲಿ ಪ್ರಾವೀಣ್ಯತೆ ಪಡೆದಿರಬೇಕು. ಈ ಆಯುಧಗಳನ್ನು ಬಳಸುವಲ್ಲಿನ ಪ್ರಾವೀಣ್ಯತೆ ಹಾಗೂ ಕೌಶಲ್ಯಕ್ಕನುಸಾರವಾಗಿ, ಯುದ್ಧಕೌಶಲ್ಯ ಪ್ರಾಚಾರ್ಯರನ್ನು ಭಾರ್ಗವ (೪ರಲ್ಲಿ ಪ್ರಾವೀಣ್ಯತೆ ಗಳಿಸಿದವನು), ಯೋಧ (೨ರಲ್ಲಿ ಪ್ರಾವೀಣ್ಯತೆ ಗಳಿಸಿದವನು) ಮತ್ತು ಒಂದು ಸಂಗ್ರಾಮದಲ್ಲಿ ಪ್ರಾವೀಣ್ಯತೆ ಪಡೆದವನನ್ನು ಗುಣಕನೆಂದೂ ವರ್ಗೀಕರಿಸಲಾಗಿದೆ.

---

* 'ಶುಭೋದಯ' ೩೪, ೧೧ನೆಯ ಮುಖ್ಯರಸ್ತೆ, ಮಲ್ಲೇಶ್ವರ ಪಶ್ಚಿಮ, ಬೆಂಗಳೂರು-೫೬೦ ೦೫೫

ಆಯುಧಗಳನ್ನೂ ಸಹ ಐದು ಗುಂಪುಗಳಾಗಿ ವರ್ಗೀಕರಿಸಲಾಗಿದೆ. ಅಗ್ನಿಪುರಾಣವು ಐದು ಪ್ರಕಾರದ ಆಯುಧಗಳನ್ನು ಉಲ್ಲೇಖಿಸಿದೆ ; ಉದಾಹರಣೆಗೆ ಯಂತ್ರಮುಕ್ತ (ಎಸೆಯಲಾಗುವ ಅಥವಾ ಯಂತ್ರದಿಂದ ಎಸೆಯಲಾಗುವ), ಮುಕ್ತಾಮುಕ್ತ (ಹಸ್ತಗಳಿಂದ ಉಪಯೋಗಿಸಿ, ಉಪಯೋಗಾನಂತರ ಹಸ್ತಗಳಿಂದಲೇ ಪಡೆಯುವ), ಅಮುಕ್ತ ಮತ್ತು ನಿಯುದ್ಧ ಅಥವಾ ಬಾಹುಯುದ್ಧ (ಮಲ್ಲಯುದ್ಧದಲ್ಲಿನ–ಹಸ್ತದ ಉಪ–ಯೋಗದಂತೆ) ಎಂಬುವೇ ಅವು. ಶುಕ್ರಾಚಾರ್ಯರು, ಶಸ್ತ್ರ ಅಸ್ತ್ರ ಎಂಬ ಎರಡು ವಿಶೇಷ ಆಯುಧಗಳನ್ನು ಹೆಸರಿಸಿದ್ದಾರೆ. ಮೊದಲನೆಯದನ್ನು ಖಡ್ಗದಂತೆ ಬಳಸಲಾಗುವುದಿಲ್ಲ ; ಆದರೆ ಅಸ್ತ್ರಗಳನ್ನು ಮಂತ್ರ, ಯಂತ್ರ ಅಥವಾ ಅಗ್ನಿಗಳ ಮೂಲಕ ಎಸೆಯಲಾಗುತ್ತದೆ. 'ನೀತಿ ಪ್ರಕಾಶಿಕೆ'ಯು ವಿವಿಧ ಪ್ರಕಾರದ ಆಯುಧಗಳನ್ನು ಮುಕ್ತ, ಅಮುಕ್ತ, ಮುಕ್ತಾಮುಕ್ತ, ಮಂತ್ರಮುಕ್ತ ಎಂದು ನಾಲ್ಕು ವರ್ಗಗಳಲ್ಲಿ ವಿಭಾಗಿಸಿ ಅಸಂಖ್ಯ ಆಯುಧಗಳ ವಿವರಣೆಯನ್ನು ನೀಡಿದೆ.

### ಧನುಸ್ಸು ಅಥವಾ ಬಿಲ್ಲು

ಧನುಸ್ಸು ಅಥವಾ ಬಿಲ್ಲು ವೇದಕಾಲೀನ ಯುಗದಿಂದಲೂ ಯುದ್ಧದಲ್ಲಿ ಅಧಿಕವಾಗಿ ಬಳಸಲಾಗಿರುವ ಆಯುಧ. ಅನೇಕ ಪ್ರಾಚೀನ ಗ್ರಂಥಗಳು ಈ ಆಯುಧದ ಉಪಯೋಗವನ್ನು ತಿಳಿಸುತ್ತವೆ. ಪ್ರಾಚೀನ ಭಾರತದ ಆಯುಧ ಮತ್ತು ಯುದ್ಧ ವಿಜ್ಞಾನದಲ್ಲಿ, ವಿಭಿನ್ನ ಪ್ರಕಾರದ ಧನುಸ್ಸುಗಳ ಬಗ್ಗೆ ತಿಳಿಸಿ, ವಿವರಣೆ ನೀಡಲಾಗಿದೆ. ಸಾಮಾನ್ಯವಾಗಿ ಯೋಧರಿಗೆ ನಾಲ್ಕು ಹಸ್ತ ಉದ್ದದ ಧನುಸ್ಸುಗಳನ್ನು ಆದೇಶಿಸಲಾಗಿದೆ. ಆದರೆ, ಮತ್ತಿತರ ಅಳತೆಯ ಧನುಸ್ಸುಗಳ ವಿವರಣೆಯನ್ನೂ ನೀಡಲಾಗಿದೆ. ಅತ್ಯುತ್ತಮ ದರ್ಜೆಯ ಧನುಸ್ಸು ಐದೂವರೆ ಹಸ್ತ ಉದ್ದವುಳ್ಳದ್ದಾಗಿದ್ದು, 'ದಿವ್ಯ' ಎಂದು ಕರೆಯಲ್ಪಡುತ್ತದೆ ಮತ್ತು ಇದು ಪ್ರಪ್ರಥಮವಾಗಿ ಪರಮೇಶ್ವರನ ಬಳಿ ಇತ್ತೆಂದು ಹೇಳಲಾಗಿದೆ. ನಂತರ ಇದು ಅವರಿಂದ ಪರಶುರಾಮರಿಗೂ, ತದನಂತರ, ದ್ರೋಣರಿಗೂ ಹಸ್ತಾಂತರವಾಯಿತು. ದ್ರೋಣರಿಂದ ಈ ದಿವ್ಯಾಸ್ತ್ರವನ್ನು ಅರ್ಜುನನು ಪಡೆದನೆಂದೂ, ಅರ್ಜುನನಿಂದ ಸಾತ್ಯಕಿಯು ಇದನ್ನು ಸ್ವೀಕರಿಸಿದನೆಂದೂ ಹೇಳಲಾಗಿದೆ.

ದೇವತೆಗಳ ವಾಸ್ತುಶಿಲ್ಪಿ ವಿಶ್ವಕರ್ಮಕೃತ ಸಾರಂಗವು ಏಳು ಅಳತೆಯುಳ್ಳದ್ದಾಗಿದ್ದು ಭಗವಾನ್ ವಿಷ್ಣುವಿನ ಅತ್ಯುತ್ತಮ ಶಕ್ತ್ಯಾಯುಧವಾಗಿದೆ. ಸಾಮಾನ್ಯ ಮಾನವನ ಸಾರಂಗವು ಆರೂವರೆ ಹಸ್ತ ಉದ್ದವುಳ್ಳದ್ದಾಗಿದ್ದು, ಅತ್ಯಂತ ಶಕ್ತಿಯುತವಾಗಿದ್ದು ಅಶ್ವಾರೋಹಿ, ಗಜಾರೋಹಿ ಹಾಗೂ ರಥಾರೋಹಿಗಳ ಬಳಕೆಗೆ ಉಪಯುಕ್ತವಾಗಿದೆ. ಪದಾತಿಗಳಿಗೆ ಬಿದಿರಿನ ಧನುಸ್ಸುಗಳನ್ನು ಸೂಚಿಸಲಾಗಿದೆ. ಪರ್ವಗಳ ಸಂಖ್ಯೆಗಳಿಗನುಗುಣವಾಗಿ ಧನುಸ್ಸುಗಳನ್ನು ವರ್ಗೀಕರಿಸಲಾಗಿದೆ. ಕೋದಂಡವು ಒಂಭತ್ತು ಪರ್ವವುಳ್ಳದಾಗಿದ್ದು ಭಾಗ್ಯದಾಯಕವೆಂದು ನಂಬಲಾಗಿದೆ. ಸಾಮಾನ್ಯವಾಗಿ, ಧನುಸ್ಸುಗಳು ಬಿದಿರಿನಿಂದ ಮಾಡಲಾಗುತ್ತವೆಯಾದರೂ ತಾಳೆ, ಛಾಪ ದಾರು (ಒಂದು ಬಗೆಯ ಮರ) ಮತ್ತು ಶೃಂಗ (ಶೃಂಗ)ದಿಂದ ಮಾಡಲ್ಪಟ್ಟ ಉಲ್ಲೇಖವಿದ್ದು ; ಕ್ರಮಶಃ ಅವುಗಳನ್ನು ಕಾರ್ಮುಕ, ಕೋದಂಡ, ದೃಣ ಮತ್ತು ಧನುಸ್ಸುಗಳೆಂದು ಕರೆಯಲಾಗಿವೆ. ಧನುಸ್ಸಿನ ಉದ್ದಕ್ಕನುಗುಣವಾಗಿ ಅವುಗಳನ್ನು ಪುರಾಣಗಳು ಸರ್ವೋತ್ತಮ, ಮಧ್ಯಮ ಮತ್ತು ಸಾಧಾರಣ ಎಂದು ವರ್ಗೀಕರಿಸಿವೆ. ಧನುರ್ಧಾರಿಯ ಶರೀರ ತೂಕಕ್ಕಿಂತ ಧನುಸ್ಸಿನ ತೂಕವು ಮೀರದಂತೆ ರೂಪಿಸಬೇಕೆಂದೂ ಹೇಳಲಾಗಿದೆ. ಏಕೆಂದರೆ, ಅದನ್ನು ಎತ್ತುವಾಗ ಧನುರ್ಧಾರಿಗೆ ಯಾವ ರೀತಿಯ ತೊಂದರೆಯೂ ಇರಬಾರದು.

### ಧನುಸ್ಸಿನ ಹುರಿ

ರೇಷ್ಮೆದಾರಗಳಿಂದ, ಕಿರುಬೆರಳಿನ ದಪ್ಪದ, ಗಂಟಾಗಲೀ, ಬೆಸುಗೆಯಾಗಲೀ ಇಲ್ಲದ ಧನುಸ್ಸಿನ ಉದ್ದವನ್ನುಳ್ಳ ಮೂರು ನಿರ್ದಿಷ್ಟ ಅಳತೆಯ ದಾರಗಳಿಂದ ಧನುಸ್ಸಿನ ಹುರಿಗಳನ್ನು ಮಾಡಬೇಕು. ಧನುಸ್ಸಿನ ದಾರಗಳನ್ನು (ಬಲಿತ) ಬಿದಿರಿನ ತೊಗಟೆ, ಮುರವ, ಅಡಿಕೆ, ಸಾನ, ಗವೇಧು, ಬಿದಿರಿನ ತೊಗಟೆ ಅಥವಾ ಸ್ನಾಯುವಿನಿಂದಲೂ ಮಾಡಬಹುದು. ಪ್ರಾಚೀನ ಕಾಲದಲ್ಲಿ, ಯೋಧನ ಹಸ್ತದಲ್ಲಿ ಧನುಸ್ಸಿನ

ದಾರಗಳಿಂದಾದ ಗುರುತುಗಳಿಂದ ಅವನ ಮಹತ್ವವನ್ನು ನಿರ್ಧರಿಸಲಾಗುತ್ತಿತ್ತು. ಧನುಸ್ಸಿನ ದಾರಗಳು ಮೃದುವಾಗಿರಬೇಕು, ಆದರೆ ಎಲ್ಲ ರೀತಿಯ ಹಿಗ್ಗುವಿಕೆಯನ್ನೂ ತಡೆಯಬಲ್ಲ ಕಠೋರತೆಯನ್ನು ಪಡೆದಿರಬೇಕು.

**ಬಾಣಗಳು :**

ಲಕ್ಷ್ಯವನ್ನು ಬೇಧಿಸಲು ಬಾಣಗಳೇ ನೈಜ ಆಯುಧಗಳು. ಬಾಣಗಳನ್ನು ವಿವಿಧ ಆಕಾರಗಳಲ್ಲಿ ಮಾಡಿ ಅವುಗಳನ್ನು ಮಾಡಲು ಉಪಯೋಗಿಸ ತಕ್ಕಂತಹ ವಸ್ತುವಿಗೂ ಅಧಿಕ ಮಹತ್ವವನ್ನು ಕೊಡಲಾಗುತ್ತಿತ್ತಲ್ಲದೆ, ನ್ಯೂನತೆಯುಳ್ಳ ಬಾಣಗಳ ಉಪಯೋಗವನ್ನು ತಪ್ಪಿಸಲಾಗುತ್ತಿತ್ತು. ಬಾಣಗಳು ಅತಿ ದಪ್ಪವಾಗಿಯಾಗಲೀ, ಅತಿ ತೆಳುವಾಗಿಯಾಗಲೀ ಇರದೆ, ಅಪಕ್ವ ವಸ್ತುವಿನಿಂದ ಮಾಡಿದುದಾಗಿರದೆ, ಅನುಚಿತ ಭೂಮಿಯಲ್ಲಿ ಬೆಳೆದ ವಸ್ತುವಿನಿಂದಲೂ ಮಾಡಿದುದಾಗಿರಬಾರದು. ಮುರಿದ ಮತ್ತು ಸೀಳಿದ ಬಾಣಗಳನ್ನೆಂದೂ ಉಪಯೋಗಿಸಬಾರದು. ಯೋಗ್ಯ ಋತುವಿನಲ್ಲಿ ಸಂಗ್ರಹಿಸಿದ ಮತ್ತು ಯೋಗ್ಯ ಭೂಮಿಯಲ್ಲಿ, ಚೆನ್ನಾಗಿ ಬೆಳೆದ ಶ್ವೇತ, ಗಡುಸಾದ ದುಂಡು ಬೆತ್ತದಿಂದ ಮಾಡಿದ ಬಾಣಗಳನ್ನೇ ಉಪಯೋಗಿಸಬೇಕು.

ಬಾಣಗಳನ್ನು ಮೂರು ಪ್ರಕಾರವಾಗಿ ವಿಂಗಡಿಸಲಾಗಿದೆ–ಸ್ತ್ರೀ ಬಾಣದ ಮುಂಭಾಗವು ದಪ್ಪವಾಗಿದ್ದು ಅತಿ ದೂರದವರೆಗೂ ಎಸೆಯಲ್ಪಡುತ್ತದೆ. ಪುರುಷ ಬಾಣದ ಹಿಂಭಾಗವು ದಪ್ಪವಾಗಿದ್ದು ತೀಕ್ಷ್ಣವಾಗಿ ಬೇಧಿಸುತ್ತದೆ. ನಪುಂಸಕಬಾಣವು ಸುಮಾರು ದಪ್ಪವಾಗಿದ್ದು, ವಿಶೇಷವಾಗಿ ಲಕ್ಷ್ಯವನ್ನು ಬೇಧಿಸಲು ಉಪಯುಕ್ತವಾಗಿರುತ್ತದೆ. ವಿವಿಧ ಪ್ರಕಾರದ ಹಕ್ಕಿ ಪುಕ್ಕಗಳನ್ನು ಬಾಣಗಳ ತುದಿಗೆ ಜೋಡಿಸಲಾಗುತ್ತಿತ್ತು. ನವಿಲು, ಕಂಕ ಮೊದಲಾದ ಪಕ್ಷಿಗಳ ಪುಕ್ಕಗಳನ್ನು ಲಗತ್ತಿಸಿದ ಬಾಣಗಳ ಬಗ್ಗೆ ಉಲ್ಲೇಖಗಳನ್ನೊಳಗೊಂಡ ಸಾಹಿತ್ಯ ಹೇರಳವಾಗಿದೆ

**ಬಾಣಗಳ ಮೊನೆ :**

ಬಾಣದಿಂದ ಗುರಿಯಿಟ್ಟಾಗ ಲಕ್ಷ್ಯವನ್ನು ಕತ್ತರಿಸುವುದು ಅಥವಾ ಬೇಧಿಸುವುದು ಅದರ ಮೊನೆಯೇ ಆಗಿದೆ. ಕಬ್ಬಿಣ, ಮೂಳೆ (ಎಲುಬು) ಅಥವಾ ಮರದಿಂದ ಮಾಡಿದ ತೀಕ್ಷ್ಣ ಮೊನೆಗಳನ್ನು ಬಾಣಗಳಿಗೆ ಜೋಡಿಸಬೇಕು. ಮೊನೆಗಳ ತುದಿಯನ್ನು ಕಬ್ಬಿಣದ ಚಾಕು, ಕ್ಷೌರಿಕನ ಕತ್ತಿ, ಹಸುವಿನ ಬಾಲ, ಅರ್ಧ ಚಂದ್ರ, ಸೂಚಿಯ ಮೊನೆ, ವೃದ್ಧಿಸುವ ಚಂದ್ರ ಕರುವಿನ ಹುಲ್ಲು, ಬಿದಿಗೆಯ ಚಂದ್ರ, ಕಾಗೆಯ ಕೊಕ್ಕು, ಮುಂತಾದ ಅನೇಕ ಆಕಾರಗಳಲ್ಲಿ ರೂಪಿಸಬೇಕು. ಅರಮುಖದಿಂದ (ಚಾಕುವಿನ ಅಲಗಿನಿಂದ) ಚರ್ಮವನ್ನೂ ಬೇಧಿಸಬಹುದು. ಕ್ಷೌರಿಕನ ಕತ್ತಿಯ ಅಲಗುಳ್ಳ ಕಬ್ಬಿಣದ ತುದಿಯಿಂದಲೂ ಕಾರ್ಮುಕ (ಧನಸ್ಸು) ವನ್ನು ಬೇಧಿಸಬಹುದು. ಸೂಜಿಯಾಕಾರದ ಮೊನೆಯಿಂದ ಕವಚಗಳನ್ನು ಬೇಧಿಸಬಹುದು. ಅರ್ಧ ಚಂದ್ರಾಕಾರದ ಲೋಹ ಮೊನೆಯಿಂದ ಮಾನವನ ಶಿರವನ್ನೂ ಬೇಧಿಸಬಹುದು. ಶುದ್ಧಲೋಹದಿಂದ ಮಾಡಿದ, ಅತಿ ತೀಕ್ಷ್ಣ ಅಲಗುಳ್ಳ ಲೋಹದ ಮೊನೆಗಳನ್ನು ವಜ್ರಲೇಪದಿಂದ ಬಾಣಗಳಿಗೆ ಅಳವಡಿಸಲಾಗುತ್ತಿತ್ತು.

**ಬಾಣಗಳ ನಮೂನೆಗಳು :**

ವಿವಿಧ ಗ್ರಂಥಗಳಲ್ಲಿ ಅನೇಕ ಬಗೆಯ ಬಾಣಗಳ ಬಗ್ಗೆ ವಿವರಣೆ ಇದೆ. ಸಂಪೂರ್ಣ ಲೋಹ ಮತ್ತು ಪಂಚ ಪ್ರಬಲ ಪುಕ್ಕಳಿಂದೊಡಗೂಡಿದ ಬಾಣವೇ 'ನರಕ'. ಯಂತ್ರ ಸಹಾಯದಿಂದ ತಳ್ಳಲ್ಪಡುವ ನಳಿಕೆಯಾಕಾರದ ಬಾಣವೇ 'ನಳಿಕ'. ಇಂತಹ ಬಾಣಗಳು ಅತಿ ದೂರ ಕ್ರಮಿಸುವುದರಿಂದ ಇದನ್ನು ಕೋಟೆಯ ಕಾಳಗಗಳಿಗೆ ಯೋಗ್ಯವೆಂದು ತಿಳಿಸಲಾಗಿದೆ. ವಿವಿಧ ಲಕ್ಷ್ಯಗಳನ್ನು ಬೇಧಿಸ ತಕ್ಕಂತಹ ವಿವಿಧ ಬಾಣಗಳ ಬಗ್ಗೆ 'ಶುಕ್ರನೀತಿ'ಯಂತಹ ಗ್ರಂಥಗಳಲ್ಲಿ ಉಲ್ಲೇಖಗಳಿವೆ.

ರಾಜಕುಮಾರರು ಮತ್ತು ಸೈನಿಕರು ತಮ್ಮ-ತಮ್ಮ ಹೆಸರುಗಳನ್ನು ತಮ್ಮ ತಮ್ಮ ಬಾಣಗಳ ಮೇಲೆ ಕೆತ್ತುತ್ತಿದ್ದರೆಂಬುದು ರೋಚಕ ವಿಷಯ. ಮಾನಸೋಲ್ಲಾಸದಲ್ಲಿ, ಮನೋರಂಜನೆಗಾಗಿ ರಾಜರಿಂದ ಉಪಯೋಗಿಸಲ್ಪಡಬಹುದಾದ ಧನಸ್ಸು ಮತ್ತು ಬಾಣದ ವರ್ಣನೆ ಸಿಗುತ್ತದೆ.

## ಧನುರ್ಧಾರಿಯ ಅಂಗವಿನ್ಯಾಸ :

ವಿವಿಧ ದಿಕ್ಕುಗಳಿಂದ, ವಿವಿಧ ಲಕ್ಷ್ಯಗಳನ್ನು ವಿವಿಧ ದೂರಗಳಿಂದ ಬೇಧಿಸಲು ಧನುರ್ಧಾರಿಯ ವಿವಿಧ ಪ್ರಕಾರದ ಅಂಗ ವಿನ್ಯಾಸಗಳನ್ನು ಅಂಗೀಕರಿಸು ಬೇಕಾಗುತ್ತದೆ. ಬಾಣವನ್ನು ಗುರಿಯಿಡುವಾಗ ಧನುರ್ಧಾರಿಯ ವಿವಿಧ ಅಂಗ ವಿನ್ಯಾಸ, ಆವನು ಧನುಸ್ಸು ಮತ್ತು ಬಾಣವನ್ನು ಹಿಡಿದುಕೊಳ್ಳುವ ಮುಷ್ಟಿ, ದಾರವನ್ನು ಹಿಗ್ಗಿಸುವ ವ್ಯಾಯ ಮುಂತಾದುವು ಬಾಣದ ಎಸೆತದಲ್ಲಿ ಮುಖ್ಯ ಪಾತ್ರವನ್ನು ವಹಿಸು ತ್ತವೆ. ಧನುರ್ವೇದದಲ್ಲಿ, ಈ ಎಲ್ಲಾ ತಾಂತ್ರಿಕ ಅಂಶಗಳ ಬಗ್ಗೆ ವಿವರವಾಗಿ ಹೇಳಲಾಗಿದೆ. ಅಷ್ಟ ಅಂಗ ವಿನ್ಯಾಸ ಗಳು ಅಥವಾ ಸ್ಥಾನಕಗಳು ಯಾವುವೆಂದರೆ, ಆಲೀಢ, ಪ್ರತ್ಯಾಲೀಢ, ವಿಶಾಖ, ಸಂಪದ, ಅಸಂಪದ, ದಾರ್ದುರ, ಗರುಡ ಮತ್ತು ಪದ್ಮಾಸನ, ಅಗ್ನಿ ಪುರಾಣದಲ್ಲಿ, ಮಂಡಲ, ಸ್ಥಾನಮ್, ನಿಷ್ಕಲ, ವಿಖಾತ, ಸಂಪುಟ ಸ್ವಸ್ತಿಕ, ಅಲಿಢ, ಪ್ರತ್ಯಾಲೀಢ, ಸಾಮ ಮತ್ತು ವೈಶಾಖ ಗಳ ಬಗ್ಗೆ ಹೇಳಲಾಗಿದೆ.

## ಮುಷ್ಟಿ ವ್ಯಾಯ ಮತ್ತು ಸಂಧಾನ :

ಪತಾಕ, ವಜ್ರ, ಸಿಂಹಕರ್ಣಿಕ, ಮತ್ಸ್ಯೋರಿ, ಮತ್ತು ಕಾಕತುಂಡಿ ಎಂಬ ಐದು ವಿಧದ ಮುಷ್ಟಿಗಳ ಬಗ್ಗೆ ತಿಳಿಸಲಾಗಿದೆ. ವಿವಿಧ ರೀತಿಯ ಲಕ್ಷ್ಯಬೇಧ ಗಳಿಗೆ ವಿವಿಧ ರೀತಿಯ ಮುಷ್ಟಿಗಳನ್ನು ಉಪಯೋಗಿಸ ಬೇಕಾಗುವುದು. ಕೈಶಿಕ, ಸಾತ್ವಿಕ, ವತ್ಸಕರ್ಣ, ಭರತ ಮತ್ತು ಸ್ಕಂಧ ಎಂಬ (ನಿರ್ದಿಷ್ಟ ರೀತಿಯಲ್ಲಿ ದಾರ ವನ್ನು ಎಳೆಯುವಿಕೆ) ಐದು ವ್ಯಾಯಗಳನ್ನು ವರ್ಣಿಸ ಲಾಗಿದೆ. ದಾರದ ಮೇಲೆ (ಹುರಿಯ ಮೇಲೆ) ಬಾಣ ವನ್ನು ಎಸೆತದ ಮೊದಲು ಅಳವಡಿಸುವುದೇ ಸಂಧಾನ ಸಾಮಾನ್ಯವಾಗಿ ಲಕ್ಷ್ಯದ ದೂರಕ್ಕನುಗುಣವಾಗಿ ಮೂರು ರೀತಿಯ ಸಂಧಾನಗಳಿವೆ. ಅಧಃ ಸಂಧಾನ (ನಿಮ್ನ) ಲಕ್ಷ್ಯವು ಅತಿ ದೂರದ ವಸ್ತುವಾಗಿದ್ದರೆ ಅಧಃ ಸಂಧಾನ ಮಾಡಲಾಗುವುದು. ಸಮಸಂಧಾನವು ವಸ್ತುವು ಸಮಾನ ಸ್ತರದಲ್ಲಿದ್ದಾಗ ಸಮಸಂಧಾನ ಮಾಡಲಾಗುವುದು. ಊರ್ಧ್ವ ಸಂಧಾನವು ಬಾಣವು ಅತಿ ಕರ್ಕಶ ಧ್ವನಿಯಿಂದ ಸಾಗಬೇಕಾದಾಗ ಊರ್ಧ್ವ ಸಂಧಾನ ಮಾಡಬೇಕಾಗುತ್ತದೆ.

## ಲಕ್ಷ್ಯಗಳು :

ಲಕ್ಷ್ಯವನ್ನು ಬೇಧಿಸುವುದಕ್ಕೆ ವೇಧನಂ (ಭೇಧನಂ) ಎಂದು ಹೇಳುತ್ತಾರೆ ಹಾಗೂ ಇವುಗಳ ಕೆಲವು ಪ್ರಕಾರಗಳನ್ನು ವರ್ಣಿಸಲಾಗಿದೆ. ಸ್ಥಿರಲಕ್ಷ್ಯ ಬೇಧ (ಸ್ಥಿರ ಧನುರ್ಧಾರಿ ಮತ್ತು ಸ್ಥಿರಲಕ್ಷ್ಯ), ಚಲಾ ಚಲ ಲಕ್ಷ್ಯಬೇಧ (ಲಕ್ಷ್ಯವು ಸ್ಥಿರವಾಗಿದ್ದು ಧನುರ್ಧಾ ರಿಯು ಚಲ್ಲಿಸುತ್ತಿದ್ದಾಗ), ಮತ್ತು ಧನುರ್ಧಾರಿ ಹಾಗೂ ವಸ್ತು ಇಬ್ಬರೂ ಚಲಿಸುತ್ತಿದ್ದಾಗ ಅದು 'ದ್ವಿಕಲ್ಪಬೇಧ' ವೆನಿಸುತ್ತದೆ.

ಇದೇ ರೀತಿಯಲ್ಲಿ ಲಕ್ಷ್ಯದ ವರ್ಗೀಕರಣವು, ದೂರ, ಆಕಾರ ಮತ್ತು ವಸ್ತುಗಳಿಗನುಸಾರವಾಗಿರು ತ್ತದೆ. ವಿಭಿನ್ನ ಸಂದರ್ಭಗಳಿಗನುಗುಣವಾಗಿ ಧನುರ್ವಿದ್ಯೆಯ ವಿದ್ಯಾರ್ಥಿಯು, ವಿವಿಧ ರೀತಿಯ ತಂತ್ರಗಳನ್ನು ಉಪಯೋಗಿಸುವ ಬಗ್ಗೆ, ಹೇಗೆ ಶಿಕ್ಷಣ ವನ್ನು ಪಡೆಯಬೇಕೆಂಬ ವಿಸ್ತೃತ ವಿವರಣೆಗಳ ಬಗ್ಗೆ, ಹಾಗೂ ಧನುರ್ಧಾರಿಯ ಕೌಶಲ್ಯವನ್ನು ನಿರ್ಣಯಿಸುವ ನಾನಾ ರೀತಿಯ ನಿಜ ಪರೀಕ್ಷೆಗಳ ಬಗ್ಗೆ ಅನೇಕ ಪ್ರಾಚೀನ ಗ್ರಂಥಗಳಲ್ಲಿ ವಿಸ್ತೃತ ವಿವರಣೆ ಇದೆ. ಶಬ್ದ ಬೇಧನ (ಶಬ್ದದ ಸಹಾಯದಿಂದ ಲಕ್ಷ್ಯವನ್ನು ಬೇಧಿಸು ವಿಕೆ), ಯಮಲಾರ್ಜುನಬೇಧ, ರಾಧಾಬೇಧ ಮುಂತಾದುವುಗಳ ಅಭ್ಯಾಸಗಳ ಬಗ್ಗೆಯೂ ವಿವರಣೆ ಇದೆ.

ಕಕ್ರ (ಚಕ್ರ ?), ಕುಂತ ಮತ್ತು ಗದೆ ಮುಂತಾದ ಅನ್ಯ ಆಯುಧಗಳ ಉಪಯೋಗ ಸಂಬಂಧೀ ತಂತ್ರ ಗಳೂ ಸಹ ಈ ಗ್ರಂಥಗಳಲ್ಲಿ ಹೇಳಲ್ಪಟ್ಟವೆ. ಕಕ್ರವು (discuss) ಕೇಂದ್ರದಲ್ಲಿ ಎಂಟು ಕಡಿಹಲ್ಲುಗಳಿಂದ ಕೂಡಿದೆ, ಕುಂತವು ಕಾಷ್ಠದ ಕೋಲು, ಗದೆ ಅಥವಾ ದಂಡವು ಲೋಹ ಅಥವಾ ದಾರುಶರ (ಕಾಷ್ಠ) ದಿಂದ ಮಾಡಲಾಗಿರುತ್ತದೆ.

## ಖಡ್ಗಗಳು

ಪ್ರಾಚೀನ ಗ್ರಂಥಗಳಲ್ಲಿ ಖಡ್ಗಗಳ ಬಗ್ಗೆ ಕುತೂಹಲ ವನ್ನು ಕೆರಳಿಸತಕ್ಕಂತಹ ಕೆಲವು ಮುಖ್ಯಾಂಶಗಳನ್ನೊಳ ಗೊಂಡ ಹಲವು ಅಧ್ಯಾಯಗಳಿವೆ. ಖಡ್ಗಯುದ್ಧದಲ್ಲಿ ನಿಪುಣತೆಯನ್ನು ಪಡೆದಿದ್ದ ಅನೇಕ ಯೋಧರ ಬಗ್ಗೆ,

ಇತಿಹಾಸದಲ್ಲಿ ಸಾಕ್ಷಿ ಇದೆ. ಕೆಳದಿಯ ಸಂಕಣ್ಣ-ನಾಯಕನು ಪ್ರಮುಖ ಕುಶಲ ಖಡ್ಗಯೋಧನಾಗಿದ್ದು, ದಿಲ್ಲಿಯ ಸುಲ್ತಾನ ಆರಿಕುಶಾಖಾನನನ್ನು ಸೋಲಿಸಿದ ನೆಂಬುದನ್ನು ಉಲ್ಲೇಖಿಸಬಹುದು. 'ಬ್ರಹ್ಮ ಸಂಹಿತೆ', 'ಶಿವತತ್ವ ರತ್ನಾಕರ' ಮುಂತಾದ ಪ್ರಾಚೀನ ಗ್ರಂಥಗಳಲ್ಲಿ ವಿಭಿನ್ನ ರೀತಿಯ ಖಡ್ಗಗಳು, ನಿರ್ದಿಷ್ಟ ಮಾನದ ಖಡ್ಗಗಳ ಆಳತೆ, ಅವುಗಳ ಹರಿತ, ಖಡ್ಗಗಳ ಮೇಲಿನ ಮಂಗಲಕರ ಚಿಹ್ನೆಗಳು, ಖಡ್ಗ ನಿರ್ಮಾಣಕ್ಕೆ ಯೋಗ್ಯ ಲೋಹ ಪ್ರಕಾರಗಳು-ಮುಂತಾದವುಗಳನ್ನು ವರ್ಣಿಸಲಾಗಿದೆ. ಇದೇ ಸಂದರ್ಭದಲ್ಲಿ ವಿವಿಧ ಪ್ರದೇಶಗಳಲ್ಲಿ ದೊರೆಯುವ ವಿವಿಧ ಲೋಹಗಳ ಸೂಚಿಯು ನಮಗೆ ದೊರಕುತ್ತದೆ. ಇವು ಖಡ್ಗವನ್ನು ತಯಾರಿಸಲು ಅತ್ಯುತ್ತಮವೆಂದು ಪರಿಗಣಿಸಲಾಗಿದೆ ಶುಷ್ಕ ಶಿಲಾಪ್ರದೇಶಗಳಲ್ಲಿ ದೊರಕುವ ಪಂಜರ ಲೋಹವು ಹರಳು ಬೀಜ ಬಣ್ಣದ್ದಾಗಿರುತ್ತದೆ. ಆದರ ರಚನಾತ್ಮಕ ಕಣಗಳು ಪೈಶಾಚಿ ಲಿಪಿಯನ್ನು ಹೋಲುವುದು ಅಥವಾ ಕೇತಕೀ ಫಲದಂತಿರುವುದು ಅಥವಾ ಕನ್ನಿಕೆಯ ಕೇಶದ ಸಣ್ಣ ಸಣ್ಣ ಗುಂಗುರು ಕೂದಲುಗಳನ್ನು ಹೋಲುವುದು. ಇದೇ ರೀತಿಯಲ್ಲಿ ಕೃಷ್ಣಪಂಜರಲೋಹ, ಸುವರ್ಣಪಂಜರಲೋಹ, ಕಾಂಭೋಜಲೋಹ, ನಿರಾಶರಲೋಹ, ಕೃತ್ಸರಲೋಹ ಮತ್ತು ಮಹಾರಾಷ್ಟ್ರಲೋಹಗಳ ಬಗ್ಗೆ ವಿವರಣೆ ಇದೆ. ವೇದಿಕ-ಎಂಬ ಕರ್ನಾಟಕದ ಲೋಹವು ಸ್ಪಷ್ಟ, ಶ್ವೇತ, ವೃತ್ತಾಕಾರ ಚಿಹ್ನೆಯ ಕಣವಿನ್ಯಾಸಗಳನ್ನು ಹೊಂದಿದ್ದೆ. ವಿಶಿಷ್ಟ ಗುಣಗಳುಳ್ಳ ವಿವಿಧ ರೀತಿಯ ಈ ಲೋಹಗಳ ವಿವರಗಳಿಂದ ನಮ್ಮ ಪೂರ್ವಜರು ಧಾತುಶೋಧನ ವಿದ್ಯೆಗೆ ತಮ್ಮ ಕಾಣಿಕೆಯನ್ನು ಅರ್ಪಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ.

ವಿವಿಧ ದೇವತೆಗಳ ಅಧಿಕಾರ ಪದ ಹಾಗೂ ಉದ್ದೇಕ್ಯನುಸಾರವಾಗಿ ಖಡ್ಗಗಳು ಉಪಯೋಗಿಸಲ್ಪಡುತ್ತಿದ್ದುವೆಂದು ನಂಬಲಾಗಿದೆ. ಅಧಿಕಾರ ಪೀಠದ ದೇವತೆಗಳು ಮಹಾಲಕ್ಷ್ಮಿ, ಮಹೇಶ್ವರಿ, ಅಂಬಿಕಾ ಅಥವಾ ವೈಷ್ಣವಿಯರಾಗಿದ್ದರೆ, ಖಡ್ಗಗಳು ಮಂಗಳಕರವೆಂದು ಪರಿಗಣಿಸಲಾಗುತ್ತದೆ. ವರಾಹಿ, ಶೂಲಿನಿ, ಚಂಡಿಕೆಯರು ಖಡ್ಗಧಾರಿಣಿಯರಾಗಿದ್ದರೆ ಅಮಂಗಳಕರವೆಂದೂ ಪರಿಗಣಿಸಲಾಗುತ್ತದೆ.

## ಅನ್ಯ ಆಯುಧಗಳು

ಧನುಸ್ಸು, ಚಕ್ರ, ಕುಂತ, ಖಡ್ಗ, ಶೂಲ ಮತ್ತು ಗದೆ ಎಂಬೀ ಆರು ಆಯುಧಗಳಲ್ಲದೇ ಅನ್ಯ ಅಸಂಖ್ಯಾತ ಆಯುಧಗಳ ಉಲ್ಲೇಖಗಳಿಂದ ನಮ್ಮ ಸಾಹಿತ್ಯಿಕ ಗ್ರಂಥಗಳು ತುಂಬಿಹೋಗಿವೆ. ಸಾಮ್ರಾಜ್ಯ ಲಕ್ಷ್ಮೀ ಪೀಠಿಕೆಯು ಮೂವತ್ತೆರಡು ಆಯುಧಗಳನ್ನು ಪ್ರಸ್ತಾಪಿಸುತ್ತದೆ. ಇವುಗಳಲ್ಲಿ ಕೆಲವನ್ನು ಇಲ್ಲಿ ನಮೂದಿಸಬಹುದು : ಕಪ, ಸರ್ಪ, ಅಸಿ, ಕ್ಷುರಿಕ (ಚೂರಿಕ ?), ಪರಶು, ಚಕ್ರ, ಶೂಲ, ಶಕ್ತಿ, ಭಿಂದಿ ವಾಲಕಂ, ಪರಿಘ, ವಜ್ರಂ, ಲಂಗುದ, ಗದೆ, ಖೇಟಕ, ಭಲ್ಲೆ, ಶಲ್ಲೆ, ಉದ್ಗಾರ, ಕುಂತ, ಕುಠಾರ, ಮೂಸಲ, ಯಾಷ್ಟಿ, ನಲಿಕ, ಕಾಸ, ಸ್ವಸ್ತಿಕ, ಟಂಕ, ಹಾಲ, ವೇತ್ರ, ಪ್ರಾಸ, ತೋಮರ, ಕಂಪನ, ಕುಟ .... ಇತ್ಯಾದಿ. ಪುರಾಣ ಹಾಗೂ ಮಹಾಗ್ರಂಥಗಳಲ್ಲಿ ಖಂಡ ಪರಶು, ಕುಲಿಶ, ಪರಾಸನ, ಪಟ್ಟೀಸ, ಭೂಸುಂಡಿ, ದಂಡ ಇತ್ಯಾದಿ....ದಿವ್ಯಾಸ್ತ್ರಗಳೂ ಪ್ರಸ್ತಾಪಿಸಲ್ಪಟ್ಟಿವೆ. ಇವಲ್ಲದೆ, ಇಂದ್ರವಜ್ರ, ಬ್ರಹ್ಮಾಸ್ತ್ರ, ನಾಗಾಸ್ತ್ರ, ಮದನಾಸ್ತ್ರ, ಪಾಶ, ಆಗ್ನೇಯಾಸ್ತ್ರ ಮುಂತಾದ ದಿವ್ಯಾಸ್ತ್ರಗಳೂ ಪ್ರಸ್ತಾಪಿಸಲ್ಪಟ್ಟಿವೆ. ಅಂಗುಲಿತ್ರಾಣ, ಆಪಿದ, ಕವಕ, ಕಾರ್ಮ, ತನುತ್ರಾಣ, ವರ್ಮ, ಸನ್ನಾಹ, ಶಿರಸ್ತ್ರಾಣ ಮೊದಲಾದ ರಕ್ಷಾವಸ್ತುಗಳ ಬಗ್ಗೆಯೂ ಉಲ್ಲೇಖವಿದೆ.

ಮೇಲೆ ಹೆಸರಿಸಿದ ಹಲವು ಆಯುಧಗಳ ಉಪ-ಯೋಗದ ಬಗ್ಗೆ ಋಗ್ವೇದದಲ್ಲಿ ಉಲ್ಲೇಖವಿದ್ದು ಇವುಗಳಲ್ಲಿ ಕೆಲವನ್ನು ಇಂದ್ರ ಮತ್ತು ಯಮರಿಗೆ ಸಂಬಂಧಪಟ್ಟಂತೆ ತಿಳಿಸಲಾಗಿದೆ. ಸಿಂಧೂ ಕಣಿವೆಯ ಜನರೂ ಸಹ ಬಿಲ್ಲು ಮತ್ತು ಬಾಣ, ಪರಶು, ಗದೆ ಮುಂತಾದವುಗಳನ್ನು ಉಪಯೋಗಿಸುತ್ತಿದ್ದರೆಂಬುದಕ್ಕೆ ಪುರಾವೆ ಇದೆ.

## ಆಯುಧ ಸಂಬಂಧೀ ದೇವತೆಗಳು

ಧನುಸ್ಸು ವೇದಕಾಲೀನ ಯುದ್ಧಗಳಲ್ಲಿ ನಿಖರವಾದ ಪಾತ್ರ ವಹಿಸಿದ್ದೇ ಅಲ್ಲದೆ, ಪುರಾಣ ಮತ್ತು ಮಹಾಕಾವ್ಯಗಳಲ್ಲಿ ಪದೇ ಪದೇ ಹೇಳಲ್ಪಟ್ಟ ಆಯುಧವಾಗಿದೆ. ಆದಿಕಾಲೀನ ರಾಜಾ ಪೃಥನು ಧನುಸ್ಸು,

ಬಾಣ ಮತ್ತು ಕವಚಗಳ ಸಮೇತ ಜನ್ಮ ತಾಳಿದ್ದನೆಂದು ಹೇಳಲಾಗಿದೆ. ವಿಷ್ಣುವಿನ ಅವತಾರಗಳಲ್ಲೊಂದಾದ ರಾಮನೂ ಸಹ ಸದಾ ಬಿಲ್ಲು ಮತ್ತು ಬತ್ತಳಿಕೆಯನ್ನು ಇಟ್ಟುಕೊಂಡಿರುತ್ತಿದ್ದನು. ಪೌರಾಣಿಕ ಸನ್ನಿವೇಶಗಳಲ್ಲಿ ಶಿವ ಮತ್ತು ಭೂತಗಳ ಸಂಬಂಧವಾಗಿ ಅಸಿ ಮತ್ತು ಖಡ್ಗಗಳ ಬಗ್ಗೆ ಹೇಳಲಾಗಿದೆ. ಪರಶುವು ಶಿವನಿಗೇ ಸಂಬಂಧಿಸುದುದಾಗಿ ವಾಯುಪುರಾಣವು ತಿಳಿಸುತ್ತದೆ. ಚಕ್ರವು ಇಂದ್ರನಿಗೆ ಸಂಬಂಧಪಟ್ಟ ಆಯುಧವೆಂದು ತಿಳಿಸಲಾಗಿದೆ.

ಚಕ್ರವು ಗತಿಶೀಲ ಯಂತ್ರ (ಕಾಲಯಂತ್ರ) ವೆಂದು ಕೌಟಲ್ಯನಿಂದ ವರ್ಣಿಸಲಾಗಿದೆ ಮತ್ತು ಲೋಹ ದಿಂದ ಮಾಡಿದ ತೀಕ್ಷ್ಣ ಅಲಗುಳ್ಳ ಚಕ್ರಾಕಾರವಾಗಿ ತಿರುಗುವ ಆಯುಧವೆಂದು ಮಹಾಭಾರತದಲ್ಲಿ ಹೇಳಲಾಗಿದೆ. ಪುರಾಣಗಳು ಚಕ್ರದ ಸಂಬಂಧವನ್ನು ವಿಷ್ಣುವಿನೊಡನೆ ಜೋಡಿಸುತ್ತವೆ.

ಮಹಾಭಾರತದಲ್ಲಿ ಗದೆ ಅಥವಾ ದಂಡವು ಧನುಸ್ಸಿನ ನಂತರದ ಎಂದರೆ ಎರಡನೆಯ ಸ್ಥಾನವನ್ನು ಪಡೆಯುತ್ತದೆ. ಇದು ಮುಖ್ಯವಾಗಿ, ಶಿವ ಮತ್ತು ವಿಷ್ಣುವಿನ ಸಂಬಂಧವನ್ನೂ ಮತ್ತು ಮುದ್ಗರವು ಶಿವ ಮತ್ತು ಭೂತಗಣಗಳ ಸಂಬಂಧವನ್ನೂ ಹೊಂದಿದೆ ಭರ್ಜಿ ಅಥವಾ ಶೂಲವೂ ಸಹ ಯುದ್ಧದಲ್ಲಿ ಆಯುಧವಾಗಿ ಉಪಯೋಗಿಸಲಾಗುತ್ತಿತ್ತು ; ಪ್ರಾಚೀನ ಭಾರತದಲ್ಲಿನ ನಾಣ್ಯಗಳಲ್ಲಿ ಇದು ಶಿವನಿಗೇ ಸಂಬಂಧಪಟ್ಟದುದಾಗಿದೆ. 'ಶಕ್ತಿ'ಯೂ ಒಂದು ರೀತಿಯ ಭರ್ಜಿ ಅಥವಾ ಭಲ್ಲೆ ಹಾಗೂ ಇದು ಕಾರ್ತಿಕೇಯನಿಗೆ ಸಂಬಂಧಿಸಿದುದು. ನೇಗಿಲು ಬಲರಾಮನಿಗೆ ಮತ್ತು ಕೆಲವು ವೇಳೆ ಶಿವನಿಗೆ ಸಂಬಂಧಿಸಿದೆಂದೂ ಸಹ ಹೇಳಲಾಗಿದೆ. ಮೊದಲು ಕಲ್ಲಿನಿಂದ ಮಾಡಲಾಗಿದ್ದು, ನಂತರ ಅಸ್ಥಿಯಿಂದ ಮಾಡಲಾದ ಆಯುಧವೇ ಇಂದ್ರನ ವಜ್ರಾಯುಧ. ಅಂಕುಶವು ಯುದ್ಧದ ಆಯುಧವಲ್ಲವಾದರೂ ಗಣೇಶನಿಗೆ ಸಂಬಂಧಿಸಿದೆಂದು ಹೇಳಲಾಗಿದೆ. ಇದೇ ರೀತಿಯಲ್ಲಿ ಇನ್ನೂ ಅನೇಕ ಅನ್ಯ ಆಯುಧಗಳೂ ಸಹ ದೇವತೆಗಳು, ನವಗ್ರಹಗಳು, ಅಷ್ಟದಿಕ್ಪಾಲಕರು ಹಾಗೂ ಅನ್ಯ ಸ್ವರ್ಗವಾಸಿಗಳ ಸಂಬಂಧವನ್ನು ಹೊಂದಿವೆ. ಕಾಮದೇವ ಮನ್ಮಥನೂ ಸಹ ಪ್ರೇಮಿಗಳನ್ನು ಆಕರ್ಷಿಸಲು ಪಂಚ ಬಾಣ-ಹೂವಿನ ಪಂಚಬಾಣಗಳೊಂದೊಡಗೂಡಿದ ಆಯುಧವನ್ನು ಹೊಂದಿದ್ದನೆಂಬುದು ಕುತೂಹಲಕಾರೀ ವಿಷಯವಾಗಿದೆ.

## ಆಯುಧಗಳ ಉಪಾಸನೆ

ವೇದಕಾಲೀನ ಯುಗದಿಂದಲೂ ಪ್ರಕೃತಿಯ ಶಕ್ತಿಗಳನ್ನೂ ಮತ್ತು ಧರ್ಮ ಮತ್ತು ಅಧರ್ಮದಂತಹ ಅಮೂರ್ತ ವಸ್ತುಗಳನ್ನು ದೈವೀಕರಿಸುವ ಪದ್ಧತಿ ಭಾರತದಲ್ಲಿತ್ತು. ಇದೇ ಅಲ್ಲದೆ ಭಾರತದಲ್ಲಿ ಮೂರ್ತಿ ಪೂಜೆಗೆ ಅಧಿಕ ಮಹತ್ವ ಕೊಡಲಾಗಿತ್ತು. ಇದರ ಫಲವಾಗಿ ಮೂರ್ತಿಕಲೆ ಅಥವಾ ವಾಸ್ತುಶಿಲ್ಪದ ಅಭಿವೃದ್ಧಿಯುಂಟಾಯಿತು. ಧಾರ್ಮಿಕ ಮೌಲ್ಯಗಳಿಗನುಗುಣವಾಗಿಯೇ ಪ್ರಾಚೀನ ಭಾರತದಲ್ಲಿ ಮೂರ್ತಿಗಳನ್ನು ರೂಪಿಸಿ ರಚಿಸಲಾಯಿತು. ಭಕ್ತಿಮಾರ್ಗದ ಎಲ್ಲಾ ಸಂಪ್ರದಾಯಗಳಲ್ಲೂ ಸಹ ದೇವಾನುದೇವತೆಗಳ ಪಾತ್ರ ಹಿರಿದಾಗಿದೆ. ಹಲವು ನಿಶ್ಚಿತ ಮೂರ್ತಿಯ ಪ್ರಾತಿನಿಧ್ಯ ಹಾಗೂ ಸಂಕೇತಗಳ ಮೂಲಕ ಜನಸಾಮಾನ್ಯನು ಸ್ಫೂರ್ತಿ ಹೊಂದಿ ಪೂಜೆ ಸಲ್ಲಿಸುವಂತೆ ಮಾಡಲು ದೈವತ್ವವನ್ನು ಪ್ರಸ್ತುತೀಕರಿಸಬಹುದು. ಮೂರೂ ಸಂಪ್ರದಾಯಗಳ (ವೈಷ್ಣವ, ಶೈವ ಮತ್ತು ಶಾಕ್ತ) ಆಗಮದ ಕ್ರಿಯಾ ಪಾದಗಳು ಕಲೆಯ, ಅದರಲ್ಲೂ ಪ್ರಮುಖವಾಗಿ, ದೇವತೆಗಳ ಮೂರ್ತಿಪೂಜೆಯ ಪ್ರಾತಿನಿಧೀಕರಣ ಕಲೆಯ ಶಿಲಾಧಾರವನ್ನು ಹಾಕಿವೆ. ದೇವತೆಗಳ ಜೊತೆಗೆ ಆಯಾ ನಿರ್ದಿಷ್ಟ ದೇವತೆಗೆ ಸಂಬಂಧಿಸಿದ ಆಯುಧ ಹಾಗೂ ಅಲಂಕಾರಿಕ ವಸ್ತುಗಳೂ ಪೂಜಿತವಾದವು. ಹೀಗೆ ಆಯುಧಗಳ ಉಪಾ-ಸನೆಯು ರೂಢಿಗೆ ಬಂದಿತು. ಸಾಮಾನ್ಯವಾಗಿ, ವಿವಿಧ ದೇವತಾ ಮೂರ್ತಿಗಳು ಅನೇಕ ಕೈಗಳನ್ನು ಹೊಂದಿದ್ದು ಅವುಗಳಲ್ಲಿ ವಿಧವಿಧದ ಆಯುಧಗಳು, ಜಪಮಾಲೆ, ಹೂವು, ಹಣ್ಣು ಮತ್ತಿತರ ವಸ್ತುಗಳು ಇರುತ್ತವೆ. ಪ್ರತಿಮಾ ಲಕ್ಷಣ ವಿಜ್ಞಾನದ ಮೇರೆಗೆ ದೇವತೆಯ ಗುಣಲಕ್ಷಣ ಹಾಗೂ ಅಭಿಲಕ್ಷಣಗಳು, ಕೈಗಳ ಸಂಖ್ಯೆ ಮತ್ತು ಹಿಡಿದಿರುವ ಆಯುಧಗಳಿಂದ ಪ್ರತಿಪಾದಿಸಲಾಗುತ್ತದೆ. ಆಯುಧಗಳು ದೈವೀಶಕ್ತಿಯ ಮತ್ತು ಬಲದ ನೆಲೆಯಾಗಿರುವುದರಿಂದ, ವಿಶೇಷ ದಿನಗಳಲ್ಲಿ, ಅವುಗಳನ್ನು ಪೂಜಿಸಲಾಗುತ್ತಿದ್ದುವು. ಕಾಲಕ್ರಮೇಣ ಚಕ್ರ, ಶಕ್ತಿ, ಶೂಲ ಮೊದಲಾದ ಕೆಲವು ಪ್ರಮುಖ ಆಯುಧಗಳು,

ಮಾನವೀಕರಣಗೊಂಡವು ಮತ್ತು ಅವುಗಳ ಪ್ರತಿಬಿಂಬಗಳನ್ನು ದೇವಾಲಯಗಳಲ್ಲಿ ಪ್ರತಿಷ್ಠಾಪಿಸಲಾಯಿತು. ಆಗಮ ಗ್ರಂಥಗಳು, ಅದರಲ್ಲೂ ನಿರ್ದಿಷ್ಟವಾಗಿ ವೈಷ್ಣವ ಆಗಮಗಳಲ್ಲಿ, ದೇವತೆಗಳಿಗೆ ಸಂಬಂಧಪಟ್ಟ ಆಯುಧಗಳ ಬಗ್ಗೆಯೂ, ಪ್ರತಿಮಾ ಲಕ್ಷಣ ವೈಜ್ಞಾನಿಕ ವಿವರಣೆಗಳ ಬಗ್ಗೆಯೂ ಅಮೂಲ್ಯ ವೃತ್ತಾಂತ ದೊರೆಯುತ್ತವೆ. ಭಾರತೀಯ ಯುಗಪರಂಪರೆಯ ಕಲೆಯ ಅಧ್ಯಯನವು ಅದರಲ್ಲಿಯೂ ಹಿಂದೂ ಸಂಪ್ರದಾಯದ ಕಲೆ ಮತ್ತು ಶಿಲ್ಪಕಲಾ ಅಧ್ಯಯನವು ಆಗಮಗಳ ಅಧ್ಯಾಯದಲ್ಲಿನ ಪ್ರತಿಮೆ ಹಾಗೂ ಆಯುಧ ಸಂಬಂಧೀ ಅಧ್ಯಯನವಿಲ್ಲದೆ ಪೂರ್ಣಗೊಳ್ಳುವುದಿಲ್ಲ.

**ಆಯುಧಗಳು ಹಾಗೂ ಪ್ರತಿಮಾ ಲಕ್ಷಣ ವಿಜ್ಞಾನ**

ಕಿರೀಟ, ಆಭರಣ ಮತ್ತು ಆಯುಧಗಳಂತಹ ಕೆಲವು ನಿಶ್ಚಿತ ಆಲಂಕಾರಿಕಗಳಲ್ಲದೆ, ಯಾವ ಪ್ರತಿಮೆಯೂ ಪೂರ್ಣವೆನಿಸುವುದಿಲ್ಲ. ವಿವಿಧ ದೇವತಾ ಸಂಬಂಧೀ ಪ್ರತಿಮಾ ಲಕ್ಷಣ ವೈಜ್ಞಾನಿಕ ವಿವರಣೆಗಳಲ್ಲಿ ವಿಷ್ಣು ಮತ್ತು ಶಿವನ ವಿವಿಧ ರೂಪಗಳನ್ನು ನಿರ್ಧರಿಸುವ ಆಲಂಕಾರಿಕ ವಸ್ತುಗಳಲ್ಲಿ ಆಯುಧಗಳಿಗೆ ಅತ್ಯಂತ ಪ್ರಾಮುಖ್ಯತೆಯನ್ನು ನೀಡಲಾಗಿದೆ. ವಿಭಿನ್ನ ಕಾಲ, ಸ್ಥಳಗಳಲ್ಲಿ ಸೃಷ್ಟಿ, ಸಂರಕ್ಷಣೆ ಮತ್ತು ಸಂಹಾರದಂತಹ ವಿಭಿನ್ನ ಕ್ರಿಯಾಕಲಾಪಗಳನ್ನು ಕೈಗೊಳ್ಳಲು ವ್ಯೂಹಗಳು ಅಥವಾ ವಿಷ್ಣುವಿನ ನಾಲ್ಕು ವಿಧಿಗಳಿಗೆ, ಬಣ್ಣ ಮತ್ತು ಹೊಂದಿರುವ ಆಯುಧಗಳಲ್ಲಿ ಒಂದರಿಂದ ಮತ್ತೊಂದು ಭಿನ್ನವಾಗಿರುವಂತೆ ಪ್ರತಿಮಾ ವೈಜ್ಞಾನಿಕ ರೂಪಗಳನ್ನು ಕೊಡಲಾಗಿದೆ. ನಾಲ್ಕು ವ್ಯೂಹ ರೂಪಗಳಲ್ಲಿ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧಗಳಲ್ಲಿ ಚಿತ್ರಿಸಬೇಕಾದ ಆಯುಧಗಳ ಬಗ್ಗೆ ವೈಷ್ಣವ ಗ್ರಂಥಗಳಲ್ಲಿ ವಿಶಿಷ್ಟೀಕರಿಸಲಾಗಿದೆ. ಇದೇ ರೀತಿಯಲ್ಲಿ, ವಿಷ್ಣುವಿನ ಅವತಾರಗಳ ಚಿತ್ರಣದಲ್ಲಿ ಮತ್ತು ಭಗವಂತನ ಹನ್ನೆರಡು ಮೂರ್ತಿರೂಪಗಳಲ್ಲಿ ಚಿತ್ರೀಕರಿಸಬೇಕಾದ ಆಯುಧಗಳನ್ನು ತಿಳಿಸಲಾಗಿದೆ. (ಭಕ್ತರ ನೆರವಿಗೆ ಭಗವಂತನು ಧರಿಸುವ ಸಂರಕ್ಷಣೆಯ ಅಮೂರ್ತ ಶಕ್ತಿಗಳು) ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಋಷೀಕೇಶ, ಪದ್ಮನಾಭ ಮತ್ತು ದಾಮೋದರ—ಈ ಮೂರ್ತಿರೂಪಗಳನ್ನು ಶರೀರದ ೧೨ ಭಿನ್ನ ಭಿನ್ನ ಅಂಗಗಳಲ್ಲಿ ಆಹ್ವಾನ ಮಾಡಲಾಗಿದೆ. ಹಲವು ಆವರಣ ದೇವತೆಗಳು ಕೆಲವು ನಿರ್ದಿಷ್ಟ ಆಯುಧಗಳ ಮೂರ್ತಿಮಾನ ರೂಪಗಳಾಗಿದ್ದು, ಆ ಧ್ಯಾನ ಮೂರ್ತಿಗಳ ಪ್ರತಿಮಾ ವೈಜ್ಞಾನಿಕ ವಿವರಣೆಗಳು ಈ ಧಾರ್ಮಿಕ ಗ್ರಂಥಗಳಲ್ಲಿ ಕಂಡುಬರುತ್ತವೆ. ಇದಲ್ಲದೆ, ಇನ್ನೂ ಅನೇಕ ದೇವತೆಗಳ ತತ್ಸಂಬಂಧೀ ಆಯುಧಗಳೂ ಮಾನವೀಕೃತಗೊಂಡಿವೆ ಮತ್ತು ಅವುಗಳ ವಿವರಣೆಯನ್ನೂ ನೀಡಲಾಗಿದೆ.

ಸುದರ್ಶನವೆಂಬ ವಿಷ್ಣುವಿನ ಚಕ್ರವು ಪ್ರತ್ಯೇಕವಾಗಿಯೇ ಆತನ ದೇವಾಲಯದಲ್ಲಿ ಪೂಜೆಗೊಳ್ಳಲು ಅರ್ಹವಾಗಿದೆ. ದಕ್ಷಿಣ ಭಾರತದ ಕೆಲವು ದೇವಾಲಯಗಳಲ್ಲಿ, ಸುದರ್ಶನ ಚಕ್ರವನ್ನೇ ಪ್ರಧಾನ ದೇವತೆಯಂತೆ ಪೂಜಿಸಲಾಗುತ್ತದೆ. ಹೊಂಬಣ್ಣದ ಚಕ್ರವೃತ್ತದೊಳಗೆ, ಪ್ರತಿಮಾಲಕ್ಷಣ ವಿಜ್ಞಾನಕ್ಕನುಗುಣವಾಗಿ ಸುದರ್ಶನ ಚಕ್ರದಾಕೃತಿಯನ್ನು ಪ್ರಸ್ತುತಪಡಿಸಲಾಗಿದೆ. ನಾಲ್ಕು, ಆರು, ಎಂಟು ಅಥವಾ ಹದಿನಾರು ಅಥವಾ ಮೂವತ್ತೆರಡು ಹಸ್ತಗಳುಳ್ಳವನಾಗಿ ಚಿತ್ರೀಕರಿಸಿ, ಪ್ರತಿ ಹಸ್ತ ಆಯುಧವನ್ನೂ ನಿರ್ದಿಷ್ಟಪಡಿಸಲಾಗಿದೆ. ನವ ತಾಲದಳತೆಯಲ್ಲಿ ಆತನನ್ನು ಚಿತ್ರೀಕರಿಸಬೇಕು. ಒಂದು ನರ್ತನಗೈಯುತ್ತಿರುವಂತೆಯೂ, ಮತ್ತೊಂದು ಬದಿಯಲ್ಲಿ ನಾಲ್ಕೂ ಕೈಗಳಲ್ಲಿ ಚಕ್ರಹಿಡಿದ ನರಸಿಂಹನ ಸಂಯೋಜನೆಯೊಡನೆಯೂ ಇರುವ ಎರಡು ವಿವರಣೆಗಳು ದೊರಕಿವೆ. ಮಂದಿರದಲ್ಲಿನ ಸುದರ್ಶನ ಬಿಂಬವು ಹೊಂದಿರುವ ಹದಿನಾರು ಅಥವಾ ಮೂವತ್ತೆರಡು ಆಯುಧಗಳನ್ನು ಷಟ್ಕೋಣ (ಷಟ್ಕೋಣದ ತ್ರಿಭುಜಾಕೃತಿ)ದಲ್ಲಿ ಗಣೀಕರಿಸಲಾಗಿದೆ.

ಶೈವಾಗಮಗಳಲ್ಲಿಯೂ ಸಹ ವೀರಭದ್ರ, ಅಘೋರಮೂರ್ತಿ, ಶಕ್ತಿದೇವತೆಗಳೂ ಹಾಗೂ ಮತ್ತಿತರ ದೇವತೆಗಳ ವಿಭಿನ್ನ ಲಕ್ಷಣಗಳನ್ನು ಪ್ರತಿಪಾದಿಸುವ ಆಯುಧಗಳನ್ನು ಹಿಡಿದುಕೊಂಡಂತೆ ಚಿತ್ರೀಕರಿಸಲಾಗಿದೆ. ದೇಶದಾದ್ಯಂತ ಆಯುಧ ಪೂಜೆಯು ವೈಭವೋಪೇತವಾಗಿ ಆಚರಿಸಲಾಗುವುದೆಂಬುದು ಸರ್ವವಿದಿತ ವಿಷಯವಾಗಿದ್ದು, ವಿಜಯನಗರ ಕಾಲದ ಕೃತಿ, 'ಸಾಮ್ರಾಜ್ಯ

ಲಕ್ಷ್ಮಿ ಪೀಠಿಕೆ'ಯಲ್ಲಿಯೂ ಇದರ ಬಗ್ಗೆ ವಿಸ್ತೃತ ವರ್ಣನೆ ನೀಡಲಾಗಿದೆ. ಇದೇ ಸಂದರ್ಭದಲ್ಲಿ ಮೂವತ್ತೆರಡು ಆಯುಧಗಳ ಬಗ್ಗೆಯೂ ಚರ್ಚಿಸಲಾಗಿದೆ.

ಅಂತಿಮವಾಗಿ, ಮೇಲೆ ಹೇಳಿದ ವಿಷಯಗಳು ಸಂಕ್ಷಿಪ್ತವಾಗಿದ್ದರೂ ಪ್ರಾಚೀನ ಭಾರತದಲ್ಲಿ ಆಯುಧ ವಿಜ್ಞಾನಕ್ಕೆ ನೀಡಿದ್ದ ಪ್ರಾಮುಖ್ಯತೆಯ ಬಗ್ಗೆ ಹಾಗೂ ಹಿಂದೂಗಳ ಮೂರ್ತಿಪೂಜೆಯಲ್ಲಿ ಆಯುಧಗಳ ಪಾತ್ರವೇ ಅಲ್ಲದೆ ಮೂರ್ತಿಕಲೆ ಮತ್ತು ಶಿಲ್ಪವಿದ್ಯೆಯ ಮೇಲೂ ಬೆಳಕನ್ನು ಬೀರುತ್ತದೆ.

ವಿ. ಟಿ. ಎಸ್. ರಾವ್*

# ತಾಳೆ ಪತ್ರಗಳಲ್ಲಿ ಚಿತ್ರ ವಿನ್ಯಾಸ

## (ಮೂಡಬಿದ್ರೆಯ ಹೊಯ್ಸಳರ ಕಾಲದ ತಾಳೆ ಪತ್ರ ಚಿತ್ರಗಳ ವಿಶೇಷ ಉಲ್ಲೇಖದೊಂದಿಗೆ)

ಒಂದು ದೇಶದ ಪ್ರಾಗೈತಿಹಾಸಿಕ ಸಂಸ್ಕೃತಿಯ ಇತಿಹಾಸವನ್ನು ಬರೆಯುವಾಗ ಆದೇಶದ ಕಲಾ ಅವಶೇಷಗಳ ಅವಲೋಕನ ಅತಿ ಪ್ರಾಮುಖ್ಯತೆಯನ್ನು ಪಡೆಯುತ್ತದೆ. ಅವುಗಳಲ್ಲಿ ಸಚಿತ್ರ ಸಾಹಿತ್ಯ ಭಂಡಾರವೂ ಒಂದು ನಮ್ಮ ದೇಶದ ಪುರಾತನ ಲೇಖನ ಸಾಮಗ್ರಿಯಾದ ತಾಳೆಯಗರಿಗಳ ಮೇಲೆ ಸಾಹಿತ್ಯದ ಸಾಮರಸ್ಯವಾಗಿ ಚಿತ್ರಿತವಾಗಿರುವ ಚಿತ್ರಗಳು ನಮ್ಮ ಸಾಂಸ್ಕೃತಿಕ ಪರಂಪರೆಗೆ ಭವ್ಯ ನಿದರ್ಶನಗಳಾಗಿವೆ. ತಾಳೆಯ ಮರಗಳಲ್ಲಿ ವೈವಿಧ್ಯಮಯ ತಳಿಗಳಿವೆ ಯಾದರೂ ಪ್ರತ್ಯೇಕವಾಗಿ ಲೇಖನ ಹಾಗೂ ಚಿತ್ರ ಲೇಖನಗಳಿಗೆ ಬಳಸಲ್ಪಡುತ್ತಿದ್ದುವು ಕೇವಲ ಎರಡು ಜಾತಿಯ ತಳಿಗಳ ಎಲೆಗಳು ಮಾತ್ರ ಅವೆಂದರೆ ಪೈಲ್ಮೈರ ಅಥವ ಬೊರಾಸಸ್ ಫ್ಲಾಬೆಲಿಫೆರ ಮತ್ತು ಟ್ಯಾಲಿಪಾಟ್ ಅಥವ ಕೋರಿಫ ಅಂಬ್ರಾಕ್ಯುಲಿಫೆರ. ಮೊದಲನೆಯ ತಳಿ ಭಾರತ ಮತ್ತು ಸಿಂಹಳಗಳಲ್ಲಿ ಕಾಣಬರುವ ಒಂದು ಜಾತಿಯ ತಾಳೆಯಮರ, ಎರಡನೆಯದು ಬೀಸಣಿಗೆಯಾಕಾರದ ಗರಿಗಳುಳ್ಳ ಸಾಮಾನ್ಯವಾಗಿ ಏಷ್ಯಾದಲ್ಲೆಲ್ಲಾ ಬೆಳೆಯುವ ವಿಶಿಷ್ಟ ಜಾತಿಯ ತಾಳೆಮರ.

ಅತಿಪ್ರಾಚೀನ ತಾಳೆಗರಿಯ ಹಸ್ತಪ್ರತಿಗಳು ಟ್ಯಾಲಿಪಾಟ್ ತಳಿಯ ಗರಿಗಳ ಮೇಲೆ ಬರೆದ ಗ್ರಂಥ ಗಳಾಗಿವೆ. ಕಬ್ಬಿಣದ ಚೂಪಾದ ಕೂರ್ಚಿಕೆ ಅಥವ ಕಂಠದ ಸಹಾಯದಿಂದ ಬರವಣಿಗೆ ಹಾಗೂ ಸಚಿತ್ರ ಗಳನ್ನು ತಾಳೆ ಪತ್ರಗಳ ಮೇಲೆ ನಯವಾಗಿ ಕೊರೆದು ರಚಿಸುತ್ತಿದ್ದರು. ಆನಂತರ ಸ್ಥಳೀಯವಾಗಿ ಸಿಗುವ ಕಾಡಿಗೆ ಕಪ್ಪನ್ನು ಎಣ್ಣೆಯೊಂದಿಗೆ ಬೆರೆಸಿ ವಿಶೇಷ ರೀತಿಯ ಕಪ್ಪು ಬಣ್ಣವನ್ನು ತಯಾರಿಸಿಕೊಂಡು, ಆ ಬಣ್ಣವನ್ನು ನಯವಾಗಿ ತಾಳೆಗರಿಗಳ ಮೇಲೆ ಕೊರೆಯಲಾದ ಬರವಣಿಗೆ ಹಾಗೂ ಸಚಿತ್ರಗಳ ಮೇಲೆ ತೆಳುವಾಗಿ ಲೇಪಿಸುತ್ತಿದ್ದರು. ನಂತರ ಒಂದು ಬಟ್ಟೆಯಿಂದ ಆ ಕಪ್ಪು ಬಣ್ಣವನ್ನು ಒರೆಸಿದಾಗ, ಕಪ್ಪು ಬಣ್ಣವು ಕಂಠದಿಂದ ಕೊರೆದ ರೇಖೆಗಳಲ್ಲಿ ಸಂಗ್ರಹವಾಗಿ ಉಳಿದ ಬಣ್ಣವು ಬಟ್ಟೆಯೊಂದಿಗೆ ತೆಗೆಯಲ್ಪಟ್ಟಾಗ ಕಪ್ಪು ರೇಖೆಗಳು ಸ್ಫುಟವಾಗಿ ತಾಳೆಗರಿಗಳ ಮೇಲೆ ರೂಪಿತವಾಗುತ್ತಿದ್ದುವು.

ಹೀಗೆ ರೂಪಿತವಾದ ಚಿತ್ರಗಳಿಗೆ ತುಂಬಾ ನಾಜೂಕಿನ ತೂಲಿಕೆ ಅಥವಾ ಬ್ರಷ್‌ನಿಂದ ಬೇಕಾದ ವರ್ಣಗಳನ್ನು ಹದವಾಗಿ ಲೇಪಿಸಿ ಚಿತ್ರವನ್ನು ಅಂದಗೊಳಿಸುತ್ತಿದ್ದರು ಆಭರಣಗಳು, ಆಸನಗಳು, ಪ್ರಭಾವಲಯಗಳು ಇಂಥವುಗಳನ್ನು ಉಜ್ವಲಗೊಳಿಸಲು ಬೆಳ್ಳಿ ಹಾಗೂ ಬಂಗಾರದ ದ್ರವಗಳನ್ನು ಲೇಪಿಸಿ ಚಿತ್ರದ ಸೌಂದರ್ಯವನ್ನು ಇಮ್ಮಡಿಗೊಳಿಸುತ್ತಿದ್ದರು.

ರಾಜ ಲೇಖಕರು ತಮ್ಮ ಕುಶಲ ಕಲೆಯಲ್ಲಿ

* ನಂ. ೩೪, ಆರನೆಯ ಮುಖ್ಯರಸ್ತೆ, 'ಎನ್'ಬ್ಲಾಕ್, ರವೀಂದ್ರನಾಥ ಠಾಗೋರ್‌ನಗರ, ಬೆಂಗಳೂರು-೫೬೦೦೩೨

ನಿಷ್ಣಾತರು ಕೇವಲ ಅಲಂಕಾರಾಕ್ಷರ ಲಿಪಿಕರಲ್ಲದೆ ಚಿತ್ರ ರೇಖಾ ಲೇಖನ, ವರ್ಣಲೇಪನಗಳಲ್ಲಿಯೂ, ಪರಿಣತರು. ಅವರು ರಾಜಾಶ್ರಯದ ಛತ್ರಿಗಳಡಿಯಲ್ಲಿ ಸನ್ಮಾನಿತ ರಾಗಿದ್ದು ತಮ್ಮ ಹೆಸರುಗಳನ್ನೂ ಬಿರುದುಗಳನ್ನೂ ತಮ್ಮ ಹಸ್ತಪ್ರತಿಗಳಲ್ಲಿ ಉಲ್ಲೇಖಿಸಿರುವರು, ಉದಾ ಹರಣೆಗೆ ಸೇನ ದೊರೆ ಆದಿತ್ಯಸೇನನ ಆಶ್ರಯದಲ್ಲಿದ್ದ ರಾಜಲೇಖಕ ಸೂಕ್ಷ್ಮಶಿವನು ತನ್ನನ್ನು ಸೌಂದರ್ಯ ಜನಕನೆಂದು ವರ್ಣಿಸಿಕೊಂಡಿರುವನು. ಮತ್ತೊಬ್ಬ ರಾಜಲಿಪಿಕ ಮಹೀಧರನು ತನ್ನ ಸುಂದರ ಚಿತ್ರಗಳನ್ನು ಮತ್ತು ಸುಂದರ ಲಿಪಿಯನ್ನು ಆಕಾಶದಲ್ಲಿನ ತಾರಾ ಚಂದ್ರರಿಗೆ ಹೋಲಿಸಿರುವನು, ಹನ್ನೆರಡನೆಯ ಶತಮಾನದ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಆಸ್ಥಾನ ಲೇಖಕ ಸೋವರನಿಯು ಪ್ರಾಣಿ ಪಕ್ಷಿ ಚಿತ್ರಗಳ ರಚನೆಯಲ್ಲಿ ತಾನು ಅಸಮಾನನೆಂದೂ ತನ್ನನ್ನು ಮೀರಿಸುವ, ಲಿಪಿಕನು ಇನ್ನೂ ಹುಟ್ಟಿಲ್ಲವೆಂದು ತನ್ನನ್ನು ಹೊಗಳಿಕೊಂಡಿರುವನು, ಪೂರ್ವ ಚಾಲುಕ್ಯ ದೊರೆ ನರೇಂದ್ರ ಮೃಗರಾಜನ ರಾಜ ಲೇಖಕನಿಗೆ "ಅಕ್ಷರ ಲಾಲಿತಾ ಚಾರ್ಯ" ಎಂಬ ಬಿರುದಿದ್ದುದಾಗಿ ಆದೊರೆಯ ರಾಜಪತ್ರ ಒಂದರಲ್ಲಿ ಬರೆದಿದೆ. ಸೋಮೆಶ್ವರನೆಂಬ ಮತ್ತೊಬ್ಬ ಲಿಪಿಕನು ತನ್ನನ್ನು ಚಿತ್ರ ಪ್ರಿಯನೆಂದೂ, ವರ್ಣವೈವಿಧ್ಯದಲ್ಲಿ ನಿಪುಣನೆಂದೂ ನಿರೂಪಿಸಿಕೊಂಡಿರುವನು.

ಲಭ್ಯವಿರುವ ಪ್ರಾಚೀನ ತಾಳ ಪತ್ರಗ್ರಂಥ ಎರಡನೆಯ ಶತಮಾನದ ಅಶ್ವಘೋಷ ಕವಿಯ ನಾಟಕ. ಅದಕ್ಕೂ ಪ್ರಾಚೀನ ಗ್ರಂಥಗಳು ಪಾಲರ ಕಾಲದವು ಆ ಗ್ರಂಥಗಳಲ್ಲಿ ರಚಿತವಾದ ಚಿತ್ರಗಳ ರೇಖಾ ಚಾತುರ್ಯವು ಪಾಲರ ಶ್ರೇಷ್ಠಮಟ್ಟದ ಕಲೆಯ ಸ್ವರೂಪವನ್ನು ಬಿಂಬಿಸುತ್ತವೆ. ಈ ಚಿತ್ರಗಳಲ್ಲಿ ರೇಖೆ ಗಳು ಅತ್ಯಂತ ನಿರ್ಣಾಯಕವಾಗಿ, ಶಕ್ತಿಯುತವಾಗಿ ಲಾವಣ್ಯ ಪೂರ್ಣವಾಗಿ ಗ್ರಂಥಗಳ ಕೇಂದ್ರ ಭಾಗದಲ್ಲಿ ಚಿತ್ರಿತವಾಗಿವೆ. ಇಕ್ಕೆಲಗಳಲ್ಲಿಯೂ ಗ್ರಂಥದ ಸಾಹಿತ್ಯ ವನ್ನು ಕೊರೆಯಲಾಗಿದೆ. ಬೌದ್ಧ ಜಾತಕಗಳನ್ನು ವಸ್ತುವಾಗುಳ್ಳ ಈ ಅನುಪಮ ಗ್ರಂಥಗಳಲ್ಲಿ ಚಿತ್ರಗಳು ವಿಪುಲವಾಗಿವೆ. ಇವುಗಳಲ್ಲಿ ಪ್ರಮುಖ ಗ್ರಂಥಗಳೆಂದರೆ "ಪ್ರಜ್ಞಾಪರಿಮಿತ" "ಗ್ರಂಥವ್ಯೂಹ" ಮತ್ತು "ಸಾಧನ ಮಾಲಾ" ಗ್ರಂಥಗಳು. ಕೊನೆಯ ಎರಡರಲ್ಲಿರುವ ಚಿತ್ರ ಗಳು "ಅತ್ಯಂತ ಸುಂದರವಾಗಿವೆ. ಈ ಗ್ರಂಥಗಳು ಪಾಲ ಅರಸು ಮಹೀಪಾಲನ ಕಾಲಕ್ಕೆ ಸೇರಿದವು.

ಇದರಂತೆಯೇ ಪಶ್ಚಿಮ ಭಾರತದ ಪ್ರಥಮ ತಾಳೆಗರಿ ಹಸ್ತಪ್ರತಿಗಳು ಹನ್ನೊಂದನೆಯ ಶತಮಾನದವು ಜೈನ ಧಾರ್ಮಿಕ ವಸ್ತುವನ್ನು ವಿಷಯವಾಗುಳ್ಳ ಇವುಗಳಲ್ಲಿರುವ ಪ್ರಖರ ವರ್ಣಗಳ ಸುಂದರ ಚಿತ್ರಗಳನ್ನು ಚಿನ್ನ ಮತ್ತು ಬೆಳ್ಳಿಯ ಲೇಪದೊಂದಿಗೆ ಶೃಂಗರಿಸಿರುವರು. ಕೇವಲ ಚಿತ್ರಗಳಷ್ಟೇ ಅಲ್ಲದೆ ಲಿಪಿಯನ್ನು ಚಿನ್ನದ ದ್ರಾವಣದಿಂದ ತುಂಬಿರುವರು ಈ ಗ್ರಂಥಗಳೆಂದರೆ "ಕಲ್ಪ ಸೂತ್ರ" "ಸಿದ್ಧ ಹೇಮ ಲಘುವೃತ್ತಿ" "ಕುಮಾರ ಪಾಲಚರಿತ" "ಕಾಲಕಾಚಾರ್ಯ ಚರಿತ"ಮುಂತಾದುವು. ಇನ್ನಿತರ ಸಚಿತ್ರ ಹಸ್ತ ಪ್ರತಿಗಳೆಂದರೆ ವಸಂತವಿಲಾಸ, ಬಾಲಗೋಪಾಲಸ್ತುತಿ, ಸಾಲಿಭದ್ರಚರಿತ ಮುಂತಾದ ಗ್ರಂಥಗಳು, ಇವುಗಳಲ್ಲಿರುವ ಚಿತ್ರಗಳು ನಿರಾಡಂಬರ ವರ್ಣಗಳಿಂದ ನಿಯಮಬದ್ಧ ಧೃಢರೇಖೆಗಳಿಂದ ಚಿತ್ರಿತ ವಾಗಿವೆ.

ಈ ಚಿತ್ರಗಳಲ್ಲಿ ಸಾಮಾನ್ಯವಾಗಿ ಮುಖ ಭಂಗಿಯ ಮೂರು ಪಾರ್ಶ್ವಗಳನ್ನು ತೋರಿಸುವುದರ ಜೊತೆಗೆ ಕೋನಾಕಾರದ ಮೂಗು, ದೊಡ್ಡ ಬೊಗಸೆ ಕಣ್ಣುಗಳು– ಚಿತ್ರಗಳ ವಿಶೇಷಣಗಳಾಗಿವೆ. ಈ ಗ್ರಂಥದಲಿಪಿಯೂ ಕುತೂಹಲಕಾರಿಯಾಗಿದೆ. ಈ ಚಿತ್ರಗಳ ಪರಂಪರೆಯೇ ಮುಂದೆ ಪರಿಣಾಮಕಾರಿಯಾದ ರಾಜಾಸ್ಥಾನೀ ಚಿಕಣಿ ಚಿತ್ರ ಶೈಲಿಯಾಗಿ ಇಂದಿಗೂ ಮುಂದುವರೆಯುತ್ತಿದೆ.

ದಕ್ಷಿಣದಲ್ಲಿ ಜೈನಕಾಶಿ ಎಂದು ಪ್ರಸಿದ್ಧವಾಗಿರುವ ಮೂಡಬಿದ್ರಿಯ ಜೈನ ಮಠ ಸಿದ್ಧಾಂತ ಬಸದಿಯಲ್ಲಿ ಸುಸ್ಥಿತಿಯಲ್ಲಿ ಪೂಜೆಗೊಳ್ಳುತ್ತಿರುವ ಜೈನ ಧಾರ್ಮಿಕ ತಾಳೆಗರಿ ಹಸ್ತ ಪ್ರತಿಗಳು ಗಮನಾರ್ಹವಾದವು. ಇವು ಕ್ರಿಸ್ತ ಪೂರ್ವ ಒಂದನೆಯ ಶತಮಾನದವರಾದ ಗುಣಧರ ಮತ್ತು ಕ್ರಿಸ್ತಶಕ ಒಂದನೇ ಶತಮಾನದಲ್ಲಿದ್ದ ಧರಸೇನ ರೆಂಬ ಮಹಾನ್ ಆಚಾರ್ಯರ ಬೋಧನೆಗಳನ್ನು ಶೇಖರಿಸಿ ಸಂಗ್ರಹಿಸಿದ ಜೈನತತ್ವ ಶಾಸ್ತ್ರಗಳಾದ "ಕಷಾಯ ಪಾಹುಡ" "ಶ್ರುತಸ್ಕಂದಾಗಮ"ಗಳಿಗೆ ಬರೆದಿರುವ ಭಾಷ್ಯಗಳು, ಇವುಗಳ ಕರ್ತೃ ವೀರಸೇನರೆಂಬ ಜೈನಯತಿಗಳು ಇವೇ ಧವಳ, ಜಯಧವಳ ಮಹಾಧವಳ

ಗ್ರಂಥಗಳು ಮೂಲ ದಿಗಂಬರ ಸಂಪ್ರದಾಯದ ೧೨ ಅಂಗಗಳ ನಿರೂಪಣೆ ಇಲ್ಲಿದೆ. ಈ ಗ್ರಂಥಗಳಲ್ಲಿ ಉಪಯೋಗಿಸಿರುವ ಬಣ್ಣಗಳು ವನಸ್ಪತಿ ಮತ್ತು ಧಾತು ಮೂಲದವು. ಪ್ರಖರತೆಗಾಗಿ ಧಾತುವರ್ಣಗಳನ್ನು ಬಳಸಲಾಗಿದೆ. ಮೂಲವರ್ಣಗಳಾದ ಗೈರಿಕ (ಕೆಂಪು), ನೀಲ, ಶುದ್ಧ (ಬಿಳುಪು,) ಹರಿದಳ (ಹಳದಿ), ಕಜ್ಜಲ (ಕಪ್ಪು) ಇವುಗಳನ್ನು ಪ್ರಮಾಣ ಬದ್ಧವಾಗಿ ಮಿಶ್ರಣ ಮಾಡಿ ಭಾವಾಭಿಜ್ಞತೆಗೆ ತಕ್ಕಂತೆ ತ್ಯಾಗದ ಸಂಕೇತಕ್ಕೆ ಕೆಂಪು ಕಾವಿಯನ್ನೂ, ಸರ್ವವ್ಯಾಪಕತೆಯ ಸಂಕೇತಕ್ಕೆ ನೀಲಿಯನ್ನೂ, ಸಂಪತ್ತಿನ ಸೂಚನೆಗೆ ಹಸಿರುವರ್ಣವನ್ನೂ ರೂಪಭೇದ, ಭಾವ ಲಾವಣ್ಯಗಳಿಗೆ ಅನುಗುಣವಾಗಿ ಲೇಪಿಸಿ ಸೀಮಿತ ಮಿತಿಯಾದ ತಾಳೆಗರಿಗಳ ಚಿಕ್ಕ ಅಂಕಣಗಳಲ್ಲಿ ಸುಂದರ ಚಿತ್ರಗಳನ್ನು ಬಿಡಿಸಿರುವರು

ಚಿತ್ರಗಳ ಅಂಚುಗಳಲ್ಲಿ ಬಿಡಿಸಿರುವ ವಿನ್ಯಾಸ ಮತ್ತು ರೇಖೆಗಳ ಲಾಸ್ಯ ಲಾಲಿತ್ಯಗಳು ಬೇಲೂರು ದೇವಾಲಯದಲ್ಲಿರುವ ತಾಮ್ರ ಶಾಸನಗಳ ವಿನ್ಯಾಸಗಳನ್ನೂ ಬಹುವಾಗಿ ಹೋಲುವುದರಿಂದಲೂ ಈ ತಾಮ್ರ ಶಾಸನಗಳ ಬರವಣಿಗೆಯೂ ತಾಳ ಪತ್ರಗಳ ಮೇಲಿನ ಬರವಣಿಗೆಯೂ ಏಕರೂಪವಾಗಿರುವುದರಿಂದಲೂ, ಈ ತಾಳ ಪತ್ರ ಚಿತ್ರಗಳು ಹೊಯ್ಸಳ ಚಕ್ರವರ್ತಿ ವಿಷ್ಣುವರ್ಧನನ ಕಾಲದವೆಂದು ಧೃಢವಾಗಿ ಹೇಳಬಹುದು.

ನಿರಾಡಂಬರ, ನಿರಾಲಂಕೃತ, ನಗ್ನ ಮೂರ್ತಿಗಳಾದ ಜಿನ ಬಿಂಬಗಳನ್ನು ಕಲಾವಿದನು ಚಾತುರ್ಯದಿಂದ ವಸ್ತುವಿನ ಗಾಂಭೀರ್ಯಕ್ಕೆ ಭಂಗ ಭಾರದಂತೆ ಮನೋಹರವಾಗಿ ಚಿತ್ರಿಸಿರುವನು, ಒಂದು ಚಿತ್ರದಲ್ಲಿ ಮಕರ ಪೀಠದ ಮೇಲೆ ಘರ್ಜಿಸುವ ಸಿಂಹಗಳ ಹಿನ್ನೆಲೆಯಲ್ಲಿ ಇಕ್ಕೆಲಗಳಲ್ಲಿ ಚೌರಿ ಬೀಸುವವರ ಸುಂದರ ಸಂಯೋಜನೆಯಿಂದ ನಿಷ್ಕರ್ಷಿತ ಪ್ರಮಾಣದಲ್ಲಿ ತೀರ್ಥಂಕರರ ಮತ್ತು ಚಾಮರ ಧಾರಿಗಳಾದ ಬುಧ ಮತ್ತು ನಾಗರಾಜರ ಚಿತ್ರಗಳು ಅತ್ಯಂತ ಸತ್ವ ಶಾಲಿಯಾಗಿ ಮೂಡಿಬಂದಿವೆ. ಈ ಚಿತ್ರದ ಕೆಳ ಅಂಕಣದಲ್ಲಿ ಪಾರ್ಶ್ವನಾಥಸ್ವಾಮಿಯ ನಿರಾಡಂಬರ ವೈರಾಗ್ಯಮೂರ್ತಿಯನ್ನು ಸೌಂದರ್ಯಕ್ಕೆ ಭಂಗ ಬಾರದ ರೀತಿಯಲ್ಲಿ ಚಿತ್ರಿಸಲಾಗಿದೆ.

ಮತ್ತೊಂದು ಚಿತ್ರದಲ್ಲಿ ಬಾಹುಬಲಿಯು ಲೌಕಿಕ ವ್ಯವಹಾರಗಳನ್ನು ತೊರೆದು ಸರ್ವ ಸಂಗ ತ್ಯಾಗ ಮಾಡಿ ತಪಸ್ಸಿಗೆ ಹೊರಟುನಿಂತಾಗ ಆತನ ಇಬ್ಬರು ಸಹೋದರಿಯರು ತಡೆಯಲು ಬರುತ್ತಿರುವ ದೃಶ್ಯ ಇದೇ ವಸ್ತುವನ್ನೊಳಗೊಂಡ ಎಲ್ಲೋರ ಗುಹಾದೇವಾಲಯದ ಭಿತ್ತಿ ಚಿತ್ರ ಒಂದನ್ನು ನೆನಪಿಗೆ ತರುತ್ತದೆ. ಕೆಳಗಿನ ಅಂಕಣದಲ್ಲಿ ಆಸನಾರೂಢಳಾದ ಶ್ರುತದೇವಿಯನ್ನು ಇಕೆಲ್ಕಗಳಲ್ಲಿ ಚಾಮರ ಧಾರಿ ಕನ್ಯೆಯರನ್ನೂ ಚಿತ್ರಿಸಿರುವ ರೇಖಾನೈಪುಣ್ಯ ಮತ್ತು ಲಾಲಿತ್ಯಗಳು ಅನುಪಮ ಅವರು ಬಾಗಿ ಬಳುಕಿದಂತೆ ತೋರಿಸುವ ಅವರ ಕಾಲಗಳೂ ಪಕ್ಕದ ಮಾವಿನ ಮರಗಳೂ ಅಂಚಿನ ವಿನ್ಯಾಸವೂ ಹೊಯ್ಸಳ ಚಿತ್ರಕಾರನಕಲಾಚಾತುರ್ಯಕ್ಕೆ ನಿದರ್ಶನಗಳಾಗಿವೆ.

ಮಗದೊಂದು ಚಿತ್ರದಲ್ಲಿ ಪಾರ್ಶ್ವನಾಥ ಸ್ವಾಮಿಯು ನಾಗ ಪೀಠದ ಮೇಲೆ ನಾಗಛತ್ರಿಯ ಕೆಳಗೆ ಧ್ಯಾನಮಗ್ನನಾಗಿ ಕುಳಿತಿರುವ ಭಂಗಿಯೂ ಇಕ್ಕೆಲಗಳಲ್ಲಿ ಕೈಮುಗಿದು ಕುಳಿತಿರುವ ಶಿಷ್ಯದ್ವಯರ ಮುಖಭಾವ ಸಂಯೋಜನೆಗೆ ಉತ್ತಮ ಉದಾಹರಣೆಗಳಾದರೆ, ಕೆಳಗಣ ಅಂಕಣದಲ್ಲಿ ಮಾತಂಗ ಯಕ್ಷನು ತನ್ನ ವಾಹನವಾದ ಆನೆಯೊಂದಿಗೆ ತಲೆ ಎತ್ತಿ ತೊಡೆ ಎತ್ತಿ ಕುಳಿತಿರುವ ಭಂಗಿಯೂ, ಇಕ್ಕೆಲಗಳಲ್ಲಿರುವ ವೃಕ್ಷಗಳ ಸಂಯೋಜನೆಯೂ, ಸುಂದರವಾಗಿ ಚಿತ್ರಿತವಾಗಿದೆ.

ಇನ್ನೊಂದು ಚಿತ್ರದಲ್ಲಿ ಮಹಾಮಾನಸಿ ದೇವಿ ಮತ್ತು ಅಜಿತ ಯಕ್ಷರ ಚಿತ್ರಗಳು ಮಕರ ಪೀಠದ ಮೇಲೂ, ಹಂಸಪೀಠದ ಮೇಲೂ ಚಿತ್ರಿತವಾಗಿವೆ. ಈ ರೀತಿಯ ಅನೇಕ ಚಿತ್ರಗಳಲ್ಲಿ ಒಂದು ಚಿತ್ರ ಕಾಳಿ ಮತ್ತು ಆವಳ ಭಕ್ತರದಾಗಿದೆ. ಇದರಲ್ಲಿ ರಾಜ ರಾಣಿ ಮತ್ತು ಸೇವಕರಿರುವರು. ಈ ಚಿತ್ರದ ಮೇಲು ಭಾಗದ ಮುಖಗಳು ಕಿತ್ತು ಹೋಗಿರುವುದರಿಂದ ಗುರುತಿಸಲಾಗದಾಗಿದೆ. ಬಹುಶಃ ಇವು ವಿಷ್ಣುವರ್ಧನ ಮತ್ತು ಶಾಂತಲದೇವಿಯ ಚಿತ್ರಗಳೇ ಇರಬಹುದೇನೋ !

ಈ ಚಿತ್ರಗಳ ವಿಶಿಷ್ಟ ಅಭಿವ್ಯಕ್ತಿಗಳಾದ ಸೌಮ್ಯತೆಯು, ಪ್ರಸನ್ನತೆಯ ಕರ ಚರಣ ವಿನ್ಯಾಸಗಳು, ಶರೀರ ಭಂಗಿಗಳು ಮುಖಮುದ್ರೆಗಳು ಭಾವನಾತ್ಮಕತೆಯಿಂದ ಪಾರಮಾರ್ಥಿಕದ ದಿಕ್ಕಿನತ್ತ ಒಯ್ಯುತ್ತವೆ.

ಬೇರೆ ಲಿಪಿಕರು ತಮ್ಮ ಹೆಸರುಗಳನ್ನು ತಿಳಿಸಿದಂತೆ ಈ ಚಿತ್ರಕಾರರು ತಮ್ಮ ಹೆಸರುಗಳನ್ನು ಬರೆದಿಲ್ಲಾ. ಜೈನ ಕಾವ್ಯಗಳಲ್ಲಿ ದೊರೆಯುವ ಒಬ್ಬ ಚಿತ್ರಲಿಪಿಕನ ಹೆಸರು ಚೀರಘಟ.

ಹೊಯ್ಸಳ ಚಿತ್ರಕಾರರ ವಿಶಿಷ್ಟ ಶೈಲಿಯಾದ ವಿಶಾಲ ಎದೆ ಅಗಲವಾಗಿ ಚಿತ್ರಿಸಿದ ಕಣ್ಣುಗಳು ಎರಡೂ ಕಣ್ಣುಗಳನ್ನೂ ಎತ್ತಿ ತೋರಿಸುವ ವೈಶಿಷ್ಟ್ಯ ಮುಂದೆ ಬಂದಿರುವ ತ್ರಿಕೋನಾಕಾರದ ಚೂಪು ಮೂಗು ದೀರ್ಘವಾದ ಕಣ್ಣಿನ ಮೂಲೆಗಳು, ಬಿಲ್ಲಿನಾಕಾರದ ಹುಬ್ಬುಗಳು, ಕೋನಯುಕ್ತಮುಖ, ಸುಂದರ ಗಲ್ಲಗಳು ಸಪೂರಾದ ಸೊಂಟ ಹಾಗೂ ಹಿತಮಿತವಾದ ವರ್ಣ ಸಂಯೋಜನೆ ಇವುಗಳಿಂದ ಹೊಯ್ಸಳ ರಾಜಲಿಪಿಕರು ತಮ್ಮ ತನವನ್ನುಉಳಿಸಿಕೊಂಡು ಮುಂದಿನಕಲಾವಿದರಿಗೆ ಗುರುಗಳಾಗಿರುವರು, ಇವರ ಪ್ರಭಾವ ವಿಜಯನಗರದ ಚಿತ್ರಕಾರರ ಮೇಲೆ ಸ್ಪಷ್ಟವಾಗಿ ಬಿದ್ದಿರುವ ಸಂಗತಿ ಲೇಪಾಕ್ಷಿಯ ಪಾಪನಾಶೇಶ್ವರ ದುರ್ಗಾ ದೇವಾಲಯದ ಬಿತ್ತಿ ಚಿತ್ರಗಳಲ್ಲಿ ಸ್ಪಷ್ಟವಾಗಿ ಕಾಣಬಹುದು.

ಡಾ|| ಟಿ. ದಯಾನಂದ ಪಟೇಲ್ *

# ಹೊಯ್ಸಳರ ಕಾಲದ ಅಳತೆಗೋಲು-ಶಾಸನ ಟಿಪ್ಪಣಿ

ಕ್ರಿ. ಶ. ೧೧ನೇ ಶತಮಾನದಿಂದ ಪ್ರಾರಂಭವಾಗಿ ೧೪ನೇ ಶತಮಾನದ ಮಧ್ಯಭಾಗದವರೆಗಿನ ಹೊಯ್ಸಳರ ಕಾಲದ ಭೂಮಾಪನಗಳ ಇತಿಹಾಸವನ್ನು ತಿಳಿಯಲು ಆ ಕಾಲದ ಶಾಸನಗಳು ನಮಗೆ ಅನೇಕ ಮಾಹಿತಿಗಳನ್ನು ಒದಗಿಸುತ್ತವೆ. ಇವರ ಕಾಲದಲ್ಲೂ ಕೂಡ ಭೂಕಂದಾಯ ಅಥವಾ ತೆರಿಗೆಯನ್ನು ಕಟ್ಟಲೂ ಅನೇಕ ತರಹದ ಭೂಮಾಪನಗಳನ್ನು ಉಪಯೋಗಿಸುತ್ತಿದ್ದರೆಂದು ಹಲವಾರು ಶಾಸನಗಳು ಉಲ್ಲೇಖಿಸಿವೆ. ಭೂಮಿಯನ್ನು ಅಳತೆಮಾಡಿ ಇಷ್ಟು ಕಂಬಗಳಿವೆ ಎಂದು ಭೂಮಾಪನ ಮಾಡುತ್ತಿದ್ದರು. ಭೂಮಾಪನವನ್ನು ಮಾಡಲು ಅನೇಕ ತರಹದ ಅಳತೆಗೋಲುಗಳನ್ನು ಉಪಯೋಗಿಸುತ್ತಿದ್ದರೆಂದು ಮತ್ತು ಭೂಮಿಯನ್ನು ಅಳೆಯಲು ಸ್ವಲ್ಪ ಹಣವನ್ನು ಕೂಡ ಕಟ್ಟಬೇಕಾಗುತ್ತಿತ್ತು ಎಂದು ಶಾಸನಗಳಿಂದ ತಿಳಿದು ಬರುತ್ತದೆ.[1] ಹೊಯ್ಸಳರ ಕಾಲದಲ್ಲಿ ಭೂಮಾಪನ ಲೆಕ್ಕಾಚಾರ ಮಾಡಲು ಅವುಗಳನ್ನು ಕಂಭ, ನಿವರ್ತನ ಮತ್ತರ್ ಎಂಬ ಹೆಸರುಗಳಿಂದ ಕರೆಯುತ್ತಿದ್ದರು.[2] ಈ ಭೂಮಾಪನ ಅಳತೆಗೋಲುಗಳ ಉದ್ದ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆಯಾಗಿರುತ್ತಿತ್ತು ಮತ್ತು ಅವುಗಳನ್ನು ಸಾಮಾನ್ಯವಾಗಿ ಹದಿನೆಂಟು ಮತ್ತು ಇಪ್ಪತ್ತಾರು ಮೆಟ್ಟುಗಳಲ್ಲಿ ಅಳೆಯುತ್ತಿದ್ದರು ಎಂಬುದನ್ನು ಕೂಡ ಶಾಸನಗಳು ಉಲ್ಲೇಖಿಸುತ್ತವೆ.[3] ಕೆಲವು ಶಾಸನಗಳಲ್ಲಿ ಭೂಮಿಯ ಅಳತೆಯನ್ನು ಅವುಗಳಲ್ಲಿ ಬೆಳೆಯುವ ಧಾನ್ಯದ ಪ್ರಮಾಣದಲ್ಲಿಯೂ ಕೂಡ ಅಂದರೆ ಒಂದು ಕೊಳಗ ಅಥವಾ ಖಂಡುಗ ಬಿತ್ತನೆ ಮಾಡುವ ಪ್ರದೇಶವೆಂದು ಕೂಡ ಉಲ್ಲೇಖಿತವಾಗಿವೆ.[4]

ಹೊಯ್ಸಳರ ಅರಸನಾದ ಸೋಮೇಶ್ವರನ ಕಾಲಕ್ಕೆ ಅಂದರೆ ಕ್ರಿ. ಶ. ೧೨೫೦ಕ್ಕೆ ಸೇರಿದ ಇದೊಂದು ವಿಶೇಷವಾದ ಶಾಸನದಲ್ಲಿ[5] ಹದಿನಾರು ಮೆಟ್ಟಿನ ಭೂಮಾಪನದ ಅಳತೆಗೆ ಸಂಬಂಧಪಟ್ಟ ವಿಚಾರವನ್ನು ಬೆಳಕಿಗೆ ತರುತ್ತದೆ. ಈ ಶಾಸನವು ಅರಕಲಗೂಡು ತಾಲ್ಲೋಕಿನ ರಾಮನಾಥಪುರದ ರಾಮೇಶ್ವರ ದೇವಸ್ಥಾನದ ಗರ್ಭಗೃಹದ ಹೊರ ಬಿತ್ತಿಯಲ್ಲಿ ದಕ್ಷಿಣಮೂರ್ತಿ ದೇವಸ್ಥಾನದ ಹಿಂದಿರುವ ನಾಲ್ಕು ಕಲ್ಲುಗಳ ಮೇಲೆ ಕೆತ್ತಲಾಗಿದೆ. ಈ ವಿಶೇಷವಾದ ಹದಿನಾರು ಮೆಟ್ಟಿನ ಭೂಮಾಪದ ಅಳತೆಗೋಲು ಬಗ್ಗೆ ಎಲ್ಲೂ ಕೂಡ ಉಲ್ಲೇಖನಗೊಂಡಿಲ್ಲದಿರುವುದೊಂದು ವಿಶೇಷ ಸಂಗತಿ.

ಹೊಯ್ಸಳರ ರಾಜನಾದ ಸೋಮೇಶ್ವರನ ಕಾಲದಲ್ಲಿ ಇವನ ದಂಡನಾಯಕ ಸಂಧಿವಿಗ್ರಹಿ ಬೊಮ್ಮಣ್ಣನ ಕೆಳಗೆ ಕೆಲಸ ಮಾಡುತ್ತಿದ್ದ ಕಶ್ಯಪ

---

* ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸ ಗಂಗೋತ್ರಿ, ಮೈಸೂರು ೫೭೦ ೦೦೬

1 ಎ. ಕ. ಸಂ. ೫, ಬೇಲೂರು ೮೬

2 ಅದೇ, ಬೇಲೂರು ೮೬

3 ಅದೇ, ಸಂ. ೭, ಸಿನ್ ? ೨೧

4 ಟಿ. ವಿ. ಮಹಲಿಂಗಮ್ ಸೌತ್ ಇಂಡಿಯನ್ ಪಾಲಿಟಿ, ಪು. ೧೫೩

5 ಎ. ಕ. ಸಂ. ೮ (ಪರಿಷ್ಕೃತ ಆವೃತ್ತಿ) ಅರಕಲಗೂಡು-೫೬

ಗೋತ್ರಕ್ಕೆ ಸೇರಿದ ವಾಮರಸನ ಮಗ ಕಲ್ಲಯ್ಯ ಕೊಟ್ಟ ಒಂದು ಹೂದೋಟದ ದಾನವನ್ನು ಈ ಶಾಸನ ಬಹಳ ನಿಖರತೆಯಿಂದ ಭೂಮಾಪನ ವಿಶೇಷತೆ ಬಗೆಗೆ ಉಲ್ಲೇಖಿಸುತ್ತದೆ ಮತ್ತು ಅನೇಕ ವಿಚಾರಗಳನ್ನು ಬೆಳಕಿಗೆ ತರುತ್ತದೆ.

(ಅ) ಈ ಶಾಸನದಲ್ಲಿ ಹೂದೋಟವನ್ನು ಅಳೆಯಲು ನಿಖರವಾದ ಭೂಮಾಪನ ಅಳತೆಗೋಲಿನ ಉಲ್ಲೇಖವಿದೆ.

(ಆ) ಈ ಭೂಮಾಪನ ಅಳತೆಗೋಲು ಹದಿನಾರು ಮೆಟ್ಟಿನ ಅಳತೆಗೋಲಾಗಿವೆ.

(ಇ) ಈ ಹೂದೋಟವು ದೀರ್ಘಚತುರಸ್ರಾಕಾರದ ಆಕೃತಿ ಅಂದರೆ ಉತ್ತರ ದಕ್ಷಿಣವಾಗಿ ಉದ್ದವಾಗಿಯೂ ಮತ್ತು ಪೂರ್ವ, ಪಶ್ಚಿಮ ಅಗಲವಾಗಿಯೂ ಇರತಕ್ಕಂತಹ ಹೂದೋಟ. ಇದರ ಒಟ್ಟು ವಿಸ್ತೀರ್ಣ ನೂರಐವತ್ತೆಂಟು ಅಳತೆಗೋಲು ಉಳ್ಳದ್ದಾಗಿದೆ.

(ಈ) ಇದು ಉತ್ತರಕ್ಕೆ ಮತ್ತು ದಕ್ಷಿಣಕ್ಕೆ ನಲವತ್ತೈದು ಅಳತೆಗೋಲು ಉಳ್ಳದ್ದಾಗಿದೆ ಪೂರ್ವ ಮತ್ತು ಪಶ್ಚಿಮಕ್ಕೆ ಮೂವತ್ತಾನ್ಕು ಅಳತೆಗೋಲು ಉಳ್ಳದ್ದಾಗಿದೆ.

(ಉ) ಇದೇ ಶಾಸನದಲ್ಲಿ ಇದನ್ನು ಕಂಬಗಳಲ್ಲಿ ತೊಂಬತ್ತೈದು ಕಂಬಗಳ ಭೂಪ್ರದೇಶ ಉಳ್ಳದ್ದೆಂದೂ ಉಲ್ಲೇಖಿತನಾಗಿದೆ.

(ಊ) ಈ ಶಾಸನದ ವಿಶೇಷವೆಂದರೆ ಈ ಹೂದೋಟದ ಪ್ರಮಾಣವನ್ನು ಒಂದು ಹದಿನಾರು ಮೆಟ್ಟಿನ ಅಳತೆಗೋಲಿನಿಂದ ಮತ್ತು ಕಂಬಗಳ ಭೂಪ್ರಮಾಣದಲ್ಲಿಯೂ ಉಲ್ಲೇಖಿತವಾಗಿರುವುದು. ಈ ಮೇಲಿನ ಕಾರಣಗಳಿಂದ ಈ ಶಾಸನವು ಭೂಮಾಪನ ಅಳತೆಯಲ್ಲಿ ಒಂದು ವಿಶೇಷತೆಯನ್ನು ಪಡೆದಿದೆ ಎಂದು ಉಲ್ಲೇಖಿಸಬಹುದು.

ನಿರ್ಮಲ ಡಿ. ಪೋತದಾರ*

# ಮೇರೆಗಲ್ಲುಗಳು

ಭಾರತದಲ್ಲಿ ಬಹು ಪ್ರಾಚೀನ ಕಾಲದಿಂದಲೂ ಭೂ ನಿರ್ವಹಣೆ ಪದ್ಧತಿ ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ. ಒಕ್ಕಲುತನದ ಭೂಮಿಯನ್ನು ಕ್ರಮಬದ್ಧವಾಗಿ ಅಳತೆಮಾಡಿ, ಭೂಮಿಯ ಫಲವತ್ತತೆಗೆ ಅನು-ಗುಣವಾಗಿ ಅದನ್ನು ವರ್ಗೀಕರಿಸಿ ಭೂಕಂದಾಯವನ್ನು ವಸೂಲಿ ಮಾಡಲಾಗುತ್ತಿತ್ತು.

ವೇದಕಾಲದಿಂದಲೂ ಭೂಮಿಯನ್ನು ವ್ಯವಸ್ಥಿತವಾಗಿ ಅಳತೆ ಮಾಡುವ ಪದ್ಧತಿ ಇತ್ತೆಂಬುದು ನಮಗೆ ಕಂಡುಬರುತ್ತದೆ.[1] ಆದರೆ ಮೊಟ್ಟಮೊದಲಿಗೆ ಕೌಟಿಲ್ಯನು ಭೂ ನಿರ್ವಹಣೆಯ ಪರಿಪೂರ್ಣ ಕಲ್ಪನೆಯನ್ನು ನಮಗೆ ಕೊಟ್ಟನು. 'ಅರ್ಥಶಾಸ್ತ್ರ'ದಲ್ಲಿ ವಿವಿಧ ಪ್ರಕಾರದ ಭೂಮಿಗಳ ಅಳತೆ ಮಾಡಿದ ಬಗ್ಗೆ ವಿವರಣೆಗಳು ದೊರೆಯುತ್ತವೆ.[2] ಭೂಮಿಯನ್ನು ಅಳೆದ ಮೇಲೆ ಪ್ರತಿ-ಯೊಂದು ಭೂಕ್ಷೇತ್ರದ ಮೇರೆಗಳನ್ನು ಗುರುತಿಸಲಾಗುತ್ತಿತ್ತು. ಆಯಾ ಕಾಲದ ಇತರ ರಾಜಕೀಯ ಶಾಸ್ತ್ರಜ್ಞರಾದ ಮನು, ಯಜ್ಞವಲ್ಕ್ಯ ಮುಂತಾದವರೂ ಕೂಡ ಈ ಪದ್ಧತಿಯ ಬಗ್ಗೆ ತಮ್ಮದೇ ಆದ ವ್ಯಾಖ್ಯೆಯನ್ನು ನೀಡಿದ್ದಾರೆ.[3]

ಭೂಮಿಯನ್ನು ಅಳೆದು ನಿಶ್ಚಿತ ಅಳತೆಗಳ ಪ್ರಮಾಣದಲ್ಲಿ ವಿಭಾಗಿಸಲಾಗುತ್ತಿತ್ತು. ಈ ರೀತಿ ಅಳತೆ ಮಾಡಿದ ಭೂಪ್ರದೇಶದ ಮೇರೆಗಳನ್ನು ಗುರುತಿಸುವ ಸಲುವಾಗಿ ಕಲ್ಲುಗಳನ್ನು ನೆಡಲಾಗುತ್ತಿತ್ತು. ಭೂಮೇರೆಗಳನ್ನು ಸಮೀಪದಲ್ಲಿ ಹರಿಯುವ ನದಿ, ಹಳ್ಳ, ಬೆಟ್ಟಪ್ರದೇಶ, ಕಾಡು, ಕಲ್ಲುಗುಡ್ಡೆಗಳು ಮುಂತಾದವುಗಳನ್ನು ಹೆಸರಿಸುವ ಮೂಲಕ ಕೂಡ ಗುರುತಿಸಲಾಗುತ್ತಿತ್ತಲ್ಲದೆ ಹೊಲದ ಮೇರೆಗಳಲ್ಲಿ ದೀರ್ಘಕಾಲ ಬಾಳಿಕೆ ಬರುವಂತಹ ವಸ್ತುಗಳನ್ನು ಇರಿಸಬೇಕೆಂದು 'ಮನುಸ್ಮೃತಿ'ಯಲ್ಲಿ ಹೇಳಲಾಗಿದೆ.[4] ಇದೇ ಪದ್ಧತಿಯನ್ನು ಅನುಮೋದಿಸುತ್ತ ಬೃಹಸ್ಪತಿಯು ಈ ವಸ್ತುಗಳನ್ನು ಪಾತ್ರೆ ಇಲ್ಲವೆ ಹೂಜಿಗಳಲ್ಲಿ ಇರಿಸಿ ಮೇರೆಗಳ ಒಳಗೆ ಇಡಲು ತಿಳಿಸಿದ್ದಾನೆ.[5] ಇದೇ ರೀತಿಯಾಗಿ ತಮ್ಮ ಮಾಲೀಕತ್ವದ ಭೂಮಿಯನ್ನು ಗುರುತಿಸುವ ಸಲುವಾಗಿ ಭೂಮಾಲೀಕರು ಬಿದಿರಿನ ಇಲ್ಲವೆ ಮರದ

* ಸಂಶೋಧನ ವಿದ್ಯಾರ್ಥಿ, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೩

1 ನೋಡಿ N. N. Kher-'Agrarian and Fiscal Economy', Motital Banarsidass, New Delhi, 1973 P. 46

2 ಅರ್ಥಶಾಸ್ತ್ರ : II ೩೫

3 ಮನುಸ್ಮೃತಿ : VIII ೨೪೬-೮ : ಯಜ್ಞವಲ್ಕ್ಯಸ್ಮೃತಿ : II ೧೫೧

4 ಮನುಸ್ಮೃತಿ : VIII ೨೫೦-೧

5 ಬೃಹಸ್ಪತಿ ಸ್ಮೃತಿ : XIX ೨೦-೧

ಟೊಂಗೆಗಳಿಂದ ಬೇಲಿಯನ್ನು ನೆಡುತ್ತಿದ್ದರು. ಭೂಪ್ರದೇಶದ ಸುತ್ತಲೂ ನೀರಾವರಿಗಾಗಿ ಕಾಲುವೆಗಳನ್ನು ಕೂಡ ನಿರ್ಮಿಸುತ್ತಿದ್ದರು. ಪ್ರತಿಯೊಂದು ಭೂಮೇರೆಯನ್ನು ಪ್ರತಿಯೊಬ್ಬರೂ ಗೌರವಿಸುವುದಲ್ಲದೆ ಇದರ ಉಲ್ಲಂಘನೆಯಾದರೆ ದಂಡವನ್ನು ತೆರಬೇಕಾಗುತ್ತಿತ್ತು. ಕೌಟಲ್ಯನು ಭೂಮೇರೆಯ ಉಲ್ಲಂಘನೆಗಾಗಿ ದಂಡವನ್ನು ವಿಧಿಸಿದ್ದಾನೆ.[6]

ಭೂಮಿಯನ್ನು ಅಳೆಯಲು ಬಹು ಪ್ರಾಚೀನ ಕಾಲದಲ್ಲಿ ಹಗ್ಗವನ್ನು ಬಳಸುತ್ತಿದ್ದರೆಂದೂ ಹೇಳಲು ಆಧಾರಗಳಿವೆ. ಕೌಟಲ್ಯನು "ರಜ್ಜುಗ್ರಾಹಕ" ಎಂಬ ಅಧಿಕಾರಿಯನ್ನು ಹೆಸರಿಸುತ್ತಾನೆ. ಇವನು ಭೂಮಿಯನ್ನು ಹಗ್ಗದಿಂದ ಅಳೆಯುವ "ಭೂಮಾಪನ ಅಧಿಕಾರಿ" ಎಂದು ಅರ್ಥೈಸಲಾಗಿದೆ. ಮುಂದೆ ಕಾಲಾನುಕ್ರಮದಲ್ಲಿ 'ಕಾಲು' ಅಥವಾ 'ಪಾದ', 'ಗೇಣು', 'ಮಾರು' ಇತ್ಯಾದಿಗಳಲ್ಲದೆ ನಿರ್ದಿಷ್ಟ ಅಳತೆಯ ಅಂದರೆ ನಿರ್ದಿಷ್ಟ ಸಂಖ್ಯೆಯ 'ಗೇಣು' ಅಥವಾ 'ಮಾರು' ಉದ್ದದ ಕೋಲುಗಳನ್ನು ಬಳಸುತ್ತಿದ್ದರೆಂಬುದಕ್ಕೆ ಕನ್ನಡ ಶಾಸನಗಳಲ್ಲಿ ಬಹಳಷ್ಟು ಉಲ್ಲೇಖಗಳು ದೊರೆಯುತ್ತವೆ. (ಹದಿನೆಂಟು ಗೇಣ ಕೋಲು, ಮಾರಗೋಲು ಇತ್ಯಾದಿ). ವಿವಿಧ ಪ್ರದೇಶಗಳಲ್ಲಿ ಬೇರೆ ಬೇರೆ ಅಳತೆಯ ಕೋಲುಗಳನ್ನು ಬಳಸಲಾಗುತ್ತಿತ್ತೆಂದು ಕಾಣುತ್ತದೆ ಮತ್ತು ಇಂತಹ ಕೋಲುಗಳು ಅವು ಪ್ರಚಲಿತವಿದ್ದ ಊರಿನ ಅಥವಾ ಒಂದು ಪ್ರದೇಶದ ಅಧಿಕಾರಿಯ ಹೆಸರನ್ನೂ ಸಹ ಹೊಂದಿರುತ್ತಿದ್ದವು ಎಂದು ಕಂಡುಬರುತ್ತದೆ. (ನವಿಲುಗುಂದದ ಕೋಲು, ಬೆಂಕೊಳ್ವನ ಕೋಲು ಇತ್ಯಾದಿ.) ಇಂತಹ ನಿಶ್ಚಿತ ಪ್ರಮಾಣವನ್ನು ಮತ್ತರು, ಕಂಬ, ನಿವರ್ತನ ಇತ್ಯಾದಿಯಾಗಿ ಗುರುತಿಸಲಾಗುತ್ತಿತ್ತು.

ಭೂಮಿಯನ್ನು ವಿವಿಧ ಅಳತೆಗಳಲ್ಲಿ ನಿರ್ಧರಿಸಿ ಅವುಗಳಿಗೆ ಮೇರೆಗಲ್ಲುಗಳನ್ನು ಹಾಕಲಾಗುತ್ತಿತ್ತು. ಇವು ಬಹಳಷ್ಟು ಸಲ ಹೊಲಗಳ ಮೇರೆಗಳನ್ನು ಗುರುತಿಸುವ ಮೇರೆಗಲ್ಲುಗಳಾಗಿರುವ ಜೊತೆಗೆ ಕೆಲ ಧಾರ್ಮಿಕ ಚಿಹ್ನೆಗಳನ್ನೂ ಹೊಂದಿರುತ್ತಿದ್ದವೆಂಬ ಬಗ್ಗೆ ಉಲ್ಲೇಖಗಳು ದೊರೆಯುತ್ತವೆ. ವಿಶೇಷವಾಗಿ ದೇವಾಲಯಗಳು ಅಥವಾ ಮಠಗಳು, ಧರ್ಮಗುರುಗಳು, ಯತಿಗಳು ಮುಂತಾದವರಿಗೆ ದಾನವಾಗಿ ಕೊಟ್ಟ ಭೂಮಿಯ ಮೇರೆಗಳನ್ನು ಇಂತಹ ಚಿಹ್ನೆಗಳುಳ್ಳ ಕಲ್ಲುಗಳಿಂದ ಗುರುತಿಸಲಾಗುತ್ತಿತ್ತು. ಹೀಗಾಗಿ ಇಂತಹ ಕಲ್ಲುಗಳು ಮೇರೆಗಳನ್ನು ಸೂಚಿಸುವ ಜೊತೆಗೆ ಆಯಾ ಕಾಲದ ಆಯಾ ಪ್ರದೇಶಗಳ ಧಾರ್ಮಿಕ ಸ್ಥಿತಿ-ಗತಿಗಳ ಸೂಚಕಗಳೂ ಕೂಡ ಆಗಿರುತ್ತಿದ್ದವು. ಕನ್ನಡ ಶಾಸನಗಳಲ್ಲಿ ಕಂಡು ಬರುವ ಇಂತಹ ವಿವಿಧ ಉಲ್ಲೇಖಗಳನ್ನು ಇಲ್ಲಿ ಪರಿಶೀಲಿಸಲಾಗಿದೆ.

### ಎಲ್ಲೆಗಳು

ಇವು ಸಾಮಾನ್ಯವಾಗಿ ಸೀಮೆಯ ಮೇರೆಗಳನ್ನು ಗುರುತಿಸುವ ಸಲುವಾಗಿ ನಿಲ್ಲಿಸಿದ ಕಲ್ಲುಗಳು. ಇಂತಹ ಕಲ್ಲುಗಳನ್ನು ಶಾಸನಗಳಲ್ಲಿ 'ಎಲ್ಲೆಗಲ್ಲು' ಎಂದು ಕರೆಯಲಾಗಿದೆ. ಇದಲ್ಲದೆ ಈ ಕಲ್ಲುಗಳನ್ನು ನಿಲ್ಲಿಸಿದ ಮೇಲೆ ಅವು ಸೂಚಿಸುತ್ತಿದ್ದ ಮೇರೆಗಳ ವಿವರಗಳೂ ದೊರೆಯುತ್ತವೆ. ಉದಾಹರಣೆಗೆ, ಕ್ರಿ.ಶ. ೧೫೩೬ರ ಶಾಸನದಲ್ಲಿ ವಿವರಿಸಲಾದ ಚತುಸ್ಸೀಮೆಯ 'ಎಲ್ಲೆಗಲ್ಲು'ಗಳು ವಿಜಯನಗರದ ದೊರೆಯಾದ ಅಚ್ಯುತರಾಯನು ತಿರುಮಲದೇವರಿಗೆ ಸರ್ವಮಾನ್ಯವಾಗಿ ಕೊಟ್ಟ ಗ್ರಾಮದ ಸೀಮೆಯ ಮೇರೆಗಳನ್ನು ಸೂಚಿಸುತ್ತಿದ್ದವು.[7]

### ಗಡಿಯ ಕಲ್ಲು

ಎಲ್ಲೆಗಲ್ಲುಗಳಂತೆ ಹೊಲದ ಗಡಿ, ಊರಿನ ಗಡಿ, ದಾನವಾಗಿ ನೀಡಿದ ಭೂಮಿಯ ಮೇರೆಗಳನ್ನು ಗುರುತಿಸಲು ನಿಲ್ಲಿಸಿದ ಕಲ್ಲುಗಳನ್ನು 'ಗಡಿಯ ಕಲ್ಲು'ಗಳು ಎಂದು ಕರೆಯಲಾಗಿದೆ.[8]

### ಚಕ್ರಕಲ್ಲು

ಈ ಮೇರೆಗಲ್ಲುಗಳು ಚಕ್ರದ ಚಿಹ್ನೆಯನ್ನು

---

6 ಅರ್ಥಶಾಸ್ತ್ರ : III ೯
7 EC IV (RE), C h. 302
8 EC VIII (old), Tl. 133

ಒಳಗೊಂಡಿರುತ್ತಿದ್ದವು. ಚಕ್ರದ ಚಿಹ್ನೆಯ ಮೇರೆಗಲ್ಲುಗಳುಳ್ಳ ಭೂಮಿಗಳು ವಿಶೇಷವಾಗಿ ವೈಷ್ಣವ ಸಂಪ್ರದಾಯಕ್ಕೆ ಸೇರಿದ ದೇವಾಲಯ, ಮಠ ಇಲ್ಲವೆ ಈ ಪಂಥಕ್ಕೆ ಸೇರಿದ ವ್ಯಕ್ತಿಗಳಿಗೆ, ಧರ್ಮಗುರುಗಳಿಗೆ ಕೊಡುಗೆಯಾಗಿ ನೀಡಿದ ಭೂಮಿಗಳಾಗಿದ್ದವು. ಉದಾಹರಣೆಗೆ, ಕ್ರಿ. ಶ. ೧೩೩೪ರ ಮೂರನೆಯ ಹೊಯ್ಸಳ ನರಸಿಂಹನ ಶಾಸನವು ಶ್ರೀ ಪ್ರಸನ್ನ ಮಾಧವ ದೇವರಿಗೆ ದತ್ತಿಯಾಗಿ ನೀಡಿದ ಕ್ಷೇತ್ರದ ಮೇರೆಗಳಿಗೆ ಚಕ್ರದ ಕಲ್ಲುಗಳನ್ನು ನಿಲ್ಲಿಸಿ ಆ ಕ್ಷೇತ್ರವು ದೇವರ ಅಂಗಭೋಗಾದಿ ಸೀಮೆಗಳಿಗೆ ಸಲ್ಲುವದು ಎಂದು ತಿಳಿಸುತ್ತದೆ.[9] ಇದೇ ರೀತಿ ಮತ್ತೊಂದು ವಿಜಯನಗರ ಕಾಲದ ಶಾಸನವು ಶ್ರೀ ನರಸಿಂಹ ದೇವರ ದೀಪಾರಾಧನೆಗೆ ಕೊಟ್ಟ ಭೂದಾನದ ಮೇರೆಗಳನ್ನು 'ಚಕ್ರಕಲ್ಲು' ಎಂದು ಗುರುತಿಸಿದ ವಿವರ ನೀಡುತ್ತದೆ.[10]

### ಶಂಖಚಕ್ರದ ಕಲ್ಲು

ಇದೇ ರೀತಿಯಾಗಿ ಶಂಖಚಕ್ರ ಕಲ್ಲು ಬರೀ ಒಂದು ಮೇರೆಗಲ್ಲಾಗಿರುವ ಜೊತೆಗೆ ಅಂದಿನ ಧಾರ್ಮಿಕ ಸ್ಥಿತಿಯ ವಿವರ ನೀಡಲು ಸಹಕಾರಿಯಾಗಿದೆ. ಕ್ರಿ. ಶ. ೧೪೭೦ರ ಶಾಸನವು ವಿಷ್ಣುಭಕ್ತಿಪರಾಯಣದ ಶ್ರೀ ವೈಷ್ಣವರಾದ ಕೋನೇರಿ ಅಯ್ಯನವರಿಗೆ ಅವರ ಗೃಹಸಮಾರಾಧನೆ ಮತ್ತು ಶ್ರೀ ಗೋಪಿನಾಥ ದೇವರ ಸೇವೆಗೆ ಗ್ರಾಮದ ಪ್ರಜೆಗಳು ಮತ್ತು ಸೇನಬೋವರು ತೋಟ ಮುಂತಾಗಿ ದಾನವಾಗಿ ನೀಡಿ ಅದರ ಮೇರೆಗಳನ್ನು 'ಶಂಖಚಕ್ರ ಕಲ್ಲು'ಗಳಿಂದ ಗುರುತಿಸಿದರು ಎಂದು ವಿವರಿಸುತ್ತದೆ.[11] ಹೊಯ್ಸಳ ಚಕ್ರವರ್ತಿ ಮೂರನೆಯ ನರಸಿಂಹನ ಶಾಸನವು ಶ್ರೀ ಪ್ರಸನ್ನ ಮಾಧವ ದೇವರು, ಶ್ರೀ ರಾಮಕೃಷ್ಣ ದೇವರು ಮತ್ತು ಶ್ರೀ ವರದ ಅಲ್ಲಾಳನಾಥ ದೇವರ ಅಮೃತಪಡಿ ಮುಂತಾದ ಸೇವೆಗಾಗಿ ದತ್ತಿಯನ್ನು ನೀಡಿ ಭೂಮಿಯ ಮೇರೆಗಳನ್ನು 'ಶಂಖಚಕ್ರ ಕಲ್ಲು'ಗಳಿಂದ ಗುರುತಿಸಿರುವುದಾಗಿ ತಿಳಿಸುತ್ತದೆ.[12] ಇಂತಹ ಕಲ್ಲುಗಳ ಮೇಲೆ ವಿಷ್ಣುವಿನ ಲಾಂಛನಗಳಾದ ಶಂಖ ಮತ್ತು ಚಕ್ರಗಳ ಚಿತ್ರಗಳು ಇದ್ದವೆಂದು ತೋರುತ್ತದೆ.

### ವಾಮನ ಮುದ್ರೆಯ ಕಲ್ಲು

ವಾಮನ ಮುದ್ರೆಯ ಕಲ್ಲು ವಿಷ್ಣುವಿನ ಅವತಾರವಾದ ವಾಮನನ ಚಿತ್ರವನ್ನು ಒಳಗೊಂಡಿರುತ್ತದೆ. ಕ್ರಿ. ಶ. ೧೫೦೬ರ ಒಂದು ಶಾಸನವು ಈ ಮೇರೆಗಲ್ಲಿನ ಬಗ್ಗೆ ಉಲ್ಲೇಖಿಸುತ್ತದೆ.[13] ಈ ಶಾಸನವು ವಿಜಯನಗರದ ದೊರೆಯು ರಂಗನಾಥ ಭಟ್ಟನೆಂಬ ಪಂಡಿತನಿಗೆ ಗ್ರಾಮವೊಂದನ್ನು ದಾನವಾಗಿ ನೀಡಿ ಗ್ರಾಮದ ಮೇರೆಗಳಿಗೆ 'ವಾಮನ ಮುದ್ರೆಯ ಕಲ್ಲು'ಗಳನ್ನು ನೆಡಿಸಿದ ಬಗ್ಗೆ ವಿವರಿಸುತ್ತದೆ. ಇಂತಹ ವಾಮನ ಮುದ್ರೆಯ ಕಲ್ಲುಗಳು ಈ ಕಾಲಕ್ಕಿಂತ ಹಿಂದೆಯೂ ಬಳಸಲ್ಪಡುತ್ತಿದ್ದ ಬಗ್ಗೆ ಉಲ್ಲೇಖಗಳು ಇವೆ. ಎಷ್ಟೋ ಸಲ ಇಂತಹ ಕಲ್ಲುಗಳ ಮೇಲೆ ಕೊಡೆ ಮತ್ತು ಕಮಂಡಲಗಳನ್ನು ಹಿಡಿದುಕೊಂಡು ನಿಂತ ಕುಳ್ಳ ವಟುವಿನ ಚಿತ್ರವನ್ನು ಕೊರೆಯಲಾಗಿರುತ್ತದೆ.

### ಲಿಂಗಕಲ್ಲು, ಲಿಂಗಮುದ್ರೆಯ ಕಲ್ಲು

ಈ ಮೇರೆಗಲ್ಲುಗಳು ವಿಶೇಷವಾಗಿ ಶೈವ ಸಂಪ್ರದಾಯಕ್ಕೆ ಸೇರಿದ ದತ್ತಿಗಳನ್ನು ಸೂಚಿಸುವ ಮೇರೆಗಲ್ಲುಗಳಾಗಿವೆ. ಉದಾಹರಣೆಗೆ, ಕಲ್ಯಾಣ ಚಾಲುಕ್ಯರ ದೊರೆಯಾದ ಮೊದಲನೆಯ ಸೋಮೇಶ್ವರನ ಒಂದು ಶಾಸನವು ಶ್ರೀ ಕದಂಬೇಶ್ವರ ದೇವಾಲಯಕ್ಕೆ ಸಂಬಂಧಿಸಿದಂತೆ ಶ್ರೀ ಸೋಮೇಶ್ವರ ಪಂಡಿತ ದೇವರಿಗೆ ದೇವರ ನೈವೇದ್ಯಕ್ಕಾಗಿ ನೀಡಿದ ಭೂಮಿಯ ಮೇರೆಗಳನ್ನು 'ಲಿಂಗದ ಕಲ್ಲು'ಗಳಿಂದ ಗುರುತಿಸಿರುವ ಬಗ್ಗೆ ವಿವರಿಸುತ್ತದೆ.[14] ಅದೇ ರೀತಿಯಾಗಿ ಶ್ರೀ ಗೋಕರ್ಣ ಕ್ಷೇತ್ರದ ಮಹಾಬಲದೇವರಿಗೆ ನಡೆಯುವ ಸೇವೆಗಳಿಗಾಗಿ ದತ್ತಿ ನೀಡಿದ ಗ್ರಾಮದ ಮೇರೆಗಳನ್ನು ಲಿಂಗಮುದ್ರೆಯ ಕಲ್ಲುಗಳಿಂದ ಸೂಚಿಸಲಾಯಿತೆಂದು ಕ್ರಿ. ಶ. ೧೫೫೦ರ

---

9 EC VII (RE), Ng. 76
10 SII IX Pt. II. No. 533
11 EC VII (RE). Ng. 157
12 EC VII (RE), Ng. 73
13 EC III (RE), Gu. 26
14 KI I, No. 17

ಸದಾಶಿವರಾಯನ ಶಾಸನವು ತಿಳಿಸುತ್ತದೆ.[15] ಸಾಮಾನ್ಯವಾಗಿ ಇಂತಹ ಕಲ್ಲುಗಳ ಮೇಲೆ ಪೀಠದ ಮೇಲಿರುವ ಶಿವಲಿಂಗದ ಚಿತ್ರವಿರುತ್ತದೆ.

**ನಂದಿ ಕಲ್ಲು**

ನಂದಿಕಲ್ಲಿನ ಮೇಲೆ ಶಿವನ ವಾಹನವಾದ ನಂದಿಯ ಚಿತ್ರವಿರಬೇಕು. ಹೊಯ್ಸಳ ವಿಷ್ಣುವರ್ಧನನ ಶಾಸನವು ಮಲ್ಲಿಕಾರ್ಜುನ ದೇವರ ಅಂಗಭೋಗ ರಂಗಭೋಗಗಳಿಗೆ ನೀಡಿದ ದತ್ತಿಯ ಭೂಮಿಗೆ 'ನಂದಿ ಕಲ್ಲು' ನೆಡೆಸಿದ ಬಗ್ಗೆ ತಿಳಿಸುತ್ತದೆ.[16] ಕ್ರಿ. ಶ. ೧೫೩೪ರ ಶಾಸನವು ವಿಜಯನಗರದದೊರೆಯಾದ ಅಚ್ಯುತರಾಯನು ವಿರೂಪಾಕ್ಷ ಗುಡಿಯ ಗೋಪುರದಲ್ಲಿಯ ಶ್ರೀ ಬುಕ್ಕೇಶ್ವರ ದೇವರಿಗೆ ನಡೆಯುವ ಸೇವೆಗಳಿಗೆ ಕುರುಗೋಡು ಸೀಮೆಯೊಳಗಿನ ದೊಂಡವಡಿ ಗ್ರಾಮವನ್ನು ದತ್ತಿಯಾಗಿ ನೀಡಿ ಅದರ ಮೇರೆಗಳಿಗೆ 'ಲಿಂಗ ಮುದ್ರೆಯ ಕಲ್ಲು' ಮತ್ತು 'ನಂದಿ ಕಲ್ಲು' ಹಾಕಿಸಿದ ಬಗ್ಗೆ ತಿಳಿಸುತ್ತದೆ.[17]

ಇದೇ ರೀತಿಯಾಗಿ 'ಬಸವನ ಮುದ್ರೆಯ ಕಲ್ಲು' ಮತ್ತು 'ಬಸವಂತ ಕಲ್ಲು' ಹೆಸರಿಸಬಹುದು. ಕ್ರಿ. ಶ. ೧೪೫೦ರ ಶಾಸನವು ಶ್ರೀ ಸೋಮೇಶ್ವರ ದೇವರ ಶ್ರೀಕಾರ್ಯಕ್ಕೆ ದತ್ತಿಯಾಗಿ ನೀಡಿದ ಸೋಮಲಾಪುರ ಗ್ರಾಮದ ಮೇರೆಗಳಿಗೆ 'ಬಸವ ಮುದ್ರೆ'ಯ ಕಲ್ಲನ್ನು ನಿಲ್ಲಿಸಿದ ಬಗ್ಗೆ ತಿಳಿಸುತ್ತದೆ. ವಿಜಯನಗರದ ದೊರೆಯಾದ ಮಲ್ಲಿಕಾರ್ಜುನನ ಶಾಸನವು 'ಬಸವಂತ' ಕಲ್ಲಿನ ಬಗ್ಗೆ ಉಲ್ಲೇಖಿಸುತ್ತದೆ.[18]

**ತ್ರಿಶೂಲದ ಕಲ್ಲು**

ತ್ರಿಶೂಲವು ಶಿವನು ತನ್ನೊಂದು ಕೈಯಲ್ಲಿ ಧರಿಸಿದ ಒಂದು ಆಯುಧ. ತ್ರಿಶೂಲದ ಚಿಹ್ನೆಯ ಮೇರೆಗಲ್ಲುಗಳೂ ಕೂಡ ಮೇಲೆ ವಿವರಿಸಿದ ಮೇರೆಗಲ್ಲುಗಳಂತೆ ಶೈವ ದತ್ತಿಯ ವಿವರಗಳನ್ನೇ ಸೂಚಿಸುತ್ತವೆ. ಕ್ರಿ.ಶ. ೧೪೯೭ರ ಶಾಸನವು ತಿಪ್ಪರಸರು ಕಿತ್ತೂರ ರಾಮಯ ದೇವರಿಗೆ ಅಮೃತಪಡಿ, ನಂದಾದೀಪ ಮುಂತಾದ ಸೇವೆಗಳಿಗೆ ಹಾಕಿಕೊಟ್ಟ ಭೂಮಿಗೆ 'ತ್ರಿಶೂಲದ ಕಲ್ಲು' ನಿಲ್ಲಿಸಿದ ಬಗ್ಗೆ ವಿವರಿಸುತ್ತದೆ.[19] ಈ ಮೇರೆಗಲ್ಲುಗಳು ತ್ರಿಶೂಲದ ಚಿಹ್ನೆಗಳನ್ನೂ ಕೂಡ ಹೊಂದಿರಬಹುದು.

ಈ ಪ್ರಕಾರವಾಗಿ ಮೇಲೆ ವಿವರಿಸಲಾದ ಮೇರೆ–ಗಲ್ಲುಗಳು ಭೂ ಮೇರೆಗಳನ್ನು ಗುರುತಿಸುವುದಲ್ಲದೆ ಧಾರ್ಮಿಕ ಸ್ಥಿತಿಯನ್ನು ವಿವರಿಸುವ ಚಿಹ್ನೆಗಳೂ ಕೂಡ ಆಗಿವೆ. ಪ್ರಾಚೀನ ಕರ್ನಾಟಕದಲ್ಲಿ ವೈಷ್ಣವ ಹಾಗೂ ಶೈವ ಧರ್ಮಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದವು ಎಂಬ ಅಂಶವನ್ನು ಈ ಮೇರೆಗಲ್ಲುಗಳ ಅಧ್ಯಯನದಿಂದ ಇನ್ನಷ್ಟು ದೃಢಪಡಿಸಬಹುದು.

---

15 KI VI, No. 70
16 EC VII (RE), Ng. 61
17 SII IX Pt. II, No. 565
18 SII IX Pt. II, No. 457
19 EC III (RE), Hg. 133

ಹರಿಹರ ಶ್ರೀನಿವಾಸರಾವ್*

# ಮಾಗಳದ ಶಾಸನಗಳಲ್ಲಿ 'ಯೋಗ'-ವೈಜ್ಞಾನಿಕ ವಿಶ್ಲೇಷಣೆ

ಬಳ್ಳಾರಿ ಜಿಲ್ಲೆಯ ಹಿರೇಹಡಗಲಿ ತಾಲ್ಲೂಕಿನ ಮಾಗಳ ಗ್ರಾಮ ಮತ್ತು ಅಲ್ಲಿಂದ ಸುಮಾರು ೨ ಕಿ.ಮೀ. ದೂರದಲ್ಲಿರುವ ರಂಗಾಪುರದ ಶಾಸನಗಳಲ್ಲಿ ೨೦೦ ಪ್ರಮುಖ ಮಹಾಜನರ ಉಲ್ಲೇಖವಿದೆ. ಇವರು ಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಅನುಷ್ಠಾನ ಜಪ ಸಮಾಧಿ ಶೀಲ ಷಟ್ಕರ್ಮಕ್ರಿಯಾ ನಿರತರೂ ವೇದ ವೇದಾಂಗಗಳನ್ನೂ ಅನೇಕ ಶಾಸ್ತ್ರಗಳನ್ನು ಅರಿತವರೂ ಕಳಂಕ ರಹಿತರೂ ಆಗಿದ್ದರೆಂದು ತಿಳಿಸುತ್ತವೆ. ಊರೊಡೆಯರಾದ ಹರಿಹರ, ಗೋವಿಂದ, ಮಾಧವರೆಂಬ ಬ್ರಾಹ್ಮಣ ಸೈನ್ಯಾಧಿಕಾರಿ ಮತ್ತು ಮಂತ್ರಿಯ ಶೌರ್ಯ, ಪರಾಕ್ರಮಗಳನ್ನು ಉಲ್ಲೇಖಿಸಿವೆ. ಅಲ್ಪ ವ್ಯತ್ಯಾಸದೊಂದಿಗೆ ಈ ಶಾಸನೋಕ್ತಿಗಳು ಪತಂಜಲಿಯ ಯೋಗ ಸೂತ್ರದಲ್ಲಿ ಹೇಳಿರುವ ಸಾಲುಗಳಂತೆಯೇ ಇದ್ದು ಅವುಗಳ ಪಾರಿಭಾಷಿಕ ಶಬ್ದಗಳ ವೈಜ್ಞಾನಿಕ ವಿಶ್ಲೇಷಣೆಯನ್ನು ವಿವರಿಸುವುದು ಈ ಲೇಖನದ ಉದ್ದೇಶವಾಗಿದೆ. 'ಯೋಗ' ಎಂದರೆ ದೇಹ ಮತ್ತು ಮನಸ್ಸುಗಳ ಆತಃಶಕ್ತಿಗಳನ್ನು ಸಮನ್ವಯಗೊಳಿಸುವುದು ಎಂದು ಅರ್ಥ.

ರಂಗಾಪುರದ ನರಸಿಂಹಸ್ವಾಮಿ ದೇವಸ್ಥಾನದ ಪ್ರವೇಶದ್ವಾರದ ಬಲಭಾಗಕ್ಕಿರುವ ತ್ರಿಭುವನಮಲ್ಲ ಚಾಳುಕ್ಯ ದೊರೆಯ ಕಾಲದ ಕ್ರಿ.ಶ. ೧೧೧೬ರ ಶಾಸನದಲ್ಲಿ ಯೋಗದ ಬಗೆಗಿನ ಸಾಲುಗಳ ಉಲ್ಲೇಖ ಹೀಗಿದೆ.

ಸ್ವಸ್ತಿಯಮ ನಿಯಮ ಸ್ವಾಧ್ಯಾಯ ಧ್ಯಾನ ಧಾರಣಯೋಗಾನುಷ್ಠಾನ ಜಪ ಸಮಾಧಿ ಶೀಲ ಷಟ್ಕರ್ಮ ಕ್ರಿಯಾ ನಿರತರನೇಕ ಯಜ್ಞಾ[ವ]ಭೃತಾವಗಾಹನ ಪವಿತ್ರೀಕೃತ ಶರೀರರ್ವ್ವೇದ ವೇದಾಂಗನೋಪಾಂಗನೇಕ ಶಾಸ್ತ್ರಾ ಅಷ್ಟದಶ ಧರ್ಮ ಸಂಹಿತರು[1] ಎಂದು ಉಲ್ಲೇಖಿಸುತ್ತದೆ.

ಪತಂಜಲಿ ಯೋಗ ಸೂತ್ರದ ಎರಡನೇಯ ಸಾಧನ ಪಾದದಲ್ಲಿಯ ೨೯ನೆಯ ಸೂತ್ರವು ಅಷ್ಟಾಂಗ ಯೋಗದ ಬಗ್ಗೆ ಹೀಗೆ ಹೇಳುತ್ತದೆ.

'ಯಮ ನಿಯಮಾಸನ ಪ್ರಾಣಾಯಾಮ
ಪ್ರತ್ಯಾಹಾರ
ಧ್ಯಾನ ಧಾರಣ ಸಮಾಧಯ್ಯೋಷ್ಟಾಂಗಾನಿ'

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣ ಸಮಾಧಿ ಇವು ಎಂಟು ಪ್ರಕಾರಗಳಾದ ಯೋಗಾಂಗಗಳೆಂದು ಹೆಸರು. ಮಾಗಳದ ೩೯ನೇ ಶಾಸನ ವಿಷ್ಣುವರ್ಧನ ಬಲ್ಲಾಳ II ನ ಕಾಲ (ಕ್ರಿ. ಶ. ೧೨೦೯[2])ದಲ್ಲಿ ಪ್ರಾಣಾಯಾಮ, ಪ್ರತ್ಯಾಹಾರಗಳ ಬಗ್ಗೆಯೂ ಹೇಳುತ್ತದೆ.

---

* ೭೫/೧೫, 'ಸಮರ್ಥ' ೨ನೆಯ ಅಡ್ಡರಸ್ತೆ, ೩ನೆಯ ಹಂತ, ೫ನೆಯ ಬ್ಲಾಕ್, ಬನಶಂಕರಿ ೩ನೇಘಟ್ಟ, ಬೆಂಗಳೂರು-೫೬೦ ೦೮೫.

1 S.S.I. Vol IX Part-I ಪು. ೧೯೦, ಶಾ. ಸಂ. ೧೯೫,

2 S.S.I. Vol IX Past-I ಪುಟ ೩೪೩

ಪ್ರಾಣಾಯಾಮ ಪ್ರತ್ಯಾಹಾರ ನಿಜಕ್ರಿಯಾ
ಕರಣಾನುರಕ್ತ ಸ್ವಾಂತಃ
ಕರಣ ಪರಿಣತಿ ವಿಶೇಷ ಪರಾಕ್ರಿತ
ಪ್ರತ್ಯವಾಯರುಂ ||

ಹೀಗೆ 'ಆಸನ' ಎಂಬ ಪದ ಒಂದನ್ನುಳಿದು ಉಳಿದ ಏಳು ಯೋಗಾಂಗಗಳ ಪದಗುಚ್ಛವನ್ನು ಪತಂಜಲಿಯ ಯೋಗ ಸೂತ್ರದ ರೀತಿಯಲ್ಲಿಯೇ ಕಾಣಬಹುದಾಗಿದೆ.

ಇನ್ನು ಪತಂಜಲಿಯು ಈ ಅಷ್ಟಾಂಗಗಳನ್ನು ಹೇಗೆ ವಿವರಿಸುತ್ತಾನೆಂಬುದನ್ನು ನೋಡೋಣ.

**ಯಮ :**

ಅಹಿಂಸಾ ಸತ್ಯಾಸ್ತೇಯ ಬ್ರಹ್ಮಚರ್ಯಾಪರಿಗ್ರಾ
ಹಾಯಮಾಃ [ಪಾಯೋ. ಸೂ. ೩೦]

ಪ್ರಾಣಿಗಳನ್ನು ಹಿಂಸಿಸದಿರುವುದು, ಮನಃ ಪೂರ್ವಕವಾಗಿ ಸತ್ಯವಂತರಾಗಿ ನಡೆಯುವುದು, ಪರರ ಸ್ವತ್ತನ್ನು ಅಪಹರಿಸದಿರುವುದು, ಬ್ರಹ್ಮಚರ್ಯವನ್ನು ಪಾಲಿಸುವುದರಿಂದ ಇಂದ್ರಿಯ ನಿಗ್ರಹವೂ, ಭೋಗ ಸಾಮಗ್ರಿಗಳನ್ನು ಸ್ವೀಕರಿಸದೇ ಇರುವುದು, ಇವುಗಳೇ 'ಯಮ'ವೆಂಬ ಯೋಗವು.

'ಶೀಲ ಷಟ್ಕರ್ಮ ಕ್ರಿಯಾ ನಿರತರೂ, ಸತ್ಯ ವಾಕ್ಯರು [೧೯೫ನೇ ಶಾಸನ, ೧೪ನೇ ಸಾಲಿನಲ್ಲಿ] 'ಸತ್ಯ ವಾಕ್ಯರು, [೧೬ನೇ ಸಾಲು] 'ಸತ್ಯರಾಧೇಯರು,' [೩೨೯ನೇ ಶಾಸನದ ೩೦ನೇ ಸಾಲು], ಕಳಂಕ ದೋಷಾ ರಹಿತ [೩೮ ಸಾಲು ಅದೇ ಶಾಸನ] ಗ್ರಾಮ ಶೋಭಾ ಪ್ರಖ್ಯಃ ಎಂದು ಪ್ರಸಿದ್ಧನಾದ ಕಾಳಿಮಯ್ಯನ ಗುಣ ವಿಶೇಷಣಗಳಲ್ಲಿ 'ಯಮ' ಎಂಬ ಪದದ ಅರ್ಥವನ್ನು ಗುರ್ತಿಸಬಹುದು. ಹೀಗೆ ೫ ಗುಣಗಳನ್ನು ಪಾಲಿಸಿದರೆ ಇಂದ್ರಿಯ ನಿಗ್ರಹವು ಉಂಟಾಗುತ್ತದೆ.

**ನಿಯಮ :**

ಎಂದರೆ ವಿವಿಧ ಆಸೆಗಳ ವಿಷಯದಲ್ಲಿ ಸಂಯಮ ದಿಂದಿರುವುದು. ಯಮ ನಿಯಮಗಳೆಂಬ ನೈತಿಕ ಅಭ್ಯಾಸಗಳಿಲ್ಲದೆ ಮುಂದಿನ ಯೋಗಾಂಗಗಳನ್ನು ಎಷ್ಟೇ ಅಭ್ಯಾಸ ಮಾಡಿದರೂ 'ಯೋಗ'ದ (ಆರು) ಪೂರ್ಣ ಫಲವು ದೊರಕುವುದಿಲ್ಲ.

**ಪ್ರಾಣಾಯಾಮ :**

ಈ ಕ್ರಿಯೆಯು ನೇರವಾಗಿ ಪ್ರಾಣವಾಯುವಿನ ಉಸಿರಾಟಕ್ಕೆ ಸಂಬಂಧಿಸಿದ್ದು, ಪ್ರಕೃತಿಯ ಅತ್ಯಮೂಲ್ಯ ಹಾಗೂ ಉತ್ಕೃಷ್ಟ ಕೊಡುಗೆಯಾದ ಮಾನವನ, ದೇಹದಲ್ಲಿನ ಚಟುವಟಿಕೆಗಳಿಗೆ ಕಾರಣವಾಗಿದೆ ಯೆಂಬುದನ್ನೀಗ ಪರಿಶೀಲಿಸೋಣ. ಪ್ರಾಣಾಯಾಮ ಕ್ರಿಯೆಯನ್ನು ಮೂರು ವಿಭಾಗಗಳಾಗಿ ವಿಂಗಡಿಸಿದ್ದಾರೆ. **ರೇಚಕ** : ಉಸಿರನ್ನು ಹೊರಕ್ಕೆ ಬಿಡುವುದು. (ಈ ಮೂಗಿನ ಮುಖಾಂತರ) ; **ಪೂರಕ** : ಉಸಿರನ್ನು ಒಳಕ್ಕೆ ಎಳೆದುಕೊಳ್ಳುವುದು ; ಹಾಗೂ **ಕುಂಭಕ** : ಉಸಿರನ್ನು ತಡೆ ಹಿಡಿದು ಕೊಳ್ಳುವುದು.

ಪ್ರಾರಂಭದಲ್ಲಿ ಈ ಮೂರನ್ನೂ ಐದು ಸೆಕೆಂಡುಗಳ ಕಾಲ ಅಭ್ಯಸಿಸುತ್ತಾ, ಕ್ರಮೇಣ ೨೦ ಸೆಕೆಂಡುಗಳಿಗೆ ಹೆಚ್ಚಿಸಿ ಪರಮಾವಧಿ ೩೦ ಸೆಕೆಂಡಿನವರೆಗೆ ಮಾಡ ಬಹುದು. ಹೀಗೆ ಕ್ರಮವಾಗಿ ಅಭ್ಯಾಸ ಮಾಡುತ್ತಾ ಹೋದರೆ ಮೂರು ತಿಂಗಳಿನ ಅವಧಿಯಲ್ಲಿ ಪರಮಾವಧಿ ಹಂತವನ್ನು ತಲುಪಬಹುದು. ಈ ತೆರನಾದ ಅಭ್ಯಾಸ ದಿಂದ ದೇಹದ ಸ್ವತಂತ್ರ ನರವ್ಯೂಹಗಳ ಮೇಲೆ ಸಂಪೂರ್ಣ ಹತೋಟಿಯನ್ನು ಪಡೆಯಬಹುದೆಂದು ಡಾ|| ಆನಂದ ಮತ್ತು ಡಾ|| ಚಿನಾ ಎಂಬ ವೈದ್ಯರುಗಳ ಅಧ್ಯಯನದಿಂದ ತಿಳಿದು ಬರುತ್ತದೆ. ಅಲ್ಲದೆ ಇದರಿಂದಾಗಿ ಅವರು ತಮ್ಮ ಹೃದಯಕ್ಕೆ ಸಂಬಂಧಿಸಿದ ಶ್ವಾಸೋಚ್ಛ್ವಾಸ ಪ್ರಕ್ರಿಯೆಗಳ ಮೇಲೂ ಪ್ರಭುತ್ವವನ್ನು ಪಡೆದು ಕೊಳ್ಳುತ್ತಾರೆ. ಡಾ|| ಕೆ. ಎನ್. ಉಡುಪ ಅವರ ಪ್ರಕಾರ ಪ್ರಾಣಾಯಾಮ ಮಾಡುವುದರಿಂದ ದೇಹದ ಸಾಮರ್ಥ್ಯದಲ್ಲಿ ಹೆಚ್ಚಳ, ರಕ್ತದಲ್ಲಿನ ಶರ್ಕರ ಅಂಶ, ಕೋಲಸ್ಟ್ರಲ್ (colosterol) ಮಟ್ಟಗಳು ಕಡಿಮೆ ಯಾಗಿ ಮಿದುಳಿನ ಕಾರ್ಯಾಚರಣೆಯಲ್ಲಿ ಶಾಂತ ಪರಿಸ್ಥಿತಿ ಏರ್ಪಡುವುದನ್ನು ಈ ಚಿತ್ರದ ಮೂಲಕ ವ್ಯಕ್ತ ಪಡಿಸಿದ್ದಾರೆ.

## ಪ್ರತ್ಯಾಹಾರ :

ಈ ಕ್ರಿಯೆಯೂ ಮನೋನಿಗ್ರಹಕ್ಕಾಗಿ ಮನಸ್ಸಿಗೆ ಸಂಬಂಧಿಸಿದ ವ್ಯಾಯಾಮವಾಗಿದೆ. ಸುಮ್ಮನೆ ಶಾಂತ ವಾತಾವರಣದಲ್ಲಿ ಕುಳಿತು ಮನಸ್ಸನ್ನು ತನಗಿಷ್ಟ ಬಂದಂತೆ ಹರಿಯಬಿಟ್ಟಾಗ, ಅಸಂಖ್ಯ ಹೊಸ ಹೊಸ ಆಸೆ ಆಲೋಚನೆಗಳತ್ತ ಸಾಗುತ್ತಾ ಹೋಗುತ್ತದೆ. ಕೆಲಕಾಲದ ನಂತರ ಈ ಸಂಖ್ಯೆ ಕುಗ್ಗುತ್ತಾ ಹೋಗಿ ಮನಸ್ಸು ಹಗುರವಾಗಿ ಕೊನೆಗೆ ಹತೋಟಿಗೆ ಬರುತ್ತದೆ. ಇದನ್ನು ಸತತ ಅಭ್ಯಾಸ ಮತ್ತು ತಪಸ್ಸುಗಳಿಂದ ಮಾತ್ರ ಸಾಧಿಸಲಾಗುತ್ತದೆ.

## ಧ್ಯಾನ :

ಯಾವುದಾದರೊಂದು ಅಂತರಿಕ ಅಥವಾ ಬಾಹ್ಯ ವಸ್ತು ಅಥವಾ ವಿಚಾರದ ಮೇಲೆ ಮನಸ್ಸನ್ನು ಕೇಂದ್ರೀಕರಿಸಿದಾಗ, ಅಸಧಾರಣ ಮಾನಸಿಕ, ಚೈತನ್ಯಶಕ್ತಿ ವಿದ್ಯುತ್ತಿನಂತೆ ಒದಗಿ ಬರುತ್ತದೆ. ಈ ಹಂತವನ್ನೇ 'ಧ್ಯಾನ' ಎಂದು ಹೇಳಲಾಗುತ್ತದೆ. ಧ್ಯಾನಾಭ್ಯಾಸದಿಂದಾಗಿ ಪ್ಲಾಸ್ಮಾ ಕಾರ್ಟಿಸಾಲ್, ಯೂರಿನರಿ ಕಾರ್ಟಿಕಾಯಿಡ್ಸ್ ಮತ್ತು ನೈಟ್ರೋಜನ್‌ಗಳ ಪ್ರಮಾಣ ಕಡಿಮೆಯಾಗುವುದರಿಂದ ದೈಹಿಕ ಚುರುಕುತನ ಹೆಚ್ಚಾಗುತ್ತದೆ. ಧ್ಯಾನಾಭ್ಯಾಸದಿಂದ ಮನಸ್ಸಿನ ಉದ್ವೇಗಕರ ಭಾವನೆ ಕಡಿಮೆಯಾಗಿ ಮನಃಶ್ಶಾಂತಿ ಹೆಚ್ಚಿಸುವಲ್ಲಿ ಸಹಾಯವಾಗುತ್ತದೆ. ಧ್ಯಾನಕಾಲದಲ್ಲಿ ಅಸಿಟೈಲ್ ಕೋಲಿನ್ ಪ್ರಮಾಣವು ರಕ್ತದಲ್ಲಿ ಗಣನೀಯ ಪ್ರಮಾಣದಲ್ಲಿ ಹೆಚ್ಚಿ ಉಳಿದ ಬದಲಾವಣೆಗಳು ವಿಶೇಷವಾಗಿ ಹೆಚ್ಚದೆ ಇರುವುದನ್ನು ಈ ಹಂತದಲ್ಲಿ ಕಾಣಬಹುದಾಗಿದೆ.

## ಧಾರಣ ಅಥವಾ ಏಕಾಗ್ರತೆ :

ಒಂದೇ ವಿಷಯದ ಮೇಲೆ ಮನಸ್ಸನ್ನು ಕೇಂದ್ರೀಕೃತವಾಗುವಂತೆ ಮಾಡುವುದೇ ಧಾರಣ. ಮೊದಲು ಒಂದು ವಿಷಯವನ್ನು ಮನಃ ಪೂರ್ವಕವಾಗಿ ಕೇಳಿ, ಅದನ್ನು ಅರ್ಥಮಾಡಿಕೊಂಡು ಬೇರೆ ಎಲ್ಲಾ ಆಕರ್ಷಣೆಗಳನ್ನು ಸಂಪೂರ್ಣವಾಗಿ ತೊರೆದು ಅಂತರಂಗದಲ್ಲಿರುವ ಸತ್ಯವನ್ನು ಬೆಳೆಸಲು ಸರ್ವ ಶಕ್ತಿಯನ್ನೂ ವಿನಿಯೋಗಿಸಿದಾಗ ಧಾರಣ ಅಥವಾ 'ಏಕಾಗ್ರತೆ'ಯನ್ನು ಸಾಧಿಸುವ ಸಾಮರ್ಥ್ಯ ಉಂಟಾಗುತ್ತದೆ.

## ಸಮಾಧಿ :

ಬಾಹ್ಯ ಪ್ರಪಂಚದ ಪರಿಜ್ಞಾನವನ್ನೆಲ್ಲಾ ದೂರ ಮಾಡಿ ಕೇವಲ ಅಂತರಿಕ ಧ್ಯಾನ ಒಂದರಲ್ಲೆ ಗಾಢವಾಗಿ ನಿಮಗ್ನನಾಗಿ ಬಹುಕಾಲ ಇರುವುದನ್ನೇ 'ಸಮಾಧಿ' ಎನ್ನುತ್ತಾರೆ. ಇದು ಅತ್ಯುನ್ನತ ಯೋಗ ಸಾಧನೆಯಾಗಿದೆ. ಇದನ್ನು ಹಂತ ಹಂತವಾಗಿ ಸಾಧಿಸಿಕೊಂಡು ಬಂದರೆ ನಿಶ್ಚಿತ ಉದಾತ್ತ ಮಟ್ಟವು ಪ್ರಾಪ್ತವಾಗುತ್ತದೆ.

ಹೀಗೆ ಯೋಗವನ್ನು ನಿರಂತರ ತಮ್ಮ ಜೀವನವಿಡೀ ಸ್ವಾಧ್ಯಯಿಸಿ, ಅನುಷ್ಠಾನಗೊಳಿಸಿಕೊಂಡು ತಮ್ಮ ಉತ್ತಮ ಚಾರಿತ್ರ್ಯದಿಂದ ಊರೊಡೆಯರೆನ್ನಿಸಿದ್ದ ಹರಿಹರ, ಗೋವಿಂದರನ್ನೂ, ಹುಟ್ಟಿನಿಂದ ಬ್ರಾಹ್ಮಣನಾಗಿದ್ದರೂ ಇಂದ್ರನಂತೆ ಕ್ಷಾತ್ರತೇಜಸ್ಸನ್ನು ಒಳಗೊಂಡು ಎರಡನೇ ವಿಷ್ಣುವರ್ಧನ ಬಲ್ಲಾಳನ ಮಂತ್ರಿಯಾಗಿದ್ದ 'ಮಾಧವ'ನ ಶೌರ್ಯ ಪರಾಕ್ರಮಗಳನ್ನು ಬಣ್ಣಿಸುವ ಶಾಸನೋಕ್ತಿಗಳು, ಅವರು ಅಂತರ್ ಶಿಸ್ತೀಯ ಕ್ಷೇತ್ರದಲ್ಲಿ ಪರಿಣತೆಯನ್ನು 'ಯೋಗ'ದ ಮೂಲಕ ಪಡೆದಿದ್ದರೆಂಬುದನ್ನು ಸ್ಪಷ್ಟೀಕರಿಸುತ್ತವೆ.

ಮಾಗಳದ ಇನ್ನೂರು ಮಹಾಜನರಲ್ಲಿ ಹೆಗ್ಗಡೆ ಲಿಂಗಯ್ಯ, ಪುಳಿಮಯ್ಯನಾಯಕ್ಕ ಮುಂತಾದ ಬ್ರಾಹ್ಮಣೇತರರಾಗಿಯೂ ಸರ್ವಧರ್ಮ ಸಮನ್ವಯಕ್ಕೆ ಪ್ರತೀಕಗಳಂತಿದ್ದರೆಂಬುದನ್ನು ತಿಳಿಯಬಹುದಾಗಿದೆ. ಇದಲ್ಲದೆ ಯೋಗ ಪುರುಷ ಹಂಪೆಯ ಪ್ರಖ್ಯಾತ ವಿರೂಪಾಕ್ಷೇಶ್ವರ ದೇವಸ್ಥಾನದ ಪ್ರವೇಶದ್ವಾರ ಗೋಪುರ ನಿರ್ಮಾತೃ ಭಿಕ್ಷಪ್ಪಯ್ಯನವರ ತಪೋಭೂಮಿ ಸಾಧನೆಯ ಕೇಂದ್ರಬಿಂದು ಮತ್ತು ಮಹಾ ಸಮಾಧಿ ಸ್ಥಾನ ರಂಗಾಪುರವೇ ಆಗಿತ್ತೆನ್ನುವುದಕ್ಕೆ ಐತಿಹ್ಯಗಳಿವೆ. ಶಾಸನೋಕ್ತಿಯ ಸತ್ಯತೆಗೆ ಜ್ವಲಂತ ನಿದರ್ಶನವಾಗಿ ಇಂದು ಮಾಗಳದಲ್ಲಿಯೇ ನೆಲೆಸಿರುವ ಸರಸ್ವತೀ ಪುತ್ರ, ಶತಾಯುಷಿ, ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿ

ಗಳು ಮಾಗಳದ ಊರೊಡೆಯ ಪ್ರಮುಖರ, ಮಹಾಜನಗಳ ಗುಣ ಲಕ್ಷಣಗಳಿಗೆ ಜೀವಂತ ಸಾಕ್ಷಿಯಾಗಿದ್ದಾರೆ.

**ಸಹಾಯಕ ಗ್ರಂಥಗಳು :**

೧. ಯೋಗ ವೈಜ್ಞಾನಿಕ ತಾತ್ವಿಕ ಕೈಪಿಡಿ— ಡಾ|| ಕೆ. ಎನ್. ಉಡುಪ ಮತ್ತು ಪ್ರೊ. ಕೆ.ಆರ್. ಉಡುಪ

೨. ಯೋಗಾಸನಗಳು— ಟಿ. ಕೃಷ್ಣಮಾಚಾರ್ಯ

೩. S.S.I. Vol IX—part-I

೪. ಪತಂಜಲಿ ಯೋಗ ಸೂತ್ರ

೫. ಸ್ವಸಮೀಕ್ಷೆ

ಡಾ|| ಎನ್. ಎಸ್. ರಂಗರಾಜು*

# ಗಂಗರ ಕಾಲದ ಜೈನಧರ್ಮದ ಮೇಲೆ ಹೊಸಬೆಳಕು

ತಲಕಾಡು ಜಿಲ್ಲಾ ಕೇಂದ್ರವಾದ ಮೈಸೂರಿನಿಂದ ೫೮ ಕಿ. ಮೀ. ಹಾಗೂ ತಾಲೂಕು ಕೇಂದ್ರವಾದ ತಿ. ನರಸೀಪುರದಿಂದ ೨೨ ಕಿ. ಮೀ ದೂರದಲ್ಲಿ ಕಾವೇರಿ ನದಿಯ ಎಡದಂಡೆಯಲ್ಲಿರುವ ಒಂದು ಊರು. ಗಂಗರ ಕಾಲದ ರಾಜಧಾನಿಯಾಗಿ ಸುಮಾರು ಕ್ರಿ. ಶ. ಆರನೇ ಶತಮಾನದಿಂದಲೂ ಬಹಳ ಪ್ರಸಿದ್ಧವಾದ ಸ್ಥಳ. ಅಂದಿನಿಂದ ಕೆಲವು ಪ್ರಮುಖ ಯುದ್ಧಗಳು ಈ ಸ್ಥಳದಲ್ಲಿ ನಡೆದು, ಇಂದು ಒಂದಲ್ಲ ಒಂದು ಕಾರಣಕ್ಕೆ ಪ್ರಸಿದ್ಧವಾದ ಯಾತ್ರಾಸ್ಥಳವಾಗಿ ಅದು ಉಳಿದುಕೊಂಡು ಬಂದಿದೆ. ಈಗ ಇಲ್ಲಿ ನಡೆದಿರುವ ಉತ್ಖನನಗಳಿಂದ ಇನ್ನೂ ಪ್ರಸಿದ್ಧಿಯಾಗಿ ಕರ್ನಾಟಕ ರಾಜ್ಯದಲ್ಲೇ ಅತ್ಯಂತ ಪ್ರಮುಖವಾದ ಸ್ಥಳಗಳಲ್ಲೊಂದಾಗಿ ಪ್ರಸಿದ್ಧಿಯಾದರೆ ಆಶ್ಚರ್ಯಪಡಬೇಕಾದ ಸಂಗತಿಯಲ್ಲ. ಅದರಲ್ಲೂ ಇತಿಹಾಸ ಪ್ರಾರಂಭಿಕ ಕಾಲದ ನೆಲೆಗಳಲೇ ಪ್ರಮುಖವಾದ ಸ್ಥಳವಾಗಬಹುದು.

ತಲಕಾಡು ಎಂಬ ಹೆಸರು ಹೇಗೆ ಬಂತೆಂಬುದರ ಬಗ್ಗೆ ವಿದ್ವಾಂಸರಲ್ಲಿ ಅನೇಕ ಅಭಿಪ್ರಾಯಗಳಿವೆ. ಈ ಊರನ್ನು ಮೊದಲು "ಗಜಾರಣ್ಯ" ಎಂದು ಕರೆದಿರುವುದು ಕೆಲವು ಗ್ರಂಥಗಳಿಂದ ತಿಳಿದುಬರುತ್ತದೆ. ಸ್ಥಳ ಪುರಾಣದ ಪ್ರಕಾರ ಈ ಊರಿನಲ್ಲಿ "ತಲ" ಮತ್ತು "ಕಾಡ" ಎಂಬ ಇಬ್ಬರು ಬೇಡರ ಜಾತಿಗೆ ಸೇರಿದ ಸಹೋದರರು ಇಲ್ಲಿದ್ದು ಅವರಿಂದ ತಲಕಾಡೆಂಬ ಹೆಸರು ಬಂದಿತ್ತೆಂದು ತಿಳಿಯುತ್ತದೆ. ಇದನ್ನು ಮೊದಲು "ತಲವನಪುರ" ಎಂದು ಕರೆಯುತ್ತಿದ್ದರೆಂದು ಸುಮಾರು ಕ್ರಿ. ಶ. ೫೦೦ರ ಗಂಗರ ರಾಜ ಹರಿವರ್ಮನ ಒಂದು ಶಾಸನದಿಂದ ತಿಳಿದು ಬರುತ್ತದೆ. ಚೋಳರ ಆಳ್ವಿಕೆಯ ಕಾಲದಲ್ಲಿ ಅವರು ಇದನ್ನು "ರಾಜ ರಾಜಪುರ" ಎಂದು ಹೆಸರಿಸಿದರು. ಇವರ ಕಾಲದಲ್ಲಿ ಬಹಳ ಪ್ರಸಿದ್ಧವಾದ ಸ್ಥಳವಾಗಿತ್ತು. ಕ್ರಿ. ಶ. ೧೧೧೬ ರಲ್ಲಿ ಹೊಯ್ಸಳ ವಿಷ್ಣುವರ್ಧನನು ಚೋಳರ ರಾಜ್ಯಪಾಲ ಆದಿಯಮ ಎಂಬುವವನನ್ನು ಸೋಲಿಸಿ ತನ್ನ ಆಡಳಿತಕ್ಕೆ ಒಳಪಡಿಸಿಕೊಂಡನು. ಇದರಿಂದ ಇವನಿಗೆ "ತಲಕಾಡು ಗೊಂಡ" ಎಂಬ ಬಿರುದು ಸಹ ಬಂದಿತು. ತನ್ನ ವಿಜಯದ ನೆನಪಿಗಾಗಿ ಕ್ರಿ. ಶ. ೧೧೧೬–೧೭ ರಲ್ಲಿ ಗ್ರಾನೈಟ್ ಶಿಲೆಯಿಂದ ಕೀರ್ತಿನಾರಾಯಣ ದೇವಾಲಯವನ್ನು ಕಟ್ಟಿಸಿದನು. ಅಲ್ಲಿಯ ಜನ ಈ ದೇವಾಲಯವನ್ನು 'ನಡುಬೀದಿ ನಾರಾಯಣ' ಎಂದು ಕರೆಯುತ್ತಾರೆ. ಈ ಪಟ್ಟಣ ಹೊಯ್ಸಳರ ಕಾಲದಲ್ಲಿ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದು ಎರಡನೇ ರಾಜಧಾನಿಯ ಸ್ಥಾನವನ್ನು ಪಡೆದುಕೊಂಡಿತ್ತು.

ವಿಜಯನಗರ ಸಾಮ್ರಾಜ್ಯ ಪ್ರಾಬಲ್ಯಕ್ಕೆ ಬಂದ ಮೇಲೆ ತಲಕಾಡಿನಲ್ಲಿ ದಂಡನಾಯಕನಾಗಿದ್ದ ಮಾಧವ ಮಂತ್ರಿಯು ಸುಮಾರು ಕ್ರಿ. ಶ. ೧೩೪೨ರಲ್ಲಿ ಈ ಊರಿನ ಸಮೀಪದಲ್ಲಿ ಕಾವೇರಿಗೆ ಒಂದು ಅಣೆಕಟ್ಟನ್ನು ಕಟ್ಟಿಸಿದ್ದ

* ಸಂಶೋಧನಾ ಸಹಾಯಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಇಲಾಖೆ, ಮಾನಸ ಗಂಗೋತ್ರಿ, ಮೈಸೂರು-೫೭೦ ೦೦೬

ಲ್ಲದೆ ಅನೇಕ ಅಭಿವೃದ್ಧಿ ಕಾರ್ಯಗಳನ್ನೂ ಕೈಗೊಂಡನು. ಕಾಲಕ್ರಮದಲ್ಲಿ ಇದರ ಅವನತಿ ಪ್ರಾರಂಭವಾಯಿತು.

ಗಂಗ ಅರಸರ ರಾಜಧಾನಿಯಾಗಿದ್ದ ತಲಕಾಡಿನಲ್ಲಿ ಐತಿಹಾಸಿಕ ಮಹತ್ವವುಳ್ಳ ಅನೇಕ ದೇವಾಲಯಗಳಿದ್ದುದು ತಿಳಿದುಬಂದರೂ ಹೆಚ್ಚಿನ ದೇವಾಲಯಗಳು ನಾಶ ಹೊಂದಿವೆ. ಇವರ ಕಾಲದ ವಾಸ್ತುಶಿಲ್ಪ ಅವಶೇಷಗಳಾಗಿ ಮರುಳೇಶ್ವರ, ಪಾತಾಳೇಶ್ವರ, ಅರ್ಕೇಶ್ವರ, ಚೌಡೇಶ್ವರಿ ದೇವಾಲಯಗಳು ಉಳಿದುಕೊಂಡಿವೆ. ತಲಕಾಡಿನ ಅನೇಕ ಭಾಗಗಳಲ್ಲಿ ಪಾಳುಬಿದ್ದು ಹಾಳಾಗಿರುವ ಗಂಗರ ಕಾಲದ ಅನೇಕ ದೇವಾಲಯಗಳ ಭಾಗಗಳು ಇಂದಿಗೂ ಕಂಡುಬರುತ್ತವೆ. ಸಂಪೂರ್ಣವಾಗಿ ಮರಳಿನಿಂದ ಆವೃತವಾದ ಈ ತಲಕಾಡಿನಲ್ಲಿ ಉತ್ಖನನ ಮಾಡಬೇಕೆಂಬ ಉತ್ಸಾಹದಿಂದ ಅಂದಿನಿಂದ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯದ ನಿರ್ದೇಶಕರಾದ ಶ್ರೀ ಚಿರಂಜೀವಿ ಸಿಂಗ್‌ರವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಶಾಸ್ತ್ರ ವಿಭಾಗದ ಸಹಯೋಗದೊಂದಿಗೆ ಕೆಲವು ಪರಿಶೋಧನೆಗೆ ಪ್ರೋತ್ಸಾಹ ನೀಡಿದರು. ಅನಂತರ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ಶಾಸ್ತ್ರದ ಹಿರಿಯ ಪ್ರಾಧ್ಯಾಪಕರಾದ ಡಾ|| ಎ. ವಿ. ನರಸಿಂಹಮೂರ್ತಿ ಮತ್ತು ಈಗಿನ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯದ ನಿರ್ದೇಶಕರಾದ ಡಾ|| ಡಿ. ವಿ. ದೇವರಾಜ್‌ರವರ ಮಾರ್ಗದರ್ಶನದಲ್ಲಿ ನಡೆಸಿದ ಉತ್ಖನನದಲ್ಲಿ ಮರಳುರಾಶಿಯ ಕೆಳಗೆ ಅಡಗಿರುವ, ನಿಖರವಾಗಿ ತಲಕಾಡಿನ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಅನೇಕ ಅವಶೇಷಗಳು, ಕಟ್ಟಡಗಳು ಮತ್ತು ನಾನಾ ಮಾಹಿತಿಗಳು ಹೊರಬಂದವು. ಹೀಗೆ ಉತ್ಖನನದಲ್ಲಿ ಹೊರತೆಗೆದ ಅನೇಕ ಅವಶೇಷಗಳಲ್ಲಿ ಜೈನಬಸದಿಯೂ ಒಂದು.

ತಲಕಾಡಿನ ಗಂಗರು ಜೈನ ಧರ್ಮಕ್ಕೆ ಸಾಕಷ್ಟು ಪ್ರೋತ್ಸಾಹ ಕೊಟ್ಟಿದ್ದರು ಮತ್ತು ಹತ್ತಾರು ಜೈನ ಬಸದಿಗಳನ್ನು ನಿರ್ಮಾಣ ಮಾಡಿದ್ದರು. ಇತ್ತೀಚೆಗೆ ಐ. ಕೆ. ಶರ್ಮಾರವರು ನಡೆಸಿದ ಸಂಶೋಧನೆಯಿಂದಾಗಿ ಗಂಗರ ಕಾಲದ ಅನೇಕ ಬಸದಿಗಳು ಬೆಳಕಿಗೆ ಬಂದಿದೆ. ಇವರು ಜೈನ ಬಸದಿಗಳನ್ನು ವಿಶೇಷವಾಗಿ ೧. ಗುಹಾಲಯಗಳು, ೨. ಇಟ್ಟಿಗೆಯ ಕಟ್ಟಡಗಳು ಮತ್ತು ೩. ಕಲ್ಲಿನಿಂದ ಕಟ್ಟಲಾದ ಕಟ್ಟಡಗಳು ಎಂದು ವಿಂಗಡಿಸಿದ್ದಾರೆ. ಮೊದಲನೆಯ ಗುಂಪಿಗೆ ಉದಾಹರಣೆಯಾಗಿ ಕೋಲಾರ ಜಿಲ್ಲೆಯ ನಂದಿ, ಮಂಡ್ಯ ಜಿಲ್ಲೆಯ ತಿಪ್ಪೂರು ಮುಂತಾದವುಗಳು, ಎರಡನೆಯ ಗುಂಪಿಗೆ ಅಂದರೆ ಇಟ್ಟಿಗೆಯಿಂದ ಕಟ್ಟಿದ ಬಸದಿಗಳಿಗೆ ಉದಾಹರಣೆಗಳು ಬಹಳ ಕಡಿಮೆ, ಮೂರನೆಯ ಗುಂಪಿಗೆ ಶ್ರವಣಬೆಳಗೊಳದ ಬಸದಿಗಳು ಸೇರುತ್ತವೆ.

ಈ ದೃಷ್ಟಿಯಿಂದ ತಲಕಾಡಿನ ಇತ್ತೀಚಿನ ಉತ್ಖನನದಲ್ಲಿ ಪತ್ತೆಹಚ್ಚಲಾದ ಜೈನ ಬಸದಿಯು ಅತ್ಯಂತ ಪ್ರಮುಖವೆನಿಸುತ್ತದೆ. ಅಂದರೆ ಅಲ್ಪ ಸ್ವಲ್ಪ ಉಳಿದಿರುವ ಗಂಗರ ಕಾಲದ ಇಟ್ಟಿಗೆಯಿಂದ ಕಟ್ಟಿದ ಜೈನಬಸದಿ ಇದು ಎಂದು ಹೇಳಿದರೆ ತಪ್ಪಾಗಲಾರದು.

ಹೊಯ್ಸಳ ವಿಷ್ಣುವರ್ಧನ ಕಟ್ಟಿಸಿರುವ ಕೀರ್ತಿನಾರಾಯಣ ದೇವಾಲಯದ ವಾಯುವ್ಯ ದಿಕ್ಕಿಗೆ ಸುಮಾರು ಒಂದು ಕಿ. ಮೀ. ದೂರದಲ್ಲಿ ಒಂದು ಮಣ್ಣಿನ ದಿಬ್ಬವಿದ್ದು, ಈ ದಿಬ್ಬವನ್ನು ಸ್ಥಳೀಯ ಜನರು ಬಸದಿ ಮಾಳವೆಂದು ಕರೆಯುತ್ತಿದ್ದರು. ಅರಣ್ಯ ಇಲಾಖೆಯವರು ಈ ದಿಬ್ಬದ ಮಧ್ಯದಲ್ಲಿ ಇದ್ದ ೧.೨೫ ಮೀಟರ್‌ನಷ್ಟು ಉದ್ದವಾಗಿರುವ ಜೈನ ವಿಗ್ರಹವನ್ನು ಪಕ್ಕದಲ್ಲಿರುವ ಮರದ ಕೆಳಗಡೆಗೆ ಸಾಗಿಸಿದ್ದರು. ಸ್ಥಳೀಯರ ಈ ಹೇಳಿಕೆಯಿಂದ ಪ್ರಭಾವಿತರಾದ ನಮ್ಮ ಉತ್ಖನನ ತಂಡ ಇಲ್ಲಿ ಜೈನ ಬಸದಿ ಇರಬಹುದೇ ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ಉತ್ಖನನ ಕಾರ್ಯ ಪ್ರಾರಂಭಿಸಿತು. ಉತ್ಖನನ ಪೂರ್ಣಗೊಂಡ ಮೇಲೆ ಸ್ಥಳೀಯ ಪರಂಪರೆಯ ಮಾಹಿತಿ ಉತ್ಖನನದಲ್ಲಿ ಎಷ್ಟೊಂದು ಮಹತ್ವದ ಪಾತ್ರ ವಹಿಸುತ್ತದೆ ಎಂಬುದರ ಅರಿವು ಉಂಟಾಯಿತು.

ಈ ಜೈನ ದೇವಾಲಯ ವಿಶಾಲವಾದ ಇಟ್ಟಿಗೆಯ ಕಟ್ಟಡವಾಗಿದ್ದು ೨೬ ಮೀ. ಉದ್ದ ೨೧ ಮೀ. ಅಗಲವಾಗಿದ್ದು ಪೂರ್ವಾಭಿಮುಖವಾಗಿದೆ. ಇದರ ಗರ್ಭಗೃಹದ ಭಾಗವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಮಧ್ಯದ ಮುಖ್ಯ ಗರ್ಭಗೃಹ, ಇದು ೩.೨೫ ಮೀ. ಅಗಲ, ೩.೫ ಮೀ. ಉದ್ದವಾಗಿದೆ. ಇದರ ಎಡ ಮತ್ತು ಬಲ ಭಾಗಗಳಲ್ಲಿ ಇನ್ನೆರಡು ಗರ್ಭಗೃಹ

ಗಳಿವೆ. ಇವುಗಳ ಉದ್ದ ೩.೨೫ ಮೀ. ಇದ್ದು ಅಗಲ ಮಾತ್ರ ಚಿಕ್ಕದಾಗಿ ೧.೮೫ ಮೀ. ಇದೆ. ಈ ಗರ್ಭಗೃಹ ಗಳ ಮೇಲ್ಛಾವಣಿಗೆ ಆಧಾರವಾಗಿ ಕಟ್ಟಿದ್ದ ಕಂಬಗಳ ಕೆಳಭಾಗ ಮಾತ್ರ ಉಳಿದುಕೊಂಡಿವೆ. ಇವು ಪ್ರತಿ ಗರ್ಭಗೃಹಗಳಿಗೆ ಆರು ಕಂಬಗಳಂತೆ ಇದ್ದಿರಬಹುದು. ಪೂರ್ಣ ದೇವಾಲಯದ ಗೋಡೆಯ ಎತ್ತರ ೧.೨೫ ಮೀ ಇದೆ. ಮಧ್ಯದ ಗರ್ಭಗೃಹದ ಮುಂದೆ ಒಂದು ಕಲ್ಲಿನ ಪೀಠವಿದೆ. ಈ ಕಲ್ಲಿನ ಪೀಠದ ಗುಳಿಗೆ ಮರದ ಕೆಳಗೆ ಇಟ್ಟಿರುವ ಪಾರ್ಶ್ವನಾಥ ವಿಗ್ರಹದ ಕೆಳಗೆ ಹೊರಚಾಚಿ ಕೊಂಡಿರುವ ಭಾಗ ಸರಿಯಾಗಿ ಹೊಂದಿಕೊಳ್ಳುತ್ತದೆ. ಅಂದರೆ ಪೀಠದ ಕುಳಿ ೧೯ ಸೆಂ. ಮೀ. ಇದ್ದು ವಿಗ್ರಹದ ಕೆಳತುದಿ ೧೮ ಸೆಂ.ಮೀ. ನಷ್ಟು ದಪ್ಪವಾಗಿದೆ. ಮುಖ್ಯ ಗರ್ಭಗೃಹದ ಅಕ್ಕಪಕ್ಕಗಳಲ್ಲಿರುವ ಗರ್ಭಗೃಹಗಳು ಯಕ್ಷ ಮತ್ತು ಯಕ್ಷಿಯರ ಗರ್ಭಗೃಹಗಳಾಗಿರಬಹುದು. ಡಾ : ಅ. ಸುಂದರರವರ ಪ್ರಕಾರ ಅದು ಜೈನ ಮುನಿ ಗಳ ತಪಸ್ಸಿನ ಸ್ಥಳವಾಗಿದ್ದರೂ ಇರಬಹುದು.

ಇದರ ಮುಂಭಾಗದಲ್ಲಿ ಇನ್ನೊಂದು ಅಂಕಣವಿದೆ. ಇದು ಏನು ಮತ್ತು ಇದರ ಉದ್ದೇಶವೇನು ಎಂಬುದು ಇನ್ನೂ ತಿಳಿದಿಲ್ಲ. ಇದು ೧.೬೦ ಮಿ ಅಗಲವಾಗಿದ್ದು ೪.೮೦ ಮೀ ಉದ್ದವಾಗಿದೆ. ಇದರ ಮುಂಭಾಗದಲ್ಲಿ ಇದಕ್ಕೆ ಸೇರದೇ ಪ್ರತ್ಯೇಕವಾಗಿರುವ ಚೌಕಾ ಕಾರದ ಮಂಟಪವಿದೆ. ಇದರ ಅಗಲ ಮತ್ತು ಉದ್ದ ೩.೯೦ ಮೀ. ಇದೆ. ಈ ಮೂರು ಭಾಗಗಳನ್ನು ಒಂದೇ ತರಹದ ಇಟ್ಟಿಗೆಗಳಿಂದ ಕಟ್ಟಲಾಗಿದೆ. ಈ ಇಟ್ಟಿಗೆಗಳ ಅಳತೆ ಸುಮಾರಾಗಿ ಒಂದೇ ಆಗಿದ್ದು ೧೮ ರಿಂದ ೨೪ ಸೆಂ. ಮೀ. ಉದ್ದ ೧೫ ರಿಂದ ೧೮ ಸೆಂ.ಮೀ. ಅಗಲ ಇದ್ದು ದಪ್ಪವು ೦೫ ರಿಂದ ೦೭ ಸೆಂ.ಮೀ. ಇದೆ. ಪ್ರತಿಯೊಂದು ಇಟ್ಟಿಗೆಯನ್ನು ಚೆನ್ನಾಗಿ ಸುಟ್ಟಿದ್ದಾರೆ. ಮತ್ತು ಇವು ಗಳನ್ನು ಸುಡುವುದಕ್ಕೆ ಮೊದಲು ಅವುಗಳ ಮೇಲೆ ಇಟ್ಟಿಗೆ ಮಾಡುವವರು ತಮ್ಮ ನಾಲ್ಕು ಬೆರಳುಗಳನ್ನು ಅವುಗಳ ಮೇಲೆ ಊರಿ ಸ್ವಲ್ಪ ಬಾಗಿದಂತೆ ಒಂದು ಕೊನೆಯಿಂದ ಮತ್ತೊಂದು ಕೊನೆಗೆ ಎಳೆದಿದ್ದಾರೆ. ಬಹುಶಃ ಇವರು ಇಟ್ಟಿಗೆಗಳು ಸರಿಯಾದ ಬಿಗಿಯಿಂದ ಕೂರಿಸಲೆಂದು ಹೀಗೆ ಮಾಡಿರಬಹುದು. ಈ ಇಟ್ಟಿಗೆಗಳನ್ನು ಒಂದರ ಮೇಲೊಂದು ಸೇರಿಸುವಾಗ ಕೇವಲ ಮಣ್ಣನ್ನು ಮಾತ್ರ ಉಪಯೋಗಿಸಿರುವುದು ಕಂಡುಬರುತ್ತದೆ. ಈಗಲೂ ಈ ಮಣ್ಣಿಗೆ ಸ್ವಲ್ಪ ನೀರು ಸೇರಿಸಿದರೆ ತನ್ನ ಜಿಗುಟುತನವನ್ನು ತೋರಿಸುತ್ತದೆ. ಇಲ್ಲಿ ಕಟ್ಟದ ಗೋಡೆಗಳ ದಪ್ಪ ಒಂದು ಮೀಟರ್‌ಗಿಂತ ಸ್ವಲ್ಪ ಸಣ್ಣದಾಗಿದೆ (೦.೮೫ ಸೆಂ.ಮೀ).

ಮೇಲೆ ಹೇಳಿದ ಮೂರು ಭಾಗಗಳಿಗೂ ಸೇರಿ ದಂತಹ ಹೊರವಲಯದ ಸುಮಾರು ಒಂದು ಮೀಟರ್ ದಪ್ಪದ ಇನ್ನೊಂದು ಗೋಡೆ ಇದ್ದು ಇದು ಬಸದಿಯ ಸುತ್ತಲೂ ಬರುತ್ತದೆ. ಇದರಿಂದಾಗಿ ಗರ್ಭಗೃಹ ಮತ್ತು ಮಂಟಪದ ಸುತ್ತಲೂ ಒಂದು ಮೀಟರ್ ಅಗಲದ ಪ್ರದಕ್ಷಿಣಾಪಥವೇರ್ಪಟ್ಟಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಇಲ್ಲಿ ಬಳಸಲಾಗಿರುವ ಇಟ್ಟಿಗೆಗಳ ಅಳತೆ ಗರ್ಭಗೃಹದಲ್ಲಿ ಬಳಸಲಾಗಿರುವ ಇಟ್ಟಿಗೆಯ ಅಳತೆಗೆ ಸರಿಸಮಾನವಾಗಿದ್ದು ಬೆರಳುಗಳ ಗುರುತು ಸಹ ಇದೆ. ಆದರೆ ಇಲ್ಲಿ ಕಟ್ಟಡವನ್ನು ಕಟ್ಟಲು ಸುಣ್ಣದಗಾರೆಯನ್ನು ಬಳಸಲಾಗಿದೆ. ಆದುದರಿಂದ ಇದು ನಂತರದ ಗೋಡೆ ಇರಬಹುದೆ ? ಎಂಬ ಸಂದೇಹಕ್ಕೆ ದಾರಿ ಮಾಡಿಕೊಡು ತ್ತದೆ. ಒಳಗಡೆಯ ಕಟ್ಟಡದ ಕೆಳಭಾಗದಲ್ಲಿ ೩೫ ರಿಂದ ೪೦ ಸೆಂ. ಮೀ. ದಪ್ಪದಷ್ಟು ನದಿಯ ಮರಳನ್ನು ತಂದು ಹಾಕಿ (ತಲಕಾಡಿನ ಮರಳಲ್ಲ) ಅದರ ಮೇಲೆ ದಪ್ಪ ಹಾಗೂ ಸಣ್ಣ ಕಲ್ಲಿನ ಚಕ್ಕೆಗಳನ್ನು ಹಾಕಿ ಚೆನ್ನಾಗಿ ಕುಟ್ಟಿದ್ದಾರೆ. ಆದರೆ ಹೊರಗಡೆಯ ಗೋಡೆಯ ಕೆಳಗೆ ದೊಡ್ಡ ದೊಡ್ಡ ಕಲ್ಲಿನ ಚಪ್ಪಡಿಗಳನ್ನು ಬುನಾದಿಯಾಗಿ ಬಳಸಿದ್ದಾರೆ. ಇದು ಮುಖ್ಯವಾಗಿ ಗಮನಿಸಬೇಕಾದ ಅಂಶ.

ಹೊರಗೋಡೆಯ ಪಕ್ಕದಲ್ಲಿ ಅಲ್ಲಲ್ಲಿ ಕಲ್ಲಿನಲ್ಲಿ ಕೆತ್ತ ಲಾದ ಕುಮುದಗಳು ಬಿದ್ದಿರುವುದು ಕಂಡುಬರುತ್ತದೆ. ಇಲ್ಲಿ ಮುಂಭಾಗದಲ್ಲಿ ಬಿದ್ದಿರುವ ಸಿಂಹದ ದೇಹ ಮತ್ತು ಕಾಲುಗಳನ್ನು ಹೊಂದಿರುವ ಒಂದು ಉಬ್ಬು ಕೆತ್ತನೆಯ ಪಟ್ಟಿಕೆ ಗಂಗರ ಕಾಲದ ಮರಳೇಶ್ವರ ದೇವಾಲಯದ ಪಟ್ಟಿಕೆಗಳನ್ನು ಹೋಲುತ್ತದೆ. ಆದುದರಿಂದ ಇವುಗಳು ಗಂಗರ ಕಾಲದ್ದೆಂದು ಹೇಳಲು ಯಾವ ಸಂಶಯವೂ ಇಲ್ಲ. ಕುಮುದ ಪಟ್ಟಿಕೆಗಳು, ಅಲಂಕಾರ ಪಟ್ಟಿಕೆಗಳು ಇಲ್ಲಿ ದಿಕ್ಕಾಪಾಲಾಗಿ ಬಿದ್ದಿರುವು ದಕ್ಕೆ ಕಾರಣವೇನು ಎಂಬುದನ್ನು ವಿಮರ್ಶೆ ಮಾಡ ಬೇಕಾಗಿದೆ.

ಈ ಕಟ್ಟಡದ ಮುಂಭಾಗದಲ್ಲಿರುವ ಕಲ್ಲಿನ ಪಾರ್ಶ್ವನಾಥನ ವಿಗ್ರಹ ಕಗ್ಗಲ್ಲಿನಿಂದ ಮಾಡಿರುವಂತಹದ್ದು. ಇದರ ಎತ್ತರ ೧.೨೫ ಮೀ. ಇದೊಂದು ಉತ್ತಮವಾದ ಉಬ್ಬು ಕೆತ್ತನೆಯ ಶಿಲ್ಪ. ಕಾಯೋತ್ಸರ್ಗ ಮುದ್ರೆಯಲ್ಲಿ ನಿಂತಿರುವ ಪಾರ್ಶ್ವನಾಥನ ತಲೆಯ ಮೇಲೆ ಐದು ಹೆಡೆಗಳ ಸರ್ಪವಿದೆ. ಇದರ ಎಡಭಾಗದಲ್ಲಿ ಸುಮಾರು ಅರ್ಧ ಪ್ರಮಾಣದ ಯಕ್ಷಿಯ ಉಬ್ಬು ಚಿತ್ರವಿದೆ. ಆಕೆಯ ಕೈಯಲ್ಲಿ ಎತ್ತರವಾದ ಛತ್ರಿ ಇದ್ದು ಅದು ಹಾವಿನ ಹೆಡೆಗಳ ಮೇಲೆ ಇರುವುದು ಗಮನಿಸಬೇಕಾದ ಅಂಶವಾಗಿದೆ. ಯಕ್ಷಿಯ ಉಡುಗೆಯನ್ನು ಶಿಲ್ಪಿ ಬಹಳ ಚೆನ್ನಾಗಿ ತೋರಿಸಿದ್ದಾನೆ. ಸಾಮಾನ್ಯವಾಗಿ ಇಂತಹ ತೊಡುಗೆಯನ್ನು ಬಾದಾಮಿ ಚಾಲುಕ್ಯರ ಕಾಲದಲ್ಲಿ ಕಾಣುತ್ತೇವೆ. ಈ ಆಧಾರದ ಮೇಲೆ ನೋಡುವುದಾದರೆ ಶೈಲಿಯ ದೃಷ್ಟಿಯಿಂದ ಈ ವಿಗ್ರಹ ಸುಮಾರು ಏಳನೇ ಶತಮಾನವಿರಬಹುದೆಂದು ಊಹಿಸಬಹುದು.

ಮಡಕೇರಿ ತಾಮ್ರ ಶಾಸನದ ಪ್ರಕಾರ ಗಂಗರ ಅವಿನೀತನು (ಕ್ರಿ. ಶ. ೪೬೯–೫೨೯) ತಲಕಾಡಿನಲ್ಲಿರುವ ಶ್ರೀ ವಿಜಯಜಿನಾಲಯಕ್ಕೆ ದತ್ತಿಯನ್ನು ಕೊಟ್ಟನು ಎಂದು ತಿಳಿದುಬರುತ್ತದೆ. ಆ ದುದರಿಂದ ಉತ್ಖನನದಿಂದ ಸಿಕ್ಕಿರುವ ಈ ಜೈನ ಬಸದಿ ಶಾಸನದಲ್ಲಿ ಹೇಳಿರುವ ಜಿನಾಲಯವೇ ಎಂಬುದನ್ನು ಕೂಡ ಸಮರ್ಥಿಸಬೇಕಾಗುತ್ತದೆ. ಈ ಮೇಲಿನ ಶಾಸನದ ಮಾಹಿತಿಯನ್ನು ಒಪ್ಪುವುದಾದರೆ ಅವಿನೀತನ ಕಾಲದಲ್ಲಿಯೇ ಈ ಜಿನಾಲಯವು ಇದ್ದ ಪಕ್ಷದಲ್ಲಿ ಇದರ ಕಾಲವನ್ನು ಕ್ರಿ. ಶ. ಐದನೇ ಶತಮಾನದ ಕೊನೆ ಹಾಗೂ ಆರನೇ ಶತಮಾನವೆಂದು ಹೇಳಬೇಕಾಗುತ್ತದೆ. ಹಾಗಾದರೆ ನಮಗೆ ತಿಳಿದಿರುವಂತೆ ಇದೇ ಗಂಗರ ಕಾಲದ ಅತ್ಯಂತ ಪ್ರಾಚೀನವಾದ ಜೈನ ದೇವಾಲಯವಾಗಿ ಪರಿಣಮಿಸುತ್ತದೆ.

ಸಧ್ಯಕ್ಕೆ ಇದರ ಬಗ್ಗೆ ಇನ್ನು ಹೆಚ್ಚಿನ ಸಂಶೋಧನೆಯನ್ನು ನಡೆಸಬೇಕಾಗಿದೆ. ಕೊನೆಯದಾಗಿ ಹೇಳಬೇಕೆಂದರೆ ಇದುವರೆವಿಗೂ ಗಂಗರಾಜರ ರಾಜಧಾನಿಯಾದ ತಲಕಾಡಿನಲ್ಲಿ ಒಂದು ಜೈನ ದೇವಾಲಯ ದೊರಕಿರಲಿಲ್ಲ. ಇದೊಂದು ಸೋಜಿಗದ ಸಂಗತಿಯಾಗಿತ್ತು. ಈ ಉತ್ಖನನ ಇದನ್ನು ಚಿರಕಾಲ ನಿವಾರಿಸುತ್ತದೆ.

ಈ ಲೇಖನ ಬರೆಯಲು ಮತ್ತು ಈ ಉತ್ಖನನದಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸಿ ಸಹಕರಿಸಿದ ರಾಜ್ಯ ಪ್ರಾಚ್ಯವಸ್ತು ವಸ್ತುಸಂಗ್ರಹಾಲಯದ ಶ್ರೀಯುತ ಸ್ವಾಮಿರವರಿಗೂ ಹಾಗೂ ಡಾ : ಎಂ. ಎಸ್. ಕೃಷ್ಣಮೂರ್ತಿರವರಿಗೂ ಕೃತಜ್ಞತೆಗಳು ಸಲ್ಲುತ್ತವೆ.

ಡಾ|| ಚೆನ್ನಕ್ಕ ಪಾವಟೆ

# ಬಂಕಾಪುರ ಕದಂಬರು: ವರುಣಶಿವ ಪಂಡಿತ

ಕದಂಬರರು ಕರ್ನಾಟಕದ ಪ್ರಾಚೀನತಮ ರಾಜ ಮನೆತನ. ಹಾನುಗಲ್ಲ ಕದಂಬರನ್ನು ಕುರಿತು ಮೊದಲು ಪ್ರಸ್ತಾಪ ಮಾಡಿದವರು ಪ್ಲೀಟ್ ಮತ್ತು ಮೊರೇಸ್[1] ಆ ಬಳಿಕ ಅನೇಕ ಕದಂಬ ಕುಟುಂಬಗಳನ್ನು ಶೋಧಿಸುತ್ತ, ಇವರು ಕಾಲಕಾಲಕ್ಕೆ ಬೇರೆ ಬೇರೆ ಪ್ರದೇಶಗಳಲ್ಲಿ ಗೋವೆಯ ಕದಂಬರು, ಹಾನಗಲ್ಲ ಕದಂಬರು, ಬೇಲೂರು ಕದಂಬರು,[2] ಉಚ್ಚಂಗಿ ಕದಂಬರು,[3] ನಾಗರಖಂಡದ ಕದಂಬರು,[4] ಕಳಿಂಗದ ಕದಂಬರು,[5] ಬಯಲುನಾಡಿನ ಕದಂಬರು,[6] ಕರಡೀ ಕಲ್ಲಿನ ಕದಂಬರು,[7] ಚಂದಾವರದ ಕದಂಬರು,[8] ನೂರುಂಬಾಡದ ಕದಂಬರು,[9] ಇತ್ಯಾದಿ ಹೆಸರಿನಿಂದ ಇತಿಹಾಸದಲ್ಲಿ ಕಾಣಿಸಿಕೊಂಡಿರುವರು. ಇವರಲ್ಲಿ 'ಬಂಕಾಪುರ ಕದಂಬರು' ಎಂಬ ಹೊಸ ಮನೆತನವನ್ನು ಡಾ|| ಬಿ.ಆರ್. ಗೋಪಾಲ ಅವರು ಶೋಧಿಸಿ ತಮ್ಮ 'ಮೈನರ್ ಡೈನೆಸ್ಟೀಸ್ ಆಫ್ ಸೌಥ ಇಂಡಿಯಾ' (ಪು-೩೭) ಕೃತಿಯಲ್ಲಿ ಅವರ ಬಗ್ಗೆ ಬರೆದಿದ್ದಾರೆ.[10] ನಾನೂ ಒಳಗೊಂಡಂತೆ ಅನೇಕರು ಈ ಅಭಿಪ್ರಾಯ ವನ್ನು ಪುನರುಚ್ಚರಿಸುತ್ತ ಬಂದಿದ್ದೇವೆ. ಆದರೆ ಇದು ಎಷ್ಟರಮಟ್ಟಿಗೆ ಸತ್ಯ ? ಎಂಬುದು ಇತ್ತೀಚಿನ ಪ್ರಶ್ನೆ ಡಾ|| ಬಿ. ಆರ್. ಗೋಪಾಲರು ಮಯೂರವರ್ಮ, ಹರಿಕೇಸರಿ, ತೋಯಿಮದೇವ ಇವರನ್ನು ಬಂಕಾಪುರದ ಕದಂಬರೆಂದು ಕರೆದಿರುವರೇ ಹೊರತು ಅದಕ್ಕೆ ಗಟ್ಟಿ ಯಾದ ಆಧಾರಗಳನ್ನು ಕೊಟ್ಟಿಲ್ಲ.

ನಮಗೆ ಗೊತ್ತಿರುವಂತೆ ಹಾನುಗಲ್ಲ ೫೦೦ರ ಪ್ರಾಂತವನ್ನು ಆಳುತ್ತಿದ್ದವರು ಹಾನಗಲ್ಲ ಕದಂಬರು. ಇವರ ಪ್ರದೇಶವ್ಯಾಪ್ತಿಗೆ ಬಂಕಾಪುರವು ಒಳಪಟ್ಟಿದ್ದಿತು. ಬಂಕಾಪುರದಿಂದ ಹಾನುಗಲ್ಲ ಸುಮಾರು ೩೫ ರಿಂದ ೪೦ ಕಿ.ಮೀ. ಅಂತರದಲ್ಲಿದೆ ಎಂಬುದನ್ನು ಇಲ್ಲಿ ಗಮನಿಸ ಬೇಕು. ಬಂಕಾಪುರವು ಕದಂಬರ ರಾಜಧಾನಿ

---

* ಉಪನ್ಯಾಸಕರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೫೮೦ ೦೦೩.

1 ಕದಂಬಕುಲ, ಮೊರೇಸ್ ೧೯೩೫.

2 ಜರ್ನಲ್ ಆಫ್ ದಿ ಬಾಂಬೆ ಬ್ರ್ಯಾಂಚ್ ರಾಯಲ್ ಏಸಿಯಾಟಿಕ್ ಸೊಸೈಟಿ. ಸಂ-೯.

3 ಅಜವರ್ಮನು ಈ ಶಾಖೆಯ ಮೊದಲ ದೊರೆ.

4 ಬಮ್ಮರಸ ಕದಂಬನು ಈ ಶಾಖೆಯ ಮೊದಲ ದೊರೆ.

5 ಪಂಚವಿಷಯಾಧಿಪತಿ ಮಹಾಮಂಡಲೇಶ್ವರ ರಾಣಕ ಶ್ರೀ ಭಾಮಖೇಡಿ ಈ ಶಾಖೆಯ ಮೊದಲನೆಯ ದೊರೆ.

6 ಬಯಲುನಾಡು ೫೩೦೦ರ ಆಡಳಿತ ಕ್ಷೇತ್ರ : ಪುನ್ನಾಟ ಅಥವಾ ಹದಿನಾಡು, ಇದರ ರಾಜಧಾನಿ ಕೀರ್ತಿಪುರ.

7 ಮೈನರ್ ಡೈನೇಸ್ಟೀಸ್—ಕರ್ನಾಟಕ ಪು—೦

8 —ಅದೇ— ಪು—೭೪

9 —ಅದೇ— ಪು—೬೭

10 —ಅದೇ— ಪು—೩೭

ಯಾಗಿದ್ದಿತು ಎಂದು ವಿದ್ವಾಂಸರು ಭಾವಿಸಲು ಇರುವ ಒಂದೇ ಒಂದು ಆಧಾರವೆಂದರೆ ಶಾಸನಗಳಲ್ಲಿ ಬರುವ 'ಹಾನುಂಗಲ್ಲಯಿನೂಱಱ ಸುಂಕದಧಿಕಾರಿ ಲಕ್ಷ್ಮೀಗಧೀಶ್ವರನಾಗಿ ಶ್ರೀ ರಾಜಧಾನಿ ಪಟ್ಟಣಂ ಬಂಕಾಪುರ,[11] "ಹಾನುಂಗಲ್ಲ ನಾಡೊಳಗಣ ಶ್ರೀ ಮದಿಂದ್ರವಲ್ಲಭ ರಾಜಧಾನಿ ಪಟ್ಟಣಂ ಬಂಕಾಪುರ.[12] ಎಂದು ತೋರುತ್ತದೆ. ಇದರ ಅರ್ಥ ರಾಷ್ಟ್ರಕೂಟ ಇಂದ್ರನಿಗೆ ಒಂದು ಕಾಲಕ್ಕೆ ಇದು ರಾಜಧಾನಿಯಾಗಿದ್ದಿತೆಂದು ಹೇಳಬಹುದೇ ಹೊರತು ಕದಂಬರಿಗೆ ರಾಜಧಾನಿಯಾಗಿತ್ತೆಂದು ಹೇಳುವ ಹಾಗಿಲ್ಲ. ರಾಷ್ಟ್ರಕೂಟ ಇಂದ್ರನಿಗೂ ಬಂಕಾಪುರಕ್ಕೂ ರಾಜಕೀಯ ಸಂಬಂಧವಿದ್ದುದನ್ನು ಮೇಲಿನ ವಾಕ್ಯ ತಿಳಿಸುವುದಲ್ಲದೇ ಅಲ್ಲಿರುವ ಇಂದ್ರೇಶ್ವರ ದೇವಸ್ಥಾನವೂ ಆತನ ಧಾರ್ಮಿಕ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಬಂಕಾಪುರವು ಹತ್ತನೆಯ ಶತಮಾನದಲ್ಲಿ ರಾಷ್ಟ್ರಕೂಟ ಇಂದ್ರನ ರಾಜಧಾನಿಯಾಗಿತ್ತು ಎಂದು ಹೇಳಬಹುದೇ ಹೊರತು ಕದಂಬರ ರಾಜಧಾನಿಯಾಗಿದ್ದಿತೆಂದು ಹೇಳಲು ನಮಗೆ ನೇರವಾದ ಆಧಾರಗಳಿಲ್ಲ.

ಒಂದು ವೇಳೆ ಇದು ಪುಲಿಗೆಱೆ ಮುನ್ನೂರು, ಬೆಳುವಲ ಮುನ್ನೂರುಗಳಿಗೆ ಒಂದು ಶಾಶ್ವತ ಪ್ರಾಂತವಾಗಿದ್ದರೆ ಬಂಕಾಪುರದ ಮುಂದೆ ಅಂಕಿಯ ಸೂಚನೆಯಾಗಲಿ, ಕಂಪಣ ಮಂಡಲವೆಂಬ ವಿಶೇಷಣವಾಗಲಿ ಕಾಣಿಸಿಕೊಳ್ಳಬೇಕಿತ್ತು. ಅಂಥ ಯಾವ ಉದಾಹರಣೆಗಳೂ ನಮಗೆ ಸಿಕ್ಕಿಲ್ಲ. ಹೀಗಿದ್ದಾಗ ಬಂಕಾಪುರ ಪ್ರದೇಶವನ್ನು ಒಂದು ರಾಜ್ಯವೆಂದೂ, ಅದರ ರಾಜಧಾನಿ ಬಂಕಾಪುರವೆಂದೂ, ಅದನ್ನು ಆಳುತ್ತಲಿದ್ದವರು ಕದಂಬರೆಂದು ಹೇಳುವುದು ದುಸ್ತರವಾಗುತ್ತದೆ.

ಒಂದು ಮಾತು ನಿಜ ; ರಾಷ್ಟ್ರಕೂಟ ಇಂದ್ರನ ಹೆಸರಿನಲ್ಲಿ ಸ್ಥಾಪಿತವಾದವು ಬಂಕಾಪುರದ ಇಂದ್ರೇಶ್ವರ ಗೇರಿ.[13] ಇಂದ್ರೇಶ್ವರಪುರ[14] ಹಾಗೂ ಇಂದ್ರೇಶ್ವರ ದೇವಸ್ಥಾನ.[15] ಚಾಲುಕ್ಯ ತ್ರೈಲೋಕ್ಯಮಲ್ಲ (ಒಂದನೇ ಸೋಮೇಶ್ವರ), ಭುವನೈಕಮಲ್ಲ (ಇಮ್ಮಡಿ ಸೋಮೇಶ್ವರ) ಹಾಗೂ ತ್ರಿಭುವನಮಲ್ಲ (ಆರನೇ ವಿಕ್ರಮಾದಿತ್ಯ) ಈ ಮೂವರು ದೊರೆಗಳ ಕಾಲದಲ್ಲಿಯೂ ಇಂದ್ರೇಶ್ವರ ದೇವಸ್ಥಾನದ ಖ್ಯಾತಿ ಹಬ್ಬಿತ್ತು. ಭುವನೈಕಮಲ್ಲನ ರಾಜಗುರುವೆನಿಸಿದ ರಾಜಗುರುದೇವ ವರುಣಶಿವಪಂಡಿತ 'ಶ್ರೀಮದ್ಬಂಕಾಪುರದಿಂದ್ರೇಶ್ವರ ದೇವರ್ಗಾಳ್ವಪನ್ನೆರಡು ಬಾಡಂ' ಆಳುತ್ತಲಿದ್ದ. ಕ್ರಿ.ಶ. ೧೦೪೫ರ ಕೋಳೂರು ಶಾಸನ ಇವರನ್ನು 'ಸ್ವಸ್ತಿ ಯಮನಿಯಮ ಸ್ವಾಧ್ಯಾಯಧ್ಯಾನಧಾರಣ ಪ್ರಾಣಾಯಾಮ ಪ್ರತ್ಯಾಹಾರ ಜಪಸಮಾಧಿ ಸಂಪನ್ನರ್ ಈಶ್ವರ ಪಾದ ಕಮಲಭೃಂಗ, ಸಾಹಸೋತ್ತುಂಗಾಶ್ರಿತ ಜನ ಕಲ್ಪವೃಕ್ಷ, ಶರಣಾಗತಸುರಕ್ಷ, ನುಡಿದಂತೆ ಮಾರ್ಪ ಕುರೆಕೂರ್ಪಂ ಪ್ರತಿಸನ್ನಮೇರುಮೇಕಾಂಗವೀರ ಅಸಂದುಧೀರಂ ವೀರಾವತಾರಂ, ವೀರಚೂಡಾಮಣಿ, ಗೋತ್ರ ಚಿನ್ತಾಮಣಿ ರೊಡ್ಡಕೈವಾರಂ ಶೈವಪ್ರಾಕಾರಂ ಶರಪರಿಪರಿಣತ ನಿಸ್ಸಂಕವೈರಿವೃಂದಕ ಶರಸಂಧಾನ ಬಾಣಶಿಕ್ಷಾ ಗುರು ಕಲಿಯುಗ ದ್ರೋಣಾಚಾರ್ಯ ಸರ್ವಸಸ್ತ್ರಸಾಸ್ತ್ರ ವಿಶಾರದಂ ನಾರಾಚ ಪರಶುರಾಮ ಗಿರಿದುರ್ಗಭಂಜ ನಾಂಜನೇಯ ತ್ರೈಲೋಕ್ಯರಂಜನಂ ಕಟಕಮಾಭೀಶಂ ಕೊಂಕಣರಕ್ಷಾಲಂ ಕದಂಬಾನ್ವಯ ಸಮುದ್ಧರಣ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ರಾಜಗುರುದೇವರ್ ಬಂಕಾಪುರ ದಿಂದ್ರೇಶ್ವರದೇವರ್ಗಾಳ್ವಪನ್ನೆರಡುಂ ಬಾಡಮುಂ ಸುಕದಿನಾಳುತ್ತಮಿರೆ[16] ಎಂದು ವಿವರಿಸಿದೆ.

ಮೇಲಿನ ಶಾಸನದಲ್ಲಿಯ 'ಕೊಂಕಣರಕ್ಷಾಲಂ ಕದಂಬಾನ್ವಯ ಸಮುದ್ಧರಣ' ಎಂಬ ವಾಕ್ಯ ಚಿಂತನ ಯೋಗ್ಯವಾಗಿದೆ. ಈತ ಹಾನುಗಲ್ಲ ಕದಂಬರನ್ನು ಉದ್ಧರಿಸಿದನೋ, ಗೋವೆಯ ಕದಂಬರನ್ನುದ್ಧರಿಸಿದನೋ

---

11 ಎಸ್.ಆಯ್.ಆಯ್. ೧೮, ೨೯೧ ಬಂಕಾಪುರ (ತಾ) ಶಿಗ್ಗಾಂವ

12 ಬಂಕಾಪುರ ಶೋಧನ : ಚೆನ್ನಕ್ಕ ಎಲಿಗಾರ : ೧೦ನೆಯ ಶಾಸನ. ಪು–೨೦

13 ಎ.ಇ. ೧೬, ೧೧ ಹೊಟ್ಟೂರು.

14 ಎಸ್.ಆಯ್.ಆಯ್. ೧೮, ೬೬ ಬಂಕಾಪುರ

15 ಎ.ಇ. ೧೯—೨೯ (೬) ಕೋಳೂರು (ಕ್ರಿ.ಶ. ೧೦೪೫)

16 ಎ.ಇ. ೧೯. ಪು–೧೮೦–೧೮೩, ಕೋಳೂರು, (ಕ್ರಿ.ಶ. ೧೨೪೫)

ಎಂಬುದು ಸ್ಪಷ್ಟವಿಲ್ಲ. ಹೀಗೆ ಉದ್ಧಾರ ಮಾಡಿದ ಸಂದರ್ಭ ಸನ್ನಿವೇಶಗಳೂ ತಿಳಿದುಬರುವುದಿಲ್ಲ. ಬಂಕಾಪುರವನ್ನೊಳಗೊಂಡ ಹಾನುಂಗಲ್ಲ ಪ್ರಾಂತವನ್ನಾಳುತ್ತಿದ್ದ ಹಾನುಗಲ್ಲ ಕದಂಬರನ್ನೇ ಉದ್ಧರಿಸಿರಬಹುದು. ಈ ಬಗ್ಗೆ ಶೋಧಿಸುವುದು ಅವಶ್ಯವಿದೆ.

ಒಟ್ಟಿನಲ್ಲಿ ಬಂಕಾಪುರವು ಯಾವುದೋ ಕದಂಬ ರಾಜಧಾನಿಯಾಗಿರಲಿಲ್ಲ. ವರುಣಶಿವ ಪಂಡಿತ ಒಂದು ಕದಂಬ ಮನೆತನವನ್ನು ಬಹುಶಃ ಹಾನುಗಲ್ಲ ಕದಂಬರ ಮನೆತನವನ್ನು ಉದ್ಧರಿಸಿದ್ದಾನೆ.

ಶಾಂತರಸ*

# ವಿಜಯನಗರ ಸಾಮ್ರಾಜ್ಯ ಸ್ಥಾಪಕರು ವಿದ್ಯಾರಣ್ಯರಲ್ಲ -ಕಾಶಿವಿಲಾಸ ಕ್ರಿಯಾಶಕ್ತಿ ದೇವರು

---

"ವಿಜಯನಗರ ಸ್ಥಾಪನೆಗೆ ಪ್ರೇರಕರು ವಿದ್ಯಾರಣ್ಯರು ; ಅವರೇ ರಾಜಗುರುಗಳು. ಅವರ ತಪಶ್ಯಕ್ತಿಯಿಂದಲೇ ಈ ರಾಜ್ಯ ಸ್ಥಾಪನೆಯಾಯಿತು."

ಇದೇ ವಾದವೇ ಅರವತ್ತು, ಎಪ್ಪತ್ತು ವರ್ಷಗಳ ಹಿಂದಿನಿಂದ ನಡೆದುಬಂದಿದೆ. ಕಥೆ, ಕಾದಂಬರಿ, ಕಾವ್ಯ, ನಾಟಕ, ಲೇಖನಗಳಲ್ಲಿ ನಿರಂತರವಾಗಿ ವಿದ್ಯಾರಣ್ಯರೇ ವಿಜಯನಗರ ಸಾಮ್ರಾಜ್ಯ ಸ್ಥಾಪಕರು ಎಂದು ಬರೆಯುತ್ತ ಬಂದರು. ಆದರೆ ಈ ನಡುವೆ ಚರಿತ್ರೆಕಾರರು ಹೊರಹಾಕಿದ ಸತ್ಯವನ್ನು ನಮ್ಮ ಸಾಹಿತಿಗಳು, ಬರಹಗಾರರು ಬಳಸಿಕೊಳ್ಳದೆ ಹಳೆಯ ವಾದವನ್ನೇ ಮುಂದುವರಿಸಿಕೊಂಡು ಹೋಗಿದ್ದಾರೆ. ನಿಜವಾದ ಚರಿತ್ರೆ ನಮ್ಮ ದೇಶದಲ್ಲಿ ರಚಿತವಾಗಿಲ್ಲ, ನಿಜವಾದುದನ್ನು ಮರೆಮಾಡಿ, ತಮಗೆ ಬೇಕಾದಂತೆ ಚರಿತ್ರೆಯನ್ನು ತಿರುಚಿಕೊಳ್ಳುವ ಮನೋಭಾವ ತಾನೇ ತಾನಾದುದು ಎಲ್ಲರಿಗೂ ಗೊತ್ತಿರುವ ವಿಷಯವೇ.

ವಿದ್ಯಾರಣ್ಯರ ವಿಚಾರಕ್ಕೆ ಬರೋಣ : ವಿದ್ಯಾರಣ್ಯರು ತಪಸ್ವಿಗಳು ; ಮಹಾಜ್ಞಾನಿಗಳು. ಈ ಮಾತಿಗೆ ಎರಡಿಲ್ಲ. ಆದರೆ ಅವರು ಕ್ರಿ. ಶ. ೧೩೩೬ರಲ್ಲಿ ವಿಜಯನಗರ ಸ್ಥಾಪನೆಯಾದಾಗ ಕರ್ನಾಟಕದಲ್ಲಿಯೇ ಇರಲಿಲ್ಲ. ಶೃಂಗೇರಿ ಪೀಠದ ಅಧಿಪತಿಗಳೂ ಆಗಿರಲಿಲ್ಲ. ಆಗ ಅವರು ಕಾಶಿಯಲ್ಲಿದ್ದರೆಂದು ತಿಳಿದುಬರುತ್ತದೆ. ವಿದ್ಯಾರಣ್ಯರಂತೆ ವಿದ್ಯಾತೀರ್ಥರಾಗಲೀ, ಭಾರತೀ ತೀರ್ಥರಾಗಲೀ ಸಂಗಮ ವಂಶದ ಅರಸರಿಗೆ ಸಾಮ್ರಾಜ್ಯ ಸ್ಥಾಪಿಸಲು ನೆರವಾಗಿಲ್ಲ. ಇವರೆಲ್ಲರು ನಂತರದಲ್ಲಿ ಬಂದವರು. ಶಾಸನ, ಕಾವ್ಯ, ಇತಿಹಾಸ, ಪುರಾಣ ಯಾವುದರಲ್ಲಿಯೂ ವಿದ್ಯಾರಣ್ಯರು ರಾಜಗುರುವಾಗಿದ್ದು ಸಾಮ್ರಾಜ್ಯ ಸ್ಥಾಪನೆಗೆ ನೆರವಾದ ಉಲ್ಲೇಖವಿಲ್ಲ.

ನಮ್ಮ ದೇಶದ ಇಬ್ಬರು ಪ್ರಸಿದ್ಧ ಚರಿತ್ರೆಕಾರರು ಡಾ. ಸಾಲೆತೊರೆ ಮತ್ತು ಡಾ. ಪಿ. ಬಿ. ದೇಸಾಯಿ– ಬರೆದ ಇತಿಹಾಸವನ್ನು ನಮ್ಮ ಕಾದಂಬರಿಕಾರರು, ಸಾಹಿತಿಗಳು ನೋಡಲಿಲ್ಲ. ನೋಡಿದರೂ ಅದನ್ನು ಉಪೇಕ್ಷಿಸಿ ತಮಗೆ ಬೇಕಾದಂತೆ ಇತಿಹಾಸ ತಿರುಚಿ ಕೊಂಡರು. ಮತ್ತೆ ಮತ್ತೆ ಅದನ್ನೇ ಸಾರಿ ಜನ ತಮ್ಮ ಮಾತನ್ನೇ ನಂಬುವಂತೆ ಮಾಡಿದರು.

ಡಾ. ಪಿ.ಬಿ. ದೇಸಾಯಿಯರ ಖಚಿತ ಅಭಿಪ್ರಾಯ ಇದು :

"ಈ ಸಾಮ್ರಾಜ್ಯ ಸ್ಥಾಪನೆಯ ಸಾಂಪ್ರದಾಯಿಕ ಕಾಲವಾದ ಕ್ರಿ.ಶ ೧೩೩೬ರ ಬಳಿಕ ಎರಡು ದಶಕಗಳು

---

* ನಿವೃತ್ತ ಅಧ್ಯಾಪಕರು, ೧-೯-೪೦/೧, ಅಜಾದ್‌ನಗರ, ರಾಯಚೂರು-೫೮೪ ೧೦೧

ಕಳೆದ ಮೇಲೆ ವಿದ್ಯಾರಣ್ಯರ ಸಂಬಂಧ ವಿಜಯನಗರ ದೊಡನೆ ಬೆಳೆಯಿತು ಎಂದು ಉಪಲಬ್ಧವಿರುವ ಪುರಾವೆ ತಿಳಿಸುತ್ತದೆ."[1]

ರಾಜಧಾನಿಯನ್ನು ಕಟ್ಟಲು ಹರಿಹರನಿಗೆ ವಿದ್ಯಾರಣ್ಯರು ನೆರವಾದರೆಂಬುದು ಮತ್ತು ರಾಜಧಾನಿ ಕಟ್ಟಲು ಸ್ಥಳ ನಿರ್ಣಯಕ್ಕೆ ಹುಟ್ಟಿಕೊಂಡ ನಾಯಿ ಮತ್ತು ಮೊಲದ ಕಥೆ ಇವೆಲ್ಲ ಕಾಲ್ಪನಿಕ, ಸತ್ಯವಲ್ಲ– ಎಂಬುದನ್ನು ಡಾ. ಸಾಲೆತೊರೆಯವರು ನಿರ್ಣಾಯಕ ವಾಗಿ ಹೇಳುತ್ತಾರೆ.

"ರಾಜಧಾನಿಯ ನಿರ್ಮಾಣದಲ್ಲಿ, ಹರಿಹರನಿಗೆ ವಿದ್ಯಾರಣ್ಯರು ನೆರವಿತ್ತರೆಂಬ ದಂತಕಥೆ ಮತ್ತು ನಾಯಿ ಮತ್ತು ಮೊಲದ ಪ್ರಸಂಗ ಮುಂತಾದವುಗಳನ್ನು ತರು ವಾಯ ಕಾಲದ ಕಲ್ಪಿತಗಳೆಂದು ನಾವು ಅವುಗಳನ್ನು ತಳ್ಳಿಹಾಕಿಬಿಡಬಹುದು. ಆತನ ವ್ಯಾಪಕವಾದ ಪಾಂಡಿತ್ಯ ಮತ್ತು ಪ್ರಖ್ಯಾತಿಗಳಿಂದ ಪ್ರಭಾವಿತರಾಗಿ ಜನ ಈ ವಿಷಯವನ್ನು ಆತನ ತಲೆಗೆ ಕಟ್ಟಿರಬಹುದೆಂದು ಭಾವಿಸಬಹುದು.[2]

ವಿಜಯನಗರಕ್ಕೆ ವಿದ್ಯಾನಗರವೆಂಬ ಹೆಸರಿತ್ತು ; ಅದು ವಿದ್ಯಾರಣ್ಯರ ಸಲುವಾಗಿಯೇ ಇಡಲಾಯಿತು ಎಂಬ ವಾದವೊಂದು ಇದೆ. "ವಿಜಯದ ಸಂಕೇತವಾಗಿ ಈ ನಗರಕ್ಕೆ 'ವಿಜಯ' ಮತ್ತು 'ವಿಜಯನಗರ' ಎಂದೇ ಕರೆಯಲಾಗಿದೆ. ವಿಜಯನಗರ ಹರಿಹರ (ಹುಕ್ಕ)ನ ಕಾಲಕ್ಕೆ ಅಸ್ತಿತ್ವದಲ್ಲಿಯೇ ಇರಲಿಲ್ಲ. ಇದನ್ನು ಬುಕ್ಕ ದೊರೆ ಕ್ರಿ. ಶ. ೧೩೬೮ರಲ್ಲಿ ನಿರ್ಮಿಸಲು ಪ್ರಾರಂಭಿಸಿದ ಮತ್ತು ಅದು ಎರಡನೆಯ ಹರಿಹರನ ಕಾಲಕ್ಕೆ ಕ್ರಿ. ಶ. ೧೩೭೮ರಲ್ಲಿ ಮುಗಿಯಿತು. ಎರಡನೆಯ ಹರಿಹರನ ಆಳಿಕೆಯಲ್ಲಿ (೧೩೭೮ರಲ್ಲಿ) ವಿಜಯನಗರ ನಿರ್ಮಾಣದ ಮುಕ್ತಾಯ ಘಟ್ಟದಲ್ಲಿ, ವಿದ್ಯಾರಣ್ಯರು ವಿಜಯನಗರಕ್ಕೆ ಬಂದಂತೆ ತೋರುತ್ತದೆ.[3]"

ಇದೇ ಅವರು ವಿಜಯನಗರಕ್ಕೆ ಮೊದಲ ಸಲ ಬಂದುದು. ಆದುದರಿಂದ ಸಾಮ್ರಾಜ್ಯ ಸ್ಥಾಪನೆಯ ಕಾಲಕ್ಕೆ ಅವರು ಅಲ್ಲಿ ಇರಲಿಲ್ಲ ; ಮತ್ತು ಅವರಿಂದ ನೆರವು ದೊರಕಿಲ್ಲ.[4] "ವಿಜಯನಗರಕ್ಕೆ ವಿದ್ಯಾನಗರ ವೆಂಬ ಹೆಸರನ್ನು ಬಳಸಿದ್ದು ಕ್ರಿ. ಶ. ೧೫೩೧ ರಿಂದ ಈಚೆಗೆ....

ಇನ್ನೊಂದು ವಿಷಯ ಇಲ್ಲಿ ಗಮನಾರ್ಹವಾದುದು : ಸಂಗಮವಂಶದ ರಾಜರಿಗೆ ಕುಲಗುರುವಾಗಿದ್ದು ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕನಾದವನು 'ರಾಯ ರಾಜಗುರು ಶ್ರೀಮತ್ ಕಾಶೀವಿಲಾಸ ಕ್ರಿಯಾಶಕ್ತಿ ದೇವರು' ಎಂಬುದು; ವಿದ್ಯಾರಣ್ಯರ ಪ್ರಚಾರದಲ್ಲಿ ಇವರ ಹೆಸರು ಅಡಗಿಹೋಗಿದೆ ; ಕಾಶೀವಿಲಾಸ ಕ್ರಿಯಾಶಕ್ತಿ ದೇವರೇ ಸಂಗಮ ವಂಶದ ರಾಜಗುರು ಮತ್ತು ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕ, ಸಲಹೆಗಾರರು ಎಂಬುದನ್ನು ಡಾ. ಸಾಲೆತೊರೆ ಮತ್ತು ಡಾ. ಪಿ.ಬಿ. ದೇಸಾಯಿ ಸಮರ್ಥಿಸಿದ್ದಾರೆ. ಡಾ. ಸಾಲೆತೊರೆ ಯವರ ಹೇಳಿಕೆ.

"........ಸ್ಥಾಪಕರೊಡನೆ ಮಹಾ ಸನ್ಯಾಸಿಯಾದ ವಿದ್ಯಾರಣ್ಯರ ಅನ್ಯೋನ್ಯ ಸಂಬಂಧವಿತ್ತೆಂದು, ಈ ಎಲ್ಲ ಕಥೆಗಳು ಹೇಳುತ್ತವೆ. ಆದರೆ ಶಾಸನಗಳು ಮತ್ತು ಸಮಕಾಲೀನ ಪುರಾವೆಗಳು ಈ ನಂಬಿಕೆಗಳನ್ನು ಅಲ್ಲಗಳೆ ಯುತ್ತವೆ. ಸತ್ಯವಾದ ಮಾತೆಂದರೆ : ಸಾಮ್ರಾಜ್ಯ ಸ್ಥಾಪಕರ ಕುಲಗುರು ಮೊದಲಿಗೆ ಕ್ರಿಯಾಶಕ್ತಿಯಾಗಿ ದ್ದನು : ವಿದ್ಯಾರಣ್ಯನಾಗಿರಲಿಲ್ಲ.[5]"

ಡಾ. ಪಿ.ಬಿ. ದೇಸಾಯಿಯವರ ಹೇಳಿಕೆ :

"Kasivilas Kriyasakti of Pasupata School was the royal preceptor and advisor of Bukka I"

---

1 Dr. P.B. Desai : A History of Karnataka 326

2 Dr. B,A. Saletore : A Social & Political Life in the Vijayanagara Empire P.110

3 ಅದೇ ಪು. ೧೧೨

4 ಅದೇ ಪು. ೧೧೨

5 ಅದೇ ಪು. ೧೧೬

"ಪಾಶುಪತ ಪಂಥದ ಕಾಶೀವಿಲಾಸ ಕ್ರಿಯಾಶಕ್ತಿ ರಾಜಗುರುವಾಗಿದ್ದನು ಮತ್ತು ಒಂದನೆಯ ಬುಕ್ಕನಿಗೆ ಸಲಹೆಗಾರನಾಗಿದ್ದನು."[6]

ಕಾಶೀವಿಲಾಸ ಕ್ರಿಯಾಶಕ್ತಿ ದೇವರನ್ನು ಕುರಿತು ಅನೇಕ ಶಾಸನಗಳಿವೆ. ಇವೆಲ್ಲ, ಇವರೇ ಸಂಗಮ ವಂಶದ ರಾಜಗುರುಗಳು ಮತ್ತು ಸಾಮ್ರಾಜ್ಯ ಸ್ಥಾಪನೆಗೆ ಪ್ರೇರಕರೆಂಬುದನ್ನು ಸಮರ್ಥಿಸುತ್ತವೆ. ಸೊರಬ (ಕ್ರಿ. ಶ. ೧೩೪೭), ಹಾರೋಮುಚ್ಚಳ್ಳಿ ಅಗ್ರಹಾರ (ಕ್ರಿ. ಶ. ೧೩೬೮), ಹರಿಹರ (ಕ್ರಿ. ಶ. ೧೪೧೦), ಹುಲಿಕೇರಿ (ಕ್ರಿ. ಶ. ೧೩೭೮) ಮುಂತಾದ ಶಾಸನಗಳನ್ನು ಅವಲೋಕಿಸಬಹುದು. ಸ್ಥಳಾಭಾವದಿಂದ ಅವುಗಳನ್ನು ಇಲ್ಲಿ ಉದ್ಧರಿಸಲಾಗಿಲ್ಲ.[7] ವೀರ ಕಂಪಣ್ಣನ ಹೆಂಡತಿ ಗಂಗಾದೇವಿ ತನ್ನ ಐತಿಹಾಸಿಕ 'ಮಧುರಾ ವಿಜಯ' (ವೀರ ಕಂಪಣರಾಯ ಚರಿತ್ರೆ) ಎಂಬ ಸಂಸ್ಕೃತ ಕಾವ್ಯದಲ್ಲಿ ಕ್ರಿಯಾಶಕ್ತಿ ದೇವರನ್ನು ಭಕ್ತಿಯಿಂದ ಸ್ತುತಿಸುತ್ತಾಳೆ.

"ಅಸಾಧರಣ ಸಾರ್ವಜ್ಞಂ ವಿಲಸತ್ಸರ್ವ ಮಂಗಲಂ
ಕ್ರಿಯಾಶಕ್ತಿ ಗುರುಂ ವಂದೇ ತ್ರಿಲೋಚನಮಿವಾಪರಂ"

ಈ ಐತಿಹಾಸಿಕ ಕಾವ್ಯದಲ್ಲಿ ವಿದ್ಯಾರಣ್ಯರ ಹೆಸರೇ ಬರುವುದಿಲ್ಲ.

ನುಂಗಲಾರದ ತುತ್ತಾದ ಈ ಐತಿಹಾಸಿಕ ದಾಖಲೆಯನ್ನು ಹೇಳಲಾರರು, ಹೇಳದೇ ಇರಲಾರರು : ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟರ ಈ ಮಾತುಗಳನ್ನು ನೋಡಿ : "........ಈ ಬುಕ್ಕರಾಜನೇ ವಿಜಯನಗರ ಸಾಮ್ರಾಜ್ಯಕ್ಕೆ ಬೀಜಾವಾಪ ಮಾಡಿದವನೆಂದು ಇತ್ತೀಚಿನ ಅನ್ವೇಷಣೆಗಳಿಂದ ತಿಳಿದು ಬಂದಿದೆ. ಅವನ ಕುಲಗುರುವಾಗಿದ್ದ ಕ್ರಿಯಾಶಕ್ತಿ ದೇಶಿಕರು ವಿಜಯನಗರ ಸ್ಥಾಪನೆಗೆ ಮೂಲಪ್ರೇರಕರಾಗಿದ್ದರು.[8]" ಇದು ಸರಿಯಾದ ಹೇಳಿಕೆ, ಆದರೆ ವಿದ್ಯಾರಣ್ಯರು ಎಲ್ಲಿ ಹೋಗಬೇಕು ? ಅವರು ಇಲ್ಲದಿದ್ದರೂ ಬೇಕೇ ಬೇಕಲ್ಲ. ಆದಕ್ಕಾಗಿ ಮುಂದುವರಿದು ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟರು, "ವಿದ್ಯಾರಣ್ಯರಿಗೆ ಪೂರ್ವದಲ್ಲಿ ಕ್ರಿಯಾಶಕ್ತಿ ಎಂಬ ಹೆಸರಿದ್ದಿತು" ಎಂದು ಜೋಡಿಸಿಬಿಡುತ್ತಾರೆ. ವಿದ್ಯಾರಣ್ಯ ಮತ್ತು ಕ್ರಿಯಾಶಕ್ತಿ ಒಂದೇ ಮತ್ತು ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ಮೂಲಪ್ರೇರಣೆ, ಆಂಧ್ರದಿಂದಲೇ ಬಂತೆಂಬ ಹಳೆಯ ವಾದವನ್ನು ಎತ್ತಿ ಟಿ. ಎನ್. ಮಲ್ಲಪ್ಪ ಎಂಬುವರು ಇತಿಹಾಸವನ್ನು ಹದಗೆಡಿಸಿದ್ದುಂಟು.[10]

ವಿದ್ಯಾರಣ್ಯ ಮತ್ತು ಕ್ರಿಯಾಶಕ್ತಿ ದೇವರು ಇಬ್ಬರೂ ಒಂದೇ ಎಂಬ ವಾದವನ್ನು ಡಾ. ವೆಂಕಟಸುಬ್ಬಯ್ಯನವರು ಒಪ್ಪುವುದಿಲ್ಲ : ಅದನ್ನು ಅಲ್ಲಗಳೆಯುತ್ತಾರೆ.[11] ಈ ಹಿಂದೆ ಶಾಸಕ ಶ್ರೀ ಉಮರಬ್ಬರು, ಶ್ರೀ ಎಂ. ವಿ. ಕಾಮತರು "ಚೆಲುವ ಕನ್ನಡನಾಡು" ಎಂಬ ಗ್ರಂಥದಲ್ಲಿ ಇತಿಹಾಸಕ್ಕೆ ಅಪಚಾರ ಮಾಡಿದ್ದನ್ನು ಹೊರಹಾಕಿದರು. ಇದನ್ನು ಕುರಿತು 'ಅಭಿಮಾನಿ' ಮತ್ತು 'ಸುದ್ದಿ ಸಂಗಾತಿ' ಪತ್ರಿಕೆಗಳು ಬರೆದವು. ನಾಲ್ಕು ದಿನ ಲೇಖನವನ್ನು ನಿಲ್ಲಿಸಿ 'ಚೆಲುವ ಕನ್ನಡ ನಾಡು' ತರಿಸಿ ನೋಡಿದೆ. ವಿಜಯನಗರ ಸಾಮ್ರಾಜ್ಯದ ಬಗ್ಗೆ ಅದೇ ಹಿಂದಿನ ಮಾತು. "........ಅದೇ ಕಾಲದಲ್ಲಿಯೇ ಅವರು (ವಿದ್ಯಾರಣ್ಯರು) ಹಕ್ಕ-ಬುಕ್ಕ

---

6 Dr. P.B. Desai : A History of Karnataka P. 344

7 ವೀರಶೈವ ಸಂ. ೪, ಎಸ್. ಸಿ. ನಂದೀಮಠರು ಹಾಗೂ ಗವಿದೀಪ್ತಿ ಸಂ. ೪ ಶಾಂತರಸರ ಲೇಖನ

8 ಎಂ. ವಿ. ಕೃಷ್ಣರಾವ್ ಮತ್ತು ಎಂ. ಕೇಶವಭಟ್ಟ : 'ಕರ್ನಾಟಕದ ಇತಿಹಾಸದ ದರ್ಶನ', ಪು. ೬೫೯

9 ಅದೇ ಪು. ೩೫೯

10 The Quarterly Journal of the Mystic Society Vol. LIX Nos. 1 to 4 and Vol. LX Nos. 1 to 4 : T. N. Mallappa : Establisher of Vijayanagar Empire

11 Dr. Venkatasubbiah : Q. J. M. S. VIII P. 188

ಸೋದರರನ್ನು ಹುರಿದುಂಬಿಸಿ ವಿಜಯನಗರ ಸಾಮ್ರಾಜ್ಯ ವನ್ನು ಸ್ಥಾಪಿಸುವಂತೆ ಮಾಡಿದ್ದು.[12]"

ಯಾರೋ ಒಂದು ಕಾಲಕ್ಕೆ ಮಾಡಿದ ತಪ್ಪನ್ನು ಮುಂದೆ ಬಂದವರೆಲ್ಲ ಅದನ್ನೇ ಮುಂದುವರಿಸಿಕೊಂಡು ಹೋಗುವುದೇ ? ಅದು ಸಲ್ಲದು. ಆದ್ದರಿಂದ ವಿಜಯ ನಗರ ಸ್ಥಾಪನೆಗೆ ಮೂಲಪ್ರೇರಕರು ವಿದ್ಯಾರಣ್ಯರಲ್ಲ, ಕಾಶಿವಿಲಾಸ ಕ್ರಿಯಾಶಕ್ತಿ ದೇವರು.

12 ಎಂ. ವಿ. ಕಾಮತ್ : ಚೆಲುವ ಕನ್ನಡ ನಾಡು ಪು. ೩೩

ಡಾ|| ಕೆ. ಜಿ. ವಸಂತ ಮಾಧವ*

# ದಕ್ಷಿಣ ಕನ್ನಡ ಜಿಲ್ಲೆಯ ಕಂಗುಮಠ ಐತಿಹಾಸಿಕ ವಿಶ್ಲೇಷಣೆ

ಕರಾವಳಿ ಕರ್ನಾಟಕದ 'ಮಠಗಳ' ಸ್ವರೂಪ ಮತ್ತು ಇವುಗಳ ಪಾತ್ರಗಳ ವಿವರಗಳನ್ನು ಇಲ್ಲಿ ಸಿಕ್ಕಿದ ಶಾಸನಗಳು ಉಲ್ಲೇಖಿಸುತ್ತವೆ. ಈ ಶಾಸನಗಳ ಕಾಲ ಹದಿನಾಲ್ಕರಿಂದ ಹದಿನಾರನೆ ಶತಮಾನಗಳು. ಈ ಶಾಸಗಳಲ್ಲಿ ಉಲ್ಲೇಖಿಸುವ ಮಠಗಳು[1] ಕರಾವಳಿಯ ಮೂಲೆ ಮೂಲೆಗಳಲ್ಲಿವೆ. ಈ ಮಠಗಳಲ್ಲಿ ಆಗಮಶಾಸ್ತ್ರದಂತೆ ದೇವತೆಗಳ ಪೂಜೆಗಳು ಯತಿಗಳ ನೇತೃತ್ವದಲ್ಲಿ ನಡೆದು ಬರುತ್ತವೆ. ಇಂತಹ ಮಠಗಳಲ್ಲಿ ಕೊಂಗು ಮಠವು ಒಂದು.

ಈಗಿನ ಆದಿಉಡುಪಿಯಲ್ಲಿರುವ ಒಂದು ಓಣಿಯಲ್ಲಿ ಈ ಕಂಗು ಮಠವಿದೆ. ಇದು ಶಿಲೆಯಿಂದ ರಚಿತವಾಗಿದೆ. ಇಲ್ಲಿನ ಜನಜ್ಞನಿತ ಹೇಳಿಕೆಯಂತೆ ಈ ಮಠವು ವಿದ್ಯಾಕೇಂದ್ರವಾಗಿದ್ದು ಇಲ್ಲಿಯೇ ದ್ವೈತ ಸಿದ್ಧಾಂತ ಪ್ರತಿಪಾದಕರಾದ ಮಧ್ವಾಚಾರ್ಯರು ಪ್ರಥಮ ವಿದ್ಯೆಗಳಿಸಿದರು. ಇಷ್ಟಲ್ಲದೆ, ಇವರು ದ್ವಾರಕೆಯಿಂದ ಬಂದ ಶ್ರೀ ಕೃಷ್ಣನ ವಿಗ್ರಹವನ್ನು ಇಲ್ಲಿಯೇ ಸ್ಥಾಪಿಸಿದರಂತೆ. ಇನ್ನೊಂದು ಹೇಳಿಕೆಯಂತೆ ಈ ಮಠವನ್ನು ಘಟ್ಟದ ಮೇಲಿನಿಂದ ಕರಾವಳಿಯ ಕಡೆಗೆ ವಲಸೆಗೆ ಬಂದ ಬ್ರಾಹ್ಮಣರು ಸ್ಥಾಪಿಸಿದರು. ಈ ವಲಸೆಗೆ ಬಂದ ಬ್ರಾಹ್ಮಣರು ಅಡಿಕೆ ತೋಟದಲ್ಲಿ ಪರಿಣತರಾಗಿದ್ದುದರಿಂದ ಇವರು ಇಲ್ಲಿ ಸ್ಥಾಪಿಸಿದ ಈ ಮಠಕ್ಕೆ ತೋಟಂತಿಲ್ಲಾಯ ಅಥವಾ ಕೊಂಗು ಮಠವೆಂದು ಕರೆದರು.[2]

ಇಲ್ಲಿನ ಕೆಲವು ಐತಿಹಾಸಿಕ ಸಂಗತಿಗಳು ಇಲ್ಲಿಯೇ ಇರುವ ನಾಲ್ಕು ಶಿಲಾ ಶಾಸನಗಳ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಇವು ಈ ಮಠದ ಹಿಂಭಾಗದಲ್ಲಿವೆ. ಈ ಎಲ್ಲಾ ಶಾಸನಗಳು ವಿಜಯನಗರ ಅರಸರನ್ನು ಉಲ್ಲೇಖಿಸುತ್ತವೆ. ಇವುಗಳು ಹದಿನಾಲ್ಕು ಮತ್ತು ಹದಿನೈದನೆ ಶತಮಾನಗಳ ಕಾಲದವುಗಳು. ಇವುಗಳಲ್ಲಿ ಶಿವ ಮತ್ತು ವೈಷ್ಣವ ಚಿಹ್ನೆಗಳಿವೆ. ಇವುಗಳ ಲಿಪಿ ಮತ್ತು ಭಾಷೆ ಕನ್ನಡ.

---

* ರೀಡರ್ ವಿಜಯಾ ಕಾಲೇಜು ಮೂಲ್ಕಿ, ದಕ್ಷಿಣ ಕನ್ನಡ ಜಿಲ್ಲೆ, ೫೭೪ ೧೫೪

1 ಶಾಸನಗಳಲ್ಲಿ ಬಾರಕೂರು ಶಂಕರ ದೇವರ ಮಠ, ಇಲ್ಲಿರುವ ಆನಂದ ಸರಸ್ವತಿ ಶ್ರೀಪಾದಂಗಳ ಶಿಷ್ಯ ಅಮ್ರುತೇಂದ್ರ, ಆಜಲು ಸೆಟ್ಟಿ, ಕಟ್ಟಿಸಿದ ಮಠ, ಬಡಗಣ ಕಡೆಯ ಮಠ, ಮೂರ್ತಿ ದೇವರ ಮಠ, ಭಂಡಿಯ ಮಠ, ಪಾರಂಪಳ್ಳಿಯಲ್ಲಿನ ವಿಷ್ಣು ಮೂರ್ತಿ ದೇವರ ಮಠ, ಮತ್ತು ಇಲ್ಲಿರುವ ಯತಿ ಕೃಷ್ಣ ಪ್ರಕಾಶ. ಕೋಟೇಶ್ವರದ ಅಕ್ಕಸಾಲೆಯ ಮಠ ಇವುಗಳ ಉಲ್ಲೇಖವಿದೆ S99 Vol Vii No, 335, 333, 332, 330, 326. 325, ಅದೇ IX P II No 673. Annual Report on Indian Epigraply (ARIE) 1971 No B 229, ಈ ಮಠಗಳ ಹೆಚ್ಚಿನ ವಿವರಕ್ಕೆ ನೋಡಿ-ಗುರುರಾಜ ಭಟ್ಟ, Studies in Tuluva History and culture P 339

2 ಕೆಸಗಾರು ಮಾಧವ ರಾವು 'ಆದಿ ಉಡುಪಿ ಕಂಗು ಮಠ' ಜೀವೋತ್ತಮ, ಕುಮಟಾ ಫೆಬ್ರವರಿ ೨೬ ೧೯೬೩-PP 59-60 ARIE 1972 P 9

**ಶಾಸನಗಳಲ್ಲಿ ವ್ಯಕ್ತವಾಗುವ ಐತಿಹಾಸಿಕ ಸಂಗತಿಗಳ :**

ಇಲ್ಲಿರುವ ಒಂದನೆ ಶಾಸನವು ಶ. ಕ. ೧೩೦೧ ಸಿದ್ಧಾರ್ಥಿ ಸಂವತ್ಸರ ಆಶ್ವಿಜ ಶುದ್ಧ ೧೦ ರ ಕಾಲದ್ದು (ಅಕ್ಟೋಬರ ೫-೧೩೭೯),[3] ಇದರ ಸಾರಾಂಶವೆಂದರೆ ಶಿವನಿಡಂಬೂರರ ಮಗ ಅಣ್ಣನಿಡಂಬೂರನು ಈ ಕಂಗು ಮಠದ ಯತಿಗಳಾದ ಶ್ರೀವರ ತ್ರೈಲೋಕ್ಯ ಭೂಷಣ ತೀರ್ಥರಿಗೆ ಬಿಟ್ಟದಾನ. ದಾನದ ಮುಖ್ಯ ಉದ್ದೇಶ ಈ ಮಠದಲ್ಲಿನ ಯತಿಗಳು ನಡೆಸುವ ಶ್ರೀ ನಾರಾಯಣ ಮತ್ತು ರಾಮದೇವರ ಪೂಜೆಗಳನ್ನು ಯಾವ ಅಂತಕ ಇಲ್ಲದೆ ನಡೆಸಿಕೊಂಡು ಬರುವುದು. ಈ ಭೂದಾನದ ಸ್ಥಳಗಳು ನಿಡಂಬೂರು ಬಯಲು, ಕಡಪಾಜೆಯ ಸಾಲು ಬಯಲು, ಬಾಗಿಲ ಬೆಟ್ಟು ಗಡ್ಡಿಗಳು ಇಷ್ಟಲ್ಲದೆ ಈ ದಿನ ಬಿಟ್ಟ ಸ್ಥಳಗಳಲ್ಲಿ ಕೆಲವು ಭೂವರ್ಗದಾರರಾದ ಪಡುವಾತ ನಾಯದ, ವಾಸುನಿಡಂಬೂರು, ಉಣಿರಾಯರ ಉಲ್ಲೇಖವಿದೆ. ಕಲ್ಲಂ ಬಳಿ ಕಾಂತರ ಕೊರಕನಗದ್ದೆಯ ಉಲ್ಲೇಖವಿರುವುದು ಗಮನಿಸುವಂತಾದ್ದು. ಒಟ್ಟನಲ್ಲಿ ಈ ದಾನಬಿಟ್ಟ ಸ್ಥಳಗಳಲ್ಲಿ ಬ್ರಾಹ್ಮಣ, ನಾಯದ, ಮತ್ತು ಕೆಳಜಾತಿಯವರು ಕೃಷಿಕರಾಗಿದ್ದರೆಂದು ಈ ಶಾಸನದ ಅಧ್ಯಯನದಿಂದ ತಿಳಿದು ಬರುತ್ತದೆ. ಇದೇ ಶಾಸನವು ಬಾರಕೂರು ರಾಜ್ಯವನ್ನು ವೀರ ಹರಿಯಪ್ಪ ವೊಡೆಯರ ನಿರೂಪದಿಂದ ಬೊಮ್ಮರಸನು ಆಳಿಕೊಂಡಿದ್ದನೆಂದು ತಿಳಿಸಿದೆ.

ತೇದಿ ಇಲ್ಲದ ಇಲ್ಲಿರುವ ಇನ್ನೊಂದು ಶಾಸನವು ಈ ಮಠದಲ್ಲಿ ರಾಮದೇವರ ಪೂಜೆ ನಡೆಯುತ್ತಿದ್ದದ್ದು ಮತ್ತೆ ಇದನ್ನು ಇಲ್ಲಿ ನಡೆಸಿಕೊಂಡು ಬರಲು ಕೊಡೆವೂರ ಅಧಿವಾಸ ಮತ್ತು 'ಜನನಿ'ಗಳು ಒಡಂಬಟ್ಟು ಮಲ್ಲಪ್ಪ ವೊಡೆಯರು ಕೊಟ್ಟ ದಾನದ ವಿವರವನ್ನು ತಿಳಿಸುತ್ತದೆ.[4] ಇಲ್ಲಿ ತಿಳಿಸಿದ ಮಲ್ಲಪ್ಪ ಒಡೆಯರು ಬಾರಕೂರು ರಾಜ್ಯಪಾಲಕ. ಇವನು ೧೩೮೬ ರಿಂದ ೧೩೯೦ ರವರೆಗೆ ಹರಿಹರ ರಾಯನ ನಿರೂಪದಿಂದ ಈ ಪ್ರಾಂತ್ಯವನ್ನು ಆಳಿಕೊಂಡಿದ್ದ[5] ಈ ಶಾಸನದಲ್ಲಿ ಮಠದ ಉಲ್ಲೇಖವಿದ್ದು ಯತಿಗಳ ಹೆಸರು ಇಲ್ಲದೆ ಇರುವುದು ಒಂದು ಗೂಢ ಪ್ರಶ್ನೆಯಾಗಿದೆ. ಈ ದಾನ ಶಾಸನದಲ್ಲಿ ಕೊಡವೂರ ಜನನಿಗಳ ಪಾತ್ರವನ್ನು ಅಲಕ್ಷಿಸುವಂತಿಲ್ಲ. ಕೊಡೆವೂರ ಅಧಿವಾಸದಲ್ಲಿ ರಾಮನ ಪೂಜೆ ನಡೆಯುತ್ತಿತ್ತೆಂದು ಈ ಶಾಸನದಿಂದ ತಿಳಿದು ಬರುತ್ತದೆ.

ಇಲ್ಲಿನ ಮೂರನೇಯ ದಾನ ಶಾಸನವು ವಿಜಯ ಸಂವತ್ಸರವಾಗಿದ್ದು ಶಕವರುಷ ೧೩೩೬[6] ವೈಶಾಖ ಶುದ್ಧ ೫ ಗುರುವಾರ (ಕ್ರಿ. ಶ. ೧೪೧೩ ಎಪ್ರಿಲ್ ೬), ವಿಜಯನಗರದ ಅರಸ ದೇವರಾಯನ ನಿರೂಪದಿಂದ ಬಾರಕೂರು ರಾಜ್ಯವನ್ನು ಆಳಿಕೊಂಡಿದ್ದ ಶಂಕರ ದೇವ ಒಡೆಯ,ಇವನು ಊರಿನ ಮೂರು ಸಾವಿರ ಪರಿವಾರದವರ ಸಮ್ಮುಖದಲ್ಲಿ ಇದೇ ಕಂಗುಮಠದಲ್ಲಿ ವೈಷ್ಣವ ದೇವತೆಗಳಾದ ಶ್ರೀ ರಾಮ, ಶ್ರೀ ಗೋಪಿನಾಥ ಮತ್ತು ಶ್ರೀಮನ್ನನಾರಾಯಣರ ಪೂಜಾ ಕಟ್ಟಳೆಗಳನ್ನು ನಡೆಸುವ ಶ್ರೀಮದ್ಯಾದವೇಂದ್ರ ತೀರ್ಥ ಶ್ರೀ ಪಾದಂಗಳ ಶಿಷ್ಯರಾದ ಶ್ರೀಮತ್ ಜತ್ಯೇಂದ್ರ ತೀರ್ಥರಿಗೆ ಕೊಡೆವೂರ ಪಡುವಣ ಭಾಗದಲ್ಲಿರುವ ಕೆಲವು ಬೆಟ್ಟುಗಳ ಉತ್ಪತ್ತಿ ೩೦ ಹೊನ್ನು ದಾನ ಮಾಡಿದನು ಎಂದು ಈ ಶಾಸನವು ತಿಳಿಸುತ್ತದೆ.[7] ಇದೇ ಶಿಲಾ ಲೇಖನದಲ್ಲಿ ಈ ಕಂಗು ಮಠದ ಗುರುಪರಂಪರೆಗಳನ್ನು ತಿಳಿಸುವುದರೊಂದಿಗೆ ಬನ್ನಂಜೆ ಒಳಗುಳ್ಳ ದೇವಸ್ವ ಭೂಮಿ ಬಾರಕೂರು ಮೂರು ಸಾವಿರ ಸರಿವಾರದವ (ಸಭೆ)ರ ಉಲ್ಲೇಖವಿದೆ. ಇಷ್ಟಲ್ಲದೆ ಈ ಮಠದಲ್ಲಿ ಗೋಪಿನಾಥ ಎಂಬ ಇನ್ನೊಂದು ವೈಷ್ಣವ ದೇವತೆಯ ಆರಾಧನೆ ನಡೆಯುತ್ತಿತ್ತು. ಒಟ್ಟನಲ್ಲಿ ಜತ್ಯೇಂದ್ರ ತೀರ್ಥ ಪಾಥಂಗಳವರ ನೇತೃತ್ವದಲ್ಲಿ ಈ ಮಠವು ಹಲವು ವೈಷ್ಣವ ದೇವತೆಗಳ ಆರಾಧನಾ

---

3 ARIE, 186

4 ಅದೇ ೧೮೭

5 SII, VII No 351 ; ಕೆ. ವಿ. ರಮೇಶ, ತುಳುನಾಡಿನ ಇತಿಹಾಸ ಪು೧೩-೮೪

6 ARIE, 1972 No 188

7 ಅದೇ No 189.

ಸ್ಥಳವಾಗಿತ್ತು. ಇದೇ ಮಠದ ಆವರಣದಲ್ಲಿರುವ ಇನ್ನೊಂದು ಶಿಲಾ ಶಾಸನವು[8] ಎರಡು ದಾನ ಗಳನ್ನು ಈ ಮಠಕ್ಕೆ ಬಿಟ್ಟದ್ದನ್ನು ತಿಳಿಸು ತ್ತದೆ. ಒಂದು ದಾನವು ಶಕ ವರುಷ ೧೩೬೩ ರಾದ್ರಿ ಸಂವತ್ಸರ ಪುಷ್ಯ ಅಮಾವಾಸ್ಯೆ (ಕ್ರಿ. ಶ. ೧೪೪೧ ಜನವರಿ ೨೨) ರಂದು ನಡೆಯಿತು. ಈ ಶಾಸನವು ರಾಮ, ಗಣಪತಿ ದೇವತೆಗಳ ಸ್ತುತಿಯಿಂದ ಆರಂಭವಾಗು ತ್ತದೆ. ಆಗಿನ ಕಾಲದಲ್ಲಿ ವಿಜಯನಗರದಲ್ಲಿ ಆಳಿಕೊಂಡಿದ್ದ ವರ್ಣಾಶ್ರಮ ಧರ್ಮ ಪಾಲಿಸಿ ಕೊಂಡಿದ್ದ ಇಮ್ಮಡಿ ದೇವರಾಯ (ಗಜವೇಂಟಗಾರ) ಮತ್ತು ಇವನ ನಿರೂಪ ದಿಂದ ಬಾರಕೂರು ರಾಜ್ಯವನ್ನು ಪ್ರತಿಪಾಲಿಸಿ ಕೊಂಡಿದ್ದ ಚಂಡಪ್ಪರ ಉಲ್ಲೇಖಗಳು ಈ ದಾಖಲೆಯಲ್ಲಿದೆ. ಈ ಚಂಡಪ್ಪ ಒಡೆಯರು ತಮ್ಮ ಅರಸ ಶ್ರೀ ದೇವರಾಯ ಮಹಾರಾಜರಿಗೆ ಆಯುರಾರೋಗ್ಯವಾಗಲೆಂದು ಮತ್ತು ಶತ್ರು ಕ್ಷಯವಾಗಲೆಂದು ಮತ್ತು ಐಶ್ವರ್ಯ ವೃದ್ಧಿಯಾಗ ಲೆಂದು ಕೊಂಗು ಮಠದ ಯತಿ ವೈಷ್ಣವ ಸಿದ್ಧಾಂತ ಪ್ರತಿ ಪಾದಕ ಶ್ರೀಮದ್ ಯಾದವೇಂದ್ರ ತೀರ್ಥ ಶ್ರೀ ಪಾದಂಗಳ ಶಿಷ್ಯ ಶ್ರೀ ಪುಣ್ಯಕೀರ್ತಿ ಶ್ರೀಪಾದಂಗಳಿಗೆ ಇವರು ಇಲ್ಲಿ ನಡೆಸುವ ಧಾರ್ಮಿಕ ಕಟ್ಟಳೆಗಳನ್ನು ನಡೆಸಿ ಕೊಂಡು ಬರಲು ಭೂದಾನ ಮಾಡಿದರು. ಬಿಟ್ಟ ದಾನದ ಮೌಲ್ಯ ಕೊಡೆವೂರಿನಲ್ಲಿರುವ ಭೂಮಿಯ ೫೦ ಕಾಟಿಗ ದ್ಯಾಣ. ಈ ಕಂಗು ಮಠವು ಶಿವಳ್ಳಿಯ ಪಡುವವೋಣಿಯ ಒಳಗಿದೆ ಎಂದು ಈ ಶಿಲಾ ಬರಹತಿಳಿಸಿದೆ. ಶ್ರೀ ಲಕ್ಷ್ಮಿನಾರಾಯಣ, ಶ್ರೀ ರಾಮಚಂದ್ರ ಮತ್ತು ವಿಠಲ ದೇವರ ಆರಾಧನೆಗಳನ್ನು ಇಲ್ಲಿ ಶ್ರೀ ಪುಣ್ಯತೀರ್ಥ ಶ್ರೀ ಪಾದಂಗಳು ನಡೆಸಿಕೊಂಡು ಬರುತ್ತಿದ್ದರು ಈ ದೇವತೆಗಳ ಆರಾಧನೆ ಮತ್ತು ಕಟ್ಟಳೆಗಳಿಗೆ ಬಿಟ್ಟದಾನ ಮೌಲ್ಯವು ಕೊಡೆವೂರ ನಾಣಿ ಮಧ್ಯಸ್ತನ ಅಪ್ಪಣೆಯಂತೆ, ಇದೇ ಊರಿನ ತ್ರಯಂಬಕ ಆದಿವಾಸದ ಗ್ರಾಮದವರು, ತೆಂಕಣ ಕರ್ಕಟಕ, ಬಡಗಣ ಕರ್ಕಟಕ, ಶಂಕರ ಕುದುಕಾರ ಊರ 'ಜನನಿ' ಜಗತ್ತುಗಳ ಒಪ್ಪಿಗೆ ಪಡೆದು ಜಾರಿಗೆ ಬಂತು. ಈ ಮಠದ ಸ್ವಾಮಿಗಳ ನೇತೃತ್ವದಲ್ಲಿ ನಡೆಯುವ ಪೂಜಾ ಕಟ್ಟಳೆಗಳಾದ ಅಮೃತ ಪಡಿ ನಂದಾ ದೀಪ್ತಿ, ಕ್ಷೀರಾಬ್ಧಿಜಯಂತಿ, ಪಂಚ ಪರ್ವ ಇವುಗಳ ಖರ್ಚಿಗೆ ಬಿಟ್ಟ ದಾನದ ಮೌಲ್ಯವನ್ನು (ಸಿದ್ಧಾಯದ ರೂಪದಲ್ಲಿ) ಮಧ್ಯಸ್ತ ವಸೂಲಿ ಮಾಡಿ ಕೊಡಬೇಕೆಂಬ ಅಭಿಪ್ರಾಯವು ಈ ಶಾಸನದ ಅಧ್ಯಯನ ದಿಂದ ವ್ಯಕ್ತವಾಗುತ್ತದೆ. ಇದು ವೈಷ್ಣವ ದೇವತೆಗಳ ಪೂಜಾ ವಿನಿಯೋಗಕ್ಕೆ ಬಿಟ್ಟದಾನವಾದರೂ ಇದರಲ್ಲಿ ಕೊಡೆವೂರ ಶಂಕರನಾರಾಯಣ ದೇವರ ಉಲ್ಲೇಖವಿದೆ.

ಇದೇ ಶಾಸನದ ೩೧ನೇ ಸಾಲಿನಿಂದ ಇನ್ನೊಂದು ದಾನಶಾಸನವು ಆರಂಭವಾಗುತ್ತದೆ. ಇದು ಕೂಡಾ ಈ ಮಠದ ಯತಿಗಳಿಗೆ ಬಿಟ್ಟದಾನವಾಗಿದೆ. ಇದರ ಕಾಲ ೧೩೬೪ ದುರ್ಮತಿ ಸಂವತ್ಸರ ಕಾರ್ತಿಕ ೧೨ (ಕ್ರಿ.ಶ. ೧೪೪೧ ಅಕ್ಟೋಬರ್ ೨೭) ಇದೇ ಮಠದ ಯತಿ ಗಳಾದ ಶ್ರೀ ಪುಣ್ಯಕೀರ್ತಿ ಶ್ರೀಪಾದಂಗಳು ಆರಾಧಿಸುವ ಶ್ರೀ ರಾಮ ದೇವರ ಅಮೃತಪಡಿ ನಂದಾ ದೀಪ್ತಿ ಉತ್ಸವ ನಡೆಸಲು ಬಾರಕೂರು ರಾಜ್ಯಪಾಲಕ ಚಂಡಪ್ಪ ಒಡೆಯರು ಆಯಿವತ್ತು ಕಾಟಿ ಹೊನ್ನನ್ನು ಬಿಟ್ಟರು. ಈ ಹಣ ಸಿವಳ್ಳಿ ಪಡುವಣ ಭಾಗದ ಒಳಗಣ ಬೆಳಕಲ್ ಅರ್ಕಳಿ ಬೆಟ್ಟು, ನಡುವರಿ ಸ್ಥಳಗಳ ಸಿದ್ಧಾಯದ ಮೊತ್ತ ವಾಗಿವೆ. ಈ ಸಿದ್ಧಾಯದ ಮೊತ್ತವನ್ನು ಈ ಸ್ಥಳಗಳಲ್ಲಿ ಕೃಷಿಗೈಯುತ್ತಿದ್ದ 'ಸಾರಾಯದ' ಒಕ್ಕಲು (ಆಶ್ರಿತ ಒಕ್ಕಲು) ಗಳಿಂದ ವಸೂಲಿ ಮಾಡಿಕೊಡುವುದು ಹಿಂದೆ ತಿಳಿಸಿದ ಮಧ್ಯಸ್ಥನಿಗೆ ಸೇರಿದ್ದು. ಈ ಶಾಸನದಲ್ಲಿ ಗಮನಿ ಸುವ ಸಂಗತಿ ಯಾವುದೆಂದರೆ, ಈ ದಾನವು ವೈಷ್ಣವೇತರ ದೇವತೆಗಳಾದ, ತ್ರಿಯಂಬಕ, ಸುಬ್ರಹ್ಮಣ್ಯ ಮಹಾ ದೇವರ ಒಪ್ಪಿಗೆ ಪಡೆದು ಬಿಟ್ಟದ್ದು. ಇದು ಆಗಿನ ಕಾಲ ದಲ್ಲಿದ್ದ ಮತೀಯ ಸೌಹಾರ್ದತೆಯ ದ್ಯೋತಕವಾಗಿದೆ ಎಂದು ಅಭಿಪ್ರಾಯ ಪಡಲು ಅವಕಾಶವಿದೆ. ಒಟ್ಟಿನಲ್ಲಿ ಈ ಶಾಸನವು ಇಲ್ಲಿನ ಸಾಮಾಜಿಕ ಆರ್ಥಿಕ ಮತ್ತು ವಿವಿಧ ಪಂಥೀಯ ಸ್ಥಿತಿಗಳನ್ನು ತಿಳಿಯಲು ಸಹಾಯಕ ವಾಗಿದೆ.

ಮೇಲೆ ತಿಳಿಸಿದ ಶಾಸನಗಳ ಅಧ್ಯಯನದಿಂದ ಕಂಗುಮಠವು ಧರ್ಮ ಗ್ರಂಥಗಳಲ್ಲಿ ತಿಳಿಸಿದಂತೆ ವೈಷ್ಣವ ದೇವತೆಗಳನ್ನು ಆರಾಧಿಸುವ ಸ್ಥಳ, ಇಲ್ಲಿ ಪೂಜೆ

8 ಹೆಚ್ಚಿನ ವಿವರಗಳಿಗೆ ನೋಡಿ ಕೆ. ಜಿ- ವಸಂತಮಾಧವ Religions in Coastal Karnataka NEW DELHI, 1989 P 116

ನಡೆಸುವವರು ವೈಷ್ಣವ ಸಿದ್ಧಾಂತ ಪರಿಣತರಾದ ಯತಿಗಳು ಈ ಮಠದ ರಚನೆ ಮತ್ತು ಇಲ್ಲಿ ನಡೆಯುವ ಪೂಜಾ ಕಟ್ಟಳೆಗಳು ದೇವಾಲಯಗಳಿಗಿಂತ ಸ್ವಲ್ಪ ವ್ಯತ್ಯಾಸವಿದೆ. ದೇವಾಲಯದ ಭಾಗಗಳಾದ ಮಂಟಪ ಗರ್ಭಗೃಹ ಮತ್ತು ಬಲಿಕಲ್ಲು ಮಠದಲ್ಲಿ ಇರುವುದಿಲ್ಲ. ಚೌಕಿ ಆಕಾರದಲ್ಲಿ ಕಟ್ಟಿದ ಮಠವು ಸ್ವಾಮಿಗಳ ಪೂಜಾ ಕೇಂದ್ರವಾಗಿದೆ. ಇಲ್ಲಿ ನಡೆಯುವ ಪೂಜೆಗಳು ವೈಯಕ್ತಿಕ ಮನೆಗಳಲ್ಲಿ ನಡೆಯುವಂತಿದೆ. ಮಠದಲ್ಲಿ ಪೂಜೆ ಮಾಡುವ ಸ್ವಾಮಿಗಳಿಗೆ ತಮ್ಮ ದೈವಿಕ ಕಾರ್ಯಗಳನ್ನು ನಡೆಸಿ ಕೊಂಡು ಬರಲು ಕೆಲವು ಪ್ರಮುಖ ವ್ಯಕ್ತಿಗಳು ಮತ್ತು ಆಡಳಿತದ ಅಧಿಕಾರಿಗಳು ಭೂಮಿ ದಾನ ಮಾಡುತ್ತಿದ್ದರು, ಈ ದಾನಗಳು ಸಿದ್ಧಾಯದ ಮೌಲ್ಯವಾಗಿತ್ತು. ಇದರಿಂದಾಗಿ ಈ ಮಠದ ಯತಿಗಳು ಅನುಪಸ್ಥಿತ ಭೂಹಿಡುವಳಿಗಾರರಾಗಲು ಸಹಾಯಕವಾಯಿತು. ಇವರಿಗೆ ಬಿಟ್ಟ ವಿವಿಧ ರೀತಿಯ ಭೂಮಿಗಳನ್ನು ಹಲವು ತರಗಳ ಒಕ್ಕಲುಗಳಿಂದ ಬೇಸಾಯ ನಡೆಸಿ ಅವರಿಂದ ಗೇಣಿ ಹಣದ ರೂಪದಲ್ಲಿ ಪಡೆಯುವ ಪದ್ಧತಿ ಕ್ರಮೇಣ ಬಳಕೆಗೆ ಬಂತು.

ಈ ಲೇಖನವನ್ನು ರಚಿಸುವಲ್ಲಿ ಸಹಕರಿಸಿದ ಡಾ। ಮಾಧವ ಕಟ್ಟಿ ಮತ್ತು ಡಾ।ಸಂಪತ್, ಭಾರತ ಶಾಸನ ಇಲಾಖೆ, ಮೈಸೂರು ಇವರಿಗೆ ನನ್ನ ಕೃತಜ್ಞತೆಗಳು.

ಬಿ.ಎಸ್. ರಾಮಭಟ್ಟ*

# ಕೊಪ್ಪಲುಮಠ ಮತ್ತು ಬಿದನೂರಿನ ಅರಸೊತ್ತಿಗೆಯ ಗದ್ದುಗೆಗಳು

ಇಕ್ಕೇರಿಯು ಹಾಳಾದ ನಂತರ ಕ್ರಿ. ಶ. ಸು. ೧೬೩೯ರಲ್ಲಿ ವೀರಭದ್ರನಾಯಕನು ಬಿದನೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡನು. ಇದು ಸು. ೧೨೫ ವರ್ಷಗಳ ಕಾಲ ಕೆಳದಿ ಸಂಸ್ಥಾನದ ಮೂರನೆಯ ರಾಜಧಾನಿಯಾಗಿತ್ತು. ವೀರಭದ್ರ ನಾಯಕನು ಸೇರಿದಂತೆ ಇಲ್ಲಿ ಒಂಬತ್ತು ರಾಜರು ಮತ್ತು ಇಬ್ಬರು ರಾಣಿಯರು ಆಳಿದರು.

ಹಿಂದಿನ ಅರಸೊತ್ತಿಗೆಯ ಕಾಲದಲ್ಲಿ ರಾಜ-ರಾಣಿಯರ ಸಮಾಧಿಗಳಿಗಾಗಿ ಒಂದು ಪ್ರತ್ಯೇಕ ಸ್ಥಳವನ್ನು ಮೀಸಲಿಡುತ್ತಿದ್ದರು. ಕೆಳದಿ ಸಂಸ್ಥಾನದ ಕಾಲದಲ್ಲಿ ಇಂತಹ ಸ್ಥಳವನ್ನು 'ಕೊಪ್ಪಲು' ಎಂದು ಕರೆಯುತ್ತಿದ್ದರು. ಇದು ಒಂದು ವೀರಶೈವ ಮಠಕ್ಕೆ ಹೊಂದಿಕೊಂಡಿರುವುದು ಗಮನಾರ್ಹವಾಗಿದೆ. ಆದುದರಿಂದ ಇದನ್ನು 'ಕೊಪ್ಪಲುಮಠ' ಎಂದು ಕರೆದರು. ಇಕ್ಕೇರಿ ಮತ್ತು ಬಿದನೂರಿನಲ್ಲಿ ಮರಣ ಹೊಂದಿದ ರಾಜರಾಣಿಯರನ್ನು ಕೊಪ್ಪಲುಮಠದಲ್ಲಿ ಸಮಾಧಿ ಮಾಡಲಾಯಿತೆಂದು ಗ್ರಂಥಗಳಲ್ಲಿ ಹೇಳಿದೆ.ಬಿದನೂರಿನಲ್ಲಿ ಅಲ್ಲದೆ ಇಕ್ಕೇರಿಯಲ್ಲೂ ಕೊಪ್ಪಲುಮಠವಿದೆ. ಸಾಮಾನ್ಯ ಅರ್ಥದಲ್ಲಿ ಕೊಪ್ಪಲು ಎಂದರೆ ಒಂದು ಉಪ ಗ್ರಾಮ. ಗ್ರಾಮಕ್ಕೆ ಸೇರಿದ ಕೆಲವೇ ಮನೆಗಳ ಗುಂಪು ಎಂದು ಅರ್ಥ ; ಎಲ್ಲಾ ಕೊಪ್ಪಲುಗಳಲ್ಲಿ ಸಮಾಧಿ ಅಥವಾ ಗದ್ದುಗೆಗಳಿರಬೇಕೆಂಬ ನಿಯಮವಿಲ್ಲ.

ಬಿದನೂರಿನಲ್ಲಿ ಎರಡು ಕೊಪ್ಪಲುಮಠಗಳಿವೆ. ಕೋಟೆಯ ಎದುರು ಭಾಗದ ಒಂದು ತೋಟದ ಸ್ಥಳಕ್ಕೆ ಕೊಪ್ಪಲುಮಠ ಎಂದು ಈಗ ಕರೆಯುತ್ತಿದ್ದಾರೆ. ಈ ತೋಟವು ಈಗ ಹೊಸದಾಗಿ ನಿರ್ಮಾಣವಾಗಿದೆ. ಇಲ್ಲಿ ಎರಡು ಪುಟ್ಟ ಶಿವಾಲಯಗಳಿವೆ. ಎರಡು ದೇವಾಲಯಗಳೂ ಸ್ವಲ್ಪ ದೂರದಲ್ಲಿವೆ. ಒಂದು ಶಿವಾಲಯದ ಹೊರ ಗೋಡೆಯ ಮೇಲೆ ರಾಜರಾಣಿಯರ ಚಿತ್ರಗಳನ್ನು ಕೆತ್ತಿದ್ದಾರೆ. ಆದರೆ ಇಲ್ಲಿ ಗದ್ದುಗೆಗಳು ಕಂಡು ಬಂದಿಲ್ಲ.

ಇನ್ನೊಂದು ಕೊಪ್ಪಲುಮಠ ಬಿದನೂರಿನಿಂದ ಸು. ಐದು ಕಿ. ಮೀ. ದೂರದ ಕೊಲ್ಲೂರು ರಸ್ತೆಯ ಒಂದು ಪಾರ್ಶ್ವದಲ್ಲಿರುವುದು ತಿಳಿದುಬಂದಿದೆ. ಕೊಪ್ಪಲು ಮಠವು ತುಂಬಾ ವಿಶಾಲವಾಗಿದೆ. ಇದರ ವಿಸ್ತೀರ್ಣ ಸು. ೨೫ ಎಕರೆ ಎಂದು ಇಲ್ಲಿ ವಾಸವಾಗಿರುವ ಶ್ರೀ ಶ್ರೀನಿವಾಸಭಟ್ಟರು ಹೇಳುತ್ತಾರೆ.ಈಗ ಈ ಸ್ಥಳದಲ್ಲಿ ಒಂದು ವಿಶಾಲವಾದ ಕೆರೆ, ತಿಳಿನೀರಿನ ಎರಡು ಕೊಳಗಳು, ಮಠದ ಕಟ್ಟಡದ ಪುಟ್ಟ ತಳಪಾಯ ಮತ್ತು ಬಿದ್ದು ಹೋಗಿರುವ ಗೋಡೆಯ ಅವಶೇಷಗಳು ಮಾತ್ರ ಕಂಡು ಬರುತ್ತವೆ. ಬಿದನೂರಿನಲ್ಲಿ ಈವರೆಗೂ ಶೋಧಿಸಿದ ೪೩ ವೀರಶೈವ ಮಠಗಳಲ್ಲಿ ಇದೂ ಸಹ ಸೇರಿಕೊಂಡಿದೆ.

ಕೊಪ್ಪಲುಮಠದ ಹಿಂಭಾಗದ ಸ್ವಲ್ಪ ಎತ್ತರವಾದ ಸ್ಥಳದಲ್ಲಿ ರಾಜರಾಣಿಯರ ಗದ್ದುಗೆಗಳಿವೆ. ಈಗ ಇಲ್ಲಿ ದಟ್ಟವಾದ ಕಾಡು ಬೆಳೆದಿದೆ. ಈ ಸ್ಥಳದ ವಿಸ್ತೀರ್ಣ

* ನಿವೃತ್ತ ಉಪನ್ಯಾಸಕ, ೩ನೆಯ ಅಡ್ಡರಸ್ತೆ, ತಿಲಕ್‌ನಗರ, ಶಿವಮೊಗ್ಗ-೫೭೭ ೨೦೧

ಸು. ೧೦ ಎಕರೆಗಳಷ್ಟಿದೆ. ಇದರ ಸುತ್ತಲೂ ಕಂದಕವನ್ನು ನಿರ್ಮಿಸಿದ್ದು ಗೋಡೆಯನ್ನು ಕಟ್ಟಲಾಗಿತ್ತು. ಈಗ ಗೋಡೆಯ ಅವಶೇಷವು ಕಂಡುಬರುತ್ತದೆ. ಇಲ್ಲಿ ೧೦ ಗದ್ದುಗೆಗಳಿವೆ. ಇವುಗಳ ನಡುವೆ ೧೦-೧೫ ಅಡಿ ಅಂತರವಿದೆ. ಇವುಗಳನ್ನು ಸಾಲಾಗಿ ನಿರ್ಮಿಸಲಾಗಿದೆ. ಇವುಗಳನ್ನು ಗ್ರಾನೈಟ್ ಮತ್ತು ಒರಟು ಕಲ್ಲಿನಿಂದ ಕಟ್ಟಲಾಗಿದೆ. ಕಲ್ಲನ್ನು ನಯಗೊಳಿಸಿಲ್ಲ. ಒಂದೇ ಆಕಾರ ಮತ್ತು ಗಾತ್ರವಿಲ್ಲ. ಗಚ್ಚುಗಾರೆಯನ್ನು ಬಳಸಲಾಗಿದೆ. ಪ್ರತಿಯೊಂದು ಗದ್ದುಗೆಯೂ ೨೦ ಅಡಿ ಉದ್ದ ಮತ್ತು ೨೦ ಅಡಿ ಅಗಲವಾಗಿದ್ದು, ಆಯತಾಕಾರವಾಗಿದೆ. ಮೇಲುಭಾಗದಲ್ಲಿ ಗೋಪುರವಿದ್ದಿರಬಹುದು. ಆದರೆ ಈ ಗದ್ದುಗೆಗಳ ಮೇಲುಭಾಗ ಬಿದ್ದು ಹೋಗಿರುವುದರಿಂದ ಈಗ ಏನೂ ಕಾಣಿಸುವುದಿಲ್ಲ. ಈ ಗದ್ದುಗೆಗಳಲ್ಲಿ ಅಲಂಕೃತವಾದ ಕೆತ್ತನೆಗಳಿಲ್ಲ. ಬಾಹ್ಯ ನೋಟಕ್ಕೆ ಇವು ಆಕರ್ಷಕವಾಗಿಲ್ಲ.

ಪ್ರತಿಯೊಂದು ಗದ್ದುಗೆಯ ಮುಂದೆ ಸಮಾಧಿಸ್ತರಾದವರ ಶಿಲ್ಪವನ್ನು ಕೆತ್ತಿದ ಕಲ್ಲನ್ನು ನೆಟ್ಟದೆ. ಕಲ್ಲಿನ ಮೇಲುಭಾಗದಲ್ಲಿ ಸೂರ್ಯ ಮತ್ತು ಚಂದ್ರನ ಚಿತ್ರವಿದೆ. ರಾಜ ಅಥವಾ ರಾಣಿಯ ಪಕ್ಕದಲ್ಲಿ ಒಂದು ಸ್ತ್ರೀ ವಿಗ್ರಹ ಇದೆ. ಇದು ಮಹಾಸತಿ ಕಲ್ಲಿನಂತಿದ್ದು ಕೈಯಲ್ಲಿ ನಿಂಬೆ ಹಣ್ಣಿದೆ. ಆದರೆ ನೃತ್ಯಭಂಗಿಯಲ್ಲಿದೆ. ಇವರ ಉಡುಪಿನಲ್ಲಿ ಕಾಲಕಾಲಕ್ಕೆ ಬದಲಾವಣೆಯಾಗಿರುವುದನ್ನು ಗಮನಿಸಬಹುದು. ಕ್ರಿ. ಶ. ೧೬೬೧ರಲ್ಲಿ ಮರಣ ಹೊಂದಿದ ಶಿವಪ್ಪನಾಯಕನೊಂದಿಗೆ ಅವನ ಪತ್ನಿಯರಾದ ಲಿಂಗಮ್ಮಾಜಿ ಮತ್ತು ನಾಗಮ್ಮಾಜಿಯರು ಪತಿಯೊಂದಿಗೆ ಜೀವಂತ ಸಮಾಧಿಯಾದರು. ಹಾಗೆಯೇ ೧೬೬೨ರಲ್ಲಿ ಸ್ವರ್ಗಸ್ಥನಾದ ಹಿರಿಯ ವೆಂಕಟಪ್ಪನಾಯಕನ ಪತ್ನಿ ಮಲ್ಲಮ್ಮಾಜಿಯೂ, ಕ್ರಿ. ಶ. ೧೬೬೪ರಲ್ಲಿ ನಿಧನ ಹೊಂದಿದ ಭದ್ರಪ್ಪನಾಯಕನ ಇಬ್ಬರು ಪತ್ನಿಯರೂ ಸಹ ಜೀವಂತ ಸಮಾಧಿಯಾದರು. ಆದರೆ ಹಿರಿಯ ಸೋಮಶೇಖರನಾಯಕನ ಪತ್ನಿ ಚೆನ್ನಮ್ಮಾಜಿಯು ಸಹಗಮನ ಪದ್ಧತಿಯನ್ನು ವಿರೋಧಿಸಿ ಬಹಿಷ್ಕರಿಸಿದಳು, ಇವಳಿಂದ ಮುಂದೆ ಯಾರೂ ಸಹಗಮನ ಮಾಡಲಿಲ್ಲ.

ಕಲ್ಲಿನಲ್ಲಿ ಕೆತ್ತಿರುವ ರಾಜ ಅಥವಾ ರಾಣಿಯರ ಹೆಸರನ್ನಾಗಲೀ, ನಿಧನ ಹೊಂದಿದ ಕಾಲವನ್ನಾಗಲೀ ಕೆತ್ತಿಲ್ಲ. ಆದರೂ ಇವರನ್ನು ಗುರುತಿಸುವುದು ಅಷ್ಟೇನೂ ಕಷ್ಟವಾಗದು. ಒಂದು ಕ್ರಮದಲ್ಲಿ ಇವುಗಳನ್ನು ಕಟ್ಟಿರುವುದರಿಂದ ಇದು ಸಾಧ್ಯವಾಗಿದೆ. ಶಿವಪ್ಪನಾಯಕನ ಗದ್ದುಗೆಯು ಮಾತ್ರ ಸಾಲಿನಿಂದ ಸ್ವಲ್ಪ ಮುಂದೆ ಇದೆ. ಹಿರಿಯ ವೆಂಕಟಪ್ಪನಾಯಕ ಎಂದು ಗುರುತಿಸಲಾಗಿರುವ ಗದ್ದುಗೆಯ ಮುಂದೆ ಒಂದು ಪುಟ್ಟ ಮಂಟಪವಿದೆ. ಇವುಗಳಿಗೆ ವಾರ್ಷಿಕ ಪೂಜೆ ನಡೆಯುತ್ತಿತ್ತು ಎಂದು ಪ್ರಚಲಿತವಿದೆ.

ಕೊಪ್ಪಲು ಮಠದಲ್ಲಿ ಶಿವಪ್ಪನಾಯಕ (೧೬೪೬-೧೬೬೧), ವೆಂಕಟಪ್ಪನಾಯಕ (೧೬೬೧-೬೨), ಭದ್ರಪ್ಪನಾಯಕ (೧೬೬೨-೬೪) ಹಿರಿಯ ಸೋಮಶೇಖರನಾಯಕ(೧೬೬೪-೭೨), ಚೆನ್ನಮ್ಮಾಜಿ(೧೬೭೨-೧೬೯೭), ಹಿರಿಯ ಬಸಪ್ಪನಾಯಕ (೧೬೯೭-೧೭೧೪), ಇಮ್ಮಡಿ ಸೋಮಶೇಖರನಾಯಕ (೧೭೧೪-೧೭೪೦) ಇಮ್ಮಡಿ ಸೋಮಶೇಖರನಾಯಕನ ಮಲತಾಯಿ ಚನ್ನಮ್ಮಾಜಿ, ಹಿರಿಯ ಬಸಪ್ಪನಾಯಕನ ಚಿಕ್ಕ ಮಗ ವೀರಭದ್ರನಾಯಕ(೧೭೩೩)ಮತ್ತು ಚನ್ನಬಸವನಾಯಕ (೧೭೫೫-೧೭೫೭)ನ ಗದ್ದುಗೆಗಳಿವೆ. ಇವರಲ್ಲಿ ಇಮ್ಮಡಿ ಸೋಮಶೇಖರನಾಯಕನು ಶಿವಮೊಗ್ಗದ ಮಂಡಳಿ ಮಠದಲ್ಲಿ ವೈಶಾಖ ಬಹುಳ ತೃತೀಯ ತಿಥಿಯಲ್ಲಿ ಶಿವೈಕ್ಯನಾದನು. ಇವನ ಪಾರ್ಥಿವ ಶರೀರವನ್ನು ಬಿದನೂರಿಗೆ ತಂದು ಇದೇ ಪಂಚಮಿಯ ದಿನ ಗದ್ದುಗೆಯಲ್ಲಿಡಲಾಯಿತು.

ಬಿದನೂರಿನಲ್ಲಿ ಆಳಿದ ಕಿರಿಯ ಬಸಪ್ಪನಾಯಕನ (ಸು. ೧೭೪೦-೧೭೫೫) ಗದ್ದುಗೆಯ ಕೊಪ್ಪಲುಮಠದಲ್ಲಿಲ್ಲ. ಕೋಟೆಯ ಹಿಂಭಾಗದ ಭದ್ರರಾಜಪುರ ಬಡಾವಣೆಯ ಡಂಬಳ ಮಠದಿಂದ ಸ್ವಲ್ಪ ಅಂತರದಲ್ಲಿದೆ. ಇದು ಈಗ ಪೂರ್ಣವಾಗಿ ಪಾಳಾಗಿದ್ದು ಖಾಸಗಿ ವ್ಯಕ್ತಿಯೊಬ್ಬರ ಹಿತ್ತಲಿನಲ್ಲಿ ಸೇರಿ ಹೋಗಿದೆ. ಗದ್ದುಗೆಯ ಮುಂದೆ ನಿಲ್ಲಿಸಿರುವ ಕಲ್ಲಿನ ಮೇಲು ಅಂತಸ್ತಿನಲ್ಲಿ ಕಿರಿಯ ಬಸಪ್ಪನಾಯಕನ ಶಿಲ್ಪವೂ, ಕೆಳ ಅಂತಸ್ತಿನಲ್ಲಿ ಒಬ್ಬ ಸೈನಿಕನ ತಲೆಯ ಮೇಲೆ ಇನ್ನೊಬ್ಬ ಸೈನಿಕನು ನಿಂತು ಪಟ್ಟದ ಕುದುರೆಯನ್ನು ಹಿಡಿದುಕೊಂಡಿರುವ ಚಿತ್ರವಿದೆ. ವೀರಭದ್ರನಾಯಕನ ಗದ್ದುಗೆಯು ಕೌಲೆದುರ್ಗದ ಬಳಿಯ ಕೊಂಡಲೂರಿನಲ್ಲಿಯೂ ಕೊನೆಯ ರಾಣಿ

ವೀರಮ್ಮಾಜಿಯ ಗದ್ದುಗೆಯು ಧಾರವಾಡದ ನರಗುಂದದ ಬಳಿಯಲ್ಲಿದೆ.

ಸಮಾಧಿಗಳಿಗೆ ಸಂಬಂಧಿಸಿದ ಈ ಕೆಳಗಿನ ಅಂಶ ಗಳಲ್ಲೂ ಇನ್ನಷ್ಟು ಶೋಧನೆ ನಡೆಯಬೇಕಿದೆ.

೧. ರಾಜ ಅಥವಾ ರಾಣಿಯ ಪಕ್ಕದಲ್ಲಿರುವ ಸ್ತ್ರೀ ವಿಗ್ರಹವು ಮಹಾಸತಿಯ ಕಲ್ಲಿನಂತಿರುವ ಕಾರಣ ವೇನು ? ನೃತ್ಯದ ಭಂಗಿಯಲ್ಲಿ ಏಕೆ ಕೆತ್ತಿದೆ ? ಈ ವಿಗ್ರಹವು ರಾಣಿಯ ವಿಗ್ರಹವಾಗಿರಲಾರದು. ಆದರೂ ಉಡುಪುಗಳೂ, ತಲೆಯ ಮೇಲಿನ ಕಿರೀಟದ ವಿನ್ಯಾಸ ಮತ್ತು ಆಭರಣಗಳು ರಾಣಿಯನ್ನು ಹೋಲುತ್ತವೆ.

೨. ಶಿವಪ್ಪನಾಯಕನದೆಂದು ಗುರುತಿಸಲಾಗಿರುವ ಕಲ್ಲಿನಲ್ಲಿ ರಾಜ ಮತ್ತು ಸ್ತ್ರೀ ವಿಗ್ರಹದ ನಡುವೆ ಕೆತ್ತಿರುವ ಪುಟ್ಟ ಬಾಲಕಿ ಯಾರು ಎಂಬುದು ತಿಳಿಯುವುದಿಲ್ಲ.

೩. ಶಿವಪ್ಪನಾಯಕನ ವಿಗ್ರಹವಿರುವ ಕಲ್ಲಿನ ತಳಭಾಗದಲ್ಲಿ ೧೨ ಕಲಶಗಳಿವೆ. ಚನ್ನಬಸವನಾಯಕನ ವಿಗ್ರಹದ ತಳದಲ್ಲಿ ಆರು ಕಳಶಗಳಿವೆ. ಉಳಿದ ವಿಗ್ರಹಗಳ ತಳದಲ್ಲಿ ಕಲಶಗಳು ಕಾಣಿಸುತ್ತಿಲ್ಲ. ಹೀಗೆ ವ್ಯತ್ಯಾಸ ವಿರಲು ಕಾರಣವೇನೆಂಬುದನ್ನು ತಿಳಿಯಬೇಕಾಗಿದೆ. ಅಲ್ಲದೆ ಶಿವಪ್ಪನಾಯಕನ ವಿಗ್ರಹವಿರುವ ಕಲ್ಲಿನ ತಳ ಭಾಗದಲ್ಲಿ ನಂದಿಯ ವಿಗ್ರಹವಿದೆ. ಉಳಿದವುಗಳಲ್ಲಿ ಇದನ್ನು ಕೆತ್ತಿಲ್ಲ.

ಹೀಗೆ ಹಲವಾರು ಅಂಶಗಳು ಕುತೂಹಲಕಾರಿ ಯಾಗಿದೆ. ಕೊಪ್ಪಲುಮಠದ ಇನ್ನೊಂದು ಭಾಗದಲ್ಲಿ ರಾಜರಾಣಿಯರ ಗದ್ದುಗೆಗಳಿಗಿಂತ ದೂರದಲ್ಲಿ ಕೆಲವು ಸಚಿವರು ಮತ್ತು ದಂಡನಾಯಕರ ಗದ್ದುಗೆಗಳಿವೆ. ಇವುಗಳ ಎದುರಿನಲ್ಲಿಯೂ ಸಮಾಧಿಸ್ಥರಾದವರ ವಿಗ್ರಹ ವನ್ನು ಕೆತ್ತಿ ನಿಲ್ಲಿಸಲಾಗಿದೆ. ರಾಜಗೌರವದಿಂದ ಸಮಾಧಿ ಮಾಡಿರುವವರ ವಿಗ್ರಹದ ತಳಭಾಗದಲ್ಲಿ ಕಳಶ ಗಳನ್ನು ಕೆತ್ತಿದೆ.

ಸು. ಎರಡು ಶತಮಾನಗಳಿಂದ ಅಜ್ಞಾತವಾಗಿದ್ದ ಕೊಪ್ಪಲುಮಠದ ಈ ಗದ್ದುಗೆಗಳು ಈಚೆಗೆ ಕಂಡುಬಂದಿ ರುವುದರಿಂದ ಕೆಳದಿಯ ಇತಿಹಾಸದ ಮೇಲೆ ಹೆಚ್ಚಿನ ಬೆಳಕು ಚೆಲ್ಲಿದಂತಾಗಿದೆ. ಬಿದನೂರಿನಲ್ಲಿ ಆಳಿದ ರಾಜ ರಾಣಿಯರ ಸಹಜವಾದ ಶಿಲ್ಪಗಳನ್ನು ಇಲ್ಲಿ ನೆಟ್ಟಿರುವ ಕಲ್ಲಿನಲ್ಲಿ ನೋಡಬಹುದು. ಸಾಮಾನ್ಯವಾಗಿ ಅರಸು ಮನೆತನದ ಗದ್ದುಗೆಗಳನ್ನು ಸುಂದರವಾಗಿ ನಿರ್ಮಿಸುವ ಪದ್ಧತಿಯು ರೂಢಿಯಲ್ಲಿದೆ. ಆದರೆ ಇದಕ್ಕೆ ಅಪವಾದ ವೆಂಬಂತೆ ಇಲ್ಲಿರುವ ಗದ್ದುಗೆಗಳು ತೀರಾ ಸಾಮಾನ್ಯ ವಾಗಿವೆ. ಅಲ್ಲದೆ ನಿರೀಕ್ಷಿಸಿದಷ್ಟು ಸುಭದ್ರವಾಗಿಲ್ಲ. ಇದಕ್ಕೆ ಕಾರಣವೇನೆಂಬುದು ತಿಳಿಯುವುದಿಲ್ಲ. ವೀರ ಶೈವರಾದ ಕೆಳದಿ ಅರಸು ಮನೆತನದಲ್ಲಿ ಸಹಗಮನ ಪದ್ಧತಿಯು ಇನ್ನೂ ರೂಢಿಯಲ್ಲಿದ್ದುದು ಆಶ್ಚರ್ಯವೆನ್ನ ಬಹುದು.

ಗದ್ದುಗೆಗಳು ಈಗ ಪಾಳಾಗಿ ಬಿದ್ದುಹೋಗುತ್ತಿವೆ. ಮೇಲುಭಾಗದ ಕಲ್ಲುಗಳು ಕಳಚಿ ರಾಶಿಯಾಗಿ ಬಿದ್ದಿವೆ. ಇದನ್ನೂ ಈಗಾಗಲೇ ಕಳ್ಳತನದಿಂದ ಸಾಗಿಸಲಾಗುತ್ತಿದೆ. ಇವುಗಳಿಗೆ ಯಾವ ರಕ್ಷಣೆಯೂ ಇಲ್ಲ. ಈಗಾಗಲೇ ಕಿರಿಯ ಬಸವನಾಯಕನ ಗದ್ದುಗೆಯು ಹೇಳಹೆಸರಿಲ್ಲ ದಂತಾಗಿರುವುದು ದೊಡ್ಡ ದುರಂತ.

**ಆಧಾರ ಗ್ರಂಥಗಳು**

೧. ಕೆಳದಿ ನೃಪವಿಜಯ : ಸಂ.ಕೆ. ಗುಂಡಾಜೋಯ್ಸ್
೨. " " : ಸಂ. ಶಾಮಾಶಾಸ್ತ್ರಿ
೩. ಸಹಜ : ಶ್ರೀಧರ ತೇಲ್ಕರ್
೪. ಬಿದನೂರ ಸಿರಿ : ಶ್ರೀ ಶಂಕರನಾರಾಯಣರಾವ್, ನಗರ
೫. ಕನ್ನಡ–ಕನ್ನಡ–ಇಂಗ್ಲಿಷ್ ನಿಘಂಟು : ಐ.ಬಿ.ಎಚ್. ಪ್ರಕಾಶನ ಬೆಂಗಳೂರು

**ಎಸ್.ಎಂ. ನಾಗಭೂಷಣ***

# ಉಜ್ಜಿನಿಯಲ್ಲಿ ಕೆಳದಿ ರಾಣಿ ವೀರಮ್ಮಾಜಿ ಸಮಾಧಿ ಶೋಧನೆ

ಕೆಳದಿ ಇಮ್ಮಡಿ ಬಸಪ್ಪನಾಯಕನ ರಾಣಿಯಾದ ವೀರಮ್ಮಾಜಿ ತನ್ನ ಗಂಡನ ಸಾವಿನ ನಂತರ ಹಾಗೂ ಮೊದಲ ದತ್ತು ಪುತ್ರ ಚೆನ್ನಬಸಪ್ಪನಾಯಕನ ಸಾವಿನ ನಂತರ ಕ್ರಿ.ಶ. ೧೭೫೮ ರಿಂದ ೧೭೬೩ರವರೆಗೆ ಹೈದರಾಲಿ ಹಾಗು ಚಿತ್ರದುರ್ಗದ ಪಾಳೆಗಾರರೊಡನೆ ಹೋರಾಡುತ್ತಾ ಆಡಳಿತ ಮಾಡಿದಳು. ಕ್ರಿ.ಶ. ೧೭೫೮ರಲ್ಲಿ ಮೊದಲ ದತ್ತುಪುತ್ರ ಚೆನ್ನಬಸಪ್ಪನಾಯಕನ ಸಾವಿನ ನಂತರ ವೀರಮ್ಮಾಜಿ ತನ್ನ ಸೋದರ ಮಾವನಾದ ಬಂಕಾಪುರದ ಪಟ್ಟಣಶೆಟ್ಟಿ ಚೆನ್ನವೀರಪ್ಪನ ಮಗನನ್ನು ದತ್ತು ತೆಗೆದು ಕೊಂಡು ಆತನಿಗೆ ಸೋಮಶೇಖರ ನಾಯಕನೆಂದು ನಾಮಕರಣ ಮಾಡಿ ಪಟ್ಟ ಕಟ್ಟಿದಳು. ಈ ಬಾಲಕನನ್ನು ಮುಂದಿಟ್ಟುಕೊಂಡು ಪ್ರಜೆಗಳ ನಿಂದನೆಯಲ್ಲಿ ಕೆಳದಿ ರಾಜ್ಯದ ಆಡಳಿತವನ್ನೆಲ್ಲಾ ತಾನೆ ನಿರ್ವಹಿಸ ತೊಡಗಿದಳು. ಈ ವೇಳೆಗೆ ದಂಡೆತ್ತಿಬಂದ ಹೈದರಾಲಿ ಕೆಳದಿ ರಾಜಧಾನಿ ಬಿಂದನೂರನ್ನು ಅತ್ಯಂತ ಪ್ರಯಾಸ ದಿಂದ ವಶಪಡಿಸಿಕೊಂಡು ರಾಣಿ ವೀರಮ್ಮಾಜಿ ಹಾಗೂ ಆಕೆಯ ದತ್ತುಪುತ್ರನಾದ ಬಾಲಕ ಮೂರನೇ ಸೋಮಶೇಖರ ನಾಯಕನನ್ನು ಸೆರೆ ಹಿಡಿದು ಮಧುಗಿರಿ ಕೋಟೆಯಲ್ಲಿ ಬಲವಾದ ಪಹರೆಯೊಡನೆ ಸೆರೆಯಲ್ಲಿರಿಸಿದ. ಕೆಲದಿನಗಳಲ್ಲಿ ಸೆರೆಯಲ್ಲಿದ್ದ ವೀರಮ್ಮಾಜಿ ಅಸ್ವಸ್ಥಳಾಗಿದ್ದಳು. ಕ್ರಿ.ಶ. ೧೭೬೪ರಲ್ಲಿ ಕೆಳದಿ ವೀರಮ್ಮಾಜಿಯ ಸಹಾಯಕ್ಕಾಗಿ ತಡವಾಗಿ ಬಂದ ಮರಾಠ ಮಾಧವ ರಾಯನು ಸೈನ್ಯದೊಡನೆ ಮಧುಗಿರಿಗೆ ಮುತ್ತಿಗೆ ಹಾಕಿ ರಾಣಿ ವೀರಮ್ಮಾಜಿ ಹಾಗೂ ೩ನೇ ಸೋಮಶೇಖರ ನಾಯಕನನ್ನು ಅವರ ಪರಿವಾರವನ್ನು ಸೆರೆಯಿಂದ ಬಿಡಿಸಿ ಕೊಂಡು ಪೂನಾಕ್ಕೆ ಕರೆದೊಯ್ಯುವಾಗ ದಾರಿಯಲ್ಲಿ ಅಸ್ವಸ್ಥಳಾದ ರಾಣಿ ವೀರಮ್ಮಾಜಿ ತೀರಿಕೊಂಡಳೆಂದೂ, ಮೂರನೇ ಸೋಮಶೇಖರನಾಯಕನನ್ನು ತಮ್ಮ ಆಶ್ರಯ ದಲ್ಲಿ ನರಗುಂದದಲ್ಲಿ ಕೆಲ ವರ್ಷವಿರಿಸಿಕೊಂಡುದಾಗಿ ಉಲ್ಲೇಖಗಳಿವೆ. ಹೀಗೆ ಪುಣೆಗೆ ಹೋಗುವಾಗ ವೀರಮ್ಮಾಜಿ ಬಳ್ಳಾರಿ ಜಿಲ್ಲೆಯ ಉಜ್ಜನಿಯಲ್ಲಿ ತೀರಿ ಕೊಂಡಳೆಂದು 'ಶಿವತತ್ವ ರತ್ನಾಕರ ಗ್ರಂಥದಿಂದ ತಿಳಿದು ಬರುತ್ತದೆ. ಉಜನಿಯಲ್ಲಿ ವೀರಮ್ಮಾಜಿ ಸಮಾಧಿ ಸ್ಥಳ, ಸಮಾಧಿ, ಶಿಲ್ಪಿ ಹಾಗೂ ಅಸ್ಪಷ್ಟ ಶಿಲಾ ಶಾಸನದ ಮೂಲಕ ಶೋಧಿಸಲಾಗಿದೆ. "ಉಜ್ಜನಿ" ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲೂಕಿನಲ್ಲಿದ್ದು ತಾಲೂಕುಸ್ಥಳದಿಂದ ದಕ್ಷಿಣಕ್ಕೆ ಸುಮಾರು, ೨೨ ಕಿ.ಮೀ. ದೂರದಲ್ಲಿದೆ.

ಕೆಳದಿಯ ರಾಣಿಯಾಗಿದ್ದ ಚನ್ನಮ್ಮಾಜಿಯ ಕಾಲದಲ್ಲಿ, ಆಕೆ ಮರಾಠರಿಗೆ ನೀಡಿದ ಸಹಾಯದಿಂದ ಮರಾಠರ ಸ್ನೇಹಕ್ಕೆ ಪಾತ್ರಳಾಗಿದ್ದಳು. ಅಂದಿನಿಂದ ಪ್ರಾರಂಭವಾದ ಮರಾಠ–ಕೆಳದಿ ಸಂಬಂಧಗಳು ವೀರಮ್ಮಾಜಿಯನ್ನು ಸೆರೆಯಿಂದ ಬಿಡಿಸುವವರೆಗೆ ಮುಂದುವರಿಯುತ್ತದೆ.

ವೀರಮ್ಮಾಜಿಯೊಂದಿಗೆ ಕೆಳದಿ ಸಾಮ್ರಾಜ್ಯ ಅಂತ್ಯ ನಾಯಿತು. ಆದರೆ, ವೀರಮ್ಮಾಜಿ ಅಂತ್ಯ ಇನ್ನು ನಿಗೂಢವಾಗಿವೆ. ಡಾ|| ಕೆ.ಎನ್. ಚಿಟ್ನಿಸರು ಸಂಶೋಧನೆ ಮಾಡಿ ಮರಾಠರು ವೀರಮ್ಮಾಜಿಯನ್ನು ಆಕೆಯ ದತ್ತು

* ಸಂಶೋಧನ ಸಹಾಯಕ, ಇತಿಹಾಸ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

ಪುತ್ರ ಮೂರನೇ ಸೋಮಶೇಖರ ನಾಯಕನನ್ನು ರಕ್ಷಿಸಿ ಪುಣೆಗೆ ಕರೆದೊಯ್ಯುವಾಗ ರಾಣಿ ವೀರಮ್ಮಾಜಿ ದಾರಿಯಲ್ಲಿ ಮರಣ ಹೊಂದಿರುವುದಾಗಿ, ದತ್ತುಪುತ್ರ ಮೂರನೆ ಸೋಮಶೇಖರನಿಗೆ ನರಗುಂದದಲ್ಲಿ ಆಶ್ರಯಕೊಟ್ಟಿದ್ದಾಗಿ ಉಲ್ಲೇಖಿಸಿದಾರೆ. ಡಾ|| ಸಾ.ಶಿ. ಮರಳಯ್ಯನವರು ತಮ್ಮ ಪಿಎಚ್.ಡಿ ಪ್ರಬಂಧದಲ್ಲಿ ಮಹಾ ಶಿವಭಕ್ತೆಯಾದ ವೀರಮ್ಮಾಜಿ ಸೋಲಿನ ಅವಮಾನವನ್ನು ಸಹಿಸಲಾರದೆ ತನ್ನ ಇಷ್ಟಲಿಂಗವನ್ನು ನುಂಗಿ ಅಸುನೀಗಿದಳೆಂದು ಉಲ್ಲೇಖಿಸಿದ್ದಾರೆ ಇದು ಸತ್ಯಕ್ಕೆ ದೂರವಾದ ವಿಷಯ. ಈ ಎಲ್ಲ ಸಂಶೋಧನೆಗಳನಂತರ ಈಗ ಶೋಧನೆಯಾಗಿರುವ ಮಾಹಿತಿಗಳಿಂದ ಇವರು ಉಜ್ಜನಿ ಮಾರ್ಗವಾಗಿ ಪುಣೆಗೆ ಹೊರಟಿರಬಹುದು, ವೀರಶೈವರಾದ ಕೆಳದಿ ಅರಸರು ಅನೇಕ ಮಠಮಾನ್ಯಗಳಿಗೆ ದತ್ತಿದಾನಗಳನ್ನು ಕೊಟ್ಟು ಭಕ್ತಿಯಿಂದ ನಡೆದುಕೊಂಡಿದ್ದಾರೆ. ಉಜ್ಜನಿ ಮಾರ್ಗವಾಗಿ ಪುಣೆಗೆ ಹೊರಟ ವೀರಮ್ಮಾಜಿ ದಾರಿಯಲ್ಲಿ ಉಜ್ಜನಿ ಮಠದಲ್ಲಿ ವಿಶ್ರಾಂತಿಗಾಗಿ ಕೆಲದಿನ ತಂಗಿರಬಹುದು. ಮೊದಲೇ ಅಸ್ವಸ್ಥಳಾಗಿದ್ದರಿಂದಲೂ, ರಾಜ್ಯ ಕಳೆದುಕೊಂಡ ನೋವಿನಿಂದಲೂ, ದೈಹಿಕ, ಮಾನಸಿಕ ಅಸ್ವಸ್ಥತೆಯಿಂದ ಮರಣ ಹೊಂದಿರಬೇಕು. ಹೀಗಾಗಿ ಇವಳ ಸಮಾಧಿ ಉಜ್ಜನಿಯ ಮರುಳಸಿದ್ಧೇಶ್ವರ ದೇವಸ್ಥಾನದ ಎದುರಿನಲ್ಲಿ ಮಾಡಲಾಯಿತು. ಈಗ ಈ ಸಮಾಧಿ ಸುತ್ತಲು ಮನೆಗಳಾಗಿ ಮುಚ್ಚಿ ಹೋಗಿದ್ದು ಇತ್ತೀಚೆಗೆ ಶೋಧನೆ ನಡೆಸಿದಾಗ ಉಜ್ಜನಿ ಶಾಂತನಳ್ಳಿ ಕೊಡದಪ್ಪನವರ ಮನೆಯ ಮುಂಭಾಗದಲ್ಲಿ ಈ ಸಮಾಧಿ ಬೆಳಕಿಗೆ ಬಂದಿದೆ.

ಸಮಾಧಿ ಶಿಲ್ಪ ನೆಲದಿಂದ ಐದು ಅಡಿ ಎತ್ತರದ ಕಂಬದ ಮೇಲೆ ಪೂರ್ವಾಭಿಮುಖವಾಗಿರುವ ಮಲಗಿದ ನಂದಿ ಕೆಳಭಾಗದ ಬಲ ಬದಿಗೆ ಕೈಮುಗಿದುನಿಂತ ಎರಡು ಉಬ್ಬು ಶಿಲ್ಪ ಮೂರ್ತಿಗಳು ಇವೆ. ರಾಣಿ ವೀರಮ್ಮಾಜಿ ಹಾಗೂ ಆಕೆಯ ಗಂಡನಿರಬಹುದು. ಮೇಲೆ ಸೂರ್ಯ ಚಂದ್ರ ಈಶ್ವರನ ಉಬ್ಬು ಶಿಲ್ಪಗಳಿವೆ. ಕೆಳಭಾಗದಲ್ಲಿ ಶಾಸನವಿದೆ.

ಈ ಶಾಸನವು ಐದು ಸಾಲುಗಳನ್ನು ಹೊಂದಿದ್ದು ಓದಲು ಕಷ್ಟವಾಗಿದೆ. ಕಲ್ಲಿನ ೧೦''×೭'' ಭಾಗದಲ್ಲಿ ಶಾಸನ ಪಾಠವಿದೆ.

**ಶಾಸನಪಾಠ**

೧. ........ದವರ ಮಜರಿಸಿ........
೨. ........ಪನ ಮಗ ಬಸ........
೩. ........ಯಕ ವದನು ಬಸವಪ್ಪನ ಹಾ
೪. ........ಳು ಅಜವನರಸ ಮಾಡಿದ....
೫. ........ಕಂಡರಸಿದ ಶ್ರೀ....

[ಈ ಶೋಧನೆಗೆ ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸಿದ ಕೆಳದಿ ಗುಂಡಾ ಜೋಯಿಸರಿಗೆ ಕೃತಜ್ಞತೆಗಳು]

ಜೆ.ವಿ. ಕಲ್ಲಾಪುರ*

# ಕೆಳದಿ ಇತಿಹಾಸದಲ್ಲಿ ಮೈಸೂರರಸರು

ವಿಜಯನಗರದ ನಂತರ ಸ್ವತಂತ್ರ ಸಂಸ್ಥಾನವಾಗಿ ರೂಪುಗೊಂಡು, ತನ್ನದೆ ಆದ ವೈಶಿಷ್ಟ್ಯ ವೈವಿಧ್ಯತೆಗಳಿಂದ ಸುಮಾರು ಇನ್ನೂರಾ ಐವತ್ತು ವರ್ಷಗಳ ಕಾಲ (ಕ್ರಿ. ಶ. ೧೪೯೯–೧೭೬೩) ಅಸ್ತಿತ್ವದಲ್ಲಿದ್ದ ಕೆಳದಿ ಸಂಸ್ಥಾನವನ್ನು ಇಬ್ಬರು ರಾಣಿಯರೂ ಸೇರಿ ಸುಮಾರು ಹದಿನೇಳು ಜನ ಅರಸರು ಆಳಿದರು. ಕ್ರಿ. ಶ. ೧೫೯೨–೧೬೨೯ರ ವರೆಗೆ ರಾಜ್ಯಭಾರ ನಡೆಸಿದ ಹಿರಿಯ ವೆಂಕಟಪ್ಪನಾಯಕನಿಂದ ಪ್ರಾರಂಭಿಸಿ ಕ್ರಿ. ಶ. ೧೭೫೮–೧೭೬೩ರ ವರೆಗೆ ರಾಜ್ಯಭಾರ ನಡೆಸಿದ ವೀರಮ್ಮಾಜಿಯ ಕಾಲದವರೆಗೆ ಕೆಳದಿಯ ಇತಿಹಾಸದಲ್ಲಿ ಮೈಸೂರಿನವರೊಂದಿಗೆ ನಡೆದುಹೋಗಿರುವ ಅನೇಕ ಘಟನೆಗಳನ್ನು ಐತಿಹಾಸಿಕ ಕಾವ್ಯವಾದ ಕೆಳದಿ ನೃಪವಿಜಯದಲ್ಲಿ[1] ವಿವರಿಸಲಾಗಿರುವ ವಿಚಾರಗಳನ್ನು ಶ್ರೀ ಮನ್ಮಹಾರಾಜರ ವಂಶಾವಳಿಯಲ್ಲಿನ ಘಟನೆಗಳೊಂದಿಗೆ ಇಲ್ಲಿ ಚರ್ಚಿಸಲಾಗಿದೆ.

## ಹಿರಿಯ ವೆಂಕಟಪ್ಪನಾಯಕ ಮತ್ತು ಮೈಸೂರು

ಕ್ರಿ ಶ ೧೫೯೨ ರಿಂದ ೧೬೨೯ರ ವರೆಗೆ ರಾಜ್ಯಭಾರ ನಡೆಸಿದ ಹಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಮೈಸೂರಿನಲ್ಲಿ ಒಂದನೆಯ ರಾಜಒಡೆಯರ (ಕ್ರಿ. ಶ. ೧೫೭೮-೧೬೧೭) ಮತ್ತು ೬ನೇ ಚಾಮರಾಜ ಒಡೆಯರ (ಕ್ರಿ. ಶ. ೧೬೧೭–೧೬೩೭) ಅರಸರಾಗಿದ್ದರು. ಈ ಸಮಯದಲ್ಲಿ ತರೀಕೆರೆ ಪಾಳೆಯಗಾರರಿಗೆ ಸಹಕರಿಸುವ ನೆಪದಲ್ಲಿ ಮೈಸೂರಿನವರೊಂದಿಗೆ ಕಲಹ ಪ್ರಾರಂಭವಾಯಿತೆಂದು ಕಾಣುತ್ತದೆ. ಕೆಳದಿ ನೃಪವಿಜಯದಲ್ಲಿ– "ಅದೆಂತೆಂದೊಡೆ ತರಿಕೆರೆಯ ಹಿರಿಯ ಹನುಮನಾಯಕನ ಸುತರಿರ್ವರುಂ ತಂದೆ ಹಸುಗೆಗೆಯ್ದು ಕೊಟ್ಟಂತಿರದೆ ತಮ್ಮೊಳ್ ವಿವಾದಿಸಿ ಪೊಣರ್ದುಕಿರಿಯಾತಂ ಕಡವೂರಂ ತೆಗೆದು ಕೊಳಲ್ ಪಿರಿಯಾತನಿಕ್ಕೇರಿಗೆ ಬಿನ್ನೈಸಿ ಕಳುಪಲ್ ಚಿಕ್ಕಕಲ್ಲಪ್ಪನೆಂಬ ದಳವಾಯ ಸಂಗಡಂ ಸೈನ್ಯಮಂ ಕೂಡಿಸಿ ಕಳುಪಲಾ ಚಿಕ್ಕಕುಮಾರಂ ಬೇಲೂರ ವೆಂಕಟಾದ್ರಿನಾಯಕರ್ ಮೈಸೂರವರ್, ಚಿಕ್ಕನಾಯಕನ ಹಳ್ಳಿಯವರ್, ಚಿಂತನಕಲ್ಲವರ್, ಸೀರೆದ ರಂಗಪ್ಪನಾಯಕರ್ ಮುಂತಾದವರ ಸೈನ್ಯಮಂ ಬರಿಸಿಕೊಂಡು ಹೇರಳ ಬಲಮಂ ಮಾಡಿಕೊಂಡಿರ್ದು ನಿಲಲ್ ಪಿರಿಯಕುಮಾರಂ ನಿತ್ತರಿಸಿ ನಿಲಲಶಕ್ಯವಾಗಿ ಮತ್ತಮಿಕ್ಕೇರಿಗೆ ಬಿನ್ನೈಸಿ ಕಳುಪಲಾಗಳಾ ವೆಂಕಟಪ್ಪನಾಯಕಂ ಸೈನ್ಯಸಹಿತಂ ಇಕ್ಕೇರಿಯಿಂ ತಾನ್ ತೆರಳ್ದೈತರಲಾಗಳಾ ಕಿರಿಯ ಕುಮಾರನೆಳ್ತಂದು ಗಂಗೊರೆಡೆಯೋಳ್ ಸಂಧಿಸಿ ಸೀಮೆಗೆ ಗಾಜನೂರು ಲಕ್ಕುವಳ್ಳಿಯ ಸೀಮೆಯ ಕೋಂಟೆಗಳಂ ಕಾಣಿಕೆ ರೂಪಾಗಿತ್ತು ಮರೆವುಗಲಭೆಯುಮಿತ್ತು ತುಂಗಭದ್ರಾ ನದಿಯನುತ್ತರಿಸಲಾ ವಾರ್ತೆಯಂ ಕೇಳ್ದು ಕಿರಿಯ ಕುಮಾರನ ಸಹಾಯಕ್ಕೆ ಬಂದವರ್ ಧೈರ್ಯಂಗುಂದಿ ನಿತ್ತರಿಸಲಾರದೆ ಬಾಣಾವರಕ್ಕಾಗಿ ಪಲಾಯನಂಗೈಯಲ್ ..................ಪರಮ

* ಕೆಳದಿ ವಸ್ತು ಸಂಗ್ರಹಾಲಯ, ಕೆಳದಿ, ಸಾಗರ ತಾಲ್ಲೂಕು

1 ಕರ್ನಾಟಕ ಭಾರತಿ, ಸಂಪುಟ ೭, ಸಂಚಿಕೆ ೨, ಪು. ೮೪

ಪ್ರಖ್ಯಾತಿಯಂ ಪಡೆದುಮರಳ್ದನಂ.....[2]" ಎಂಬ ಮಾತು ಗಳಿಂದ ತರಿಕೆರೆಯ ಪಾಳೆಗಾರರ ಜಗಳವನ್ನು ಪರಿ-ಹರಿಸುವ ನೆಪದಲ್ಲಿ ಮೈಸೂರಿನವರೊಂದಿಗೆ ದ್ವೇಷ ಪ್ರಾರಂಭವಾಯಿತೆಂದು ಹೇಳಬಹುದು.

ಈ ಸಮಯದಲ್ಲಿ ಮೈಸೂರಿನಲ್ಲಿ ರಾಜ್ಯಭಾರ ಮಾಡುತ್ತಿದ್ದ ಆರನೆಯ ಚಾಮರಾಜ ಒಡೆಯರ್‌ರವರು ಕೆಲವು ಪಾಳೆಯಗಾರರನ್ನು ಜಯಿಸಿರುವುದನ್ನು ಸೂಚಿಸಿದ್ದು ಅದರಲ್ಲಿ ತರಿಕೆರೆ ಹಾಗೂ ಕೆಳದಿಯವರ ಹೆಸರುಗಳು ಕಂಡುಬರುವುದಿಲ್ಲ.[3]

### ವೀರಭದ್ರನಾಯಕ ಮತ್ತು ಮೈಸೂರು

ಕ್ರಿ.ಶ. ೧೬೨೯ ರಿಂದ ೧೬೪೬ರ ವರೆಗೆ ವೀರಭದ್ರ ನಾಯಕನು ಕೆಳದಿ ಸಂಸ್ಥಾನಾಧಿಪತಿಯಾಗಿದ್ದ ಕಾಲದಲ್ಲಿ ಮೈಸೂರಿನಲ್ಲಿ ಇಮ್ಮಡಿ ರಾಜಒಡೆಯರ್(ಕ್ರಿ.ಶ. ೧೬೩೭ ೧೬೩೮) ಮತ್ತು ರಣಧೀರ ಕಂಠೀರವ ನರಸರಾಜ ಒಡೆಯರ್ (ಕ್ರಿ. ಶ. ೧೬೩೮–೧೬೫೯) ರವರು ಅರಸ ರಾಗಿದ್ದರು.

ಈ ಸಮಯದಲ್ಲೇ ವಿಜಾಪುರದ ಬಾದಷಹನ ಆಜ್ಞೆಯಂತೆ ರಣದುಲ್ಲಾ ಖಾನನು (ಶಾ. ಶ. ೧೫೬೦ನೇ ಈಶ್ವರ ಸಂವತ್ಸರ) ಇಕ್ಕೇರಿಯನ್ನು ನಾಶಗೈದನು. ಅವನು ದಾಳಿಯಿಂದ ರಕ್ಷಣೆ ಪಡೆಯಲು ವೀರಭದ್ರ ನಾಯಕನು ಭುವನಗಿರಿ ದುರ್ಗವನ್ನು ಸೇರಲು, ಅದನ್ನು ಆಕ್ರಮಿಸಲು ಬಂದ ರಣದುಲ್ಲಾ ಖಾನನೊಂದಿಗೆ ಬುದ್ಧಿ ವಂತಿಕೆಯಿಂದ ಸಂಧಾನ ಮಾಡಿಕೊಂಡು ಮುತ್ತಿಗೆ ಯನ್ನು ತೆಗೆಸಿದನು. ನಂತರ ರಣದುಲ್ಲಾ ಖಾನನೊಡನೆ ಶಿವಪ್ಪನಾಯಕ ಹಾಗೂ ರಾಮಕೃಷ್ಣಯ್ಯರನ್ನು ಜೊತೆ ಮಾಡಿ ಮಾಯಾವಾದಿಗಳ (ಮೈಸೂರವರ) ರಾಷ್ಟ್ರಕ್ಕೆ ಕಳುಹಿಸಿ ವಿಜಾಪುರದ ಬಾದಷಹನ ಮುಖ್ಯ ಕಾರ್ಯ ಗಳನ್ನು ಅವರ ಮೂಲಕ ಮಾಡಿಸಿಕೊಟ್ಟನು ಎಂಬ ವಿಚಾರ ಕೆಳದಿ ನೃಪವಿಜಯದಿಂದ ತಿಳಿದುಬರುತ್ತದೆ.[4]

ಇಲ್ಲೂ ಸಹ ವಿಜಾಪುರದ ಬಾದಷಹನ ಸಹಾಯಕ್ಕಾಗಿ ಮೈಸೂರಿನವರೊಂದಿಗೆ ಯುದ್ಧ ಮಾಡಿರುವುದು ಕಂಡು ಬರುತ್ತದೆ.

'ಶ್ರೀ ಮನ್ಮಹಾರಾಜರ ವಂಶಾವಳಿ'ಯಲ್ಲಿ ಇಮ್ಮಡಿ ರಾಜ ಒಡೆಯರ್‌ರವರು ಯಾವುದೇ ರೀತಿಯ ಯುದ್ಧ ಗಳನ್ನು ಮಾಡಿರುವುದರ ಬಗ್ಗೆ ಉಲ್ಲೇಖವಿಲ್ಲ, ಆದರೆ ಇವರ ಕಾಲದಲ್ಲಿ ವಿಕ್ರಮರಾಯನು ದಳವಾಯಿತನ ನಡೆಸಿರುವುದು ಕಂಡುಬರುತ್ತದೆ.[5]

ರಣಧೀರ ಕಂಠೀರವ ನರಸರಾಜ ಒಡೆಯರ್‌ರವರ ಸಮಯದಲ್ಲಿ ರಣದುಲ್ಲಾ ಖಾನನು ಬಸವಾಪಟ್ಟಣದ ಹನುಮಪ್ಪನಾಯಕನ ಕೋರಿಕೆಯ ಮೇರೆಗೆ ವೀರಭದ್ರ ನಾಯಕನ ಮೇಲೆ ಯುದ್ಧಮಾಡಿ ಸೋಲಿಸಿದನೆಂದು, ನಂತರ ಶಾ. ಶ. ೧೫೬೧ (ಕ್ರಿ.ಶ. ೧೬೩೮)ರಲ್ಲಿ ಶ್ರೀರಂಗ ಪಟ್ಟಣವನ್ನು ಮುತ್ತಿಗೆ ಹಾಕಿದಾಗ ನರಸರಾಜ ಒಡೆಯರು ಅವನನ್ನು ಹಿಮ್ಮೆಟ್ಟಿಸಿದರೆಂದು, ಪುನಃ ಲಗ್ಗೆಯನ್ನೇರಬೇಕೆಂದು ಬಂದಾಗ ಕೋಟೆಯ ಮಲಕಿನ ತೆನೆ ಒಂದರಲ್ಲಿ ಮೂರು ಜನ ಸ್ತ್ರೀಯರು ತಲೆಯನ್ನು ಕೆದರಿಕೊಂಡು ಆಯುಧಗಳನ್ನು ಹಿಡಿದುಕೊಂಡು, ಅತಿ ಭಯಂಕರರಾಗಿರುವುದನ್ನು ನೋಡಿ ಓಡಿಹೋದರೆಂದು 'ವಂಶಾವಳಿ' ತಿಳಿಸುತ್ತದೆ.[6]

ಈ ಮೇಲಿನ ವಿಚಾರಗಳಿಂದ ಮೈಸೂರರಸರ ವಿರುದ್ಧ ಕೆಳದಿಯವರು ಯುದ್ಧ ಮಾಡಿದ್ದು ಇನ್ನೊಬ್ಬರ ಸಹಾಯ ಕ್ಕಾಗಿಯೇ ವಿನಾ ಪರಸ್ಪರ ದ್ವೇಷದಿಂದಲ್ಲವೆನ್ನುವುದು ಖಚಿತವಾಗುತ್ತದೆ.

### ಶಿವಪ್ಪನಾಯಕ ಮತ್ತು ಮೈಸೂರರಸರು

'ಶಿಸ್ತಿನ' ಶಿವಪ್ಪನಾಯಕನೆಂದೇ ಖ್ಯಾತನಾದ ಇವನ ಕಾಲದಲ್ಲಿ (ಕ್ರಿ. ಶ. ೧೬೪೬–೧೬೬೦), ಮೈಸೂರಿನಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯರ್

---

2 ಕೆಳದಿ ನೃಪವಿಜಯ, ಗದ್ಯಾನುವಾದ: ಕೆಳದಿ ಗುಂಡಾಜೋಯಿಸ್, ಕನ್ನಡ ಸಾಹಿತ್ಯ ಪರಿಷತ್, ಪು. ೧೨೯-೨೮

3 ಆನ್ನಲ್ಸ್ ಆಫ್ ದಿ ಮೈಸೂರ್ ರಾಯಲ್ ಫ್ಯಾಮಿಲಿ, ಪಾರ್ಟ್ ೧, ಪು.[illegible]೨೨

4 ಕೆಳದಿ ನೃಪವಿಜಯ, ಪು. ೧೪೬-೧೪೮

5 ಆನ್ನಲ್ಸ್ ಆಫ್ ದಿ ಮೈಸೂರ್ ರಾಯಲ್ ಫ್ಯಾಮಿಲಿ, ಪಾರ್ಟ್ ೧, ಪು.೬೪

6 ಅದೇ ಪು. ೭೬

ಕ್ರಿ.ಶ. ೧೬೩೮–೧೬೫೯) ಹಾಗೂ ದೊಡ್ಡದೇವರಾಜ ಒಡೆಯರ್ (ಕ್ರಿ.ಶ. ೧೬೫೯–೧೬೭೩) ಗಳು ರಾಜ್ಯಭಾರ ನಡೆಸಿರುವುದು ತಿಳಿದುಬರುತ್ತದೆ. ಇವನ ಕಾಲದ ಮೈಸೂರರಸರೊಂದಿಗಿನ ಘಟನೆಗಳನ್ನು ಕೆಳದಿ ನೃಪ-ವಿಜಯವು ಹೀಗೆ ಹೇಳುತ್ತದೆ.[7]

೧. ಬೇಲೂರ ಕೃಷ್ಣಪ್ಪನಾಯಕನು ಮೈಸೂರಿನವರ ಹೇರಳ ಸೈನ್ಯದೊಂದಿಗೆ ಯುದ್ಧಕ್ಕೆ ಬಂದಾಗ ಅವರನ್ನು ಸೋಲಿಸಿದ್ದಾನೆ. ೨. ವಿಕಾರಿ ಸಂವತ್ಸರದಲ್ಲಿ ಮೈಸೂರಿನವರಿಗೆ ಸೇರಿದ ಬೇಲೂರು ಮುಂತಾದ ಸ್ಥಳಗಳನ್ನು ಗೆದ್ದು ಶ್ರೀರಂಗರಾಯನಿಗೆ ಕೊಟ್ಟು ರಾಯರ ಸಂಸ್ಥಾನವನ್ನು ಪುನರುಜ್ಜೀವನಗೊಳಿಸಿರುವನು. ೩. ಶ್ರೀರಂಗರಾಯರಿಂದ ಅನೇಕ ಉಡುಗೊರೆಗಳನ್ನು ಪಡೆದು ಶ್ರೀರಂಗಪಟ್ಟಣಕ್ಕೆ ಅಭಿಮುಖವಾಗಿ ಹೋಗುತ್ತಿದ್ದಾಗ, ಮೈಸೂರಿನ ಸೈನ್ಯವು ಶಿವಪ್ಪನಾಯಕನನ್ನು ಸೆರೆಹಿಡಿಯಲು ಬಂದಾಗ ನಡೆದ ಯುದ್ಧದಲ್ಲಿ ಮೈಸೂರರಸನ ದಳವಾಯಿ ಹಂಪನಾಯಕನನ್ನು ಸೆರೆಹಿಡಿದು ಜಯವನ್ನು ಪಡೆಯುತ್ತಾನೆ ೪. ಕಾವೇರಿ ನದಿಗೆ ಸೇತುವೆಯನ್ನು ಕಟ್ಟಿ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿ ಮೈಸೂರರಸರ ಗರ್ವವನ್ನು ತಗ್ಗಿಸಿರುವುದು ಕಂಡುಬರುತ್ತದೆ. ೫. ಶ್ರೀರಂಗಪಟ್ಟಣದ ಕೋಟೆಗೆ ಮುತ್ತಿಗೆ ಹಾಕಿದಾಗ, ಮೈಸೂರ ಅರಸರು ಕೆಲವು ಗುರಿಕಾರರು ಮತ್ತು ನಿಯೋಗಿಗಳ ಮೂಲಕ ಅಭಿಸಾರ ಕ್ರಿಯೆಗಳನ್ನು ಹಾಗೂ ಹೋಮಗಳನ್ನು ನಡೆಸಿದಾಗ ಉಂಟಾದ ದೇಹಾಯಾಸದಿಂದ ವೇಣುಪುರಕ್ಕೆ ಹಿಂದಿರುಗಿ ಅಸುನೀಗಿದನೆಂದು ತಿಳಿದು ಬರುತ್ತದೆ.[8]

ಶ್ರೀ ಮನ್ಮಹಾರಾಜರ ವಂಶಾವಳಿಯಲ್ಲಿ[9] ದೊಡ್ಡ ದೇವರಾಜ ಒಡೆಯರ್ ಕಾಲದಲ್ಲಿ ನರಸೀಪುರದ ಲಕ್ಷ್ಮಪ್ಪನಾಯಕನು, ಕೆಳದಿಯ ಶಿವಪ್ಪನಾಯಕನ ಸಹಾಯದೊಂದಿಗೆ ಶ್ರೀರಂಗಪಟ್ಟಣವನ್ನು ಸಾಧಿಸಲು ಬರುತ್ತಿದ್ದಾಗ, ಒಡೆಯರು ಅವನನ್ನು ಹಾದಿಯ ಮಧ್ಯದಲ್ಲಿ ತಡೆದು ಲಕ್ಷ್ಮಮಪ್ಪನನ್ನು ಶಿಕ್ಷಿಸಿ ಶಿವಪ್ಪನಾಯಕನಿಂದ ಸಕ್ಕರೆಪಟ್ಟಣ, ವಸ್ತಾರ್, ಹೊನ್ನವಳ್ಳಿಗಳನ್ನು ಕಟ್ಟಿಕೊಂಡು ಬಂದು, ಶಿವಪ್ಪನಾಯಕನ ಕಡೆಯವರು ಬಹಳ ಬೇಡಿಕೊಂಡಾಗ ಕೃಪೆಯಿಂದ ಅವುಗಳಿಗೆ ಖಂಡಣಿಯನ್ನು ಮಾಡಿರುವರೆಂದು ತಿಳಿದುಬರುತ್ತದೆ. ಹಾಗೂ ಶಾ. ಶ. ೧೫೮೫ನೇ (ಕ್ರಿ.ಶ. ೧೬೬೩) ಶುಭಕೃತು ಸಂವತ್ಸರದ ಫಾಲ್ಗುಣ ಶುದ್ಧ ೧೦ರಲ್ಲಿ ಕೆಳದಿ ಶಿವಪ್ಪನಾಯಕನಿಂದ ಸಂಪಿಗೆ ಹಾಗೂ ಮಾರ್ಗ-ಶಿರ ಶುದ್ಧ ೧೩ರಲ್ಲಿ ಹಾಸನವನ್ನು ಕಟ್ಟಿಕೊಂಡರೆಂದು ತಿಳಿಸಿದೆ.

ಈ ಮೇಲಿನ ವಿಚಾರಗಳಲ್ಲಿ ಎರಡು ಅಂಶಗಳನ್ನು ಇಲ್ಲಿ ಚರ್ಚಿಸಬೇಕಾಗಿದೆ. ಮೊದಲನೆಯದು ಶಿವಪ್ಪನಾಯಕನು ರಾಜ್ಯಭಾರ ಮಾಡಿದ ಕಾಲ ಕ್ರಿ.ಶ. ೧೬೪೫ ೧೬೬೦ರ ವರೆಗೆ ಮಾತ್ರ. ಅವನು ತನಗೆ ರಾಜ್ಯಭಿಷೇಕವಾದ ಶಾ. ಶ. ೧೫೬೭ನೆಯ ಪಾರ್ಥಿವ ಸಂವತ್ಸರದ ಮಾರ್ಗಶಿರ ಶುದ್ಧ ದ್ವಾದಶಿಯಿಂದ ಶಾರ್ವರಿ ಸಂವತ್ಸರದ ಆಶ್ವಯುಜ ಶುದ್ಧ ಒಂದರ ವರೆಗೆ ೧೪ ವರ್ಷ ೯ ತಿಂಗಳು ೨೦ ದಿನಗಳವರೆಗೆ ರಾಜ್ಯಭಾರ ಮಾದಿ ಶಿವಸಾಯುಜ್ಯವನ್ನು ಹೊಂದಿರುವನೆಂದು ತಿಳಿದುಬರುತ್ತದೆ.[10] ಆದರೆ ಶ್ರೀ ಮನ್ಮಹಾರಾಜರ ವಂಶಾವಳಿಯಲ್ಲಿ ಶಾ.ಶ. ೧೫೮೫ (ಕ್ರಿ.ಶ.೧೬೬೩)ಶುಭಕೃತು ಸಂವತ್ಸರದಲ್ಲಿ ಸಕ್ಕರೆಪಟ್ಟಣ ವಸ್ತಾರೆ ಇತ್ಯಾದಿಗಳಿಗೆ ಶಿವಪ್ಪನಾಯಕನಿಂದ ಖಂಡಣಿಯನ್ನು ಮೈಸೂರರಸರು ಮಾಡಿಕೊಂಡಿರುವರೆಂದು ಹೇಳಿರುವುದು ಅನುಮಾನಕ್ಕೆ ಎಡೆಮಾಡಿಕೊಡುತ್ತದೆ.

ಎರಡನೆಯ ಪ್ರಮುಖ ವಿಚಾರವೆಂದರೆ ಶಿವಪ್ಪನಾಯಕನು ಕಾವೇರಿ ನದಿಗೆ ಸೇತುವೆಯನ್ನು[11] ಕಟ್ಟಿರುವನೆಂಬ ವಿಚಾರ. ಕಾವೇರಿ ನದಿಗೆ ಅನೇಕ

---

7 ಕೆಳದಿ ನೃಪವಿಜಯ, ಪು. ೧೬೮–೧೭೧

8 ಅದೇ ಪು. ೧೭೧

9 ಅನಲ್ಸ್ ಆಫ್ ದಿ ಮೈಸೂರ್ ರಾಯಲ್ ಫ್ಯಾಮಿಲಿ, ಪಾರ್ಟ್ ೧, ಪು. ೯೭-೯೮

10 ಕೆಳದಿ ನೃಪವಿಜಯ, ಪು. ೧೭೦

11 ಅದೇ ಪು, ೧೬೯

ಸೇತುವೆಗಳನ್ನು ಕಟ್ಟಿರುವ ವಿಚಾರವನ್ನು ಇತಿಹಾಸ ಕಾರರು ಗುರುತಿಸಿದು, ಅದರಲ್ಲಿ ಯಾವ ಸೇತುವೆಯನ್ನು ಶಿವಪ್ಪನಾಯಕ ಕಟ್ಟಿಸಿರುವನೆಂಬುದನ್ನು ಸಂಶೋಧನೆ ಗಳಿಂದ ತಿಳಿದುಕೊಳ್ಳಬೇಕಾಗಿದೆ. ಕೆಳದಿಯ ಶಿವಪ್ಪ ನಾಯಕನೂ ಸಹ ಬೇಲೂರ ಕೃಷ್ಣಪ್ಪನಾಯಕನ ಹಾಗೂ ಶ್ರೀರಂಗರಾಯರ ಸಂಸ್ಥಾನದ ಪುನರುಜ್ಜೀವನ ದೃಷ್ಟಿ ಯಿಂದ ಮೈಸೂರರಸರೊಂದಿಗೆ ಯುದ್ಧ ಮಾಡಿರುವುದು ಗಮನಾರ್ಹ.

ಕ್ರಿ. ಶ. ೧೬೬೧ ರಲ್ಲಿ ರಾಜ್ಯಭಾರ ನಡೆಸಿರುವ ಕಿರಿಯ ವೆಂಕಟಪ್ಪನಾಯಕನ ಕಾಲದಲ್ಲಿ ಮೈಸೂರಿನಲ್ಲಿ ದೊಡ್ಡದೇವರಾಜ ಒಡೆಯರ್‌ರವರು ರಾಜ್ಯಭಾರ ಮಾಡುತ್ತಿದ್ದರು. ಶ್ರೀರಂಗಪಟ್ಟಣದವರು ಗಡಿದಾಟಿ ಶ್ರೀರಂಗರಾಯರ ಸೀಮೆಗೆ ಬಾರದ ಹಾಗೆ ಅಳಿಯ ಶಿವಲಿಂಗ ನಾಯಕನನ್ನು ಸೇನೆಯೊಂದಿಗೆ ಕಾವಲಿರಿಸಿ ದ್ದನು.[12]

**ಭದ್ರಪ್ಪ ನಾಯಕ ಮತ್ತು ಮೈಸೂರರಸರು**

ಕಿರಿಯ ವೆಂಕಟಪ್ಪನಾಯಕನ ನಂತರ ಶಿವಪ್ಪ ನಾಯಕನ ಜೇಷ್ಠ ಪುತ್ರ ಭದ್ರಪ್ಪನಾಯಕನು, ಕ್ರಿ.ಶ. ೧೬೬೧ ರಿಂದ ೧೬೬೩ ರವರೆಗೆ ರಾಜ್ಯಾಡಳಿತ ನಡೆಸಿರು ವನು. ಇವನ ಕಾಲದಲ್ಲಿ ಮೈಸೂರಿನಲ್ಲಿ ದೊಡ್ಡ ದೇವರಾಜ ಒಡೆಯರ್ (ಕ್ರಿ. ಶ. ೧೬೫೯–೧೬೭೩) ರವರು ಅರಸರಾಗಿದ್ದರು.

ಈ ಸಮಯದಲ್ಲಿ ಅಳಿಯ ಶಿವಲಿಂಗಯ್ಯನೊಡನೆ ಸೈನ್ಯವನ್ನು ಕಳುಹಿಸಿ, ತಾನು ಬೇಲೂರಿಗೆ ಹೋಗಿ ರಾಯರ ಸೈನ್ಯದೊಂದಿಗೆ ತೆರಳಿ ಮಾಯಾವಿಗಳು ಆಕ್ರಮಿಸಿದ್ದ ಹೆಬ್ಬಾಳ, ಕೊಣನೂರು ಕೋಟೆಗಳನ್ನು ವಶಪಡಿಸಿಕೊಂಡನು, ನಂತರ ಮೈಸೂರರಸರ ಆಜ್ಞೆಯ ಮೇರೆಗೆ ಯುದ್ಧಕ್ಕೆ ಬಂದ ಕಳಲೆಯ ಕಾಂತಯ್ಯನೆಂಬ ಸೇನಾಪತಿಯನ್ನು ಯುದ್ಧದಲ್ಲಿ ಸೋಲಿಸಿದ ಶಿವಲಿಂಗ ನಾಯಕನಿಗೆ ಪ್ರಮಾದವಶಾತ್ ಅಪಾಯ ಸ್ಥಳಕ್ಕೆ ಶತ್ರುಸೈನ್ಯದವರ ಬಾಣತಗುಲಿ ಸ್ಥಳದಲ್ಲೆ ಶಿವೈಕ್ಯನಾದ ವಿಚಾರ ತಿಳಿದ ಭದ್ರಪ್ಪನು ಸ್ವತಃ ಸೈನ್ಯದೊಂದಿಗೆ ಬಂದು ಮಾಯಾವಿಗಳ ನಾಡಿಗೆ ಸೇರಿದ ಹೊನ್ನಹಳ್ಳಿ, ಚಿಕ್ಕ ನಾಯಕನಹಳ್ಳಿ ಇತ್ಯಾದಿ ಸೀಮೆಗಳನ್ನು ಜಯಿಸಿದ ನೆಂದು ಕೆಳದಿ ನೃಪವಿಜಯದಿಂದ ತಿಳಿದು ಬರುತ್ತದೆ.[13]

ಶ್ರೀಮನ್ಮಹಾರಾಜರ ವಂಶಾವಳಿಯಲ್ಲಿ ಕೆಳದಿಯ ವರೊಂದಿಗೆ ಯುದ್ಧಮಾಡಿದ ಉಲ್ಲೇಖಗಳಿಲ್ಲದಿದ್ದರೂ, ಸೇನಾಪತಿ ಕಳಲೆ ಕಾಂತಯ್ಯನು ಮೈಸೂರರಸರ (ಕ್ರಿ. ಶ. ೧೬೬೦) ಸೇನಾಧಿಪತಿಯಾಗಿದ್ದುದು ತಿಳಿದು ಬರುತ್ತದೆ.[14] ಆದ್ದರಿಂದ ಈ ಮೇಲಿನ ಯುದ್ಧ ಕ್ರಿ. ಶ. ೧೬೬೧ ರಿಂದ ೧೬೬೩ ರಲ್ಲಿ ನಡೆದಿರಬಹುದೆಂದು ಹೇಳಬಹುದಾಗಿದೆ. ಇಲ್ಲಿ ಭದ್ರಪ್ಪ ನಾಯಕನೇ ಸ್ವತಃ ಯುದ್ಧಕ್ಕೆ ಬಂದಿರುವುದು ಗಮನಾರ್ಹ ವಿಚಾರ. ಬಹುಶಃ ಈ ವೇಳೆಗೆ ಹಿಂದಿನ ಘಟನೆಗಳಿಂದ ಇಬ್ಬರಲ್ಲೂ ದ್ವೇಷ ಬೆಳೆದಿರಬಹುದೆಂದು ಹೇಳಬಹುದಾಗಿದೆ.

**ಹಿರಿಯ ಸೋಮಶೇಖರ ನಾಯಕ ಮತ್ತು ಮೈಸೂರರಸರು**

ಕ್ರಿ. ಶ. ೧೬೬೩-೧೬೭೧ ರವರೆಗೆ ಕೆಳದಿಯ ನ್ನಾಳಿದ ಹಿರಿಯ ಸೋಮಶೇಖರ ನಾಯಕನ ಕಾಲದಲ್ಲಿ ದೊಡ್ಡದೇವರಾಜ ಒಡೆಯರ್ (ಕ್ರಿ. ಶ. ೧೬೫೯–೧೬೭೩) ರವರು ಮೈಸೂರಿನ ಒಡೆಯರಾಗಿದ್ದರು. ಹಿರಿಯ ಸೋಮಶೇಖರ ನಾಯಕನು ಮೈಸೂರಿನವರ ಗರ್ವವನ್ನು ಹಾಗೂ ಮದವನ್ನು ತಗ್ಗಿಸಬೇಕೆಂದು, ಸೈನ್ಯವನ್ನು ಕೂಡಿಕೊಂಡು, ಅವರನ್ನು ಸೋಲಿಸಿ ಅವರಿಂದ ಚಿಕ್ಕೋಡು, ಬೆಳಗೋಡು, ಕಣತೂರು, ಅಬ್ಬಿಣ ಮತ್ತು ಬೇಲೂರನ್ನು ವಶಪಡಿಸಿಕೊಂಡನೆಂದು ಕೆಳದಿನೃಪ ವಿಜಯದಿಂದ[15] ತಿಳಿದುಬರುತ್ತದೆ. ಆದರೆ

12 ಅದೇ, ಪುಟ. ೧೭೧.

13 ಅದೇ, ಪುಟ. ೧೭೩-೧೭೫.

14 ಅನ್ನಲ್ಸ್ ಆಫ್ ದಿ ಮೈಸೂರ್ ಫ್ಯಾಮಿಲಿ, ಪಾರ್ಟ್ ೧, ಪುಟ. ೯೬.

15 ಚಿಕ್ಕೊಡಂ ಬೆಳಗೋಡಂ ಮಿಕ್ಕಾ ಕಣತೂರನಿಬ್ಬಣವ ಬೇಲೂರಂ ಚಕ್ಕನೆ ಕೊಂಡಾ ಶಿವನೃಪ ನಕ್ಕರಿಸಣುಗಂ ಬಲಾತಿಶಯನುಂ ಮೆರೆದಂ-ಕೆಳದಿನೃಪವಿಜಯ, ಪುಟ. ೧೮೩.

ಶ್ರೀಮನ್ಮಹಾರಾಜರ ವಂಶಾವಳಿಯಲ್ಲಿ ಈ ಅರಸರ ಹೆಸರಾಗಲೀ, ವಿಚಾರಗಳಾಗಲಿ ಉಕ್ತವಾಗಿಲ್ಲ.

**ರಾಣಿಚೆನ್ನಮ್ಮಾಜಿ ಮತ್ತು ಮೈಸೂರರಸರು**

ಸೋಮಶೇಖರ ನಾಯಕನ ನಂತರ ಕ್ರಿ. ಶ. ೧೬೭೨ ರಲ್ಲಿ ಪಟ್ಟಕ್ಕೆ ಬಂದ ಅವನ ಪತ್ನಿ ಚೆನ್ನಮ್ಮಾಜಿಯು ಕ್ರಿ. ಶ. ೧೬೯೭ ರವರೆಗೆ ಕೆಳದಿಯ ನ್ನಾಳಿರುವಳು. ಈ ಕಾಲದಲ್ಲಿ ಚಿಕ್ಕದೇವ ರಾಜ ಒಡೆಯರ್‌ರವರು (ಕ್ರಿ. ಶ. ೧೬೭೨-೧೭೦೪) ಮೈಸೂರಿನಲ್ಲಿ ಅರಸರಾಗಿದ್ದರು.

ಚೆನ್ನಮಾಜಿಯು ಸಬ್ಬುನೀಸ ಕೃಷ್ಣಪ್ಪಯ್ಯ, ಕಾಸರಗೂಡು ತಿಮ್ಮಣ್ಣನಾಯಕರೊಡನೆ ಸೈನ್ಯವನ್ನು ಕಳುಹಿಸಿ ಮಾಯಾವಾದಿಗಳ ಸೇನಾಧಿಪತಿಯಾಗಿದ್ದ ಕುಮಾರಯ್ಯನನ್ನು ಪಲಾಯನಗೊಳಿಸಿ ವಸುಧಾರೆಯ ಕೋಟೆಯನ್ನು, ಕಡೂರು, ಹಾಸನ, ಬಾಣಾವರ ಮತ್ತು ಬೇಲೂರಿನ ಕೋಟೆಗಳನ್ನು ವಶಪಡಿಸಿಕೊಂಡು ಮೈಸೂರಿನವರ ಮದವನ್ನು ಹೋಗಲಾಡಿಸಿದಳು. ಅಲ್ಲದೆ ಸಬ್ಬುನೀಸ ಕೋಳಿವಾಡದ ಬೊಮ್ಮರಸಯ್ಯನೊಡನೆ ಸೈನ್ಯ ಕಳುಹಿಸಿ ಮೈಸೂರರಸನ ಸೇನಾಪತಿಯಾಗಿದ್ದ ದಳವಾಯಿ ತಿಮ್ಮಪ್ಪನನ್ನು ಸೋಲಿಸಿ ಅವನ ಮಗ ಕೃಷ್ಣಪ್ಪನನ್ನು ಕೈಸೆರೆ ಹಿಡಿದು ನಂತರ ಬಿಟ್ಟು ಪರಮ ಖ್ಯಾತಿಯನ್ನು ಗಳಿಸಿರುವಳೆಂದು ಕೆಳದಿ ನೃಪ ವಿಜಯದಿಂದ ತಿಳಿದುಬರುತ್ತದೆ.[16]

ಚಿಕ್ಕದೇವರಾಜ ಒಡೆಯರ್‌ರವರು ಶಾ. ಶ. ೧೬೩೧ನೇ (ಕ್ರಿ. ಶ. ೧೬೯೦) ಪ್ರಮೋದೂತ ಸಂವತ್ಸರದಲ್ಲಿ ಇಕ್ಕೇರಿ ಶಿವಪ್ಪನಾಯಕನಿಂದ ಹಾರನಹಳ್ಳಿ, ಬಾಣಾವರ, ಕಡೂರು, ಸಕ್ಕರೆ ಪಟ್ಟಣ, ಬೇಲೂರು, ವಸ್ತಾರೆ, ಹಾಸನ ಹಾಗೂ ಗ್ರಾಮ ಎಂಬ ಸ್ಥಳಗಳನ್ನು ವಶಪಡಿಸಿಕೊಂಡನೆಂದು ಶ್ರೀಮನ್ಮಹಾರಾಜರ ವಂಶಾವಳಿ ಹೇಳುತ್ತದೆ.[17] ಈ ವಿಚಾರವನ್ನು ಒಪ್ಪಲು ಸಾಧ್ಯವಿಲ್ಲ, ಏಕೆಂದರೆ ಶಿವಪ್ಪನಾಯಕನ ರಾಜ್ಯಭಾರ ಕಾಲ ಕ್ರಿ. ಶ. ೧೬೪೬-೧೬೬೦[18] ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಕುಮಾರಯ್ಯ ಹಾಗೂ ತಿಮ್ಮಪ್ಪ ಇವರಿಬ್ಬರೂ ದಳವಾಯಿಗಳಾಗಿ ಕಾರ್ಯನಿರ್ವಹಿಸಿರುವುದು ತಿಳಿದು ಬರುವುದರಿಂದ[19] ಈ ಮೇಲಿನ ಯುದ್ಧ ನಡೆದಿದೆಯೆಂದು ಹೇಳಬಹುದಾಗಿದೆ.

ಚೆನ್ನಮ್ಮಾಜಿಯು ಕಾಲದ ಸಂಸ್ಕೃತ ಶಾಸನವೊಂದು ಶ್ರೀರಂಗಪಟ್ಟಣದ ಕೋಟೆಯೊಳಗೆ ದೊರಕಿದ್ದು, ಅದರಲ್ಲಿ ಕೆಳದಿರಾಜರು ಸೈನವನ್ನು ಜಯಿಸಿ ಗಂಗಾಧರನೆಂಬ ಹೆಸರಿನ ಆನೆಯನ್ನು ಸಂಹರಿಸಿರುವರೆಂದು ತಿಳಿದು ಬರುತ್ತದೆ.[20] ಆದರೆ ಶಾಸನದ ಸಂಪೂರ್ಣ ಪಾಠ ಉಪಲಬ್ಧವಿರದ ಕಾರಣ ವಿವರಗಳು ದೊರಕುವುದಿಲ್ಲ. ಈ ಶಾಸನದಿಂದ ಕ್ರಿ. ಶ. ೧೬೭೮ ರಲ್ಲಿ ಕೆಳದಿಯವರಿಗೂ ಮೈಸೂರಿನವರಿಗೂ ಶ್ರೀರಂಗಪಟ್ಟಣದಲ್ಲಿ ಯುದ್ಧ ನಡೆದಿರುವುದು ಸಿದ್ಧವಾಗುತ್ತದೆ. ಈ ಶಾಸನದ ಕಾಲವನ್ನು ಶಾ. ಶ. ೧೬೦೦ ಎಂದು ಅಂದಾಜು ಮಾಡಲಾಗಿದೆ. ಮೈಸೂರು ಮತ್ತು ಕೆಳದಿ ಇತಿಹಾಸದಲ್ಲಿ ಶ್ರೀರಂಗಪಟ್ಟಣದ ಈ ಶಾಸನವು ಒಂದು ಮಹತ್ವದ ಮೈಲಿಗಲ್ಲು.

**ಹಿರಿಯ ಬಸಪ್ಪನಾಯಕ ಮತ್ತು ಮೈಸೂರರಸರು**

'ಸಾಹಿತ್ಯರತ್ನಾಕರ' ಇತ್ಯಾದಿ ಬಿರುದಾಂಕಿತನಾಗಿ ಕ್ರಿ. ಶ. ೧೬೯೭ ರಿಂದ ೧೭೧೪ ರವರೆಗೆ ರಾಜ್ಯಭಾರ ನಡೆಸಿದ ಹಿರಿಯ ಬಸಪ್ಪನಾಯಕನ ಕಾಲದಲ್ಲಿ ಚಿಕ್ಕದೇವರಾಜ ಒಡೆಯರ್ ಮತ್ತು ಕಂಠೀರವ

16 ಮಾಯಾವಾದಿಗಳುರದಳವಾಯಿ ಕುಮಾರಯ್ಯನದಟನುಡುಗಿಸಿ ಬಲಮಂ ನೋಯಿಸಿ ವಸುಧಾರೆಯ ಕಮನೀಯ ಪರಿಸ್ತರಣಮಂ ಕರಂ ವಶಗೈದಳ್ ಕೆಳದಿನೃಪವಿಜಯ, ಪುಟ. ೧೯೩-೧೯೫, ೨೪೧.

17 ಅನ್ನಲ್ಸ್ ಆಫ್ ದಿ ಮೈಸೂರ್ ರಾಯಲ್ ಫ್ಯಾಮಿಲ್, ಪಾರ್ಟ್ ೧, ಪುಟ. ೧೦೮, ೧೧೯.

18 ಕೆಳದಿನೃಪವಿಜಯ, ಪುಟ. ೧೭೦.

19 ಅನ್ನಲ್ಸ್ ಆಫ್ ದಿ ಮೈಸೂರ್ ರಾಯಲ್ ಫ್ಯಾಮಿಲಿ ಪಾರ್ಟ್ ೧, ಪುಟ. ೧೧೬.

20 ಶಾಸನ ಪಾಠ :- ನಿರ್ಜಿತ್ಯಸೇನಾಂ ಕೆಳದಿನೃಪಾಣಾಂ ಗಂಗಾ ಧರಾಖ್ಯಂ ಗಜಮಾಜಹಾರ-ಕೆಳದಿ ಅರಸರ ಶಾಸನ ಸಂಪುಟ, ಪುಟ. ೪೬೩.

ಮಹಾರಾಜ ಒಡೆಯರ್ (ಕ್ರಿ. ಶ. ೧೭೦೪–೧೭೧೪) ಇವರುಗಳು ಮೈಸೂರಿನ ಅರಸರಾಗಿದ್ದರು.

ಬಸಪ್ಪನಾಯಕನು ಮೈಸೂರಿನವರ ವಶವಾಗಿದ್ದ ಅರಕಲಗೂಡನ್ನು ಹಾಗೂ ಮಲೆಯಾಳದವರು ಮಾಯಾವಿಗಳ ಸಹಾಯದೊಂದಿಗೆ ಚಂದ್ರಗಿರಿಯ ಕೋಟೆಯನ್ನು ಆಕ್ರಮಿಸಿದಾಗ ಅದನ್ನು ಗರಜಿನ ಬಸಪ್ಪ ದೇವರೊಡನೆ ಸೈನ್ಯವನ್ನು ಕಳುಹಿಸಿ, ಮಾಯಾವಿಗಳನ್ನು ಸೋಲಿಸಿ, ಮಲೆಯಾಳಿಗಳ ಸೊಕ್ಕನ್ನು ಬಗ್ಗಿಸಿ, ಚಂದ್ರ ಗಿರಿ ಮತ್ತು ವಸುಧಾರೆ ಕೋಟೆಗಳನ್ನು ವಶಪಡಿಸಿ ಕೊಂಡನೆಂದು ತಿಳಿದು ಬರುತ್ತದೆ.[21] ಇವನು ಆಗ್ಗಿಂದಾಗ್ಯೆ ಮೈಸೂರಿನವರೊಂದಿಗೆ ಉಂಟಾಗುತ್ತಿದ್ದ ಕಲಹ ಗಳನ್ನು ಕೊನೆಗೊಳಿಸುವ ಸಲುವಾಗಿ, ಇಬ್ಬರಿಗೂ ವಿರೋಧ ಹುಟ್ಟದಂತೆ ಶರಜಾ ನಾಗಪ್ಪಯ್ಯನೆಂಬ ನಿಯೋಗಿಯ ಮುಖಾಂತರ ಒಡಂಬಡಿಕೆಯ ಕರಾರು ರಚಿಸಿರುವನೆಂಬುದು ಗಮನಾರ್ಹವಾದ ವಿಚಾರ ವಾಗಿದೆ.[22]

ಶ್ರೀಮನ್ಮಹಾರಾಜರ ವಂಶಾವಳಿಯಲ್ಲಿ ಚಿಕ್ಕ ಬಳ್ಳಾಪುರ ಪಾಳೆಯಗಾರರು ಇತ್ಯಾದಿಯವರನ್ನು ಜಯಿಸಿರುವ ವಿಚಾರಗಳು ಮಾತ್ರ ಹೇಳಿದೆ.[23] ಕೆಳದಿಯ ವರ ವಿಚಾರಗಳಿಲ್ಲ.

**ಕಿರಿಯ ಸೋಮಶೇಖರನಾಯಕ ಮತ್ತು ಮೈಸೂರರಸರು**

ಕ್ರಿ. ಶ. ೧೭೧೫ ರಿಂದ ೧೭೪೦ ರವರೆಗೆ ರಾಜ್ಯ ವಾಳಿದ ಕಿರಿಯ ಸೋಮಶೇಖರನಾಯಕನ ಕಾಲದಲ್ಲಿ, ಮೈಸೂರನ್ನು ದೊಡ್ಡ ಕೃಷ್ಣರಾಜ ಒಡೆಯರ್ (ಕ್ರಿ.ಶ. ೧೭೧೪-೧೭೩೨) ಮತ್ತು ಚಾಮರಾಜ ಒಡೆಯರ್ (ಕ್ರಿ. ಶ.೧೭೩೨–೧೭೩೪) ಮತ್ತು ಹಾಗೂ ಕೃಷ್ಣರಾಜ ಒಡೆಯರ್ II, (ಕ್ರಿ. ಶ. ೧೭೩೪–೧೭೬೬) ರವರಿಗೆರಾಜ್ಯಭಾರ ಮಾಡಿರುವುದು ತಿಳಿದು ಬರುತ್ತದೆ.

ಕಿರಿಯ ಸೋಮಶೇಖರನು ಹೇವಿಳಂಬಿ ಸಂವತ್ಸರ ದಲ್ಲಿ ಮೈಸೂರರಸನ ಮದವನ್ನು ತಗ್ಗಿಸುವ ಸಲುವಾಗಿ ಮಂತ್ರಿಗುರುವಪ್ಪನೊಂದಿಗೆ ಸಮಾಲೋಚನೆ ನಡೆಸಿ, ಸಹಾಯಕ್ಕಾಗಿ ಬಿಳಿಜೋಡಿಯ ಬರಮನಾಯಕನ ಸಹಾಯ ಕೇಳಿ, ಅವನು ಮೊದಲು ಒಪ್ಪಿ ಕೊನೆಗೆ ಮೋಸ ಮಾಡುವ ವಿಚಾರ ತಿಳಿದು ಅವನನ್ನು ಉಪಾಯ ದಿಂದ ಸಾಧಿಸುತ್ತಾನೆ. ಅಲ್ಲದೆ ಬೇಲೂರಿನ ವೆಂಕಾಟಾದ್ರಿ ನಾಯಕನು ನಿಯೋಗಿ ಮಲ್ಲಪ್ಪನ ಕುತಂತ್ರದಿಂದ ಎರಗಿ ಬಂದ ಮೈಸೂರಿನ ಸುಬ್ಬರಾಯನೆಂಬ ಸೇನಾಪತಿಯನ್ನು ರಾಯಪಾಳ್ಯದ ಚೆನ್ನವೀರಪ್ಪನ ಮುಖಾಂತರ ಸೋಲಿಸಿ ಗೋಪಾಲನಾಯಕನನ್ನು ಬೇಲೂರಿನಲ್ಲಿ ನಿಲ್ಲಿಸಿ ಪ್ರಖ್ಯಾತಿ ಯನ್ನು ಪಡೆದಿರುವನು, ಹಾಗೆಯೇ ಮಿರಿಜಾ ಅದ್ದಮ ನಿಗೆ ಸಹಾಯವಾಗುವಂತೆ ಬಂದ ಮೈಸೂರರಸರನ್ನು ಸೋಲಿಸಿ, ಸೀರ್ಯದ ಕೋಟೆಯನ್ನು ವಶಪಡಿಸಿಕೊಂಡು ಅಲ್ಲಿ ಮಿರಿಜಾ ಅದ್ದಮನ ಜಾಗದಲ್ಲಿ ತಾಯುರಖಾನನ್ನು, ದಿಲ್ಲಿಯ ಬಾದಷಹನ ವಿನಂತಿಯ ಮೇರೆಗೆ ನೇಮಿಸಿರುವ ನೆಂದು ತಿಳಿದು ಬರುತ್ತದೆ. ಅನಂತರ ಶಾದುಲ್ಲಾಖಾನನ ಸೇನೆಯೊಂದಿಗೆ ಸುಬೇದಾರ ಲಿಂಗಪ್ಪನನ್ನು ಮೈಸೂರ ವರ ಸೀಮೆಯ ಗಡಿಯ ಮೇಲೆ ದಾಳಿ ನಡೆಸಲು ಕಳುಹಿ ಸಲು ಅವನು ಶ್ರೀರಂಗಪಟ್ಟಣದ ಕೋಟೆಯ ಒಳ ಬಂದಾಗ ಭಯಗ್ರಸ್ತರಾದ ಮೈಸೂರಿನವರು ಸಂಧಾನಕ್ಕೆ ಬರುತ್ತಾರೆ. ಅವರಿಂದ ಅನೇಕ ವಿಧವಾದ ಉಡುಗೊರೆ ಗಳನ್ನು ಪಡೆದನೆಂದು ಕೆಳದಿನೃಪವಿಜಯ ತಿಳಿಸು ತ್ತದೆ.[24]

ಶ್ರೀಮನ್ಮಹಾರಾಜರ ವಂಶಾವಳಿಯಲ್ಲಿ ಮೇಲಿನ ಯಾವ ಘಟನೆಗಳು ಉಲ್ಲೇಖವು ಕಂಡು ಬರುವುದಿಲ್ಲ. ಆದರೆ ಶಾ. ಶ. ೧೬೪೭ (ಕ್ರಿ. ಶ. ೧೭೨೪) ಕ್ರೋಧಿ ಸಂವತ್ಸರದಲ್ಲಿ, ಸಾದುಲ್ಲಾಖಾನನ ಕಡೆಯ ದಿವಾನ್ ಸಿದ್ದೋಜಿ ಘೋರ್ಪಡೆ ಎಂಬುವನು ಶ್ರೀರಂಗ

21 ಕೆಳದಿನೃಪವಿಜಯ, ಪುಟ, ೨೪೯-೨೪೪

22 ಅದೇ, ಪುಟ. ೨೪೯.

23 ಅನ್ನಲ್ಸ್ ಆಫ್ ದಿ ಮೈಸೂರ್ ರಾಯಲ್ ಫ್ಯಾಮಿಲಿ, ಪಾರ್ಟ್ ೧, ಪುಟ. ೧೬೦.

24 ಕೆಳದಿನೃಪವಿಜಯ, ಪುಟ. ೨೬೭-೨೮೭.

ಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಮೈಸೂರಿನವರು ಬೆನ್ನಟ್ಟಿ ಓಡಿಸಿದರೆಂದು ಹೇಳುತ್ತದೆ.[25] ಆದರೆ ಕೆಳದಿ ನೃಪವಿಜಯವು ಶಾದುಲ್ಲಾಖಾನನ ಸೇನೆಯೊಂದಿಗೆ ಸುಬೇದಾರ ಲಿಂಗಪ್ಪನನ್ನೂ ಮೈಸೂರರ ಸರ ಮೇಲೆ ದಾಳಿ ಮಾಡಲು ಕಳುಹಿಸಿದಾಗ ಮೈಸೂರಿನವರು ಸಂಧಾನಕ್ಕೆ ಬಂದರೆಂದು ಹೇಳುತ್ತದೆ.[26] ಇಲ್ಲಿ ಗಮನಿಸ ಬಹುದಾದ ಅಂಶವೆಂದರೆ ರಾಜಚರಿತ್ರೆಯನ್ನು ಬರೆಯುವವರು ಸಾಮಾನ್ಯವಾಗಿ ತಮ್ಮ ಆಶ್ರಯದಾತ ರನ್ನು ಹೊಗಳಿ ಬರೆಯುವುದು ವಾಡಿಕೆ. ಆದರೆ ಕೆಳದಿ ನೃಪವಿಜಯವು ಇದಕ್ಕೆ ಅಪವಾದವೆನ್ನಬಹುದು. ಏಕೆಂದರೆ ಈ ಐತಿಹಾಸಿಕ ಕಾವ್ಯವು ಕೆಳದಿಯವರು ಸೋತಿರುವ ಸಂಗತಿಗಳನ್ನೂ ಹಾಗೆಯೇ ಹೇಳುತ್ತದೆ.[27]

**ಕಿರಿಯ ಬಸವಪ್ಪನಾಯಕ ಮತ್ತು ಮೈಸೂರು**

ಕಿರಿಯ ಬಸಪ್ಪನಾಯಕನು ಕ್ರಿ. ಶ. ೧೭೩೯–೧೭೫೪ರಲ್ಲಿ ಕೆಳದಿಯನ್ನಾಳುತ್ತಿದ್ದ ಕಾಲದಲ್ಲಿ, ೭ನೇ ಚಾಮರಾಜ ಒಡೆಯರ್, (ಕ್ರಿ. ಶ. ೧೭೩೨–೧೭೩೪) ಹಾಗೂ ಕೃಷ್ಣರಾಜ ಒಡೆಯರ್ (೧೭೩೪–೧೭೬೬) ರವರೆಗೆ ಮೈಸೂರಿನಲ್ಲಿ ರಾಜ್ಯಭಾರ ಮಾಡುತ್ತಿದ್ದರು.

ತರಿಕೆರೆಯ ಪಾಳೆಯಗಾರರು ಮೈಸೂರಿನವ ರೊಂದಿಗೆ ಸಂಧಾನವನ್ನು ಮಾಡಿಕೊಳ್ಳುತ್ತಿದ್ದಾರೆಂದು ವಿಚಾರ ತಿಳಿದು, ಸಬ್ಬುನೀಸ ಕೃಷ್ಣಪ್ಪಯ್ಯನ ಜೊತೆಗೆ ಸೈನ್ಯ ಕಳುಹಿಸಿ, ತರಿಕೆರೆಯ ರಾಜನ ಗರ್ವವನ್ನು ಮುರಿದು ಅವನ ಕೋಟೆಗಳನ್ನು ವಶಪಡಿಸಿಕೊಂಡಿರುವ ನೆಂದು ತಿಳಿದು ಬರುತ್ತದೆ.[28]

**ಮೂರನೇ ಸೋಮಶೇಖರನಾಯಕ, ವೀರಮ್ಮಾಜಿ ಮತ್ತು ಮೈಸೂರರಸರು :–**

ಕ್ರಿ. ಶ. ೧೭೫೪–೧೭೬೩ ರಲ್ಲಿ ಮೂರನೇ ಸೋಮಶೇಖರನಾಯಕ ಮತ್ತು ವೀರಮ್ಮಾಜಿಯವರು ಕೆಳದಿಯನ್ನಾಳುತ್ತಿದ್ದರು. ಅದೇ ಸಮಯದಲ್ಲಿ ಮೈಸೂರಿನಲ್ಲಿ ೭ನೇ ಚಾಮರಾಜ ಒಡೆಯರ್ (ಕ್ರಿ. ಶ. ೧೭೩೨–೧೭೩೪) ಅರಸರಾಗಿದ್ದರು. ಹಾಗೂ ಕೃಷ್ಣರಾಜ ಒಡೆಯರ್ II (೧೭೩೪–೧೭೬೬) ಅರಸರಾಗಿದ್ದರು

ಕೃಷ್ಣರಾಜ ಒಡೆಯರ್ ಕಾಲದಲ್ಲಿ ದಂಡನಾಯಕ ನಾಗಿದ್ದ ಹೈದರಅಲಿಖಾನನು ಕ್ರಿ. ಶ. ೧೭೬೩ ರಲ್ಲಿ ದಂಡೆತ್ತಿ ಬಂದು ಕೆಳದಿಯನು ಗೆದ್ದು ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡಿರುವುದು ತಿಳಿದು ಬರುತ್ತದೆ.[29]

[ಈ ಪ್ರಬಂಧ ರಚನೆಯಲ್ಲಿ ಸಹಕರಿಸಿದ ಶ್ರೀ ಕೆ. ಗುಂಡಾ ಜೋಯಿಸ್ ಮತ್ತು ಕೆಳದಿ ವಸ್ತು ಸಂಗ್ರಹಾಲಯದ ಅಧಿಕಾರಿ ವರ್ಗಕ್ಕೂ ನನ್ನ ಕೃತಜ್ಞತೆಗಳು]

---

25 ಅನ್ನಲ್ಸ್ ಆಫ್ ದಿ ಮೈಸೂರ್ ರಾಯಲ್ ಫ್ಯಾಮಿಲಿ, ಪಾರ್ಟ್ ೧, ಪುಟ. ೧೬೦.

26 ಕೆಳದಿನೃಪವಿಜಯ, ಪುಟ. ೨೩೯.

27 ಅದೇ, ಪುಟ.

28 ಅದೇ, ಪುಟ. ೨೫೯.

29 ಅದೇ, ಪುಟ. ೩೦೮, ಅನಲ್ಸ್ ಆಫ್ ದಿ ಮೈಸೂರ್ ಫ್ಯಾಮಿಲಿ, ಪಾರ್ಟ್ ೧. ಪುಟ. ೧೯೧.

ಪಿ. ಗಣಪಯ್ಯಭಟ್*

# ಒಲೊಖೊಯಿರ-ಆಳ್ವಖೇಡ: ಒಂದು ಜಿಜ್ಞಾಸೆ

ತುಳುನಾಡಿನ ಇತಿಹಾಸ ಕುರಿತು ಬರೆದ ಬಹುತೇಕ ವಿದ್ವಾಂಸರು ಪರೋಕ್ಷ ಆಧಾರವೊಂದರ ಹಿನ್ನೆಲೆಯಲ್ಲಿ, ಆ ಕುರಿತು ಯಾವುದೇ ಜಿಜ್ಞಾಸೆಯನ್ನು ಕೈಗೊಳ್ಳದೆ, ಕ್ರಿ.ಶ. ಎರಡನೆಯ ಶತಮಾನದಿಂದಲೇ ತುಳುನಾಡು ಆಳುಪರಸರ ಆಳ್ವಿಕೆಗೊಳಪಟ್ಟದ್ದು, 'ಆಳ್ವಖೇಡ' ಎಂಬುದಾಗಿ ಗುರುತಿಸಲಾಗುತ್ತಿತ್ತು. ಎಂಬುದಾಗಿ ತಮ್ಮ ಕೃತಿಗಳಲ್ಲಿ, ಬರಹಗಳಲ್ಲಿ ದಾಖಲಿಸುವ ಮೂಲಕ ಆ ವಿಚಾರವನ್ನು ಒಪ್ಪಿಕೊಂಡಿದ್ದಾರೆ.[1] ಈ ಹೇಳಿಕೆಗಳಿಗೆ ಕ್ರಿ.ಶ. ಎರಡನೆಯ ಶತಮಾನದ ಮಧ್ಯ ಭಾಗಕ್ಕನ್ವಯಿಸುವ ಗ್ರೀಕ್ ಭೂಗೋಳ ಶಾಸ್ತ್ರಜ್ಞ ಟಾಲೆಮಿಯ 'ಭೂಗೋಳ ಶಾಸ್ತ್ರದ ಕೈಪಿಡಿ' ಎಂಬ ಕೃತಿಯಲ್ಲಿ ಕಂಡು ಬರುವ 'ಒಲೊಖೊಯಿರ' ಎಂಬ ಸ್ಥಳದ ಉಲ್ಲೇಖವೇ ಆಧಾರ.[2] ಟಾಲೆಮಿಯ ಒಲೊಖೊಯಿರವು 'ಆಳ್ವಖೇಡ'ದ ಅಪಭ್ರಂಶ ಎಂಬುದು ಈ ವಿದ್ವಾಂಸರ ಅಭಿಪ್ರಾಯ. ಟಾಲೆಮಿಯ 'ಒಲೊಖೊಯಿರ'ವನ್ನು 'ಆಳ್ವಖೇಡ' ದೊಂದಿಗೆ ಸಮೀಕರಿಸುವ ವಿಚಾರ ಎಷ್ಟರ ಮಟ್ಟಿಗೆ ಸ್ವೀಕಾರಾರ್ಹ ಎಂಬುದನ್ನು ಐತಿಹಾಸಿಕ ದಾಖಲೆಗಳ ಹಾಗೂ ಸಾಂದರ್ಭಿಕ ಆಧಾರಗಳ ಹಿನ್ನೆಲೆಯಲ್ಲಿ ಚರ್ಚಿಸುವುದು ಅವಶ್ಯವಾಗಿದೆ.

ಟಾಲೆಮಿಯ ಕೃತಿಯಲ್ಲಿ ಹೇಳಲಾದ ಒಲೊಖೊಯಿರದ ಹಿನ್ನೆಲೆಯನ್ನು ಪರಿಶೀಲಿಸಿದಾಗ ಅದನ್ನು ಆಳ್ವಖೇಡದೊಂದಿಗೆ ಸಮೀಕರಿಸುವಲ್ಲಿ ಪ್ರಥಮ ತೊಡಕು ಎದುರಾಗುತ್ತದೆ. ಭಾರತದ ಪಶ್ಚಿಮ ಪ್ರದೇಶದ ಕಡಲ್ಗಳ್ಳರ ಕೇಂದ್ರಗಳನ್ನು ಪ್ರಸ್ತಾಪಿಸುತ್ತ ಒಲೊಖೊಯಿರವು ಬಳನಾಡಿನಲ್ಲಿರುವ ಕಡಲ್ಗಳ್ಳರ ಒಂದು ಪಟ್ಟಣ ಎಂದು ಇಲ್ಲಿ ಉಲ್ಲೇಖಿಸಲಾಗಿದೆಯೇ ಹೊರತು ಅದೊಂದು ರಾಜಕೀಯ ಪ್ರದೇಶದ ಹೆಸರು ಎಂಬುದಾಗಿ ಅಲ್ಲ. ಒಲೊಖೊಯಿರ ಪಟ್ಟಣದ ಜೊತೆಯಲ್ಲೆ ಕಡಲ್ಗಳ್ಳರ ರಾಜಧಾನಿಯಾದ 'ಮುಸೊಪಲ್ಲಿ' ಎಂಬ ಸ್ಥಳವನ್ನು ಹೆಸರಿಸಲಾಗಿದೆಯಲ್ಲದೆ ಇವೆರಡೂ ಪರಸ್ಪರ ಸಂಬಂಧವಿರುವ ಸ್ಥಳಗಳೆಂಬ ಸೂಚನೆಯೂ ಅಲ್ಲಿ ವ್ಯಕ್ತವಾಗುತ್ತದೆ. ಟಾಲೆಮಿಯ ಕೃತಿಯಲ್ಲಿ ತಿಳಿಸಲಾದಂತೆ ಮುಸೊಪಲ್ಲಿ ಕಡಲ್ಗಳ್ಳರ ರಾಜಧಾನಿ, ಒಲೊಖೊಯಿರವು ಅವರ ಒಂದು ಪಟ್ಟಣ ಎಂಬ ವಿವರಣೆಯಿಂದ ಮುಸೊಪಲ್ಲಿ ಒಲೊಖೊಯಿರಕ್ಕಿಂತಲೂ ಪ್ರಮುಖವಾದ ಸ್ಥಳ ಎಂಬುದು ಸ್ಪಷ್ಟ. ಒಲೊಖೊಯಿರವನ್ನು ಆಳ್ವಖೇಡದೊಂದಿಗೆ ಗುರುತಿಸುವುದಾದಲ್ಲಿ ಮುಸೊಪಲ್ಲಿಯನ್ನು ತುಳುನಾಡಿನ ಯಾವ ಪ್ರದೇಶದೊಂದಿಗೆ

* ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಶ್ರೀ ಧವಲಾ ಕಾಲೇಜು, ಮೂಡುಬಿದಿರೆ (ದ.ಕ.) ೫೭೪೨೨೭

1 ಸಾಲೆತೊರ್ ಬಿ.ಎ., ೧೯೩೬, ಹಿಸ್ಟರಿ ಆಫ್ ತುಳುವ, ಪು. ೫೬ ; ರಮೇಶ್ ಕೆ.ವಿ. ೧೯೬೮, ತುಳುನಾಡಿನ ಇತಿಹಾಸ, ಪು. ೨೫ ; ರಮೇಶ್ ಕೆ.ವಿ. ೧೯೭೦, ಎ ಹಿಸ್ಟರಿ ಆಫ್ ಸೌತ್ ಕೆನರ, (ಎ.ಹಿ.ಸೌ.ಕೆ.) ಪು. ೨೬ ; ಗುರುರಾಜಭಟ್, ಪಿ, ೧೯೭೫, ಸ್ಟಡೀಸ್ ಇನ್ ತುಳುವ ಹಿಸ್ಟರಿ ಎಂಡ್ ಕಲ್ಚರ್ ಪು. ೧೮ ; ಸೂರ್ಯನಾಥ ಕಾಮತ್, ಯು ,"ಆಳುಪರು" ಕರ್ನಾಟಕದ ಪರಂಪರೆ ಭಾಗ ೧, ರಂ.ರಾ. ದಿವಾಕರ (ಸಂಪಾದಕರು) ಪು. ೩೮೨.

2 ಮೆಕ್ರಿಂಡಲ್, ಜೆ. ಡಬ್ಲ್ಯು, ೧೮೮೪, "ಟಾಲೆಮೀಸ್ ಜಿಯಾಗ್ರಪಿ ಆಫ್ ಇಂಡಿಯಾ ಅಂಡ್ ಸದರ್ನ್ ಏಷ್ಯಾ" ಇಂಡಿಯನ್ ಆಂಟಿಕ್ವೆರಿ ೧೩, (ಪು. ೩೧೩–೪೦೦) ಪು. ೩೬೭.

ಗುರುತಿಸಬೇಕು ? ಒಲೊಖೊಯಿರವನ್ನು ಆಳ್ವಖೇಡ ದೊಂದಿಗೆ ಸಮೀಕರಿಸುವುದನ್ನು ಒಪ್ಪಿದ ವಿದ್ವಾಂಸರು ಅದಕ್ಕೆ ಸಂಬಂಧವುಳ್ಳ ಮುಸೊಪಲ್ಲಿಯ ಕುರಿತು ಗಮನ ಹರಿಸಿಲ್ಲ ಎಂಬುದಿಲ್ಲಿ ಉಲ್ಲೇಖಾರ್ಹ.

ಟಾಲೆಮಿಯ 'ಒಲೊಖೊಯಿರ' ಉಲ್ಲೇಖವನ್ನು ಹೊರತು ಪಡಿಸಿ ಕ್ರಿ.ಶ. ಎರಡನೆಯ ಶತಮಾನದ ಹೊತ್ತಿಗೆ ತುಳುನಾಡು ಆಳುಪರ ಆಳ್ವಿಕೆಯಲ್ಲಿತೆಂಬುದನ್ನು ನಿರೂಪಿಸಲು ಅನ್ಯ ಆಧಾರಗಳೇನಾದರೂ ಇವೆಯೇ ಎಂಬ ಪ್ರಶ್ನೆಗೆ ನಕಾರಾತ್ಮಕ ಉತ್ತರವಷ್ಟೇ ದೊರಕೀತು. ಆಳುಪರ ಕುರಿತಂತೆ ಪ್ರಾಚೀನತಮ ಉಲ್ಲೇಖವಿರುವುದು ಕ್ರಿ. ಶ. ಐದನೆಯ ಶತಮಾನಕ್ಕನ್ವಯಿಸುವ ಹಲ್ಮಿಡಿ ಶಾಸನದಲ್ಲಿ.[3] ಇಲ್ಲಿ ಹೆಸರಿಸಲಾದ 'ಆಳಪಗಣ ಪಶುಪತಿ' ಆಳುಪವಂಶದವನಿರಬೇಕೆಂದೂ, ಆತ ಕದಂಬರ ಸಾಮಂತನಾಗಿದ್ದಿರಬೇಕೆಂದೂ ನಂಬಲಾಗಿದೆ.[4] ಕ್ರಿ.ಶ. ಏಳನೆಯ ಶತಮಾನಾನಂತರದ ಶಾಸನಗಳಲ್ಲಷ್ಟೇ ಆಳುಪ ಅರಸುಮನೆತನದ ನಿರ್ದಿಷ್ಟ ಉಲ್ಲೇಖ ಕಂಡು ಬರುತ್ತದೆ.[5]

ಕ್ರಿಸ್ತಶಕಾರಂಭದ ಎರಡು ಮೂರು ಶತಮಾನಗಳ ತುಳುನಾಡಿನ ಇತಿಹಾಸವನ್ನರಿಯಲು ತಮಿಳು ಸಂಗಮ್ ಸಾಹಿತ್ಯ ಒಂದು ಪ್ರಮುಖ ಆಕರ. ಈ ಕುರಿತು ಡಾ|| ಕೆ.ವಿ. ರಮೇಶ್‌ಅವರ 'ಎ ಹಿಸ್ಟರಿ ಆಫ್ ಸೌತ್ ಕೆನರ' ಕೃತಿಯಲ್ಲಿ ವಿವರವಾಗಿ ಚರ್ಚಿಸಲಾಗಿದೆ.[6] ಸಂಗಮ್ ಸಾಹಿತ್ಯದಲ್ಲಿ ಈ ಪ್ರದೇಶವನ್ನು "ತುಳುನಾಡು" ಎಂಬ ಹೆಸರಿನಿಂದ ಗುರುತಿಸಲಾಗಿದ್ದು ಇಲ್ಲಿ ಕೋಶರ್ ಜನಾಂಗದವರು ವಾಸಿಸುತ್ತಿದ್ದರೆಂಬ ವಿವರಣೆಯಿದೆ. ನಂತರ ಈ ಕೋಶರ್ ಜನಾಂಗದವರನ್ನು ಸದೆ ಬಡಿದು ಇಡಿಯ ತುಳುನಾಡನ್ನು ತನ್ನ ಕೈವಶ ಮಾಡಿ ಕೊಂಡು ಆಳ್ವಿಕೆ ನಡೆಸಿದ ನನ್ನನ್ ಎಂಬ ಹೆಸರಿನ ಅರಸನ ಸಾಹಸಗಾಥೆ ಸಂಗಮ್ ಸಾಹಿತ್ಯದಲ್ಲಿದೆ. ಕೆಲವು ಇತಿಹಾಸಕಾರರ ಅಭಿಪ್ರಾಯದಂತೆ ನನ್ನನ್ ತುಳುನಾಡನ್ನಾಳುತ್ತಿದ್ದುದು ಕ್ರಿ.ಶ. ಎರಡನೇಯ ಶತಮಾನದ ಮಧ್ಯಭಾಗದಲ್ಲಿ[7] ಕ್ರಿ.ಶ. ಒಂದರಿಂದ ಮೂರನೆಯ ಶತಮಾನದ ಮಧ್ಯೆ ಯಾವುದೇ ಕಾಲದಲ್ಲಿ ನನ್ನನ್ ತುಳುನಾಡನ್ನಾಳುತ್ತಿದ್ದಿರಬೇಕೆಂಬುದು ರಮೇಶ್‌ರವರ ಅಭಿಪ್ರಾಯ.[8] ಈ ನನ್ನನ್ ಎಂಬ ಅರಸ ಆಳುಪವಂಶಕ್ಕೆ ಸೇರಿದವನೆಂದು ನಂಬಲು ಯಾವುದೇ ಆಧಾರಗಳಿಲ್ಲ ಎಂಬುದಿಲ್ಲಿ ಗಮನಾರ್ಹ. ಇದರಂತೆ, ಕ್ರಿ.ಶ. ಒಂದರಿಂದ ಮೂರನೆಯ ಶತಮಾನದಲ್ಲಿ ಆಳುಪ ಅರಸುಮನೆತನ ಅಸ್ತಿತ್ವಕ್ಕೆ ಬಂದಿರಲಿಲ್ಲ ಎಂದು ಸ್ಪಷ್ಟವಾಗಿ ತಿಳಿಯಬಹುದು. ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಕ್ರಿ.ಶ. ಎರಡನೆಯ ಶತಮಾನದ ಹೊತ್ತಿಗೆ ತುಳುನಾಡು ಆಳುಪರ ಆಳ್ವಿಕೆಗೊಳಪಟ್ಟಿತ್ತು. ಹಾಗೂ ಅದು ಆಳ್ವಖೇಡ ಎಂಬ ಹೆಸರಿನಿಂದ ಗುರುತಿಸಲಾಗುತ್ತಿತ್ತು ಎನ್ನುವ ವಾದ ಆಧಾರರಹಿತವೆನ್ನಿಸುತ್ತದೆ.

ಈ ಸಂದರ್ಭ ಆಳ್ವಖೇಡ ಎಂಬ ಹೆಸರಿನ ಪ್ರಾಚೀನತೆಯ ಕುರಿತು ವಿಶ್ಲೇಷಿಸುವುದು ಅಗತ್ಯ. ಮೌರ್ಯದೊರೆ ಅಶೋಕನ ಎರಡನೆಯ ಶಿಲಾಶಾಸನದಲ್ಲಿ ಹೇಳಲಾದ "ಸತಿಯ ಪುತ್ರ" ಎಂಬ ಹೆಸರು ತುಳುನಾಡಿಗೆ ಅನ್ವಯಿಸುತ್ತದೆ ಎನ್ನುವ ಕೆಲವು ಚರಿತ್ರಕಾರರ

---

3 ಮೈಸೂರು ಆರ್ಕಿಯಲಾಜಿಕಲ್ ರಿಪೋರ್ಟ್ಸ್, ೧೯೩೬, ಪು. ೭೨ ರಿಂದ ಮುಂದಕ್ಕೆ.

4 ರಮೇಶ್ ಕೆ.ವಿ., ೧೯೭೦. ಎ.ಹಿ.ಸೌ.ಕೆ. ಪು. ೨೯.

5 ಇಂಡಿಯನ್ ಆಂಟಿಕ್ವೆರಿ, ೧೯, ಪು. ೯ ರಿಂದ (ಮಹಾಕೂಟ ಸ್ತಂಭಶಾಸನ) ; ಎಪಿಗ್ರಾಫಿಯಾ ಇಂಡಿಕಾ, ೬, (ಐಹೊಳೆ ಶಾಸನ) ಆಂಧ್ರಪ್ರದೇಶ್ ಆರ್ಕಿಯಲಾಜಿಕಲ್ ಸೀರೀಸ್. ೬, ಪು. ೧೧-೩೯, (ಮಾರಟೂರು ಶಾಸನ), ಕೆ.ವಿ. ರಮೇಶ್ ಮತ್ತು ಎಂ.ಜೆ. ಶರ್ಮ, ತುಳುನಾಡಿನ ಶಾಸನಗಳು, (೧೯೭೮), ಪು. ೧೦-೧೧ (ವಡ್ಡರ್ಸೆ ಶಾಸನ), ಎಪಿಗ್ರಾಫಿಯಾ ಕರ್ನಾಟಕಾ, ೬, ಕೊಪ್ಪ ೩೮, (ಕಿಗ್ಗಶಾಸನ) ಇತ್ಯಾದಿ.

6 ರಮೇಶ್ ಕೆ.ವಿ., ಎ.ಹಿ.ಸೌ.ಕೆ. ಪು. ೧೭-೨೬

7 ಅಯ್ಯಂಗಾರ್ ಎಸ್.ಕೆ. ೧೯೨೩, ಸಮ್ ಕಾಂಟ್ರಿಬ್ಯೂಶನ್ಸ್ ಆಫ್ ಸೌತ್ ಇಂಡಿಯಾ ಟು ಇಂಡಿಯನ್ ಕಲ್ಚರ್, ಪು. ೩೨೩.

8 ರಮೇಶ್ ಕೆ.ವಿ. ಎ.ಹಿ.ಸೌ.ಕೆ. ಪು. ೨೫.

ವಾದವನ್ನೊಪ್ಪುವುದಾದಲ್ಲಿ[9] ಸತಿಯಪುತ್ರ ಎಂಬುದೇ ಈ ಪ್ರದೇಶದ ಪ್ರಾಚೀನತಮ ಹೆಸರು ಎಂದು ತಿಳಿಯ ಬೇಕಾಗುತ್ತದೆ. ಕ್ರಿಸ್ತಶಕಾರಂಭದ ಪ್ರಥಮ ಮೂರು ಅಥವಾ ನಾಲ್ಕು ಶತಮಾನಗಳಿಗನ್ವಯಿಸಬಹುದಾದ ಸಂಗಮ್ ಸಾಹಿತ್ಯದಲ್ಲಿ ಈ ಪ್ರದೇಶವನ್ನು 'ತುಳು ನಾಡು' ಎಂದು ಗುರುತಿಸಲಾಗಿದೆ.[10] ಮೌರ್ಯರ ರಾಜಕೀಯ ಉತ್ತರಾಧಿಕಾರಿಗಳಾಗಿ ಕರ್ನಾಟಕವೂ ಸೇರಿದಂತೆ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ ಶಾತವಾಹನರ ದಾಖಲೆಗಳಲ್ಲಿ ತುಳುನಾಡಿನ ಅಥವಾ ಈ ಪ್ರದೇಶದ ಉಲ್ಲೇಖಗಳಿಲ್ಲ. ನಂತರ ಆಳ್ವಿಕೆ ನಡೆಸಿದ ಕದಂಬ ಹಾಗೂ ಬದಾಮಿ ಚಲುಕ್ಯರ ಶಾಸನಗಳಲ್ಲಿ ಆಳುಪ ಅರಸುಮನೆತನದ ಪ್ರಸ್ತಾಪವಿದ್ದರೂ ಆಳ್ವಖೇಡ ಎಂಬ ಹೆಸರಿನ ಉಲ್ಲೇಖ ಕಂಡುಬರುವುದಿಲ್ಲ ಎಂಬುದನ್ನಿಲ್ಲಿ ಗಮನಿಸಬೇಕು.

ಆಳ್ವಖೇಡ ಎಂಬ ಪದದ ಪ್ರಥಮ ಉಲ್ಲೇಖ ದೊರಕುವುದು ಕ್ರಿ.ಶ. ಎಂಟನೆಯ ಶತಮಾನಾಂತ್ಯಕ್ಕನ್ವಯಿಸುವ ರಾಷ್ಟ್ರಕೂಟ ದೊರೆ ಮೂರನೆಯ ಗೋವಿಂದನ ಮಾವಳಿ (ಸೊರಬ ತಾಲ್ಲೂಕು) ಶಾಸನದಲ್ಲಿ.[11] ರಾಷ್ಟ್ರಕೂಟರ ಕಾಲದ ನಿಡುಗುಂದಿ ಶಾಸನದಲ್ಲೂ ಆಳ್ವಖೇಡವನ್ನು ಹೆಸರಿಸಲಾಗಿದೆ. ಈ ಶಾಸನಗಳಂತೆ ಆಳ್ವಖೇಡವು ೬೦೦೦ ವಿಭಾಗಗಳನ್ನೊಳಗೊಂಡ ಪ್ರದೇಶವಾಗಿತ್ತು. ಆಳುಪರಸರ ಆಳ್ವಿಕೆಗೊಳಪಟ್ಟ ನಾಡು ಎಂಬ ಅರ್ಥದಲ್ಲಿ ಆಳ್ವಖೇಡ ಪದವನ್ನು ಬಳಸಲಾಗಿದೆ ಎಂಬುದು ಸ್ಪಷ್ಟ. ಹೊಯ್ಸಳರ ಕಾಲದ ಕೆಲವು ಶಾಸನಗಳೂ ಈ ಪರಂಪರೆಯನ್ನೇ ಮುಂದುವರಿಸಿ ತುಳುನಾಡನ್ನು ಆಳ್ವಖೇಡ ಎಂದು ಗುರುತಿಸುತ್ತವೆ.[12]

ಈ ಸಂದರ್ಭ ಎರಡು ಮುಖ್ಯವಾದ ವಿಚಾರಗಳನ್ನಿಲ್ಲಿ ಗಮನಿಸಬೇಕು. ೧. ತುಳುನಾಡನ್ನು ಆಳ್ವಖೇಡ ಎಂಬ ಹೆಸರಿನಿಂದ ಗುರುತಿಸುವ ಪ್ರಾಚೀನತಮ ದಾಖಲೆ ಕ್ರಿ.ಶ. ಎಂಟನೇಯ ಶತಮಾನಾಂತ್ಯದ ರಾಷ್ಟ್ರಕೂಟ ಶಾಸನ. ಅದಕ್ಕಿಂತ ಹಿಂದಿನ ಯಾವುದೇ ದಾಖಲೆಗಳಲ್ಲೂ ಆಳ್ವಖೇಡ ಹೆಸರಿನ ಪ್ರಸ್ತಾಪವಿಲ್ಲ. ೨. ತುಳುನಾಡಿನಲ್ಲಿ ಈತನಕ ಬೆಳಕಿಗೆ ಬಂದಿರುವ ಯಾವುದೇ ಶಾಸನಗಳಲ್ಲೂ ಆಳ್ವಖೇಡ ಪದದ ಉಲ್ಲೇಖವೇ ಕಂಡು ಬರುವುದಿಲ್ಲ. ಈ ಹೆಸರು ತುಳುನಾಡಿನ ಹೊರಗಿರುವ ಶಾಸನಗಳಲ್ಲಿ ಮಾತ್ರ ಕಾಣಿಸಿಕೊಂಡಿದೆ. ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಿದಾಗ ಕ್ರಿ.ಶ. ಎಂಟನೆಯ ಶತಮಾನಕ್ಕೆ ಪೂರ್ವದಲ್ಲಿ ತುಳುನಾಡನ್ನು ಆಳ್ವಖೇಡ ಎಂಬ ಹೆಸರಿನಿಂದ ಗುರುತಿಸಲಾಗುತ್ತಿರಲಿಲ್ಲ ಎಂಬ ಅಂಶ ಖಚಿತವಾಗುತ್ತದೆ. ಕ್ರಿ. ಶ. ಎಂಟನೇಯ ಶತಮಾನದ ಹೊತ್ತಿಗೆ, ಅಂದರೆ, ರಾಷ್ಟ್ರಕೂಟ ಯುಗದಲ್ಲಷ್ಟೆ ಈ ಹೆಸರಿನ ಬಳಕೆ ಆರಂಭವಾಗಿರಬೇಕು. ಆಳ್ವ ಎಂಬುದು ದ್ರಾವಿಡ ಮೂಲದ ಪದ.[13] ಖೇಡ ಎಂಬುದು ಪ್ರಾಕೃತ ಸಂಸ್ಕೃತ ಭಾಷೆಯ ಪದ. 'ಖೇಡ' ಎಂಬುದು ಮಹಾರಾಷ್ಟ್ರ ಹಾಗೂ ಉತ್ತರ ಕರ್ನಾಟಕದಲ್ಲಿ ಬಹಳವಾಗಿ ಬಳಕೆಯಲ್ಲಿರುವ ಸ್ಥಳನಾಮಘಟಕ ಎಂಬುದನ್ನಿಲ್ಲಿ ಗಮನಿಸಬೇಕು. ಈ ಆಧಾರಗಳಂತೆ, ಮಾನ್ಯಖೇಟ ಅಥವಾ ಮಾಳಖೇಡ್‌ನಿಂದ ಆಳ್ವಿಕೆ ನಡೆಸುತ್ತಿದ್ದ ರಾಷ್ಟ್ರಕೂಟರ ಕಾಲದಲ್ಲಿ 'ಆಳುಪರ ಆಳ್ವಿಕೆಯುಳ್ಳ ಪ್ರದೇಶ ಎಂಬ ಅರ್ಥದಲ್ಲಿ ತುಳುನಾಡನ್ನು ಆಳ್ವಖೇಡ ಎಂದು ಗುರುತಿಸುವುದು ರೂಢಿಯಲ್ಲಿ ಬಂದಿರಬೇಕೆಂದು ಊಹಿಸಬಹುದು.

ಟಾಲೆಮಿಯ ಕೃತಿಯಲ್ಲಿ ಹೆಸರಿಸಲಾದ ಸ್ಥಳನಾಮಗಳನ್ನು ನಂತರ ಬಳಕೆಯಲ್ಲಿ ಬಂದ ಅಥವಾ ಆಧುನಿಕ ಸ್ಥಳನಾಮಗಳೊಂದಿಗೆ ಸಮೀಕರಿಸುವ ಮುನ್ನ ಅಂತಹ ಸ್ಥಳನಾಮಗಳ ಪ್ರಾಚೀನತೆಯನ್ನು ನಿರ್ಧರಿಸಬೇಕಾದ್ದು ಅವಶ್ಯ. ಕ್ರಿ.ಶ. ಎರಡನೆಯ ಶತಮಾನದಲ್ಲೇ ಅಂತಹ ಸ್ಥಳನಾಮಗಳು ನಮಗಿಂದು ತಿಳಿದಿರುವ

---

9 ಸ್ಮಿಥ್ ವಿ.ಎ. ಅರ್ಲಿ ಹಿಸ್ಟರಿ ಆಫ್ ಇಂಡಿಯಾ, ಪು. ೩೪೦ ; ರಮೇಶ್ ಕೆ.ವಿ. ಎ.ಹಿ.ಸೌ.ಕೆ. ಪು. ೧೧.

10 ಸಾಲೆತೂರ್, ಹಿಸ್ಟರಿ ಆಫ್ ತುಳುವ, ಪು. ೪೮.

11 ಎಪಿಗ್ರಾಫಿಯಾ ಕರ್ನಾಟಿಕ. ೮, ಸೊರಬ. ೧೦.

12 ಎಪಿಗ್ರಾಫಿಯಾ ಕರ್ನಾಟಿಕ. ೧೨, ತಿಪಟೂರು ೮೧, ಸಂಪುಟ ೫, ಹಾಸನ ೬೯, ಸಂಪುಟ ೫, ಚೆನ್ನರಾಯಪಟ್ಟಣ ೨೭೦, ಇತ್ಯಾದಿ.

13 ರಮೇಶ್ ಕೆ.ವಿ. ಎ.ಹಿ.ಸೌ.ಕೆ. ಪು. ೩೭.

ರೂಪದಲ್ಲೇ ಬಳಕೆಯಲ್ಲಿದ್ದವು ಎಂಬುದು ಖಚಿತವಾದ ನಂತರವಷ್ಟೇ ಅವುಗಳನ್ನು ಟಾಲೆಮಿಯು ಹೆಸರಿಸಿರುವ ಸ್ಥಳನಾಮಗಳೊಂದಿಗೆ ಸಮೀಕರಿಸುವ ಪ್ರಯತ್ನ ಸಾಧ್ಯ. ಟಾಲೆಮಿಯು ಹೆಸರಿಸಿರುವ ಸ್ಥಳನಾಮಗಳೂ ನಾವು ಅವುಗಳೊಂದಿಗೆ ಸಮೀಕರಿಸಲು ಪ್ರಯತ್ನಿಸುವ ಹೆಸರುಗಳೂ ಒಂದೇ ಪ್ರದೇಶಕ್ಕೆ ಅನ್ವಯಿಸುವಂಥವು ಎಂಬುದನ್ನು ಆಧಾರ ಸಹಿತ ನಿರೂಪಿಸಬೇಕಾದ್ದೂ ಅಷ್ಟೇ ಆಗತ್ಯ.[14] ಇನ್ನು, ಟಾಲೆಮಿಯ ಕುರಿತು ಹೇಳುವುದಾದಲ್ಲಿ, ಆತ ಭಾರತವನ್ನೆಂದೂ ಸಂದರ್ಶಿಸಿದವನಲ್ಲ. ಭಾರತದ ಕುರಿತು ಆತನಿಗಿದ್ದುದು ಪ್ರವಾಸಿಗರಿಂದ ಮತ್ತು ವ್ಯಾಪಾರಿಗಳಿಂದ ಸಂಗ್ರಹಿಸಿದ ಪರೋಕ್ಷ ಮಾಹಿತಿ ಮಾತ್ರ ಎಂಬ ಅಂಶವನ್ನೂ ಇಲ್ಲಿ ಗಮನಿಸಬೇಕು. ಈ ಎಲ್ಲ ಹಿನ್ನೆಲೆಯಲ್ಲಿ ಪ್ರಸ್ತುತ ಸಮಸ್ಯೆಯನ್ನು ಸಮಗ್ರವಾಗಿ ವಿಶ್ಲೇಷಿಸಿದಾಗ ಟಾಲೆಮಿಯು ಉಲ್ಲೇಖಿಸಿರುವ ಒಲೊಖೊಯಿರವು ಆಳ್ವಖೇಡ ಖಂಡಿತ ಅಲ್ಲ ಎಂಬ ತೀರ್ಮಾನವನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ.

14 ಯಾವುದೇ ಆಧಾರವನ್ನು ಸೂಚಿಸದೆ ಕೆಲ ವಿದ್ವಾಂಸರು ಒಲೊಖೊಯಿರವನ್ನು ಮಹಾರಾಷ್ಟ್ರದ ರತ್ನಗಿರಿ ಜಿಲ್ಲೆಯ ಖೇಡ ಎಂಬ ಪಟ್ಟಣದ ಜೊತೆ ಗುರುತಿಸಲು ಪ್ರಯತ್ನಿಸಿದ್ದೂ ಇದೆ. ನೋಡಿ : ಮೆಕ್ರಿಂಡಲ್, ಇಂಡಿಯನ್ ಆಂಟಿಕ್ವೆರಿ, ೧೩, ಪು. ೩೬೭, ನಾಗೇಗೌಡ, ಹೆಚ್.ಎಲ್. ಪ್ರವಾಸಿ ಕಂಡ ಇಂಡಿಯಾ, ಭಾಗ ೧. ಪು. ೧೨೮

ಪಿ.ವಿ. ಕೃಷ್ಣಮೂರ್ತಿ*

# ಕರ್ನಾಟಕ ಇತಿಹಾಸದಲ್ಲಿ ದಡಿಗಾವಳಿಯ ಸ್ಥಾನ-ಒಂದು ಪರಿಶೀಲನೆ

ಕ್ರಿಸ್ತಶಕ ಹತ್ತನೆಯ ಶತಮಾನದ ಕೊನೆಯಲ್ಲಿ ತಲೆಯೆತ್ತಿದ ಹೆಸರಾಂತ ಚೋಳ ದೊರೆ ರಾಜರಾಜ ಕೇಸರಿವರ್ಮ; ಅಂದರೆ ಮೊದಲನೆಯ ರಾಜರಾಜನು ದಕ್ಷಿಣ ಭಾರತದ ಹಲವು ಪ್ರದೇಶಗಳನ್ನು ಆಕ್ರಮಿಸಿ ಕೊಂಡಿದ್ದನೆಂದು ಅವನ ಶಾಸನಗಳಿಂದ ತಿಳಿದುಬರುತ್ತದೆ. ಹಾಗೆ ಆಕ್ರಮಿಸಿಕೊಂಡಿದ್ದನೆಂದು ಉಕ್ತವಾಗಿರುವ ಪ್ರದೇಶಗಳಲ್ಲಿ ಕರ್ನಾಟಕದ ಭೌಗೋಳಿಕಾ ವ್ಯಾಪ್ತಿಯಲ್ಲಿ ಬರುವ ಗಂಗವಾಡಿ, ನೊಳಂಬವಾಡಿ, ರಟ್ಟವಾಡಿ, ಕೊಡಗಮಲೆನಾಡು (ಕುಡುಮಲೈನಾಡು) ಮುಂತಾದವುಗಳೊಂದಿಗೆ 'ದಡಿಗಾವಟಿ' ಅಥವಾ 'ದಡಿಗವಾಡಿ' ಎಂಬ ಪ್ರದೇಶವೊಂದನ್ನು ನಿಯತವಾಗಿ ಉಲ್ಲೇಖಿಸಿರುವುದು ಗಮನ ಸೆಳೆಯುತ್ತದೆ. ಪ್ರಸ್ತುತ ಆ ದಡಿಗವಾಡಿ ಅಥವಾ ದಡಿಗಮಂಡಲದ ಪ್ರಾದೇಶಿಕ ವ್ಯಾಪ್ತಿ, ಕರ್ನಾಟಕ ಇತಿಹಾಸದಲ್ಲಿ ಅದರ ಸ್ಥಾನ ಮತ್ತು ಪಾತ್ರ ಇತ್ಯಾದಿ ವಿವರಗಳ ಪರಿಶೀಲನೆಯೇ ಈ ಸಂಪ್ರಬಂಧದ ಆಶಯವಾಗಿದೆ.

ಚೋಳ ಮತ್ತು ಅದಕ್ಕೂ ಪೂರ್ವದ ಶಾಸನಗಳಲ್ಲಷ್ಟೇ ಕ್ವಚಿತ್ತಾಗಿ ಉಲ್ಲೇಖಗೊಂಡಿರುವ ಈ ಪ್ರಾದೇಶಿಕ ವಿಭಾಗದ ಬಗ್ಗೆ ಡಾ|| ಜೆ. ಎಫ್. ಫ್ಲೀಟ್‌ರವರು ಕ್ರಿ. ಶ. ೧೯೦೧ರ ಇಂಡಿಯನ್ ಆ್ಯಂಟಿಕ್ವರಿ ಸಂಪುಟ ೩೦ರಲ್ಲಿ 'ನೋಟ್ಸ್ ಆನ್ ಇಂಡಿಯನ್ ಹಿಸ್ಟರಿ ಅಂಡ್ ಜಾಗ್ರಫಿ' ಎಂಬ ಶೀರ್ಷಿಕೆಯಡಿಯಲ್ಲಿ 'ತಡಿಗೈಪಾಡಿ', 'ದಡಿಗವಾಡಿ' (ಪು. ೧೦೯) ಎಂಬ ಹೆಸರಿನ ಲೇಖನವೊಂದನ್ನು ಪ್ರಕಟಿಸಿರುತ್ತಾರೆ. ಅಲ್ಲಿ ಅವರು 'ದಡಿಗಾವಟಿ' ಎಂಬುದು ಇಂದಿನ ಕೃಷ್ಣರಾಜಪೇಟೆ, ಮಂಡ್ಯ, ನಾಗಮಂಗಲ, ಶ್ರೀರಂಗಪಟ್ಟಣ ಮತ್ತು ಮಳವಳ್ಳಿ ತಾಲ್ಲೂಕುಗಳ ಪ್ರದೇಶವನ್ನು ಒಳಗೊಂಡಿದ್ದಿತೆಂದು ಪ್ರತಿಪಾದಿಸಿರುವುದಲ್ಲದೆ, ಮುಂದೆ ಹಾಸನ ಮತ್ತು ತುಮಕೂರು ಜಿಲ್ಲೆಯ ಶಾಸನಗಳು ಪರಿಶೀಲನೆಗೆ ದೊರೆತಾಗ 'ದಡಿಗಾವಟಿ'ಯ ಉತ್ತರದ ಗಡಿ ತುಸು ವಿಸ್ತರಣಗೊಳ್ಳುವ ಸಾಧ್ಯತೆಗಳನ್ನು ವ್ಯಕ್ತಪಡಿಸಿದ್ದರು. ಅಲ್ಲದೆ 'ದಡಿಗ' ವಂಶೀಯರ ಬಗ್ಗೆಯೂ ಧಾರವಾಡ ಜಿಲ್ಲೆಯಲ್ಲಿ ದೊರೆತ ಶಾಸನಗಳ ಹಿನ್ನೆಲೆಯಲ್ಲಿ ಬೆಳಕು ಚೆಲ್ಲಿದ್ದರು. ಕ್ರಿ.ಶ. ೧೯೦೧ರ ನಂತರ 'ಎಪಿಗ್ರಾಫ್ರಿಯಾ ಕರ್ನಾಟಕ'ದ ಶಿವಮೊಗ್ಗ, ಹಾಸನ, ಚಿತ್ರದುರ್ಗ, ತುಮಕೂರು, ಕೋಲಾರ ಮತ್ತು ಬೆಂಗಳೂರು ಜಿಲ್ಲೆಯ ಶಾಸನ ಸಂಪುಟಗಳು ಹೊರಬಂದವು. ಅವರು ಭಾವಿಸಿದಂತೆ ಹಾಸನ ಹಾಗೂ ತುಮಕೂರು ಜಿಲ್ಲೆಯ ಶಾಸನಗಳಲ್ಲಿ ದಡಿಗಾವಳಿಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳೇನೂ ಕಂಡುಬರಲಿಲ್ಲ. ಆದರೆ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳ ಶಾಸನಗಳಲ್ಲಿ ತುಸು ಹೆಚ್ಚಿನ ವಿವರಗಳು ಚೋಳ ಮತ್ತು ಚೋಳರ ಪೂರ್ವದ ಶಾಸನಗಳಲ್ಲಿ ಕಂಡುಬಂದಿದೆ.

ಪಲ್ಲವ ನರಸಿಂಹ ವಿಕ್ರಮನ ೨೪ನೆಯ ಆಳಿಕೆಯ ವರ್ಷಕ್ಕೆ ಸೇರಿದ ಮುಳಬಾಗಿಲು ತಾಲ್ಲೂಕಿನ ಶಾಸನ

* ಜಿ.ಬಿ.ಜಿ. ೫೧೦, ೧೨ನೆಯ ಅಡ್ಡರಸ್ತೆ, ಎಚ್.ಎ.ಎಲ್. ಕಾಲೊನಿ, ಮಾರತ್‌ಹಳ್ಳಿ, ಬೆಂಗಳೂರು-೫೬೦ ೦೧೭

ವೊಂದರಲ್ಲಿ[1] ಸ್ಕಂಧಬಾಣಾಧಿರಾಜರ ಸೇವಕ 'ಶಿಳಿಗರ್' ಎಂಬ ವೀರ, ತುರುಗಾಳಿಗದಲ್ಲಿ ಮಡಿದ ವಿವರವಿದೆ. ಈ ಶಾಸನದ ಪ್ರಕಾರ ತುರುಗಳನ್ನು ಹಿಡಿದವರು 'ದಡಿಯಂಗಾಳುಂ ವಾಣರಾಶರುಂ ಮಯಿಂದಿರವಿಕ್ಕಿರವರುಂ' ಎಂದಿದೆ. ಇದನ್ನು ಪ್ರೊ|| ಟಿ.ವಿ. ಮಹಾಲಿಂಗಂ ಅವರು ದಡಿಯ (ದಿ ಚೀಫ್ ಆಫ್ ದಡಿಗಾವಳಿ?) 'ವಾಣರಸರ್' (ಬಾಣರಾಜ) ಮತ್ತು 'ಮಯಿಂದಿರ ವಿಕ್ಕಿರವರ್' ಎಂದು ಅರ್ಥೈಸಿದ್ದಾರಲ್ಲದೆ ಅವರು 'ಕನ್ನಡಿಗರು' ಎಂಬ ಸೂಚನೆಯನ್ನೂ ನೀಡಿದ್ದಾರೆ.[2] "ಕನ್ನಡಗರುಣ್ ಗಂಗೈದಙ್ಕಆಳಿಪ್ಪ...." ಎಂಬ ತ್ರುಟಿತ ಭಾಗವು ಶಾಸನದಲ್ಲಿದೆ. ಈ ಶಾಸನದ ಹಿನ್ನೆಲೆಯಲ್ಲಿ ಹೇಳುವುದಾದರೆ ; ಬಾಣರಲ್ಲಿ ಇಬ್ಬಣಗಳಿದ್ದುದು ಕಂಡುಬರುತ್ತದೆ. ಒಂದು ಗುಂಪು ಸ್ಕಂಧ ಬಾಣಾಧಿ ಅರಸರದಾದರೆ, ಇನ್ನೊಂದು ಬಾಣರಾಜರದು, ಅಂದರೆ ಪ್ರಾಯಶಃ ಮಹಾಬಲಿ ಬಾಣರಸರದು. ಇಲ್ಲಿ ಸ್ಕಂಧಬಾಣಾದಿ ಅರಸರು ಪಲ್ಲವರ ಅಧೀನರಾಗಿದ್ದರೆ, ಬಾಣರಸರು ದಡಿಗಾವಳಿಯ ಮುಖ್ಯಸ್ಥನಾಗಿ ಆ ಪ್ರದೇಶವನ್ನು ಆಳುತ್ತಿದ್ದಂತೆ ತೋರುತ್ತದೆ. ಗಂಗರ ಮೊದಲ ಶಿವಮಾರನ ಕಾಲದಲ್ಲಿ (ಕ್ರಿ.ಶ. ೬೭೯) ಗಂಗ ೬೦೦೦ ಪ್ರದೇಶವು ಮಹಾವಲಿ ಬಾಣರಸರ ವಶದಲ್ಲಿದ್ದ ಅಂಶ ಇತರ ಶಾಸನಗಳಿಂದ ತಿಳಿದುಬರುತ್ತದೆ.[3]

ಸುಮಾರು ಕ್ರಿ. ಶ. ೯-೧೦ನೇ ಶತಮಾನದ ಶಾಸನವೊಂದು[4] "ಕನ್ನರ ಬಲ್ಲಹ ದಳಿಗವಳಿಯನಾಳೆ" ಎಂದು ತಿಳಿಸುವುದರಿಂದ ದಡಿಗಾವಳಿ ಪ್ರದೇಶವು ಕ್ರಿ. ಶ. ೯-೧೦ನೇ ಶತಮಾನಗಳ ಅವಧಿಯಲ್ಲಿ ರಾಷ್ಟ್ರಕೂಟರ, ಪ್ರಾಯಶಃ ಮುಮ್ಮಡಿ ಕೃಷ್ಣನ ಆಳಿಕೆಗೆ ಒಳಪಟ್ಟಿದ್ದಿತೆಂದು ಸ್ಪಷ್ಟವಾಗುತ್ತದೆ. ಕ್ರಿ.ಶ. ೧೦ನೇ ಶತಮಾನದ ಮಧ್ಯದ ವೇಳೆಗೆ ನೊಳಂಬರ ಇರಿವನೊಳಂಬ ೧ನೇ ದಿಲೀಪನ ಆಳಿಕೆಗೆ ದಡಿಗಾವಳಿ ಪ್ರದೇಶ ಒಳ-ಪಟ್ಟಿದ್ದ ಅಂಶ ರಾಜೇನಹಳ್ಳಿ ಗ್ರಾಮದ ಶಾಸದಿಂದ[5] ಖಚಿತಪಡುತ್ತದೆ. ಹತ್ತನೆಯ ಶತಮಾನಕ್ಕೆ ಸೇರಿದ ಮೈಸೂರು ಜಿಲ್ಲೆಯ ವರುಣ ಗ್ರಾಮದ ಶಾಸನವೊಂದು ದಡಿಗವಾಡಿಯ ಮಸಿಕಲ್ಲ ಗಾವುಂಡನ ಮಗ ಮಟ್ಟಗನೆಂಬುವವನು ಕಾಳಿಗವೊಂದರಲ್ಲಿ ಮಡಿದ ವಿವರವನ್ನು ನೀಡುತ್ತದೆ.[6]

ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನ ಎಲೆಗೊಪ್ಪ ಗ್ರಾಮದ ಶಾಸನವು[7] ಗೋಹೆಯ ಭಟ್ಟಾರಕನೆಂಬ ಜೈನ ಯತಿಯನ್ನು ಸ್ತುತಿಸುವುದಾಗಿದೆ. ಆ ಶಾಸನದಲ್ಲಿ ಉಕ್ತವಾಗಿರುವ ನೊಳಂಬವಾಡಿಯುಮೊಡನೊಡನೀದಡಿಗವಾಡಿಯುಂ" ಎಂಬ ವಾಕ್ಯವಿದ್ದು, ಆ ಶಾಸನ ದೊರೆತ ಕೊಪ್ಪ ಗ್ರಾಮವು ದಡಿಗವಾಡಿಯಲ್ಲಿಯೇ ಅಂತರಗತವಾಗಿದ್ದ ಅಂಶವನ್ನು ಸ್ಪಷ್ಟ-ಪಡಿಸುತ್ತದೆ.

ಚೋಳರ ಪೂರ್ವ ಅವಧಿಗೆ ಸೇರಿದ ಮೇಲಿನ ಶಾಸನಗಳಿಂದ ಪ್ರಧಾನವಾಗಿ ವ್ಯಕ್ತವಾಗುವ ಅಂಶಗಳೆಂದರೆ :

ದಡಿಗಾವಳಿಯ ಪೂರ್ವಾರ್ಧ ಪ್ರದೇಶಗಳು ಮೊದಲಿಗೆ ಬಾಣರ ವಶದಲ್ಲಿ ನಂತರ ಗಂಗ-ರಾಷ್ಟ್ರ-ಕೂಟರ, ಅನಂತರ ನೊಳಂಬರ ಆಳಿಕೆಗೆ ಒಳಪಟ್ಟಿದ್ದುವೆಂದು ಹೇಳಬಹುದಾಗಿದೆ. ಪಶ್ಚಿಮ ಪ್ರದೇಶಗಳು ಬಹುಮಟ್ಟಿಗೆ ಸ್ಥಳೀಯ ಅಧಿಕಾರಿಗಳ ವಶದಲ್ಲೇ ಇದ್ದವೆನ್ನಬಹುದು. ಈ ಅಧಿಕಾರಿಗಳಿಗೆ ಯಾರು ಅಧಿರಾಜರಾಗಿದ್ದರೆಂಬುದು ಶಾಸನಗಳಿಂದ ಸ್ಪಷ್ಟವಾಗುವುದಿಲ್ಲ. ಬಹುಮಟ್ಟಿಗೆ ಈ ಶಾಸನಗಳು ತುರುಗಾಳಿಗ ಇಲ್ಲವೆ ಕಾಳಿಗಗಳನ್ನು ಉಲ್ಲೇಖಿಸುವಂತಹುವಾಗಿವೆ. ವಾಸ್ತವವಾಗಿ ದಡಿಗಾವಳಿ ಪ್ರದೇಶವು ಪ್ರಾರಂಭ ಕಾಲದಲ್ಲಿ

---

1 ಎ. ಕ X, ಮುಳಬಾಗಿಲು ೨೨೭

2 Inscriptions of Pallavas, No. 256

3 ಎ. ಕ. XVII. ಬೌರಿಂಗ್‌ಪೇಟೆ ೮೬ ಮುಂತಾದವು

4 ಅದೇ X. ಮುಳಬಾಗಿಲು ೧೮೭

5 ಅದೇ X, ಮಾಲೂರು ೬೩, ಕ್ರಿ.ಶ. ಸು. ೯೫೦

6 ಅದೇ V, ಮೈಸೂರು ೧೭೯

7 ಅದೇ VII, ನಾಗಮಂಗಲ ೧೨೨, ಕ್ರಿ.ಶ. ಸು. ೧೦ನೇ ಶತಮಾನ

ಗಂಗರ ಪೂರ್ವ ಮತ್ತು ಉತ್ತರದ ಗಡಿಯಾಗಿದ್ದಿತು. ಗಂಗರು ಕೈಗೊಂಡ ಬಾಣ, ರಾಷ್ಟ್ರಕೂಟ ಹಾಗೂ ನೊಳಂಬರ ವಿರುದ್ಧದ ಹೋರಾಟಗಳು ನಡೆದಿರ ಬಹುದಾದ ಗಂಡುಭೂಮಿ ಇದಾಗಿದ್ದಿತೆಂದು ತೋರು ತ್ತದೆ. ಅಂತೆಯೇ ಈ ಪ್ರದೇಶಕ್ಕೆ 'ದಡಿಗಾವಳಿ' ಅಥವಾ 'ದಡಿಗವಾಡಿ' ಎಂಬ ಔಚಿತ್ಯಪೂರ್ಣವಾದ ಹೆಸರು ಸಂದಿದ್ದಿತು. 'ದಡಿ' ಎಂದರೆ ದೊಣ್ಣೆ ಅಥವಾ ದಂಡ ವೆಂದು ಅರ್ಥ. 'ದಡಿಗ' ಎಂದರೆ ದಂಡಧಾರಿ, ಶೂರ, ಬಲಶಾಲಿ, ಗಟ್ಟಿಗ, ದಾಂಡಿಗ ಎಂಬ ಅರ್ಥಗಳಿವೆ. 'ವಳಿ' ಎಂಬುದು ವಳಿತದ ಹ್ರಸ್ವರೂಪವಾಗಿದ್ದು ಪ್ರದೇಶ, ಆಡಳಿತಪ್ರದೇಶ ಎಂಬ ಅರ್ಥವನ್ನು ಬಿಂಬಿಸು ತ್ತದೆ. ಅದು 'ವಾಡಿ' ಅಂದರೆ 'ಬಾಡ'ದಿಂದ ನಿಷ್ಪನ್ನ ವಾದ ಪದವಾಗಿದ್ದು, ಮನೆ, ಸ್ಥಳ ಎಂಬ ಅರ್ಥಗಳನ್ನು ಪಡೆದುಕೊಳ್ಳುತ್ತದೆ. ಒಟ್ಟಾರೆ ಶೂರರನಾಡು 'ದಡಿಗವಾಡಿ' ಎನಿಸಿಕೊಂಡಿದ್ದಿತು. ಇಂಥ ಶೂರರ ನಾಡಾದ ದಡಿಗಾವಳಿ ಕೂಡ ಕಾಲಾಂತರದಲ್ಲಿ ಚೋಳರ ರಾಜರಾಜನಿಗೆ ಶರಣಾಗಬೇಕಾಯಿತು. ಒಟ್ಟಾರೆ ಇವರು ಗಡಿಯ ಕಾವಲುಗಾರರಾಗಿ ಚೋಳರನ್ನು ಬಹು ಸಮರ್ಥವಾಗಿಯೇ ಪ್ರತಿಭಟಿಸಿದ್ದರೆಂಬ ಸೂಚಕ ವಾಗಿಯೇ ಅವರ ಶಾಸನಗಳಲ್ಲಿ ಗಂಗ, ನೊಳಂಬರಷ್ಟೇ ಇವರಿಗೂ ಸ್ಥಾನ ದೊರೆತ್ತಿತ್ತು, ಎಂಬುದನ್ನು ಮನಗಾಣ ಬಹುದಾಗಿದೆ.

ಇನ್ನು ಚೋಳರ ಆಡಳಿತ ಅವಧಿಯಲ್ಲಿನ ದಡಿಗಾ ವಳಿಯನ್ನು ಪ್ರಸ್ತಾಪಿಸುವ ಶಾಸನಗಳನ್ನು ಅವಲೋಕಿ ಸೋಣ :

ಕ್ರಿಸ್ತಶಕ ೯೯೭ರ ಚೋಳ ರಾಜರಾಜದೇವನ ಹೊಸಕೋಟೆ ತಾಲ್ಲೂಕಿನ ಕಮ್ಮಸಂದ್ರ ಗ್ರಾಮದ ಶಾಸನದ ದಡಿಗಾವಾಡಿಯ ಕುರುಕ್ಷನ್ನಹಳ್ಳಿಯನ್ನು ಅಯ್ಯಪದೇವನ ಮಗ ಗನ್ನರಸನೆಂಬುವವನು ಆಳುತ್ತಿದ್ದ.[8] ಅಂದರೆ ಕ್ರಿ. ಶ. ೯೯೭ರ ವೇಳೆಗಾಗಲೇ ನೊಳಂಬರ ಅಧೀನದಲ್ಲಿದ್ದ ದಡಿಗವಾಡಿ ಪ್ರದೇಶ ಚೋಳರ ವಶವಾಗಿ ಹೋಗಿರುವ ಅಂಶ ಸ್ಪಷ್ಟವಾಗು ತ್ತದೆ. ಇಲ್ಲಿ ಉಕ್ತವಾಗಿರುವ ಅಯ್ಯಪದೇವನು, ಇರಿವನೊಳಂಬ ದಿಲೀಪನ ಮಗನಾದ ಇಮ್ಮಡಿ ಅಯ್ಯಪ ದೇವನಾಗಿದ್ದು (೯೪೫–೬೭) ಅವನಿಗೆ ಗನ್ನರಸನೆಂಬ ಮಗನಿದ್ದ ಅಂಶ ಈ ಶಾಸನದಿಂದಷ್ಟೆ ತಿಳಿದುಬರುತ್ತದೆ. ಜೊತೆಗೆ ಚೋಳರ ಅಧೀನ ಅಧಿಕಾರಿಗಳಾಗಿ ಪರಿವರ್ತಿತ ರಾಗಿರುವುದೂ ಕಂಡುಬರುತ್ತದೆ. ಕುರುಕುನ್ನಹಳ್ಳಿ ಎಂಬುದು ದಡಿಗವಾಡಿಯ ಒಂದು ಉಪ ವಿಭಾಗವಾಗಿದ್ದ ಅಂಶವೂ ಈ ಶಾಸನದಿಂದ ಗೊತ್ತಾಗುತ್ತದೆ.

ಸೋಲದೇವಹಳ್ಳಿಯ ರಾಜೇಂದ್ರ ಚೋಳನ ಶಾಸನವು[9] ಕ್ರಿ. ಶ. ೧೦೨೨ಕ್ಕೆ ಸೇರಿದ್ದು, 'ದಡಿಗವಳಿ ಯಾದ ವಿಕ್ರಮ ಚೋಳ ಮಂಡಲದ ಕುಕ್ಕನೂರ್ನಾಡ ಗಾಡಗಾವುಂಡಂ ಗಂಗಗಾವುಂಡನ್ ಮಗಂ ರಟ್ಟ ಕುಳಕಾಲ ಚೋಳಗಾವುಂಡಂ' ಎಂಬ ಉಲ್ಲೇಖ ಆ ಶಾಸನದಲ್ಲಿದೆ. ದಡಿಗಾವಳಿಯೇ ವಿಕ್ರಮಚೋಳ ಮಂಡಲವೆಂಬ ಹೆಸರು ಪಡೆದುಕೊಂಡಿದ್ದ ಅಂಶ ಹಾಗೂ ಕುಕ್ಕನೂರುನಾಡು ಅದರ ಭಾಗವಾಗಿದ್ದ ವಿಷಯ ಖಚಿತಪಡುತ್ತದೆ. ಗಂಗಗಾವುಂಡನೆಂಬ ಒಬ್ಬ ನಾಡ–ಗಾವುಂಡನ ಮಗ ಚೋಳರೊಂದಿಗೆ ಕೂಡಿಕೊಂಡು ರಾಷ್ಟ್ರಕೂಟ ಪ್ರದೇಶಗಳಲ್ಲಿನ ವೀರರೊಂದಿಗೆ ಚೋಳರ ಪರವಾಗಿ ಹೋರಾಡಿದುದರ ಕುರುಹಾಗಿ 'ರಟ್ಟ-ಕುಳಕಾಲ' ಎಂಬ ಬಿರುದನ್ನು ಧರಿಸಿದ ಚೋಳ ಗಾವುಂಡನಾಗಿ ಪಕ್ವಾಂತರಗೊಂಡಿರುವ ಅಂಶವನ್ನು ಈ ಶಾಸನ ಪ್ರತಿಬಿಂಬಿಸುತ್ತದೆ.

ಮಣ್ಣೆನಾಡು ದಡಿಗವಳಿಯಾದ ವಿಕ್ರಮಚೋಳ ಮಂಡಲದ ಭಾಗವೆಂದು ಕ್ರಿ. ಶ. ೧೧೫೦ರ ಶಾಸನ ವೊಂದರಲ್ಲಿ[10] ಉಕ್ತವಾಗಿದೆ. ಅಂದರೆ ಮಣ್ಣೆನಾಡು ಕೂಡ ದಡಿಗಾವಳಿಯ ಭಾಗವಾಗಿದ್ದ ಅಂಶ ಇದರಿಂದ ಸ್ಪಷ್ಟವಾಗುತ್ತದೆ. ಮಾಲೂರು ತಾಲ್ಲೂಕು ಶಿವಾರ ಗ್ರಾಮದ ಕೆರೆಯ ತೂಬಿನ ಮೇಲಿನ ಶಾಸನವು[11] ಹೆಂಜಿರನೆಂಬುವವನು 'ದಡಿಗವಾಟಿ'ವನ್ನು ಆಳುತ್ತಿದ್ದಾಗ

8 ಅದೇ IX, ಹೊಸಕೋಟೆ ೧೧೧

9 ಅದೇ IX, ನೆಲಮಂಗಲ ೧

10 ಎಂ. ಎ. ಆರ್. ೧೯೧೫, ಪು. ೭೯

11 ಎ. ಕ. XVII, ಮಾಲೂರು ೧೩೩

ಆವನ ಮಗ ಚೋಳದೇವ, ಚೋಳರ ಸೆಟ, ಗಂಗದತ್ತ ಮಾಬಳಿನಾಥ ಎಂಬ ತ್ರುಟಿತ ಉಲ್ಲೇಖಗಳನ್ನು ಹೊಂದಿದೆ.

ಮೇಲೆ ಗಮನಿಸಿದ ಚೋಳ ಪೂರ್ವ ಮತ್ತು ಚೋಳರ ಕಾಲದ ಶಾಸನಗಳು ದೊರೆತಿರುವ ಸ್ಥಳ ಮತ್ತು ಆ ಶಾಸನಗಳಲ್ಲಿ ಉಕ್ತವಾಗಿರುವ ಕೆಲವು ಪ್ರಾದೇಶಿಕ ವಿಭಾಗಗಳ ಹಿನ್ನೆಲೆಯಲ್ಲಿ ದಡಿಗವಾಡಿಯ ವಿಸ್ತಾರವನ್ನು ಸ್ಥೂಲವಾಗಿ ನಿರ್ಧರಿಸಬಹುದಾಗಿದೆ.

ಚೋಳರ ಕಾಲದಲ್ಲಿ ದಡಿಗಾವಳಿಗೂ ವಿಕ್ರಮ ಚೋಳಮಂಡಲಕ್ಕೂ ಅಭೇದ ಕಲ್ಪಿಸಿರುವ ಅಂಶ ಶಾಸನಗಳಿಂದ ತಿಳಿದುಬರುವುದು. ಚೋಳ–ಪೂರ್ವದಲ್ಲಿನ ದಡಿಗಾವಳಿಯೇ ಚೋಳರ ಕಾಲದ 'ವಿಕ್ರಮ ಚೋಳ ಮಂಡಲ'ವೆಂದು ಭಾವಿಸಬಹುದಾಗಿದೆ. ವಿಕ್ರಮಚೋಳ ಮಂಡಲದ ವಿಸ್ತಾರ ಪೂರ್ವಕ್ಕೆ ಉತ್ತರ ಆರ್ಕಾಡು ಜಿಲ್ಲೆಯಿಂದ ಪಶ್ಚಿಮಕ್ಕೆ ತುಮಕೂರು ಜಿಲ್ಲೆಯ ಕುಣಿಗಲ್ ಪ್ರದೇಶದವರೆಗೂ ವ್ಯಾಪಿಸಿದ್ದಿತು. ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಶಾಸನಗಳಲ್ಲಿ ಉಕ್ತವಾಗಿರುವ ದಡಿಗಾವಳಿ ಅಂತರಗತ ನಾಡುಗಳೆಂದರೆ; ಮಣ್ಣೆನಾಡು, ಕುಕ್ಕನೂರುನಾಡು, (ಕುಕ್ಕಲನಾಡು) ಸಣ್ಣೆನಾಡು, ಕುರುಕುಂದಾಳ್ಚಿನಾಡುಗಳಾಗಿವೆ. ಇದು ಹಿಂದೆ ಡಾ|| ಫ್ಲೀಟರು ಗುರುತಿಸಿದ್ದ ಪ್ರದೇಶಗಳನ್ನೂ ಒಳಗೊಂಡಂತೆ, ಇಂದಿನ ತುಮಕೂರು ಜಿಲ್ಲೆಯ ದಕ್ಷಿಣ–ಭಾಗ, ಮಂಡ್ಯ, ಬೆಂಗಳೂರು ಮತ್ತು ಕೋಲಾರ ಜಿಲ್ಲೆಯ ಭಾಗಗಳನ್ನು ಒಳಗೊಂಡಿದ್ದಿತೆಂದು ಖಚಿತವಾಗಿ ಹೇಳಬಹುದಾಗಿದೆ.

ಕ್ರಿ. ಶ. ೯೬೭ರ ಮಾಗಡಿ ತಾಲೂಕಿನ ಮೂಡು ಪಾಳ್ಯದ ಶಾಸನವೊಂದು[12] ಗಂಗಭೀಮನೆಂಬುವವನಿಂದ, ಗಂಗಚ್ಚಿನ ಪಿರಿಯ ಮಗ ವೈಕುಂಠವಾಸಿಯಾದಾಗ 'ದಡಿಗೇಶ್ವರ'ವೆಂಬ ದೇಗುಲವನ್ನು ಕಟ್ಟಿಸಿದ ವಿವರ ನೀಡುತ್ತದೆ. ಇಲ್ಲಿ ಉಕ್ತವಾಗಿರುವ ಗಂಗ ಭೀಮನೇ ಗಂಗರ ಇಮ್ಮಡಿ ಮಾರಸಿಂಹನೆಂದು ವಿದ್ವಾಂಸರು ಗುರುತಿಸಿರುತ್ತಾರೆ.[13] ರಾಷ್ಟ್ರಕೂಟರ ವಿಶ್ವಾಸಿಯಾಗಿದ್ದ ಮಾರಸಿಂಹನು ಈ ದಡಿಗಾವಳಿ ಪ್ರದೇಶದ ಆಡಳಿತವನ್ನು 'ದಡಿಗ'ನೆಂಬ ಹೆಸರಿನ ತನ್ನ ಓರ್ವ ಮಗನಿಗೆ ವಹಿಸಿದ್ದಿರಬೇಕು. ಆತನು ಪ್ರಾಯಶಃ ಯಾವುದೋ ಯುದ್ಧವೊಂದರಲ್ಲಿ ಗತಿಸಿದುದರ ಕುರುಹಾಗಿ 'ದಡಿಗೇಶ್ವರ' ಎಂಬ ದೇವಾಲಯ ಅಸ್ತಿತ್ವಕ್ಕೆ ಬಂದಿತೆಂದು ವಿದ್ವಾಂಸರು ಗುರುತಿಸಿರುತ್ತಾರೆ.

ದಡಿಗಾವಳಿ ಪ್ರದೇಶಕ್ಕೂ ಗಂಗರಿಗೂ ಮೊದಲಿನಿಂದಲೂ ನಿಕಟ ಸಂಬಂಧವಿದೆ. ಗಂಗರ ಬಹುತೇಕ ಶಾಸನಗಳು ಕೊಂಗುಣಿ ವರ್ಮನನ್ನು ಗಂಗವಂಶದ ಮೂಲಪುರುಷನೆಂದು ಕರೆದಿದೆ. ಆದರೆ ನಗರ ಮತ್ತು ಕಲ್ಲೂರು ಶಾಸನಗಳಲ್ಲಿ ಈತನನ್ನು ದಡಿಗನೆಂದು ಕರೆದಿರುವುದು ಗಮನಾರ್ಹ ಅಂಶವಾಗಿದೆ. ಗಂಗದೊರೆ ದರ್ವಿನೀತನ ಕಾಲದವರಿಗೆ ಅಂದರೆ ಕ್ರಿ. ಶ. ಸುಮಾರು ಏಳನೆಯ ಶತಮಾನದವರೆಗೆ ದೊರೆತಿರುವ ಇವರ ತಾಮ್ರ ಶಾಸನಗಳಲ್ಲಿ ಉಕ್ತವಾಗಿರುವ ಸ್ಥಳಗಳೆಲ್ಲವೂ ಇಂದಿನ ಕೋಲಾರ, ಬೆಂಗಳೂರು, ಮಂಡ್ಯ, ತುಮಕೂರು ಜಿಲ್ಲಾ ಪ್ರದೇಶಗಳಿಗೆ ಸೀಮಿತವಾಗಿರುವುದು ಇಲ್ಲಿ ಗಮನಾರ್ಹ ಅಂಶವಾಗಿದೆ. ಕೋಲಾರ, ಬೆಂಗಳೂರು, ಧರ್ಮಪುರಿ ಜಿಲ್ಲೆಯ ಶಾಸನಗಳಲ್ಲಿ ಕಂಡುಬರುವ ಗಂಗ ಆರು ಸಾವಿರ ಪ್ರದೇಶವೇ ಆರಂಭದಲ್ಲಿ ಗಂಗರು ಆಳುತ್ತಿದ್ದ ಪ್ರದೇಶವಾಗಿದ್ದಿತು. (ಅದು ಅನಂತರದಲ್ಲಿ ಬಾಣರ ವಶಕ್ಕೆ ಹೋದಾಗಲೂ ಅದನ್ನು ಗಂಗನಾಡು ಅಥವಾ ಗಂಗ ೬೦೦೦ ವೆಂದೇ ಗುರುತಿಸುತ್ತಿದ್ದುದು ಕಂಡು ಬರುತ್ತದೆ) ಗಂಗರ ರಾಜ್ಯ ಚೋಳರಿಂದ ಅವನತಿ ಹೊಂದಿದ ನಂತರದಲ್ಲಿ ಹುಟ್ಟಿಕೊಂಡ ಶಿವಮೊಗ್ಗದ ಶಾಸನವು (ಎ. ಕ. Vii, ಶಿವಮೊಗ್ಗ, ೪೩ ಕ್ರಿ. ಶ. ೧೧೩೩) ದಡಿಗ ಮತ್ತು ಮಾದವರೆಂಬುವವರು, ಸಿಂಹನಂದಿ ಎಂಬ ಜೈನಯತಿಯ ನೆರವಿನಿಂದ ಗಂಗರಾಜ್ಯ

12 ಅದೇ IX: ಮಾಗಡಿ ೧೩೫

13 ಡಾ|| ದೇವರ ಕೊಂಡಾರೆಡ್ಡಿ ; ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ (ಪಿಎಚ್. ಡಿ. ನಿಬಂಧ ಪು. ೫೯, ಅಪ್ರಕಟಿತ)

ಸ್ಥಾಪಿಸಿದರೆಂದು ತಿಳಿಯುತ್ತದೆ. ಇಲ್ಲಿ ಉಕ್ತನಾಗಿರುವ 'ದಡಿಗ' ಎಂಬ ಹೆಸರು ಪ್ರಾಯಶಃ ಕೊಂಗುಣಿವರ್ಮನಿಗಿದ್ದ ಮತ್ತೊಂದು ಹೆಸರು ಎಂದು ಭಾವಿಸಬೇಕಾಗಿದೆ. ಮೈಸೂರು ಜಿಲ್ಲೆಯ ಆಗ್ನೇಯ ಭಾಗವು ಬಡಗಕೊಂಗುನಾಡಿನ ವ್ಯಾಪ್ತಿಯಲ್ಲಿ ಬರುತ್ತದೆ. ಮೂಲತಃ ಈ ಕೊಂಗು ಪ್ರದೇಶದವರಾದ ಕೊಂಗುಣಿವರ್ಮ ಮತ್ತು ಮಾಧವರು ದಡಿಗಾವಳಿ ಪ್ರದೇಶದಲ್ಲಿ ಪಲ್ಲವರ ಮಾಂಡಲಿಕರಾಗಿದ್ದಿರಬೇಕು. ಸಮುದ್ರಗುಪ್ತನ ದಕ್ಷಿಣಾಪಥದ ದಂಡಯಾತ್ರೆಯ ಸಂದರ್ಭದಲ್ಲಿ ಏರ್ಪಟ್ಟಿದ್ದ ಗೊಂದಲದ ಪರಿಸ್ಥಿತಿಯ ಲಾಭವನ್ನು ಪಡೆದು ಆವರು ಗಂಗರಾಜ್ಯವನ್ನು ಈ ದಡಿಗಾವಳಿ ಪ್ರದೇಶದಲ್ಲೇ ಸ್ಥಾಪಿಸಿದಂತೆ ಕಂಡು ಬರುತ್ತದೆ. ಅಂತೆಯೇ ದಡಿಗಾವಳಿಯ 'ವ್ಯಾಪ್ತಿಯಲ್ಲಿನ ಕುವಳಾಲಪುರ ಇವರ ಮೊದಲ ರಾಜಧಾನಿಯಾಯಿತು. ಹೀಗಾಗಿ ಕೊಂಗುಣಿವರ್ಮನಿಗೆ 'ದಡಿಗ' ಎಂಬ ಅನ್ವರ್ಥನಾಮ ಸಲ್ಲುವಂತಾಗಿರಬೇಕು.

ರಾಷ್ಟ್ರಕೂಟ ಮುಮ್ಮಡಿ ಗೋವಿಂದನ ಕಾಲಕ್ಕೆ ಸೇರಿದ ಕ್ರಿ. ಶ. ಸುಮಾರು ೮ನೇ ಶತಮಾನದ ಶಾಸನವೊಂದು[14] ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಗುಡಿಗೆರೆ ಗ್ರಾಮಕ್ಕೆ ಸೇರಿದ್ದು, ಮಾರಸ್ಸಟ್ಟಿ ಮಹಾರಾಜ ಪೃಥ್ವಿ ರಾಜ್ಯವನ್ನು ಆಳುತ್ತಿರುವಾಗ ನಾಡೊಂದನ್ನು 'ದಡಿಗರಸ'ನೆಂಬುವವನು ಆಳುತ್ತಿದ್ದುದರ ವಿವರ ನೀಡುತ್ತದೆ. ಇಲ್ಲಿ ಉಕ್ತನಾಗಿರುವ ಮಾರಸಟ್ಟಿನು ಗಂಗರ ಮಾರಸಿಂಹನೆಂದು ಗ್ರಹಿಸಿದರೆ ರಾಷ್ಟ್ರಕೂಟರ ಆಧೀನರಾಗಿದ್ದ ಗಂಗರು ಧಾರವಾಡ ಪ್ರದೇಶದ ಆಳಿಕೆಯನ್ನು ಮಾಡುತ್ತಿದ್ದ ಅಂಶ ಇನ್ನಷ್ಟು ಖಚಿತವಾಗುವುದಲ್ಲದೆ, ಆ ಪ್ರದೇಶವನ್ನು ನೋಡಿಕೊಳ್ಳಲು 'ದಡಿಗರಸ'ನೆಂಬುವವನನ್ನು ನೇಮಿಸಿದ್ದನೆಂದು ತಿಳಿಯಬಹುದಾಗಿದೆ. ಇದೇ ಜಿಲ್ಲೆಯ ರೋಣ ತಾಲೂಕಿನ ಸೂಡಿಗ್ರಾಮದ ಕಲ್ಯಾಣ ಚಾಳುಕ್ಯರ ಆರನೇ ವಿಕ್ರಮಾದಿತ್ಯನ ಕಾಲದ ಶಾಸನಗಳಲ್ಲಿ[15] ದಡಿಗನೆಂಬ ಮಹಾಸಾಮಂತನ ಪ್ರಸ್ತಾಪ ಬರುತ್ತದೆ. ಇವರು ಕಿಸುಕಾಡನ್ನು ಆಳುತ್ತಿದ್ದ ಬಪ್ಪುರ ಕುಟುಂಬಕ್ಕೆ ಸೇರಿದವನಾಗಿ 'ಚಾಲಿ' ವಂಶಿಕನೆಂದು ತಿಳಿದು ಬರುತ್ತವೆ. ಇಲ್ಲಿ ಉಕ್ತನಾಗಿರುವ ದಡಿಗನ ತಂದೆಯ ಹೆಸರು ಗುಂಡನೆಂದು ತಿಳಿಯುತ್ತದೆ. ಲೋಕರಸ, ಪೆರ್ಮ, ಇರುಗರಸ ಸಿರಿಗಣ, ಬಿಟ್ಟದೇವ, ನಾಗರಸ ಮುಂತಾದ ಹೆಸರಿನವರು ಈ ವಂಶದಲ್ಲಿ ಆಗಿಹೋದರೆಂದು ತಿಳಿದು ಬರುತ್ತದೆ. ಇವರನ್ನು ಆ ಶಾಸನದಲ್ಲಿ ವೀರಮಾಹೇಶ್ವರರೆಂದು, ಅಷ್ಟಾದಶಾಶ್ವಮೇಧ ಯಜ್ಞ ದೀಕ್ಷಿತರೆಂದೂ, ಕೂರ್ಮ ಲಾಂಛನ, ಕಪಿಧ್ವಜ ವಿರಾಜಮಾನರೆಂಮ ವಿವಿಧವಾಗಿ ವರ್ಣಿಸಲಾಗಿದೆ. ಇವರ ಬಗ್ಗೆ ಹೆಚ್ಚಿನ ಅಧ್ಯಯನ ನಡೆಯಬೇಕಾದ ಆಗತ್ಯವಿದೆ.[16]

ದಡಿಗವಾಡಿ ಪ್ರದೇಶ ಚೋಳರ ವಶವಾದಾಗ ಆ ಪ್ರದೇಶದ ಕೆಲವು ಅಧಿಕಾರಿಗಳು ಚೋಳರ ಅಧೀನರಾದರೆ, ಮತ್ತೆ ಕೆಲವರು ಕಲ್ಯಾಣ ಚಾಳುಕ್ಯರ ಆಶ್ರಯ ಪಡೆದುಕೊಂಡರು, ಇನ್ನೂ ಕೆಲವರು ಆಗತಾನೆ ಮಲೆನಾಡಿನಲ್ಲಿ ತಲೆಯೆತ್ತತೊಡಗಿದ್ದ ಹೊಯ್ಸಳರನ್ನು ಕೂಡಿಕೊಂಡು, ಮುಂದೆ ಗಂಗವಾಡಿ ಪ್ರದೇಶದಿಂದ ಚೋಳರನ್ನು ಹೊರಗಟ್ಟಲು ಕಾರಣರಾದ ಅಂಶ ಸರ್ವವಿದಿತ. ಆದರೆ ದಡಿಗ ವಂಶೀಯರು ರಾಷ್ಟ್ರಕೂಟರ ಕಾಲಕ್ಕಾಗಲೇ ಗಂಗರ ಆಧೀನರಾಗಿ ರಟ್ಟವಾಡಿಯ ಪ್ರದೇಶದ ಭಾಗಗಳನ್ನು ಆಳುತ್ತಿದ್ದ ಅಂಶ ಮೇಲೆ ಉಲ್ಲೇಖಿಸಿದ ಗುಡಿಗೆರೆ ಶಾಸನದಿಂದ ವ್ಯಕ್ತವಾಗುತ್ತದೆ. ಆ ವಂಶೀಯರೇ ಮುಂದೆ ಕಲ್ಯಾಣದ ಚಾಳುಕ್ಯರ ಕಾಲದಲ್ಲಿ ಮಹಾಮಂಡಲಿಕ ಪದವಿಯನ್ನು ಅಲಂಕರಿಸಿ ಮಾನ್ಯತೆಯನ್ನು ಪಡೆದುಕೊಂಡಿದ್ದರೆಂಬುದು ಸೂಡಿ ಶಾಸನದಲ್ಲಿ ಸುವ್ಯಕ್ತಗೊಂಡಿದೆ. ಕಲ್ಯಾಣದ ಚಾಳುಕ್ಯರ ಆಶ್ರಯದಲ್ಲಿ ಅನೇಕ ಗಂಗ ಮತ್ತು ನೊಳಂಬ ವಂಶೀಯರು ಮಾಂಡಲಿಕರಾಗಿದ್ದುದು ಕೆಲವು ಶಾಸನಗಳಿಂದ ತಿಳಿದಿರುವ ವಿಷಯವೇ ಆಗಿದೆ.

---

14 ಸೌ. ಇಂ. ಇ. XX; ಸಂ ೧೨, ಎ. ಇಂ. VI. ಪು. ೨೫೭

15 ಎ. ಇಂ. XV; ಪು. ೧೦೫; ಸೌ. ಇಂ. ಇ. XI-ii., ನಂ. ೧೬೪

16 ಬಳ್ಳಿಗಾವೆಯ ಪ್ರಸಿದ್ಧ ತಾರಾಭಗವತಿಶಿಲ್ಪವನ್ನು ಆದಿಮಹಾಬಪ್ಪುರ ವಂಶದ ನಾಗಿಯಕ್ಕ ಮಾಡಿಸಿದಳು, MAR 1940-41.

'ದಡಿಗ' ಎಂಬ ಹೆಸರಿನ ಊರೊಂದು ಮಂಡ್ಯ ಜಿಲ್ಲೆಯ ನಾಗಮಂಗಲದ ಈಶಾನ್ಯಕ್ಕೆ ಸುಮಾರು ೧೬ ಕಿ. ಮೀ. ಅಂತರದಲ್ಲಿದ್ದು, ಒಂದು ವಿಶಾಲವಾದ ಕೆರೆಯನ್ನು ಪಡೆದಿದೆ. ಆ ಊರಿನ ಒಂದು ಶಾಸನ ದಲ್ಲಿ 'ದಡಿಗನ ಕೆಱೆ' ಎಂಬ ಉಲ್ಲೇಖ ವಿದ್ದು, ಅದೊಂದು ಅನಾದಿ ಅಗ್ರಹಾರ ಎಂದು ವರ್ಣಿತವಾಗಿದೆ.[17] ಪ್ರಾಯಶಃ ದಡಿಗನೆಂಬ ವ್ಯಕ್ತಿ ಯಿಂದ ಬಹಳ ಹಿಂದೆಯೇ ನಿರ್ಮಿತವಾದ ಕೆರೆಯಿಂದಾಗಿ ಆ ಊರಿಗೆ ಹೆಸರು ಬಂದಿರಬೇಕು.

ವ್ಯಕ್ತಿನಾಮವಾಗಿ ತುಮಕೂರು ಜಿಲ್ಲೆಯ ಗುಬ್ಬಿ ತಾಲೂಕಿನ ಶಾಸನದಲ್ಲಿ[18] 'ದಡಿಗ' ಕಂಡು ಬಂದಿದೆ. ಒಬ್ಬ ಜೈನ ವರ್ತಕನ ಹೆಸರು 'ದಡಿಗ ಸೆಟ್ಟಿ' ಎಂದಿರುವುದು ಹೊಳೇನರಸೀಪುರದ ಶಾಸನ ದಲ್ಲಿ[19] ಕಂಡುಬರುತ್ತದೆ.

ಬೇಲೂರು ತಾಲೂಕಿನ ಹಳೇಬೀಡು ಶಾಸನದಲ್ಲಿ ಕಲಕುಣಿನಾಡಿನ ಕಲ್ಲಂಗೆರೆ ಗ್ರಾಮದ ಎಲ್ಲೆಗಳನ್ನು ಉಲ್ಲೇಖಿಸುವಾಗ "ಬಡಗಲು ಸಸಿನ ದಡಿಗನ ಲಿಂಗ ಮುದ್ರೆ ಕಲ್ಲಿಂ...." ಎಂಬ ಉಲ್ಲೇಖವಿದೆ.[20]

ಮೇಲಿನ ವಿಶ್ಲೇಷಣೆ ಮತ್ತು ಉಲ್ಲೇಖಗಳಿಂದ ನಾವು ಮನಗಾಣ ಬಹುದಾದ ಹಲವು ಅಂಶಗಳನ್ನು ಈ ಕೆಳಕಂಡಂತೆ ಪಟ್ಟಿ ಮಾಡಬಹುದು.

೧) ಗಂಗರ ಪೂರ್ವ ಕಾಲದಲ್ಲೇ ಅಂದರೆ ಬಾಣರ ಕಾಲದಲ್ಲೇ ದಡಿಗಾವಳಿ ಅಥವಾ ದಡಿಗವಾಡಿ ಅಸ್ತಿತ್ವದಲ್ಲಿದ್ದಿತು.

೨) ಪೂರ್ವದಲ್ಲಿ ಉತ್ತರ ಆರ್ಕಾಡಿನಿಂದ ಪಶ್ಚಿಮದ ಕುಣಿಗಲ್ಲು ಪ್ರದೇಶದವರೆಗೂ ಈ ಪ್ರಾದೇಶಿಕ ವಿಭಾಗ ವ್ಯಾಪಿಸಿದ್ದಿತು. ಚೋಳರ ಕಾಲದಲ್ಲಿ ಈ ಪ್ರದೇಶವನ್ನು ವಿಕ್ರಮ ಚೋಳ ಮಂಡಲ ವೆಂದು ಕರೆಯಲಾಗಿತ್ತು.

೩) ಈ ಪ್ರಾದೇಶಿಕ ವಿಭಾಗ ಕಾಲದಿಂದ ಕಾಲಕ್ಕೆ ತನ್ನದೇ ವೈಶಿಷ್ಟ್ಯವನ್ನು ಪಡೆದಿದ್ದಿತಾದರೂ ಪ್ರತ್ಯೇಕ ರಾಜಕೀಯ ವಿಭಾಗವಾಗಿ ಮಾರ್ಪಟ್ಟು ಗಣನಾರ್ಹವಾಗಲಿಲ್ಲ.

೪) ಇದೊಂದು ಆಯಕಟ್ಟಿನ ಪ್ರದೇಶವಾದ್ದರಿಂದ ಇದನ್ನು ಗಳಿಸಲು ಸಾಮ್ರಾಜ್ಯಗಳ ನಡುವೆ ಅನೇಕ ಯುದ್ಧಗಳಾಗಿವೆ. ಇತಿಹಾಸದಲ್ಲಿ ಪ್ರಸಿದ್ಧ ರಾದ ಮೊರಸು ಮನ್ನೆಯರ ಆಡುಂಬೊಲವೂ ಇದೇ ಆಗಿದ್ದಿತು.

೫) ಗಂಗ ರಾಜ್ಯದ ಪ್ರಾರಂಭದ ಪ್ರದೇಶವಾದ ಗಂಗ ೬೦೦೦ ವೂ ಇದರ ಭಾಗವಾಗಿದ್ದಿತು.

೬) 'ದಡಿಗ' ಎಂಬ ಪದವು ವೀರತ್ವದ ಪ್ರತೀಕವಷ್ಟೇ ಆಗಿರದೆ, ವ್ಯಕ್ತಿನಾಮಗಳಲ್ಲಿ, ಸ್ಥಳನಾಮಗಳಲ್ಲಿ ನಾಡಿನ ಹೆಸರಿನಲ್ಲಿ ಕೊನೆಗೆ ಗಡಿಗಲ್ಲುಗಳ ಹೆಸರಿ ನಲ್ಲೂ ಪ್ರಯುಕ್ತವಾಗಿ, ಗಂಗ ಪೂರ್ವ ಹಾಗೂ ಗಂಗೋತ್ತರ ಅವಧಿಯಲ್ಲೂ ತನ್ನ ಸ್ಥಾನವನ್ನು ದೃಢಪಡಿಸಿಕೊಂಡಿದ್ದುದನ್ನು ಮನಗಾಣ ಬಹು ದಾಗಿದೆ.

---

17 ಎ. ಕ IV, ನಾಗಮಂಗಲ ೩೫, ಕ್ರಿ. ಶ. ೧೪೦೦ ?

18 ಅದೇ XII ಗುಬ್ಬಿ ೪೮.

19 ಅದೇ. VIII, ಹೊಳೆನರಸೀಪುರ ೬೨. ಕ್ರಿ. ಶ. ಸು. ೮ನೇ ಶತಮಾನ

20 ಅದೇ IX, ಬೇಲೂರು ೩೨೧. ಕ್ರಿ. ಶ. ೧೨೬೫.

ಕ.ನೆಂ. ರಾಜಗೋಪಾಲ್*

# 'ಹಂಪಿ'-ಒಂದು ಟಿಪ್ಪಣಿ

---

**ಪಂಪಾ ವಿರೂಪಾಕ್ಷ: ಒಂದು ಪ್ರತಿಮೆ**

ಹರಿಹರನ ಪಂಪಾಶತಕದಲ್ಲಿ ಈಪದವು ವಿಶೇಷವಾಗಿ ಬಳಕೆಯಾಗಿದೆಯಾದರೂ 'ವಿರೂಪಾಕ್ಷ ಲಿಂಗಂ' ಎಂದು ಕರೆದಿರುವುದು ಗಮನಾರ್ಹವಾಗಿದೆ. ತನ್ನ ಹೆಸರನ್ನು 'ಹರೀಶ್ವರಂ' ಎಂಬರ್ಥದಲ್ಲಿ ಬಳಸಿದಂತೆಯೇ 'ಪಂಪಾ ವಿರೂಪಾಕ್ಷಂ ಎಂದು ಬಳಸುತ್ತಾನೆ. ತನ್ನ ಆರಾಧ್ಯ ದೈವವನ್ನು ಹರಿಹರನು ಹೀಗೆ ಗೌರವಿಸಿರುವಲ್ಲಿ ಆಶ್ಚರ್ಯವಿರಲಾರದು.

ಹಂಪೆಯರಸ ಎಂಬ ಮತ್ತೊಂದು ಪ್ರಯೋಗದಲ್ಲಿಯೂ ಹರಿಹರನು 'ವಿರೂಪಾಕ್ಷ'ನನ್ನು ಹಂಪೆಯ ಒಡೆಯ-ಎಂಬುದನ್ನು ಖಚಿತ ಪಡಿಸಿದಂತಿದೆ. ಆದರೆ ಪಂಪಾ ವಿರೂಪಾಕ್ಷ-ಎಂದಿರುವಲ್ಲಿ ಕೂಡ 'ಪಂಪಾಪತಿ' ಎಂಬುದನ್ನು ಎಲ್ಲಿಯೂ ಬಳಸಿದಂತಿಲ್ಲ. ಇದಕ್ಕೆ ಕಾರಣವನ್ನು ಗುರುತಿಸಿದಲ್ಲಿ 'ಪಂಪಾ' ಎಂಬುದರ ಅರ್ಥವು ಬಿಡಿಸಿಕೊಳ್ಳುತ್ತದೆಯಷ್ಟೆ.

ಹರಿಹರನು ತನ್ನ 'ಗಿರಿಜಾ ಕಲ್ಯಾಣಂ' ಕೃತಿಯ ಪಂಚಮಾಶ್ವಸಂದಲ್ಲಿ ಹೇಮಕೂಟದ ವರ್ಣನೆ ಮಾಡುತ್ತಾ ಅದರತುದಿಯಲ್ಲಿ 'ವಿರೂಪಾಕ್ಷಲಿಂಗಂ' ಇದ್ದಿತೆಂದು ವಿವರಿಸಿದ್ದಾನೆ. ಗಿರಿಜೆಯು ಇಲ್ಲಿಗೆ ಬಂದು ಶಿವನ ತಪಸ್ಸು-ಧ್ಯಾನದಲ್ಲಿ ಆತನ ದರ್ಶನಕ್ಕಾಗಿ ಕಾಯುತ್ತಾಳೆ. ಅವಳ ನೆರವಿಗೆ ಜಯೆ-ವಿಜಯೆ ಎಂಬ ಇಬ್ಬರು ಸಖಿಯರಿದ್ದದೂ ಆಗಿದ್ದು ಈ 'ಗಿರಿಶಿಖರ ಮುಖದ್ವಾರ'ವನ್ನು 'ಶ್ರೀ ನಂದೀಶ'ನು ಕಾಯ್ದು ನಿಲ್ಲುತ್ತಾನೆ.

ಮೇಲಿನ ವಿವರಗಳಿಂದ ಹರಿಹರನ ಕಾಲಕ್ಕೆ ಹೇಮಕೂಟದ ಶಿಖರ ಭಾಗದಲ್ಲಿ ಒಂದು ಕ್ಷೇತ್ರವಿದ್ದುದೂ ಅಲ್ಲಿಯ 'ವಿರೂಪಾಕ್ಷಲಿಂಗಂ' ಅವನ ಆರಾಧ್ಯ ಸಾನ್ನಿಧ್ಯ ದೈವವಾಗಿದ್ದುದೂ ಮುಖ್ಯವಾಗುತ್ತವೆ.

ಸಧ್ಯಕ್ಕೆ ತುಗಭದ್ರೆ ಮತ್ತು ಹೇಮಕೂಟ ಇವುಗಳ ವಿವರ ನೀಡುವಲ್ಲಿ ಹರಿಹರನೇ ಮೊದಲಿಗನಾಗುತ್ತಾನೆ. ಏಕೆಂದರೆ 'ರಾಮಾಯಣ'ದಲ್ಲಿ ಕೂಡ ಹೇಮಕೂಟದ ಮತ್ತು ತುಂಗಭದ್ರೆಯ ಪ್ರಯೋಗಗಳಿರುವುದಿಲ್ಲ. ಅಂದರೆ ಸುಮಾರು ಕ್ರಿ.ಶ. ೧೨೦೦ರ ವೇಳೆಗೆ ಹೇಮಕೂಟವು ವಿರೂಪಾಕ್ಷ ಕ್ಷೇತ್ರವಾಗಿದ್ದಿರಬಹುದಾಗಿದೆ.

ಈ ಕಾಲಕ್ಕೂ ಮುಂಚೆಯೇ ಈ ಕ್ಷೇತ್ರವು ಪಂಪಾಕ್ಷೇತ್ರವೆಂದಾಗಿದ್ದಿರಬೇಕಾಗುತ್ತದೆ ವಾಸ್ತವವಾಗಿ ಶ್ರೀ ರಾಮಾಯಣದ ಕಿಷ್ಕಿಂಧಾಕಾಂಡದಲ್ಲಿ ಈ ಪಂಪಾ ಕ್ಷೇತ್ರದ ಮತ್ತು ಪಂಪಾ ಸರೋವರದ ವರ್ಣನೆಯಿದೆ. ಆದರೆ ಈಗ ಕ್ಷೇತ್ರ ಪರೀಕ್ಷಣದಿಂದ ಈ 'ಪಂಪಾಸರಸ್ಸ'ನ್ನು ತುಂಗಭದ್ರೆಯು ಪೂರ್ವಾಭಿಮುಖವಾಗಿ ಹರಿಯುತ್ತಾ ಹೇಮಕೂಟದ ತಡಿಯಿಂದ ಮುಂದಕ್ಕೆ ಉತ್ತರಾಭಿಮುಖವಾದ ತಿರುವಿನಲ್ಲಿ ಗುರುತಿಸಲಾಗಿದೆ.

---

* ಎಂ.ಐ.ಜಿ. ೫೧, ೮೦ ಅಡ್ಡರಸ್ತೆ, ಕೆಂಗೇರಿ ಉಪನಗರ ೨ನೆಯ ಹಂತ, ಬೆಂಗಳೂರು-೫೬೦ ೦೬೦

ಆದರೆ ಮಾತಂಗ ಮತ್ತು ಋಷ್ಯಮೂಕ ಮೊದಲಾದ ವಿವರಗಳನ್ನು ರಾಮಾಯಣದಲ್ಲಿ ಕಾಣುವಾಗ 'ಹೇಮಕೂಟ'ವು ಹೆಸರಿಲ್ಲದ ಒಂದು ಬೆಟ್ಟ ಪ್ರದೇಶವಾಗಿದ್ದಿರಬಹುದು ಎಂದು ಭಾವಿಸಬಹುದಾಗಿದೆ. ಹೀಗೆ ಹರಿಹರನ ಕಾಲದಲ್ಲಿ (ಕ್ರಿ.ಶ. ೧೨೦೦) ಹೇಮ ಕೂಟವು ಆತನ ನಿವಾಸವೂ ಆಗಿದ್ದಿರಬೇಕೆಂಬ ಅನುಮಾನಕ್ಕೆ ಎಡೆಕೊಡುತ್ತದೆ.

ಈಗ ಪಂಪಾವಿರೂಪಾಕ್ಷ ದೇಗುಲವು ತುಂಗ ಭದ್ರೆಯ ದಕ್ಷಿಣ ತಡಿಯ ಮೇಲೆ ಹೇಮಕೂಟದ ತಪ್ಪಲದಲ್ಲಿದೆ. ಇಂತಹ ಬದಲಾವಣೆಯನ್ನು ಹರಿಹರನು ಕಂಡಿರಲಾರನೆಂಬುದಕ್ಕೆ ಅವನ ಗಿರಿಜಾಕಲ್ಯಾಣ ಮತ್ತು ಶತಕಗಳು ಆಧಾರವಾಗುತ್ತವೆ.

ನಾವೀಗ ವಿಜಯನಗರದ ಹುಟ್ಟಿನ ಕಾಲದ ಪರಿಶೀಲನೆ ಮತ್ತು ಐತಿಹಾಸಿಕ ಅಂಶಗಳನ್ನು ಗುರುತಿಸಬಹುದು :–

ಶಾಸನಗಳನ್ನು ಗಮನಿಸಿದಲ್ಲಿ ಮೊದಲ ಹರಿಹರನು ವಿಜಯನಗರದ ಮೊಟ್ಟಮೊದಲನೆಯ ದೊರೆಯಾಗಿದ್ದಾನೆ. ಈ ಅಂಶವನ್ನು ನಮ್ಮ ಇತಿಹಾಸಕಾರರ ಆಧಾರಗಳಿಂದ ಸ್ಮರಿಸಿ ಒಪ್ಪಿಕೊಳ್ಳುತ್ತೇನೆ.

'ಶ್ರೀ ವಿರೂಪಾಕ್ಷ' ಎಂಬುದು ಹರಿಹರನ ಅಂಕಿತವಷ್ಟೇ ಆಗಿರದೆ ಆತನ ಹೆಸರಿನ ಮತ್ತೊಂದು ಅರ್ಥದ ಹೆಸರೂ ಆದೀತು !

ಒಂದನೆಯ ಹರಿಹರನ ಕಾಲದಲ್ಲಿಯೇ 'ವಿರೂಪಾಕ್ಷ ಲಿಂಗ'ದ ವಿಷಯವಿದೆ. ಈತನು ಸ್ವತಹ 'ಸಂಗಮ' ವಂಶದವನೆಂಬುದನ್ನು ಇತಿಹಾಸಕಾರರು ಗುರುತಿಸಿದ್ದಾರೆ. ಈ ಹೆಸರಿನಲ್ಲಿ ಕೂಡ 'ಹರಿ–ಹರ' ಸಂಗಮವಿದೆ. ಇದು ವಿಜಯನಗರದ ಪ್ರಾರಂಭಕಾಲವೂ ಆಗಿದೆ (ಕ್ರಿ.ಶ. ೧೩೩೬). ಮೇಲಿನ ವಿವರಗಳಿಂದ ಮೊದಲ ಹರಿಹರನು 'ವಿರೂಪಾಕ್ಷ'ನ ಭಕ್ತನಾಗಿದ್ದುದು ತಿಳಿಯುತ್ತದೆ. ವಿಜಯನಗರದ ಮೊದಲ ಅರಸರಲ್ಲಿ 'ಸಂಗಮ' ವಂಶದವರು ಗಮನ ಸೆಳೆಯುತ್ತಾರೆ. ಅಲ್ಲದೆ ಮೊದಲ ದೇವರಾಯ ಅಥವಾ ಇಮ್ಮಡಿ ಹರಿಹರನ ಕಾಲದಲ್ಲಿ ಕ್ರಿ.ಶ. ೧೪೦೦ರಲ್ಲಿ ಇದ್ದಿರದ್ದಿರಬಹುದಾದ ಚಂದ್ರಶೇಖರ ಎಂಬ ಕವಿಯು 'ಪಂಪಾಸ್ಥಾನವರ್ಣನಂ' ಎಂಬ ಕೃತಿಯನ್ನು ರಚಿಸಿದ್ದಾನೆ. ಇದೊಂದು ಸಣ್ಣ ಚಂಪೂ ಕಾವ್ಯವಾಗಿದೆ. ಇದನ್ನು ಪ್ರೌಢ ದೇವರಾಯನ ಕಾಲದಲ್ಲಿ ಪಂಪಾಕ್ಷೇತ್ರದಲ್ಲಿ ರಚಿಸಿದಂತೆ ತೋರುತ್ತದೆ. ಆದರೆ ವರ್ಣನೆಯು ವಿರೂಪಾಕ್ಷ ದೇಗುಲವನ್ನು, ಈಗಿರುವಂತೆ ಗುರುತಿಸಿ ವೈಭವವನ್ನು ಮುಖ್ಯವಾಗಿ ವಿವರಿಸಲಾಗಿದೆ.

ಇದರಲ್ಲಿ 'ಪೂರ್ವ ದಕ್ಷಿಣ ಪಶ್ಚಿಮೋತ್ತರ ದ್ವಾರಂಗಳಲ್ಲಿ ಕನ್ಯಕೇಶ್ವರ, ಜಂಬುಕೇಶ್ವರ, ಸೋಮೇಶ್ವರ, ವಾಣಿಭದ್ರೇಶ್ವರರೆಂಬವರೇ ಪರಿವಿಡಿಯಿಂದ್ವಾರಪಾಲಕರಾಗಿ ನೆಲಸಿರೆ ತನಗಧಿ ದೇವತೆಯಾಗಿ ಪಂಪಾಭವಾನಿ ಪಾಲಿಸುತ್ತಿರ್ಪುದಱಿಂ, ಪಂಪಾಕ್ಷೇತ್ರವೆಂಬ ಪೆಸರಂ ಪಡೆದು....ಇತ್ಯಾದಿ ಅಲ್ಲದೆ 'ಪಂಪೆಯಾ' ಎಂಬ ಪ್ರಯೋಗವೂ ದೊರಕುತ್ತದೆ.

* * * *

ಈಗ 'ಪಂಪಾ' ಎಂಬುದರ ಪರಿಶೀಲನೆಯೂ ಅಗತ್ಯವಾದೀತು–ರಾಮಾಯಣದಲ್ಲಿ ಇದು ಪಂಪಾ (ಸರಸ್, ತೀರ) ಎಂದು ಕಂಡು ಬರುವುದರಲ್ಲಿ ಒಂದುಜಲ ಪ್ರದೇಶವಾಗುತ್ತದೆ. ಸಂಸ್ಕೃತದಲ್ಲಿ ಪಂಪಾ ಸ್ತ್ರೀ ಲಿಂಗ ಪದವೆಂಬುದೂ ಮುಖ್ಯವಾಗುತ್ತದೆಯಷ್ಟೆ.

ಹರಿಹರ (ಕವಿ)ಯ ಕಾಲಕ್ಕಾಗಲೇ ಈ ಕ್ಷೇತ್ರದ ಸ್ಥಳಾಂತರವಾಗಿದ್ದು ಹೇಮಕೂಟ ಮತ್ತು ಪಂಪಾ ಕ್ಷೇತ್ರಗಳು (ಮುಂದಿನ ತುಂಗಭದ್ರೆಯ ತಡಿಯಲ್ಲಿ) ಕೆಳಗಿಳಿದಿರಬಹುದೆಂಬ ಊಹೆಗೆ ಸ್ಥಳೀಯ ಪರಿಶೀಲನೆಯ ಅವಕಾಶ ಮಾಡಿಕೊಡುತ್ತದೆ. ಇಂತಹ ಐತಿಹಾಸಿಕ ಬದಲಾವಣೆಯನ್ನು ಗಮನಿಸುವಲ್ಲಿ 'ಪಂಪಾಂಬಿಕಾ' ದೇವಿಯ ಪ್ರತಿಮೆಯೊಂದು ಗಮನ ಸೆಳೆಯುತ್ತದೆ. ಇದನ್ನು 'ನದಿಯ ದೇವತೆ'ಯೆಂದು ಗುರುತಿಸುವುದು ಸೂಕ್ತವಾದೀತು. ಇದು ಗಂಗೆಯಲ್ಲ ಎಂಬುದನ್ನೂ ಮರೆಯಬಾರದು. ಹಾಗೆ ಇದ್ದಿದ್ದಲ್ಲಿ ಹರಿಹರನೇ ಇಂಥ ವಿಚಾರ ಹೇಳಿದ ಮೊದಲಿಗನಾಗುತ್ತಿದ್ದನೆನ್ನಬಹುದು.

ಎರಡನೆಯದಾಗಿ ಹರಿಹರನು 'ಪಂಪಾಪತಿ' ಎಂಬುದನ್ನು ಬುದ್ಧಿಪೂರ್ವಕವಾಗಿಯೇ ಬಳಸಿರುವುದಿಲ್ಲ. ಆದುದರಿಂದ ಚಂದ್ರಶೇಖರ ಕವಿಯು ಕಾವ್ಯದಲ್ಲಿ ಮಾತ್ರ 'ಪಂಪಾರಮಣನ' ಎಂಬುದರಲ್ಲಿ ಪಾರ್ವತಿ=

ಪಂಪಾಂಬಿಕಾ ಎಂಬುದು ಖಚಿತವಾಗಿ ಬಳಕೆಗೆ ಬಂದಿರುವುದನ್ನು ಗುರುತಿಸಬಹುದು. ಇದಾದನಂತರವೇ 'ಪಂಪಾಪತಿ' ಎಂಬುದು ಈಶ್ವರ=ವಿರೂಪಾಕ್ಷ ಎಂಬರ್ಥ ಗಳಲ್ಲಿ ಬಳಕೆಗೆ ಬಂದಿದೆ–ಎಂದರೆ ತಪ್ಪಾಗಲಾರದು.

ಹರಿಹರನು 'ಪಂಪಾಪತಿ' ಎಂದು ಬಳಸಿರುವುದಿಲ್ಲ. ಇದರ ಬಗ್ಗೆ ಚಿಂತನೆ ಅಗತ್ಯ ಇಲ್ಲಿ 'ಪಂಪಾ' ಎಂಬುದು. ಮೊದಲಿಗೆ ಮಾತೃದೇವತೆಯ ಹೆಸರಾಗಿದ್ದು ರಾಮಾಯಣದಲ್ಲಿ ಬಳಕೆಯಾಗಿರುವುದು ಅದೇ ಅರ್ಥದಲ್ಲಿ ಎರಡನೆಯದಾಗಿ ಇದು ಮೊದಲಿಗೆ ವಿಷ್ಣುಪ್ರಧಾನತೆಗೆ ಎಡೆಕೊಟ್ಟದ್ದರಿಂದ ಈ 'ಪಂಪಾ' ಎಂಬ ದೇವತೆಯು ಪಾರ್ವತಿ=ಗಿರಿಜೆಯಾಗುವುದಿಲ್ಲ. ಆದರೆ ಗಿರಿಜಾ ಕಲ್ಯಾಣದನಂತರವೇ ಇದಕ್ಕೆ ಪಂಪಾಂಬಿಕಾ ಎಂಬುದು ಅನ್ವಯವಾದಂತಿದೆ. ಮೂರನೆಯದಾಗಿ ವಿರೂಪಾಕ್ಷ ಎಂಬುದನ್ನು 'ಸಂಗಮನಾಥ'ನ ಒಂದು ಹೆಸರು ಎಂದು ಗುರುತಿಸಿದರೆ ತಪ್ಪಾಗಲಾರದು. ಹರಿ–ಹರ ಸಂಗಮ ದಿಂದಾಗಿ ಈ ಹೆಸರಿಗೆ ಪ್ರಾಮುಖ್ಯತೆಯ ಶೈವರಲ್ಲಿ ಬಂದು 'ಪಂಪಾಪತಿ' ಬಳಕೆಗೆ ಬಂದಿರುವಂತಿದೆ. ಹೀಗೆ ರೂಢಿಗೆ ಒಗ್ಗಿದ ವಿಚಾರವನ್ನು ಬಿಟ್ಟರೆ ಪ್ರತಿಮೆಯಾಗಿ 'ಪಂಪಾ ದೇವಿ'ಯು ಸಂಗಮನಾಥನ ಪ್ರಿಯೆಯಾಗುವುದಕ್ಕೂ ಮುಂಚಿನ ಹಂತದಲ್ಲಿ ಇದೊಂದು ವೈಷ್ಣವ–ವೈಷ್ಣವೀ ಪದವಾಗಿದ್ದುದೆಂದು ಸೂಚಿಸಬಹುದಾಗಿದೆ. ನಾಲ್ಕನೆಯ ದಾಗಿ ಪ್ರಾಯಶಃ ಪಂಪಕವಿಯು ಈ ದೇವತೆಯನ್ನು ಕುಲದೈವವಾಗಿ ಪಡೆದ ವಂಶದವನಾಗುತ್ತಾನೆ. ಈ ಮಾತೃಪ್ರಧಾನತೆಗೆ ಪಂಪನ ಜೀವನದಲ್ಲಿ ಆಧಾರವನು ಶಿಷ್ಟರೂಟದಲ್ಲಿ ಗುರುತಿಸಬಹುದು.

**ಉಪಸಂಹಾರ**

ಹೇಮಕೂಟವನ್ನು ನೆತ್ತಿಯಭಾಗ, ಮಧ್ಯ ಅಥವ ನಡುವಿಭಾಗ ಮತ್ತು ಪಾದ ಅಥವಾ ತಳವಿಭಾಗ ಎಂದು ಪರಿಶೀಲಿಸುವುದರಲ್ಲಿ ಔಚಿತ್ಯವಿದೆ.

ನೆತ್ತಿಯ ಭಾಗದ ಪ್ರಾಗೈತಿಹಾಸಿಕ ಗುಹೆಗಳು ಗಮನ ಸೆಳೆಯುತ್ತವೆ. ಒಂದು ಸುಮಾರು ಐದುನೂರು ಮಂದಿ ಸೇರಬಹುದಾದಷ್ಟು ದೊಡ್ಡದಾಗಿದ್ದು ಅದಕ್ಕೆ ಹೊಂದಿದಂತೆ ನೀರಿನ ಆಸರೆಯೂ ಇದೆ. ಹರಿಹರನ ಕಾಲದಲ್ಲಿಯೂ ಇವು ಪ್ರಧಾನವಾಗಿದ್ದಿರಬೇಕೆನ್ನಿಸುತ್ತದೆ. ಒಂದು ಬಗೆಯಲ್ಲಿ ಇದನ್ನು ಸಿದ್ಧರ ಗುಹೆಗಳೆಂದು ಕರೆಯ ಬಹುದಾಗಿದ್ದು ಇಂದಿಗೂ ಒಂದು ಅವಧೂತ ಮಠವು ಸ್ಥಾಪಿತವಾಗಿದೆ. ಈ ಮಠದ ಐತಿಹಾಸಿಕತೆಗಿಂತಲೂ ಈ ಗುಹೆಗಳು ಮುಖ್ಯವಾಗಿವೆ. ಇದನ್ನು ಇಂದಿಗೂ ವಿರೂಪಾಕ್ಷಸನ್ನಿಧಿ'ಯೆಂದು ಪರಿಗಣಿಸಿ ನಡೆದುಕೊಳ್ಳುವ ವೀರಶೈವ ಮನೆತನಗಳಿವೆ.

ಮಧ್ಯಭಾಗದಲ್ಲಿ ಐತಿಹಾಸಿಕ ಅವಶೇಷಗಳಿದ್ದು ಇಲ್ಲಿಯ ದೇಗುಲಗಳು ಕಲ್ಯಾಣ ಚಾಲುಕ್ಯರ ಕಾಲದ ದೇಗುಲ ಸ್ವರೂಪವನ್ನು ನೆನಪಿಗೆ ತರುತ್ತವೆ. ಇದರ ನವರಂಗವು ಗರ್ಭಗುಡಿಗೆ ಸೇರಿಕೊಂಡಂತೆ ಒಂದೇ ಬಾರಿಗೆ 'ಆಯಾ' ಮಾಡಿ ರಚಿಸಿದಂತಿದೆ. ನವರಂಗದ ಚೌಕಟ್ಟಿರುವುದರಿಂದ ರಂಗಭೋಗಕ್ಕೆ ಅವಕಾಶವಿದ್ದುದೂ ಅಲ್ಲದೆ ಗರ್ಭಗುಡಿಯ ಬಾಗಿಲುವಾಡದ ಲಲಾಟಕೇಂದ್ರ ದಲ್ಲಿ 'ಗಜಲಕ್ಷ್ಮಿ'ಯು ಗುರುತಿದೆ. ಆದುದರಿಂದ ಇದೊಂದು ವಿಷ್ಣುದೇಗುಲವಿರಲು ಸಾಕು. ಕಂಬಗಳಲ್ಲಿ ಕೂಡ ಇಂಥ ಕಲ್ಪನೆಗೆ ಇಂಬುಕೊಡುವ ಚಿತ್ರಗಳಿವೆ. ಈಗ ಇದರಲ್ಲಿನ ಗರ್ಭಗೃಹವು ಬರಿದಾಗಿದೆ.

ಇನ್ನು ತಳಭಾಗಕ್ಕೆ ಬಂದಲ್ಲಿ ವಿರೂಪಾಕ್ಷದೇಗುಲದ ಪ್ರಾಕಾರವಿದೆ. ಇದರ ಮುಖ್ಯ ಗರ್ಭಗೃಹಗಳೂ ಲಕ್ಷ್ಮೀದೇವಿಯ ಕೆತ್ತನೆಯನ್ನು ಬಾಗಿಲುವಾಡದ ಲಲಾಟಕೇಂದ್ರದಲ್ಲಿ ಪಡೆದಿರುವುದೂ ಮುಖ್ಯ ವಿರೂಪಾಕ್ಷ ಲಿಂಗವಲ್ಲದೆ ಪಂಪಾದೇವಿಯ ಗುಡಿ, ಮತ್ತು ಅದಕ್ಕೂ ಹೊಂದಿಕೊಂಡ ನೆಲಮಾಳಿಗೆಯ ಹಂತದಲ್ಲಿ ಗುಲಗಂಜಿ ಮಾಧವ ಮೂರ್ತಿಯ ಗುಡಿಯಿದೆ. ಇದರ ಮುಂದೆ ಪಾತಾಳೇಶ್ವರಲಿಂಗವೂ ಇದೆ. ಇವೆರಡೂ ಒಂದೆಡೆ ನೆರೆಯಾದಂತೆ ಇರುವುದಂತೂ ಸೋಜಿಗವೇ ಆಗಿದೆ. ಇವುಗಳ ಮುಂದಿನ ಭಾಗಕ್ಕೆ ಭುವನೇಶ್ವರಿಯ ಗುಡಿ ಯಿದೆ. ಪಂಪಾಂಬಿಕೆಯ ವಾಹನವು ಯಾವುದೆಂದು ತಿಳಿಯುವುದಿಲ್ಲ ಆದರೆ ಭುವನೇಶ್ವರಿಗೆ ಸಿಂಹವಾಹನವಿದೆ. ಆದುದರಿಂದ 'ಪಾರ್ವತಿ' ಪ್ರತಿಮೆಯೆಂದು ಅರ್ಚಕರು ಹೇಳುತ್ತಾರೆ.

ಹೇಮಕೂಟದ ಸಂಬಂಧವನ್ನು ಪಡೆದ ಭಾಗ ವನ್ನು 'ಹಂಪಿ' ಎಂದು ಇಂದು ಕರೆಯುತ್ತಿದ್ದಾರೆ. ಇದು ವಾಸ್ತವವಾಗಿ 'ವಿಜಯನಗರ'ದಿಂದ ಬೇರೆಯ ದಾಗಿದ್ದು ಒಂದು ಕ್ಷೇತ್ರವಾಗಿ–ಅಗ್ರಹಾರವಾಗಿ ವಿದ್ಯಾ ಕೇಂದ್ರವಾಗಿ ಪ್ರಾಚೀನ ಸಾಂಪ್ರದಾಯಿಕತೆಯಿಂದ

ಕೂಡಿದ ಸ್ಥಾನವಾಗಿ ವಿಜಯನಗರದ ಮೊದಲ ದೊರೆಯಾದ ಸಂಗಮ ವಂಶದ ಹರಿಹರಗೆ ಪಟ್ಟಾಭಿಷೇಕದ ಸ್ಥಳವೂ ಆಗಿರುವ ಸಾಧ್ಯತೆಯಿದೆ. ವಿರೂಪಾಕ್ಷ ಲಿಂಗವನ್ನು ಹೇಮಕೂಟದ ತುದಿಯಿಂದ ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಡುಭಾಗಕ್ಕೂ ನಂತರ ವಿಜಯನಗರದ ಸ್ಥಾಪನೆಯ ವೇಳೆಗೆ ಈಗಿನ ತಳಭಾಗಕ್ಕೂ ವರ್ಗಾಯಿಸಿರಬಹುದು. ಇಂಥ ವರ್ಗಾವಣೆಯಿಂದ ಗುಲಗಂಜಿ ಮಾಧವ ಮೂರ್ತಿಯ ಸ್ಥಳಾಂತರವಾದಂತಿದೆ ಪಂಪಾದೇವಿಯನ್ನು ಪಂಪಾಂಬಿಕೆಯೆಂದು ಕರೆಯುವ ರೂಢಿಯೂ ವಿರೂಪಾಕ್ಷಲಿಂಗದ ಪ್ರತಿಷ್ಠಾಪನೆಯನ್ನು ಅನುಸರಿಸಿದಂತೆ ಕಂಡು ಬರುತ್ತಿದೆ.

ಅನುಮಾನಿಸಬೇಕಾದ ಒಂದು ಅಂಶವಿದೆ. ಪಂಪಾಂಬಿಕೆಯೆಂಬ ದೇವತೆಯ ವಿಗ್ರಹವನ್ನು ಸಮರ್ಥಿಸಲು 'ಪಂಪಾಪತಿ' ಇದ್ದಿರಬೇಕಷ್ಟೆ–ಹರಿಹರನು ತಪ್ಪಿಕೂಡ ವಿರೂಪಾಕ್ಷಲಿಂಗವನ್ನು 'ಪಂಪಾಪತಿ' ಎನ್ನುವುದಿಲ್ಲ. ಪಂಪಾಪತಿಯೇ ಗುಲಗಂಜಿ ಮಾಧವನಾಗಿದ್ದು ಸಂಗಮವಂಶದ ಅಧಿದೇವತೆಯಾಗಿದ್ದು ಹರಿಹರನ ಕಾಲಕ್ಕೆ ಅಥವಾ ಅದಕ್ಕೂ ಕೊಂಚ ಮುಂದಕ್ಕೆ ವಿರೂಪಾಕ್ಷ ಲಿಂಗಕ್ಕೆ ಪ್ರಾಮುಖ್ಯತೆ ಬಂದಿರುವ ಸಾಧ್ಯತೆಯಿದೆ. ಈ ಹೆಸರುಗಳು ಇಂಥ ವಿಚಾರಕ್ಕೆ ಎಡೆಗೊಡುತ್ತವೆ.

## ಆಧಾರಗ್ರಂಥಗಳು


೧ A Forgotten Empire by Robert Setwell

೨ ಗಿರಿಜಾಕಲ್ಯಾಣಂ–ಹರಿಹರ–ಸಂಪಾದನೆ ಡಾ|| ಎಂ.ಎಸ್. ಸುಂಕಾಪುರ

೩ ರಕ್ಷಾಶತಕಂ–ಪಂಪಾಶತಕಂ, ಹರಿಹರ, ಸಂಪಾದನೆ ಎಸ್.ಎಸ್. ಬಸವನಾಳರು

೪ ಕರ್ನಾಟಕ ಸಂಸ್ಕೃತಿಯ ಸಂಶೋಧನೆ, ಕಪಟರಾಳ ಕೃಷ್ಣರಾವ್, ಉಷಾಸಾಹಿತ್ಯ ಮಾಲೆ ಮೈಸೂರು

೫ Tamtricism-A study of The yogini cult, by H.C. Das M.A.

೬ ಪಂಪಾಸ್ಥಾನವರ್ಣನಂ–ಕವಿ ಚಂದ್ರಶೇಖರ, ಶರಣಸಾಹಿತ್ಯ ಗ್ರಂಥ ಮಾಲೆ (೧೯೫೫)

೭ Vijaya Nagara Sixcentenary Commemoration Vol V.E.S. Association Dharwar, 1936.

೮ Relics of Vigayanagar Glory by Sri A.K. Balasundaram-1948.

೯ ವಿಜಯನಗರದ ಕಲೆ ಮತ್ತು ಸಾಹಿತ್ಯ–ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ (೧೯೫೬) ಮೈಸೂರು ಸರ್ಕಾರ, ಬೆಂಗಳೂರು.

೧೦. ಶ್ರೀ ಮದ್ರಾಮಾಯಣವು–(ಕಿಷ್ಕಿಂಧಾಕಾಂಡವು) ಪಂಡಿತ ದೇವಶಿಖಾಮಣಿ ಅಳಸಿಂಗಾಚಾರ್ಯವಿರಚಿತವು (೧೯೧೩)

೧೧ ಸಂಸ್ಕೃತ ಶ್ರೀ ಮದ್ರಾರಾಮಾಯಣ ಸಾರಂ, ರಾಘವಾಚಾರ್ಯ.

ಅಂಬ್ರಯ್ಯ ಮಠ*

# ಹೊಸಂಗಡಿಯ ಮೇಲೆ ಹೊಸ ಬೆಳಕು

ಕ್ರಿ. ಶ. ೧೯೭೮ರ ಮೊದಲು ಇತಿಹಾಸದ ಪುಟಗಳಲ್ಲಿ ಮರೆಯಾಗಿದ್ದ ಹೊಸಂಗಡಿಯೆನ್ನುವ ಗ್ರಾಮ, ಇದೀಗ ವರಾಹಿ ಸುರಂಗ ವಿದ್ಯುದಾಗಾರದಿಂದ ತನ್ನನ್ನು ಗುರುತಿಸಿಕೊಳ್ಳುತ್ತಿದೆ. ಕುಂದಾಪುರದಿಂದ ಪೂರ್ವಕ್ಕೆ ೩೬ ಕಿ. ಮೀ. ದೂರದಲ್ಲಿ ಈ ಗ್ರಾಮವಿದೆ. ಇದರ ಇತಿಹಾಸವನ್ನು ಲಿಂಗಣ್ಣ ಕವಿಯ ಕೆಳದಿ ನೃಪವಿಜಯ" ಹಾಗೂ ಕ್ಷೇತ್ರಕಾರ್ಯದ ಮೂಲಕ ಬಿಚ್ಚಿಡುವ ಒಂದು ಪ್ರಯತ್ನ ಇದಾಗಿದೆ. ಇಲ್ಲಿಶಾಸನಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಶಿಲಾಸ್ತಂಭಗಳು, ನಾಣ್ಯಗಳು, ಅಂದಿನರಮನೆಯ ಕುರುಹುಗಳು, ಮಠಗಳು, ದೇವ–ಸ್ಥಾನಗಳು, ಕೋಟೆಕೊತ್ತಲಗಳು, ಕೆರೆ–ಬಾವಿಗಳು, ಬದುಗಲ್ಲುಗಳು ಕಂಡುಬರುತ್ತಿದ್ದು ಹೊಸಂಗಡಿಯ ಇತಿಹಾಸವನ್ನು ಸಾರಿ ಹೇಳುತ್ತಿವೆ.

ಹದಿನಾಲ್ಕನೇ ಶತಮಾನದ ಮಧ್ಯಭಾಗದಲ್ಲಿ ಹೊಸಂಗಡಿಯು ಹೊನ್ನೆಯ ಕಂಬಳಿಯೆಂಬ ಅರಸರ ರಾಜಧಾನಿಯಾಗಿತ್ತು. ಹೊನ್ನೆಯ ಕಂಬಳಿ ಬಂಕಿ–ಯರಸರ ವೆಂಕಟ ಸಾಮಂತನು ಕೊಲ್ಲೂರು ಮುಕಾಂಬಿಕ ದೇವಸ್ಥಾನವನ್ನು ಕಣಶಿಲೆಯಲ್ಲಿ ಕಟ್ಟಿ ಪುನರ್ ಪ್ರತಿಷ್ಠಾಪಿಸಿದರಂತೆ ಅಲ್ಲಿಯ ಶಿಲಾಶಾಸನ ತಿಳಿಸುತ್ತದೆ.[1] ಈ ಅರಸರ ಮೂಲ ಈಗಿನ ಕುಂದಾಪುರ ತಾಲ್ಲೂಕಿನ "ಹೊನ್ನೆಯಹಳ್ಳಿ". "ಹೊನ್ನೆಯ" ಎನ್ನುವುದು ಅವರ ಮೂಲಸ್ಥಾನವಾದರೆ, "ಕಂಬಳಿ" ಎನ್ನುವುದು ಅವರ ಅಡ್ಡ ಹೆಸರು. ಈಗಲೂ "ಕಂಬಳಿ" ಅನ್ನುವ ಅಡ್ಡ ಹೆಸರು ಬಂಟ ಸಮುದಾಯದಲ್ಲಿ ಪ್ರಚಲಿತದಲ್ಲಿರುವುದರಿಂದ ಇವರು ಈ ಸಮುದಾಯಕ್ಕೆ ಸೇರಿದವರಾಗಿರಬಹುದೆಂಬ ಅಭಿಪ್ರಾಯವಿದೆ.[2]

"ಕ್ರಿ. ಶ. ಹನ್ನೆರಡನೇ ಶತಮಾನದಲ್ಲಿ ಹುಂಚದ ಶಾಂತರ ಕುಲದ ಜೈನರು ಬಂದು ತುಳುನಾಡಿನ ಆಳುವ ಅರಸರ ಹೆಂಗಸರನ್ನು ಮದುವೆಯಾಗಿ ಅವರ ಸಂತತಿ ಜೈನಬಂಟರು ಬಲ್ಲಾಳರಾಗಿ ೧೮ನೇ ಶತಮಾನದ ವರೆಗೆ ತುಳುನಾಡನ್ನು ಆಳಿದರು. ಹೊಸಂಗಡಿಯ ಹೊನ್ನೆಯ ಕಂಬಳಿಯರಸರು ಏಳು ಸೀಮೆಯನ್ನು ಹೊಂದಿದ ಜೈನ ಬಂಟರು" ಎನ್ನುವ ಅಭಿಪ್ರಾಯವೂ ಇದೆ.[3]

---

* ಆಡಳಿತ ಸಹಾಯಕ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹೊಸಂಗಡಿ, ಕುಂದಾಪುರ ತಾ॥ ೫೭೬೨೮೩

1 ಕೊಲ್ಲೂರು ಮೂಕಾಂಬಿಕಾ ದೇವಸ್ಥಾನದ ಕಾರ್ಯನಿರ್ವಾಹಕ ಮಂಡಳಿ ಪ್ರಕಟಿಸಿದ ೧೪ನೇ ಶತಮಾನದ ಶಿಲಾಲೇಖ ತಿಳಿಸುತ್ತದೆ. (ಶ್ರೀಕ್ಷೇತ್ರ ಕೊಲ್ಲೂರು, ಅನುಬಂಧ ಪು. ೧೬ ಮತ್ತು ೧೭)

2 "Studies in Tuluva History and Culture" : Dr. P. Gururaja Bhat Published by himself in 1975, P. No. 106

3 "ಪ್ರಾಚೀನ ತುಳುನಾಡು", ದಿ. ಎನ್. ಎಸ್. ಕಿಲ್ಲೆ ಮತ್ತು ಶ್ರೀ ಎನ್. ಎಸ್. ಶೀನಪ್ಪ ಹೆಗ್ಡೆ ಪ್ರಕಾಶಕರು : ಶ್ರೀಮತಿ ಇಂದ್ರಾ ಕಿಲ್ಲೆ, ಮಂಗಳೂರು–೧೯೫೪ ಪು. ಸಂ. ೧೨೦

"ವಿಜಯನಗರದ ಸದಾಶಿವರಾಯನ ಆಣತಿಯ ಮೇರೆಗೆ ತುಳು ರಾಜ್ಯವನ್ನು ಕೆಳದಿಯ ಸದಾಶಿವ ನಾಯಕನು ಆಳುತ್ತಿದ್ದನೆಂಬ ಉಲ್ಲೇಖವು ೧೫೫೫ನೇ ಇಸವಿಯ ಅತಿ ಪ್ರಾಚೀನ ಶಾಸನದಿಂದ ಗೊತ್ತಾಗುತ್ತದೆ" ಎಂದು ಸೂರ್ಯನಾಥ ಕಾಮತ್‌ರು ಉಲ್ಲೇಖಿಸುವುದರಿಂದ[4] ಈ ಹಿಂದೆ ಸ್ವತಂತ್ರವಾಗಿಯೇ ಆಳುತ್ತಿದ್ದ ಹೊನ್ನೆಯ ಕಂಬಳಿಯರಸರು ಕೆಳದಿಯ ಸದಾಶಿವ ನಾಯಕನ ಕಾಲಕ್ಕೆ (೧೫೩೦-೬೬) ಕೆಳದಿಯ ಅಧೀನ ಅರಸರಾಗಿ ಆಳಿದರೆಂದು ಕಾಣುತ್ತದೆ. ಇವರು ಕುಂದಾಪುರ ತಾಲ್ಲೂಕಿನ ಕೊಲ್ಲೂರು, ಬಗ್ಗವಾಡಿ, ಮುಗಿನಾಡು, ಅರುನಾಡು, ಕದರಿ, ಕಬ್ಬನಾಡುಗಳಲ್ಲದೆ ಘಟ್ಟದ ಮೇಲಿನ ಪಟ್ಟಗುಪ್ಪೆ ಮತ್ತು ಬಿದರೂರನ್ನು ಆಳುತ್ತಿದ್ದರು" ಎಂದು "ಕೆಳದಿ ನೃಪವಿಜಯ"ದಲ್ಲಿ ಉಲ್ಲೇಖಿಸಲಾಗಿದೆ.[5] ತಮ್ಮ ಆಡಳಿತವನ್ನು ಶಿವಮೊಗ್ಗ ಜಿಲ್ಲೆಯವರೆಗೂ ವಿಸ್ತರಿಸಿದ್ದರಿಂದ ಎರಡೂ ಕಡೆಯ ಆಡಳಿತದ ಅನುಕೂಲತೆಯ ದೃಷ್ಟಿಯಿಂದ ಹೊಸಂಗಡಿಯನ್ನೇ ರಾಜಧಾನಿಯನ್ನಾಗಿಸಿಕೊಳ್ಳಬೇಕಾದುದು ಹೊನ್ನೆಯ ಕಂಬಳಿಯರಸರಿಗೆ ಅನಿವಾರ್ಯವಾಗಿರಬಹುದು.

ಈ ಅರಸರ ವಂಶಸ್ಥರಲ್ಲಿ ಪ್ರಧಾನವಾಗಿ ಕೇಳಿ–ಬರುವ ಹೆಸರುಗಳೆಂದರೆ; ತಿರುಮಲ ಕಂಬಳಿ[6], ಬಂಕಿಯರಸ ಅಥವಾ ಹೊನ್ನಕಂಬಳಿಯ ವೊಮ್ಮಗ ವೆಂಕಟ ಸಾಮಂತ[7] (ಈತ ಬಂಕಿಯರಸನ ವಂಶದ ಸಂಕಣ್ಣ ಸಾಮಂತನ ಅಳಿಯನೆಂಬ ಅಭಿಪ್ರಾಯವೂ ಇದೆ),[8] ಸಾಮಂತ ಬಂಕಿಯರಸ ಹೊನ್ನಕಂಬಳಿ,[9] ಹೊನ್ನಕಂಬಳಿ ಪಂಡರಿದೇವ,[10] ಹೊನ್ನಕಂಬಳಿ ಒಡೆಯ ಶಂಕರದೇವಿ ಅಮ್ಮ,[11] ಬಂಕಿಯರಸ ಹೊನ್ನಕಂಬಳಿ ಒಡೆಯ ಅಮ್ಮಿದೇವಿ ಅಮ್ಮ,[12] ಹರಿಯ ಹೊನ್ನೆಯ ಕಂಬಳಿ[13] ಇತ್ಯಾದಿ.

ಎಮ್. ಗಣಪತಿರಾವ್ ಐಗಳ್ ಅವರನ್ನು ಹೊರತುಪಡಿಸಿ ಹೊಸಂಗಡಿಯ ವಿಷಯವಾಗಿ ಬೆಳಕು ಬೆಳಕು ಚೆಲ್ಲಿದವರೆಂದರೆ ದಿ. ಪಿ. ಗುರುರಾಜ ಭಟ್ಟರೊಬ್ಬರೆ ಎಂದು ಹೇಳಬಹುದು. ಹಲವು ಇತಿಹಾಸಕಾರರು ಸಂದರ್ಭಕ್ಕನುಸಾರವಾಗಿ ಹೊಸಂಗಡಿಯನ್ನು ಉಲ್ಲೇಖಿಸಿದ್ದಾರೆಯೇ ವಿನಾ ಇದನ್ನೇ ಕೇಂದ್ರವಾಗಿಟ್ಟುಕೊಂಡು ಕೆಲಸ ಮಾಡಿದ್ದು ಕಂಡುಬರುವುದಿಲ್ಲ. ಇದೀಗ ಈ ಕುರಿತಂತೆ ಪೂರ್ಣ ಪ್ರಮಾಣದ ಸಂಶೋಧನೆಯನ್ನು ಕೈಗೊಳ್ಳಲಾಗಿದೆ.[14]

## ರಾಜಧಾನಿಯಾಗಿ ಹೊಸಂಗಡಿ

ಹೊಸಂಗಡಿಯು ಹೊನ್ನೆಯ ಕಂಬಳಿಯರಸರ ರಾಜಧಾನಿಯಾಗಿತ್ತೆಂಬುದು ನಿರ್ವಿವಾದ ಸಂಗತಿಯಾಗಿದೆ. ಅದಕ್ಕೆ ಆಧಾರವಾಗಿ ಅಂದು ಕಟ್ಟಿಸಿದ

---

4 "ಕೆಳದಿ ಐತಿಹಾಸಿಕ ನಿಬಂಧಗಳು", ಸಂ. ಡಾ|| ಜಿ. ಎಸ್. ದೀಕ್ಷಿತ್, ಭಾಷಾಂತಕಾರರು ಜಿ. ವಿ. ಬರ್ಜೆ, ಪ್ರಕಾಶಕರು : ಕೆಳದಿ ವಸ್ತು ಸಂಗ್ರಹಾಲಯ ಮತ್ತು ಇತಿಹಾಸ ಸಂಶೋಧನ ಸಂಸ್ಥೆ, ಕೆಳದಿ. ೧೯೮೯, ಪು. ೮೭

5 "ಕೆಳದಿ ನೃಪವಿಜಯ", ಗದ್ಯಾನುವಾದ ಶ್ರೀ ಕೆಳದಿ ಗುಂಡಾಜೋಯಿಸ್, ಪ್ರಕಾಶನ : ಕನ್ನಡ ಸಾಹಿತ್ಯ ಪರಿಷತ್ ಪು. ಸಂ. ೧೨೦–೧೨೧

6 "Studies in Tuluva History" Dr. Gururaja Bhat, P. No. 106

7 ೧೩ನೇ ಶತಮಾನದ ಕೊಲ್ಲೂರು ಮೂಕಾಂಬಿಕ ದೇವಸ್ಥಾನದ ಶಿಲಾಲೇಖ ಉಲ್ಲೇಖಿಸುತ್ತದೆ.

8 "ಕುಂದಾಪುರ ತಾಲ್ಲೂಕು ದರ್ಶನ", ಕಸರಾಡಿ ವಾದಿರಾಜ ಭಟ್, ಐ.ಬಿ.ಎಚ್. ಪ್ರಕಾಶನ : ಗಾಂಧೀನಗರ, ಬೆಂಗಳೂರು ೧೯೮೭, ಪು. ಸಂ. ೨೬

9 ಸಾವಂತ ಬಂಕಿಯರಸ ಹೊನ್ನಕಂಬಳಿಯು ಮುಕಾಂಬಿಕಾ ದೇವಿ ದೇಸಸ್ಥಾನಕ್ಕೆ ಬಿಟ್ಟ ಉಂಬಳಿ ಕುರಿತ ಕ್ರಿ. ಶ. ೧೪೮೩ರ ಶಿಲಾಶಾಸನ

10 Topographical List II, 53, P. 852

11 ಸ್ಥಳ : ಹೊಸಂಗಡಿಯ ವಿರೂಪಾಕ್ಷ ದೇವಸ್ಥಾನದಲ್ಲಿ ನೆಟ್ಟಕಲ್ಲು–ಕ್ರಿ.ಶ. ೧೫೪೩
ಇಲ್ಲಿಯ ನೀಲಕಂಠೇಶ್ವರ ದೇವಸ್ಥಾನದಲ್ಲಿ ನೆಟ್ಟಕಲ್ಲು–ಕ್ರಿ.ಶ. ೧೫೪೧

12 ನಗರದ ಮತ್ತಿಕೈಮಗದ ಮಠದ ಅಂಗಳದಲ್ಲಿ ನೆಟ್ಟಕಲ್ಲು-ಕ್ರಿ.ಶ. ೧೫೫೨

13 ಕೊಲ್ಲೂರು ಮುಕಾಂಬಿಕಾ ದೇವಸ್ಥಾನದಲ್ಲಿರುವ ಕ್ರಿ.ಶ. ೧೪೮೨ರ ಶಿಲಾಶಾಸನ

14 ಅಂಬ್ರಯ್ಯಮಠ, ಹೊಸಂಗಡಿ ಇವರು ಈ ಕುರಿತಂತೆ ಸಂಶೋಧನೆ ಕೈಗೊಂಡಿದ್ದಾರೆ

ಅರಮನೆಯ ಅಳಿದುಳಿದ ಭಾಗಗಳು ಸಾಕ್ಷಿ ನುಡಿಯುತ್ತವೆ. ಹೊಸಂಗಡಿಯ ಈಗಿರುವ ಪೇಟೆಯಿಂದ ಒಂದೂವರೆ ಕಿ. ಮೀ. ವರೆಗೂ (ಕುಂದಾಪುರದೆಡೆಗೆ ಹೋಗುವ ರಾಜ್ಯ ರಸ್ತೆಯ ಎಡಬಲಗಳಲ್ಲಿ) ನಡೆದಾಡಿದರೆ ಈಗ ಅಲ್ಲಲ್ಲಿ ಮನೆಗಳು, ಅಂಗಡಿಗಳು, ಶಾಲೆಗಳು ಕಟ್ಟಲಾಗಿದ್ದು ಹಿಂದಿನ ಈ ಅವಶೇಷಗಳು ಕಾಣಬರುತ್ತವೆ. ಇಲ್ಲಿ ಕಂಡುಬರುವ ಲೆಕ್ಕವಿಲ್ಲದಷ್ಟು ಬಾವಿಗಳು, ಕೆರೆಗಳು, ಆನೆ ಕುದುರೆ ನಿಲ್ಲುವ ಸ್ಥಳಗಳು ಅವುಗಳಿಗೆ ಕುಡಿಯಲೆಂದು ಇರಿಸಲಾದ ದೊಡ್ಡ ದೊಡ್ಡ (೫೦೦ ಕೊಡಪಾನ ನೀರು ಹಿಡಿಯಬಹುದಾದ) ನೀರಬಾನಿಗಳು, ಅಪರೂಪದ ಕಲ್ಲುಬಂಡೆಗಳು, ಶಿಲಾಸ್ತಂಭಗಳೆಲ್ಲ ಇದು ರಾಜಧಾನಿಯೇ ಆಗಿತ್ತೆಂದು ಮೂಕ ಸಾಕ್ಷಿ ನುಡಿಯುತ್ತವೆ.

ಹೊನ್ನಕಂಬಳಿಯರಸರು ಶೈವ ಸಂಪ್ರದಾಯದವರೇ ಹೊರತು ಜೈನರಾಗಲಿ, ಶಾಂತರ ಕುಲದ ಜೈನರಾಗಲಿ, ಈಗಿನ ನಾಡವರಾಗಲಿ ಅಲ್ಲ ಎಂಬುದು ನನ್ನ ಖಚಿತ ಅಭಿಪ್ರಾಯ. ಅಂದಿನ ತುಳುನಾಡ ಅರಸರಲ್ಲಿ ಹೆಚ್ಚಿನವರು ಜೈನ ಸಂಪ್ರದಾಯಕ್ಕೆ ಸೇರಿದವರಾಗಿದ್ದುದರಿಂದಲೂ, ಸ್ನೇಹಪರರಾದ ಇವರು ಅವರೊಂದಿಗೆ ನಿಕಟ ಸಂಪರ್ಕ ಇಟ್ಟುಕೊಳ್ಳಲು ಇಷ್ಟಪಡುವವರಾಗಿದ್ದುದರಿಂದಲೂ, ಅವರೊಂದಿಗೇ ಕೂಡಿಬಾಳುವ ಅನಿವಾರ್ಯತೆಯಿಂದಲೂ ಅಂದಿನ ತುಳುನಾಡವರಲ್ಲಿ ರೂಢಿಗತವಾಗಿ ಬೆಳೆದು ಬಂದ ಅಳಿಯ ಕಟ್ಟಿನ ಸಂತಾನದ ಪದ್ಧತಿಯನ್ನು ಇವರೂ ರೂಢಿಸಿಕೊಂಡಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.

ನನ್ನ ಹೇಳಿಕೆಗೆ ಇನ್ನೂ ಪೂರಕವಾದ ಅಂಶಗಳೆಂದರೆ: ಈ ಪ್ರದೇಶದಲ್ಲಿ ಜೈನ ಬಸದಿಗಳ ಸುಳಿವಿಲ್ಲ. ಬದಲು ಜಂಗಮ ಮಠ, ಮಾತಿನ ಮಠ (ಮಹತ್ತಿನ ಮಠ), ಹಲವಾರು ಮಠಗಳ ಸ್ಥಾಪನೆಯಾದದ್ದು ಕಂಡುಬರುತ್ತದೆ. ಶಾಂತೇಶ್ವರ, ನೀಲಕಂಠೇಶ್ವರ, ವಿರೂಪಾಕ್ಷ, ವೀರಭದ್ರ, ಈಶ್ವರ, ಶಂಭುಲಿಂಗ, ರಾಮಲಿಂಗೇಶ್ವರ ಹೀಗೆ ಶೈವ ಸಂಪ್ರದಾಯದ ದೇವಸ್ಥಾನಗಳನ್ನು ಪ್ರತಿಷ್ಠಾಪನೆ ಮಾಡಿದುದಕ್ಕೆ ದಾಖಲೆಗಳಿವೆ.[15] ಶಂಭಲಿಂಗ ದೇವರು ಹಾಗೂ ಬ್ರಾಹ್ಮಣರ ಛತ್ರಕ್ಕಾಗಿ ಉಂಬಳಿ ಬಿಟ್ಟ ಹೊಲಗಳಲ್ಲಿಯ ಬದುಕಲ್ಲುಗಳಲ್ಲಿ ಲಿಂಗ ಮುದ್ರೆ ಕಲ್ಲುಗಳು ಹಾಗೂ ವಾಮನ ಮುದ್ರೆಯುಳ್ಳ ಕಲ್ಲುಗಳನ್ನು ನೆಟ್ಟಿದೆ.[16] ಇವರು ಶೈವರು ಎನ್ನಲು ಇಲ್ಲಿಯ ಸ್ಥಳೀಯ ಹೆಸರುಗಳನ್ನು ಕೇಳಿ : ಬಸವಾಪುರ, ಬಸಪ್ಪನ ಕೆರೆ,[17] ಭದ್ರಾಪುರ, ಮಠದಬಾಗಿಲು ಇತ್ಯಾದಿ.

ಹೊನ್ನಕಂಬಳಿಯವರು ಕುಂದಾಪುರ ತಾಲ್ಲೂಕಿನ "ಹೊನ್ನೆಯ" ಹಳ್ಳಿಯವರು, "ಕಂಬಳಿ" ಎನ್ನುವ ಹೆಸರು ಈಗಿನ ಬಂಟ ಸಮುದಾಯದಲ್ಲಿ ಬಳಕೆಯಲ್ಲಿದೆ ಎಂದು ವಿದ್ವಾಂಸರು ಅಭಿಪ್ರಾಯಿಸಿರುವರಾದರೂ; ನನ್ನ ತಿರುಗಾಟದಲ್ಲಿ ಹೊನ್ನೆಯಹಳ್ಳಿ ಇನ್ನೂ ಸಿಕ್ಕಿಲ್ಲ. ಅಷ್ಟೇ ಅಲ್ಲ ಬಂಟ ಸಮುದಾಯದಲ್ಲಿ "ಕಂಬಳಿ" ಎನ್ನುವ ಶಬ್ದ "ನಮಗೆ ಹೊಸತು" ಎನ್ನುವುದು ಕೇಳಬಂದಿತು. ಇನ್ನೂ ಈ ಕುರಿತಂತೆ ಶೋಧ ಮುಂದುವರಿದಿದೆ. ಹೊನ್ನ ಕಂಬಳಿಯರಸರ ಹಿರಿಯರು ಚಿನ್ನದಲ್ಲಿ ಕಂಬಳಿಯನ್ನು ಕೆತ್ತಿಸಿದ ಅಥವಾ ನೇಯ್ದ ಶ್ರೀಮಂತ ಕುಟುಂಬದವರಾಗಿರಬಾರದೇಕೆ ? ಉತ್ತರ ಕರ್ನಾಟಕದಲ್ಲಿ ಪ್ರಚಲಿತದಲ್ಲಿರುವಂತೆ : ಮೆಣಸಿನಕಾಯಿ ಮಾರು–ವವರು ಮೆಣಸಿನಕಾಯಿಯವರು, ಉಳ್ಳೇಗಡ್ಡೆ ಬೆಳೆಯುವವರು ಉಳ್ಳಾಗಡ್ಡೆಯವರು, ಕುದುರೆ ಕಟ್ಟಿದವರು ಕುದುರೆಯವರು, ಬೆಲ್ಲ ಮಾಡುವವರು ಬೆಲ್ಲದವರು ಅದಂತೆ ಬಂಗಾರದ ಕಂಬಳಿಯನ್ನು ಮಾಡಿಸಿದವರು "ಹೊನ್ನ–ಕಂಬಳಿ"ಯವರೆಂದು ಏಕಾಗಿರಬಾರದು ? ಕಂಬಳಿ ಎನ್ನುವ ಶಬ್ದ ಜಾತಿ ಸಂಕೇತವೇ ಆಗಿರ

15 ಹೊಸಂಗಡಿಯ ೧೬ನೇ ಶತಮಾನದ ನಾಲ್ಕು ಶಿಲಾಶಾಸನಗಳು

16 ಸಂಪಂಗಿ ಕೋಟೆ ಶಂಭುಲಿಂಗ ದೇವಸ್ಥಾನದ ಅಂಗಳದಲ್ಲಿರುವ ಕ್ರಿ.ಶ. ೧೫೬೭ರ ಮೂರು ಶಿಲಾಶಾಸನಗಳು

17 ಇದೊಂದು ಗುಂಪುಗುಂಪಾದ ಮನೆಗಳಿಂದ ಕೂಡಿದ ಮಲೆನಾಡಿನಲ್ಲೇ ಅಪರೂಪವಾದ ಊರು. ಇಲ್ಲಿ ಕೆರೆ ಬಾವಿಗಳ ದಂಡೇ ಇದೆ. ಒಳಚರಂಡಿಯ ವ್ಯವಸ್ಥೆಯ ಅವಶೇಷಗಳನ್ನು ನಾವಿಲ್ಲಿ ಕಾಣಬಹುದು. ಇದೀಗ ಹುಲಿಗಳ, ಕಾಡು–ಕೋಣಗಳ ವಾಸಸ್ಥಳವಾಗಿರುವ ಇದು ದಟ್ಟ ಅರಣ್ಯದಲ್ಲಿದೆ.

ಬೇಕೆಂದೇನೂ ಇಲ್ಲ. ಅದು ವಸ್ತ್ರರೂಪವೂ ಆಗಿರಬಹುದು.

ಹೊಸಂಗಡಿಯಿಂದ ಸುಮಾರು ಏಳು ಕಿ. ಮೀ. ದೂರದ ದಟ್ಟ ಅರಣ್ಯದ ಹರಿದ್ವರ್ಣದಲ್ಲಿರುವ ಒಂದು ಹಳ್ಳಿ ತೊಂಬೊಟ್ಟು. ಅಲ್ಲಿ ಹೋಗಿ ಕ್ಷೇತ್ರಕಾರ್ಯ ಮಾಡಿದಾಗ ತಿಳಿದುಬಂದ ಸಂಗತಿಯೆಂದರೆ, 'ಹೊನ್ನೆಯ' ಮನೆತನದವರು ಇಲ್ಲಿ ವಾಸವಾಗಿದ್ದರಂತೆ[18] ಎಂದು ಹೇಳುತ್ತಾ ಅಳಿದುಳಿದ ಮನೆಯೊಂದನ್ನು ಇಂದಿಗೂ ಅಲ್ಲಿಯವರು ತೋರಿಸುತ್ತಾರೆ. ಇಲ್ಲಿಯ ಗಣಪತಿ ದೇವಸ್ಥಾನದ ಅಂಗಳದಲ್ಲಿ ಅಸ್ಪಷ್ಟ ಒಕ್ಕಣೆಯುಳ್ಳ ಶಾಸನವೊಂದಿದೆ. ಅದನ್ನು ಓದಲು ಸಾಧ್ಯವಾದರೆ ಬಹುಶಃ ಹೊನ್ನಕಂಬಳಿಯವರ ಬಗ್ಗೆ ಇನ್ನೂ ಸ್ವಲ್ಪ ಹೊಸ ಬೆಳಕು ಬಿದ್ದೀತು ಎನ್ನಿಸುತ್ತದೆ. ತೊಂಬಟ್ಟೇ ಇವರ ಮೂಲಸ್ಥಾನವಾಗಿದೆ ಎಂದು ದೃಢವಾಗಿ ಹೇಳಲಾರೆನಾದರೂ ಇವರ ಹಿರಿಯರು ಉತ್ತರ ಕರ್ನಾಟಕದ ಯಾವುದೋ ಭಾಗದಿಂದ ಬಹು ಹಿಂದೆಯೇ ಇಲ್ಲಿಗೆ ಬಂದು ನೆಲೆಸಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

**ಸಮಾಜ**

ತನ್ನ ಸೀಮೆಯಲ್ಲಿರುವ ಮೂಲನಿವಾಸಿಗಳಾದ ಕುಡುಬಿ ಜನಾಂಗಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಟ್ಟಿದ್ದ ಅವರು ಉಳಿದ ಜನಾಂಗಗಳಾದ ನಾಡವರು, ಬ್ರಾಹ್ಮಣರು, ದಾಸರು, ಗೊಲ್ಲರು, ಗಾಣಿಗರು, ಬೋವಿಗಳು, ಬಿಲ್ಲವರು, ಬಂಡಾರರು, ಕೊಂಕಣಿಗಳು, ನಾಯಕರ ಮಧ್ಯೆ ಸಾಮರಸ್ಯ ನೆಲೆಗೊಳ್ಳುವಂತೆ ವ್ಯವಸ್ಥೆ ಮಾಡಿದ್ದರು. ಅವರವರ ಹಕ್ಕಿನ ಭೂಮಿಯನ್ನು ಯಾವ ಕಲಹವಿಲ್ಲದೆ ಅವರವರೇ ಸಾಗುವಳಿ ಮಾಡಿಕೊಂಡಿರಲು ಹಾಗೂ ಬೇರೆಯವರು ಕೈಯಿಕ್ಕದಂತೆ ಕಾನೂನು ಕ್ರಮವಿತ್ತು. ಒಂದು ವೇಳೆ ಭೂಮಿಯ ಯಾ ಸ್ವತ್ತಿನ ಒಡೆಯನೊಬ್ಬ ದಾತಾರರಿಲ್ಲದೆ ಸತ್ತು ಹೋದರೆ ಅದನ್ನು ಸರಕಾರಕ್ಕೆ ಸೇರಿಸಿಕೊಳ್ಳದೆ ಸದರಿಯವನಿಗೆ ಸಂಬಂಧಪಟ್ಟ ಆಸ್ತಿಯನ್ನು ಅದೇ ಗೋತ್ರದ ಉಳಿದವರಿಗೆ ಹಂಚಲಾಗುತ್ತಿತ್ತೆಂದು ಈ ಅರಸರ ಪ್ರಾಚೀನ ಶಾಸನವೊಂದು ಉಲ್ಲೇಖಿಸುತ್ತದೆ.[19] ಸರ್ವಧರ್ಮ ಸಹಿಷ್ಣುಗಳಾದ ಇವರು, ಅನೇಕ ದೇವ-ಸ್ಥಾನಗಳಿಗೆ ಧಾರಾಳ ಉಂಬಳಿಯನ್ನು ನೀಡಿದ್ದಲ್ಲದೆ ಪ್ರತಿವರ್ಷದ ಖರ್ಚಿಗೆ ಯಾವ ತೊಂದರೆಯೂ ಆಗದಂತೆ ನೋಡಿಕೊಳ್ಳುತ್ತಿದ್ದರು.

ಜನರು ತಮತಮಗೆ ನಿರ್ದಿಷ್ಟಪಡಿಸಲಾದ ಕೆಲಸವನ್ನು ಮಾಡಿಕೊಂಡಿದ್ದು ಸಮಾಜದಲ್ಲಿ ಸಂಘರ್ಷಕ್ಕೆ ಅವಕಾಶವಿಲ್ಲದಂತೆ ಸ್ನೇಹ ಜೀವನ ಸಾಗಿಸುತ್ತಿದ್ದರು. ಕುಡಿಯುವ ನೀರಿಗಾಗಿ ಅನೇಕ ಬಾವಿಗಳನ್ನು ತೆಗೆಸಿದ್ದರು ನೀರಾವರಿಗೆ ಅನುಕೂಲವಾಗಲೆಂದು ಹಲವಾರು ದೊಡ್ಡ ದೊಡ್ಡ ಕೆರೆಗಳನ್ನು ಕಟ್ಟಿಸಲಾಗಿದೆ. ಇವುಗಳಲ್ಲಿ ಕೋಟಿಕೆರೆ ಸುಮಾರು ೧೫ ಎಕರೆ ವಿಸ್ತೀರ್ಣವುಳ್ಳ ಸಮೃದ್ಧ ನೀರಿರುವ ಕೆರೆ. "ಕೋಟಿಕೆರೆ ತಮ್ಮ"ನೆಂದೇ ಹೆಸರಾದ ಇನ್ನೊಂದು ಕೆರೆ ಸುಮಾರು ೧೦ ಎಕರೆ ವಿಸ್ತೀರ್ಣವುಳ್ಳದ್ದು, ಬಸವಪ್ಪನಕೆರೆ ಇದು ಸುಮಾರು ೬ ಎಕರೆ ವಿಸ್ತೀರ್ಣವುಳ್ಳದ್ದು. ಇಂಥ ಕೆರೆಗಳ ಸಹಾಯದಿಂದ ಜಮೀನಿಗೆ ನೀರು ಹರಿದು ಹೋಗುವ ವ್ಯವಸ್ಥೆಯನ್ನು ಆ ಕಾರಣಕ್ಕಾಗಿ ಅಂದಿನವರು ಮಾಡಿದ ಅಗೆತವನ್ನು ಇನ್ನೂ ಅಲ್ಲಲ್ಲಿ ಕಾಣಬಹುದಾಗಿದೆ. ಈ ವ್ಯವಸ್ಥೆಗಳು ಊರಿಗೆ ಮಾತ್ರ ಸೀಮಿತವಾಗಿರದೆ ಗಿರಿಕೋಟೆಗೂ ವಿಸ್ತರಿಸಿದ್ದವು ಎನ್ನುವುದು ಗಮನಿಸಬೇಕಾದ ಅಂಶ.

ಈಗ ಕಾಡಿನಲ್ಲಿ ಗಿಡಗಂಟೆಗಳಿಂದ ಮುಚ್ಚಿ-ಹೋಗಿರುವ, ಈಗ ಚಿಕ್ಕ ಕುಂಬ್ರಿಯೆಂದು ಕರೆಯಲಾಗುತ್ತಿರುವ, ಹಳೆತಲೆಮಾರಿನವರ ಬಾಯಲ್ಲಿ ಇಂದೂ ಅದು ಹಳೆಪೇಟೆಯೆಂದೇ ಕರೆಯಲಾಗುತ್ತಿರುವ ಪ್ರದೇಶ ಅಂದಿನ ಸಂತೆಮಾಳವಾಗಿತ್ತು. ಈ ಭಾಗದಲ್ಲಿ ಹಲವಾರು ಸಾಲುಸಾಲಾದ ಕಟ್ಟೋಣದ ಕುರುಹುಗಳನ್ನೂ, ದನಗಾಹಿ ಜನರಿಂದ ಹಾಳಾದ ದೇವಸ್ಥಾನಗಳನ್ನು, ಎಳೆಯರ ಆಟದ ಕಲ್ಲುಗಳಾಗಿ, ಹಿರಿಯರ ಕೊಟ್ಟಿಗೆಯ ಚಪ್ಪಡಿಕಲ್ಲುಗಳಾಗಿ ರೋಧನಗೈಯುತ್ತಿರುವ ತುಂಡಾದ ಮಾಸ್ತಿಕಲ್ಲುಗಳು, ವೀರಗಲ್ಲುಗಳು,

18 ತೊಂಬೊಟ್ಟಿನ ಗಣಪತಿ ಪೂಜಾರಿಗಳು ಹಾಗೂ ಸ್ಥಳೀಯ ಹಿರಿಯರ ಹೇಳಿಕೆಯ ಪ್ರಕಾರ

19 ನಗರದಲ್ಲಿರುವ ಮತ್ತಿಕೈಮಗದ ಮಠದ ಅಂಗಳದಲ್ಲಿ ಕ್ರಿ.ಶ. ೧೫೫೨ರ ಶಿಲಾಶಾಸನ

ನಾಗರಕಲ್ಲುಗಳು, ಸಮಾಧಿಕಲ್ಲುಗಳನ್ನು ನಾವಿಲ್ಲಿ ಕಾಣಬಹುದಾಗಿದೆ. ಈ ಪ್ರದೇಶದಲ್ಲೂ ಹಲವಾರು ಬಾವಿಗಳು, ಕೆರೆಗಳು ಇದೊಂದು ಸಂತೆ ಮಾಳವಾಗಿತ್ತೆಂದು ಹೇಳಲು ಸಾಕ್ಷೀ ರೂಪದಲ್ಲಿವೆ.

ಹೊಸಂಗಡಿಯು ಅಂದು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಇಲ್ಲಿಯ ಬೀಡಿಕೆಯೆಂಬ ಸ್ಥಳದಲ್ಲಿ ಹೇರು ಎತ್ತುಗಳು ನಿಲ್ಲುತ್ತಿದ್ದವು. ಇದು ಹೇರು ಎತ್ತಿನ ಹಾಗೂ ಎತ್ತಿನಗಾಡಿಗಳ ನಿಲುದಾಣವಾಗಿತ್ತು. ಹಂಚು, ಉಪ್ಪು, ಭತ್ತ ಇತ್ಯಾದಿ ವಸ್ತುಗಳನ್ನು ಗಂಗೊಳ್ಳಿ ಬಂದರಿನ ಮೂಲಕ ದೋಣಿಯ ಮೇಲೆ ಕಂಡ್ಲೂರಿಗೆ ಸಾಗಿಸಿ ಅಲ್ಲಿಂದ ಎತ್ತಿನ ಗಾಡಿಯಲ್ಲಿ ಹೊಸಂಗಡಿಗೆ ಬಂದು ಪುನಃ ಅಲ್ಲಿಂದ ಹೇರು ಎತ್ತಿನ ಮೇಲೆ ಹೇರು ಎತ್ತಿನ ದಾರಿಯನ್ನು ಬಳಸಿ ಘಟ್ಟದ ಮೇಲಕ್ಕೆ ಕಳುಹಿಸಲಾಗುತ್ತಿತ್ತು. ಈ ದಾರಿಯ ನಡುವೆ ಅಲ್ಲಲ್ಲಿ ಮಠಗಳಿದ್ದವು. ಹಸಿದು ಬಾಯಾರಿ ಬಂದ ಪ್ರಯಾಣಿಕರಿಗೆ ಇವು ಆಶ್ರಯ ನೀಡುತ್ತಿದ್ದವು. ಇಂದಿಗೂ ಈ ಮಠಗಳಿದ್ದ ಸ್ಥಳಗಳನ್ನು ಕಾಣಬಹುದಾಗಿದೆ. ಅಂದಿನ ಅರಸರು ವ್ಯಾಪಾರ ವಹಿವಾಟಕ್ಕೆ ವಿಶೇಷ ಅವಕಾಶಗಳನ್ನು, ಸವಲತ್ತುಗಳನ್ನು ಒದಗಿಸುತ್ತಿದ್ದರೆಂಬುದಕ್ಕೆ ಇವು ಪುರಾವೆಗಳು.

**೩. ರಾಜಕೀಯ ಹಿನ್ನೆಲೆಯಲ್ಲಿ ಹೊಸಂಗಡಿ :-**

ಹನ್ನೆರಡನೇ ಶತಮಾನದಿಂದ ಹದಿನೆಂಟನೇ ಶತಮಾನದವರೆಗೆ ಅನೇಕ ಅರಸರು ತುಳುನಾಡನ್ನು ಆಳಿದ್ದಾರೆ. ಒಂದು ಅಂದಾಜಿನಂತೆ ಸುಮಾರು ತೊಂಬತ್ತೊಂದು ಆಳರಸರ ಉಲ್ಲೇಖವಿದೆ.[20] ಹೊನ್ನಕಂಬಳಿಯರಸರು ಆಳರಸರ ಮೇಲೆ ದಂಡೆತ್ತಿ ಹೋದ ಬಗ್ಗೆಯಾಗಲಿ, ಪರಪೀಡಕರಾಗಿ ಪ್ರಜೆಗಳಿಗೆ ತೊಂದರೆ ಕೊಟ್ಟ ಬಗ್ಗೆಯಾಗಲಿ ದಾಖಲೆ ಇಲ್ಲ. ಆದರೂ ಇತ್ತೀಚೆಗೆ 'ತರಂಗ' ಸಾಪ್ತಾಹಿಕದಲ್ಲಿ ಮೂಡಿ ಬರುತ್ತಿರುವ "ದಿಟ್ಟೆ" ಧಾರಾವಾಹಿಯಲ್ಲಿ ಈ ಅರಸರನ್ನು ಅವಮಾನಿಸುವ ಪ್ರಯತ್ನ ನಡೆದದ್ದು ದುರದೃಷ್ಟ.[21] ಈ ಅರಸರು ಸ್ನೇಹಕ್ಕೆ ಕಟ್ಟುಬಿದ್ದವರು, ಧರ್ಮಕ್ಕೆ ತಲೆ ಬಾಗಿದವರು ಎಂಬುದಕ್ಕೆ ದಾಖಲೆ ಇದೆ. ಹೊನ್ನಕಂಬಳಿಯರಸರು ಸುರಾಲುವಿನ ತೋಳಹರ ಅರಸರ ಸನ್ನೇಹಿಯಾಗಿದ್ದರು. ಕ್ರಿ. ಶ. ೧೫೭೯ ರಲ್ಲಿ ಪೋರ್ಚ ಗೀಸ್ ಕಪ್ತಾನ ಪೆದ್ರು ಡಿ. ಸಿಲ್ವನು ತೋಳಹರ ಅರಸು ಬಸ್ರೂರಲ್ಲಿ ಕಟ್ಟಿಸಿದ ಕೋಟೆಯ ಮೇಲೆ ದಾಳಿ ಇಕ್ಕಿದಾಗ ಆ ಅರಸರ ಕರೆಯ ಮೇರೆಗೆ ಸೈನ್ಯದೊಂದಿಗೆ ಹೋಗಿ ಓಡಿಸಿದವರು ಇದೇ ಹೊನ್ನಕಂಬಳಿಯವರು.[22]

ಈ ಅರಸರು ಕೆಳದಿಯ ನಾಯಕರೊಂದಿಗೂ ಸ್ನೇಹ ಸೌಹಾರ್ದದಿಂದಲೇ ಇದ್ದವರು. ಅವರ ಪ್ರತಿ ಶಾಸನಗಳಲ್ಲೂ ವಿಜಯನಗರವನ್ನು ಅಂದು ಆಳುತ್ತಿದ್ದ ಅರಸರ ಸ್ಮರಣೆಯೊಂದಿಗೆ ಕೆಳದಿಯರಸರ ನೆನಕೆಯೂ ಇರುತ್ತಿದ್ದುದು ಗಮನಾರ್ಹ. 'ಪಡುವಣ ಸಮುದ್ರಾಧೀಶ್ವರ'ನೆಂದೇ ಪ್ರಸಿದ್ಧನಾದ ಸದಾಶಿವ ನಾಯಕ (೧೫೪೦-೬೬) ವರೆಗೆ ಯಾವ ತೊಡಕುಗಳು ಇವರ ಮಧ್ಯೆ ಸುಳಿದಿರಲಿಲ್ಲ. ಆದರೆ ಹೊನ್ನಕಂಬಳಿಯರಸನನ್ನು ನಿರ್ಲಕ್ಷಿಸಿ ಬಿದನೂರ ಕೋಟೆಯನ್ನು ಹಿಡಿದುಕೊಂಡು ನಿರಂಕುಶನಾಗಿದ್ದ ಶಂಕರನಾರಾಯಣಭಟ್ಟನೆಂಬ ಮಂತ್ರಿಯಿಂದಾಗಿ ಹಿರಿಯ ವೆಂಕಟಪ್ಪ ನಾಯಕ ಹಾಗು ಹೊನ್ನಕಂಬಳಿಯ ಮಧ್ಯೆ ವಿರಸ ತಲೆದೋರಿತು. ಹಿರಿಯ ವೆಂಕಟಪ್ಪ ನಾಯಕನು ಮೊದಲು ಬಿದನೂರ ಕೋಟೆಯನ್ನು ಬಹು ಪ್ರಯಾಸದಿಂದ (ಸುಮಾರು ಆರು ತಿಂಗಳ ಪರ್ಯಂತ ಹೋರಾಟ ನಡೆಸಿ) ಕೈವಶ ಮಾಡಿಕೊಂಡು ಧೂರ್ತ ಮಂತ್ರಿಯನ್ನು ಬಂಧಿಸಿ ನಂತರ ಹೊನ್ನಕಂಬಳೆಯರಸನನ್ನು ಸೋಲಿಸಿದನು.[23] ಈ ಘಟನೆಯು ಬಹುಶಃ ಬಂಗರ ದೊರೆ ನಾಲ್ಕನೆಯ

---

20 "ಪ್ರಾಚೀನ ತುಳುನಾಡು" ದಿ. ಎನ್. ಎಸ್. ಕಿಲ್ಲೆ, ಪುಟ ೧೨೦.

21 ಮೇ ೨೩, "ತರಂಗ" ಸಾಪ್ತಾಹಿಕ ೭ನೇ ಧಾರಾವಾಹಿ ಪುಟ ೬೬ ಲೇಖಕಿ ದಿ. ಅನುಪಮಾ ನಿರಂಜನ-ಪೂರ್ಣಗೊಳಿಸಿದವರು ನಂದಾ ಡಿ. ಎಸ್.

22 ಕುಂದಾಪುರ ತಾಲ್ಲೂಕು ದರ್ಶನ, ಕನರಾಡಿ ವಾದಿರಾಜಭಟ್, ಪುಟ, ೧೬.

23 ಕೆಳದಿ ನೃಪ ವಿಜಯ" ಅನುವಾದ ಶ್ರೀ ಕೆಳದಿ ಗುಂಡಾಜೋಯಿಸ್, ಪುಟ ೧೨೦-೧೨೧

ವೀರನರಸಿಂಹ ಲಕ್ಷ್ಮಪ್ಪರಸ ಹಾಗೂ ಆತನ ಪತ್ನಿ ಉಳ್ಳಾಲದ ಕಿರಿಯ ಅಬ್ಬಕ್ಕಳ ಆಹ್ವಾನದ ಮೇರೆಗೆ ಅವಳಿಗೆ ಸಹಾಯ ಮಾಡಲೆಂದು ಸೈನ್ಯ ಸಮೇತನಾಗಿ ಕರಾವಳಿಯೆಡೆಗೆ ದಂಡೆತ್ತಿ ಬಂದಾಗ ನಡೆದಿರಬಹುದಾಗಿದೆ.[24] ಈ ದಾಳಿಯ (ಸುಮಾರು ಕ್ರಿ. ಶ. ೧೬೧೮) ನಂತರ ಹೊಸಂಗಡಿಯು ಸಂಪೂರ್ಣವಾಗಿ ಹೊನ್ನಕಂಬಳಿಯರಸರ ಕೈತಪ್ಪಿ ಕೆಳದಿನಾಯಕರ ಹಿಡಿತದಲ್ಲಿ ಬಂದಿತು. ಹಿರಿಯ ವೆಂಕಟಪ್ಪನಾಯಕ ಹಾಗೂ ವೀರಭದ್ರನಾಯಕ (ಕ್ರಿ. ಶ. ೧೬೨೯–೪೫)ರ ಕಾಲದಲ್ಲಿ ಇಲ್ಲಿಯ ಕೋಟೆಗಳನ್ನು ಬಲಪಡಿಸಲಾಯಿತಲ್ಲದೆ ಹಲವು ಕೋಟೆಗಳನ್ನು ಕಟ್ಟಿಸಲಾಯಿತು. ಶಿವಪ್ಪನಾಯಕನ ಕಾಲದಲ್ಲಿ (ಕ್ರಿ. ಶ. ೧೬೪೫–೬೦) ಆತನ ಸಿಸ್ತನ್ನು ಇಲ್ಲಿ ಅಳವಡಿಸಲಾಯಿತು. ಕೆಳದಿಯ ಕಿರಿಯ ಸೋಮಶೇಖರನಾಯಕನು (ಕ್ರಿ. ಶ. ೧೭೧೪–೩೯) ಇಲ್ಲಿಗೆ ಬಂದು ತಂಗುತ್ತಿದ್ದನೆಂದೂ "ಕೆಳದಿ ನೃಪ ವಿಜಯ"ದ ೨೭೫–೭೬ನೇ ಪುಟದಲ್ಲಿ ಉಲ್ಲೇಖಿಸಲಾಗಿದೆ. ಅಂತೂ ಕ್ರಿ. ಶ. ೧೬೧೮ ರಲ್ಲಿ ಹೊನ್ನಕಂಬಳಿಯರಸರ ಅವನತಿಯ ನಂತರ ಕೆಳದಿಯರಸರ ಪೂರ್ಣಾವಧಿಯ ಕಾರ್ಯಸ್ಥಾನವಾಗಿ ಹೊಸಂಗಡಿ ಮಾರ್ಪಟ್ಟಿತು.

೪ ಗಿರಿಕೋಟೆಗಳಿಂದಲೂ, ೨ ನೆಲಕೋಟೆಗಳಿಂದಲೂ ಕೂಡಿದ ಹೊಸಂಗಡಿ ಪ್ರದೇಶವು ಒಂದು ಸುಭದ್ರ ಸೇನಾ ನೆಲೆಯಾಗಿತ್ತು. ಈ ಆರೂ ಕೋಟೆಗಳ ಅವಶೇಷಗಳನ್ನು ಈಗಲೂ ಕಾಣಬಹುದು.

**ಗಿರಿಕೋಟೆಗಳು :**

ಅ) ದೇವರ ಗುಡ್ಡೆ, ಬ) ಕುಪ್ಪಪ್ಪನ ಬಾಗಿಲು, ಕ) ಹುಲಿಕಲ್ ಬೆಟ್ಟ, ಡ) ಮೆಟ್ಕಲ್ ಗುಡ್ಡೆ

**ಅ) ದೇವರಗುಡ್ಡೆ :**

ಇದರ ಶಿಖರದ ತುದಿಯಲ್ಲಿ ಅಂದಾಜು ಹತ್ತು ಎಕರೆಯಷ್ಟು ವಿಸ್ತಾರವಾದ ಬಯಲು ಪ್ರದೇಶವಿದೆ. ಸುತ್ತಲೂ ಕೋಟೆಯನ್ನು ಹೊಂದಿತ್ತೆನ್ನುವುದಕ್ಕೆ ಸಾಕ್ಷ್ಯ ಇದೆ. ಅಲ್ಲಲ್ಲಿ ಬಾವಿಗಳಿವೆ. ಈ ಗಿರಿ ಕೋಟೆ ಪಶ್ಚಿಮದಿಂದ ನುಗ್ಗಿಬರಬಹುದಾದ ವೈರಿಗಳನ್ನು ತಡೆಗಟ್ಟುವ ಮೊದಲನೇ ರಕ್ಷಣಾವ್ಯೂಹ. ಇದು ಈಗ ಕೇವಲ ದೇವರ ಗುಡ್ಡೆ.

**ಬ) ಕುಪ್ಪಪ್ಪನ ಬಾಗಿಲು :**

ಇದೂ ಕೂಡ ಸುಮಾರು ಹತ್ತು ಎಕರೆಯಷ್ಟು ವಿಸ್ತೀರ್ಣವಾಗಿದ್ದು, ಹೊಸಂಗಡಿಯ ಪೂರ್ವಕ್ಕಿರುವ ತುಂಬಿಕಾನು ಎಂಬ ದಟ್ಟ ಅರಣ್ಯದಲ್ಲಿ ಇದೆ. ಹೊಸಂಗಡಿಯಿಂದ ಸುಮಾರು ಐದು ಕಿ.ಮೀ. ದೂರದಲ್ಲಿರುವ ಈ ದುರ್ಗವು ಗಿರಿದುರ್ಗ ಘಟ್ಟದ ಮೇಲಿಂದ ಬರುವ ದಾಳಿಯನ್ನು ಎದುರಿಸಲು ಕಟ್ಟಲಾಗಿದೆ. ಇದು ರಕ್ಷಣಾಕೋಟೆ ಮಾತ್ರವಲ್ಲ ಹೊಸಂಗಡಿಯ ಪ್ರಧಾನ ಸುಂಕದ ಕಟ್ಟೆಯೂ ಆಗಿತ್ತು. ಘಟ್ಟದ ಮೇಲಿಂದ ಹೇರು ಎತ್ತಿನ ದಾರಿಯಿಂದಲೇ ಇಲ್ಲಿಗೆ ಸಾಮಾನು ಸರಂಜಾಮುಗಳು ಬರಬೇಕಿತ್ತು. ಕ್ಷೇತ್ರ ಅಧ್ಯಯನದ ಮೂಲಕ ತಿಳಿದು ಬರುವುದೇನೆಂದರೆ : ಬ್ರಿಟೀಶರ ಕಾಲದಲ್ಲೂ ಕುಪ್ಪಪ್ಪನ ಬಾಗಿಲ ಸುಂಕದ ಕಟ್ಟೆಯಾಗಿತ್ತು ಎಂದು. ಅಲ್ಲಿ ವಸತಿ ಗೃಹಗಳಿದ್ದ ಕುರುಹುಗಳಿವೆ. ಕೋಟೆಗೆ ಹೆಬ್ಬಾಗಿಲೂ ಇತ್ತೆಂಬುದಕ್ಕೆ ಸಾಕ್ಷಿ ಇದೆ. ಬಾಗಿಲಿನ ದಕ್ಷಿಣಕ್ಕೆ ಕೆಂಪು ಕಲ್ಲಿನಿಂದ ಕಟ್ಟಲಾದ ಉತ್ತರಾಭಿಮುಖವಾದ ಸೂರಿಲ್ಲದ, ದೇವಮೂರ್ತಿಯಿಲ್ಲದ ದೇವಸ್ಥಾನವಿದೆ. ಪಾಣಿಪೀಠವೊಂದು ಮರದ ಪೊಟರೆಯೊಳಗೆ ಮೇಲ್ಮುಖವಾಗಿ ಸಿಕ್ಕಿಹಾಕಿಕೊಂಡಿದೆ. ಇದು ವೀರಭದ್ರ ಯಾ ಆಂಜನೇಯನ ದೇವಸ್ಥಾನವಾಗಿರಬಹುದೆಂದು ತರ್ಕಿಸಬಹುದಾಗಿದೆ. ಕುಪ್ಪಪ್ಪನ ಬಾಗಿಲಿನ ಎಡಕ್ಕೆ ಕೋಟೆಯ ಗೋಡೆಯ ಅತೀ ಹತ್ತಿರದಲ್ಲಿ ೪೫ ಅಡಿ ಆಳವಿರುವ ಚೌಕಾಕಾರದ ಬಾವಿ ಇದೆ. ದೇವಸ್ಥಾನದ ಪೂರ್ವಕ್ಕೆ ೨೫ × ೨೫ ಚದುರ ಅಡಿ ವಿಸ್ತೀರ್ಣದ ಕೆರೆ ಇದೆ. ಎರಡು ಫಿರಂಗಿಗಳು ಅನಾಯವಾಗಿ ಬಿದ್ದುಕೊಂಡಿವೆ. ಅಂದಿನ ಅರಸರ (ಹೊನ್ನಕಂಬಳಿ ಕೆಳದಿ) ಕಾಲದಲ್ಲಿ ಇದು ಸುಸಜ್ಜಿತ ಸ್ಥಳವಾಗಿತ್ತೆಂಬುದರಲ್ಲಿ ಸಂದೇಹವಿಲ್ಲ. ಇದು ಅಂದಿನ

24 "ಕರ್ನಾಟಕದ ಪರಂಪರೆ" ಸಂಪುಟ ೨, ಪ್ರಕಾಶಕರು : ಮೈಸೂರು ರಾಜ್ಯ ಸರಕಾರ-೧೯೭೦ ಪುಟ ಸಂ. ೩೨೬, ಲೇಖಕ: ಡಾ. ಸೂರ್ಯನಾಥ ಕಾಮತ್.

ಸಂಚಾರ ನಿಯಂತ್ರಣ ಮಹಾದ್ವಾರವಾಗಿರಲೂ ಬಹುದು. ಕುಸ್ಥಪ್ಪನ ಬಾಗಿಲು ಕೇವಲ ಭದ್ರತಾ ದೃಷ್ಟಿಯಿಂದ ಮಾತ್ರ ನಿರ್ಮಾಣವಾಗಿರದೆ ಕಾಡುತ್ಪತ್ತಿಯನ್ನು ರಕ್ಷಿಸುವ ತಾಣವೂ ಆಗಿತ್ತು. ಈಗಲೂ ಇಲ್ಲಿ ಹೇರಳ ಕಾಡುತ್ಪತ್ತಿಯನ್ನು ಕಾಣಬಹುದಾಗಿದೆ.

**ಕ) ಹುಲ್ಲಿಕಲ್ಲು ಬೆಟ್ಟ :**

ಬಾಳೆಬರಿ ಘಾಟಿಯ ಪ್ರಾರಂಭದಲ್ಲೇ ಈಗಿನ ಅರಣ್ಯ ತಪಾಸಣಾ ಠಾಣೆ ಸಿಗುವ ಸ್ಥಳದಿಂದ ಬಲಕ್ಕೊಂದು ರಸ್ತೆ ಹೋಗುತ್ತದೆ. ಒಂದು ಮೈಲು ಆ ರಸ್ತೆಯಲ್ಲೇ ನಡೆದರೆ ಈ ಕೋಟೆ ಸಿಗುತ್ತದೆ. ಇದಕ್ಕೆ ಹೈದರ್ ಘರ್ ಎಂದೂ ಕರೆಯಲಾಗುತ್ತದೆ. ಇದೊಂದು ದುರ್ಭೇದ್ಯವಾದ ರಕ್ಷಣಾ ಕೋಟೆ. ಜನರಲ್ ಮ್ಯಾಥ್ಯೂಸ್ ಹಾಗೂ ಹಂಬರ್ಟ್‌ಸ್ಟನ್ ಜೊತೆಗೂಡಿ ನಾಯಕತ್ವವನ್ನು ಹೊಂದಿದ್ದ ಸೈನ್ಯ ಜನವರಿ ೨೫, ೧೭೮೩ ರಂದು ಹೊಸಂಗಡಿ ಕೋಟೆಗಳನ್ನು ಒಂದೊಂದಾಗಿ ವಶಪಡಿಸಿಕೊಳ್ಳುತ್ತಾ ಕಣಿವೆಯ ಮಾರ್ಗದಲ್ಲಿ ಇಲ್ಲಿಗೆ ಬಂದಾಗ ೧೭,೦೦೦ ಸೈನಿಕರನ್ನೂ ೨೫ ಪಿರಂಗಿಗಳನ್ನು ಎದುರಿಸಬೇಕಾಯಿತು.[25] ಇದು ಅಂದು ಹುಲಿಕಲ್ ಕೋಟೆಯೆಂದೇ ಕರೆಯಲಾಗುತ್ತಿತ್ತಾದರೂ ಹೈದರನ ಮುತ್ತಿಗೆಯ ನಂತರ ಬಿದನೂರು ಹೈದರ್ ನಗರವಾದಂತೆ ಇದೂ ಹೈದರ್ ಘರ್ ಎಂದು ಹೆಸರಾಯಿತು. ಸು. ೫೦ ಎಕರೆ ವಿಸ್ತೀರ್ಣವಾದ ಬಯಲನ್ನು ಹೊಂದಿರುವ ಈ ಕೋಟೆಯ ಸುತ್ತಲೂ ಆಳವಾದ ಕಂದಕವನ್ನು ತೋಡಲಾಗಿದೆ. ಸೇನಾ ವಸತಿ, ಬಾವಿ, ಕೆರೆಗಳನ್ನು ಹೊಂದಿರುವ ಈ ಕೋಟೆಗೆ ಅನೇಕ ದೊಡ್ಡದೊಡ್ಡ ರಕ್ಷಣಾ ಬುರುಜುಗಳನ್ನು ಕಟ್ಟಲಾಗಿದೆ. ಇಲ್ಲಿ ೧೫೫ಕ್ಕೂ ಹೆಚ್ಚು ಪಿರಂಗಿಗಳನ್ನು ಕಂಡವರಿದ್ದಾರೆ. ಹಲವು ಪಿರಂಗಿಗಳು ಸಾಗಿಸಲ್ಪಟ್ಟದ್ದಕ್ಕೆ ಪ್ರತ್ಯಕ್ಷ ಸಾಕ್ಷಿಗಳಿವೆ. ಇಲ್ಲಿ ಸುರಂಗ ಮಾರ್ಗವೂ ಇದ್ದು ಅದು ಎಲ್ಲಿಗೆ ಸಂಪರ್ಕ ಹೊಂದಿತ್ತು ಎನ್ನುವುದನ್ನು ಇನ್ನಷ್ಟೇ ತಿಳಿಯಬೇಕಿದೆ. ಹೈದರ್ ಘರ್‌ನ್ನು ಹುಲಿಕಲ್ಲ್ ಘಾಟಿಯ ಶಿರೋಬಿಂದುವಿನಲ್ಲಿ ಸ್ಥಾಪಿಸಲಾಗಿದ್ದು ಇದನ್ನು ಹತ್ತುವ ಪ್ರತಿ ಸ್ತರಗಳಲ್ಲಿ ರಕ್ಷಣಾ ಕೋಟೆಗಳನ್ನು ಕಟ್ಟಲಾಗಿತ್ತಾದ್ದರಿಂದ ಸುಲಭದಲ್ಲಿ ವೈರಿಗಳು ಇದರ ಹೆಬ್ಬಾಗಿಲನ್ನು ಪ್ರವೇಶಿಸಲು ಸಾಧ್ಯವಿರಲಿಲ್ಲ. ಈ ಕೋಟೆಯನ್ನು ಬಿದನೂರ ಸುರಕ್ಷತೆಗೋಸ್ಕರ ವೆಂಕಟಪ್ಪನಾಯಕನು ಕಟ್ಟಿಸಿದ್ದಿರಬೇಕು. ಇಲ್ಲಿಗೆ ಒಂದು ಕಿ.ಮೀ. ಅಂತರದಲ್ಲಿ ಕಾಣಸಿಗುವ ದುರುಗುಡ್ಡ, ಬಾಳೆಗುಡ್ಡದ ಕೋಟೆಗಳೊಂದಿಗೆ ಈ ಕೋಟೆ ಸಂಪರ್ಕ ಹೊಂದಿತ್ತು ಎಂದು ತಿಳಿದು ಬರುತ್ತದೆ. ಈಗ ಜಲಾವೃತ್ತವಾಗಿರುವ ಹಳ್ಳಿಗಳಾದ ಉಳಿಕೊಪ್ಪ, ಹಾರುಕಣ, ಮಾವಿನಕಣ, ಮೇಲುಕೊಪ್ಪಗಳ ಮೇರುಪರ್ವತಗಳಾದ ಈ ಬೆಟ್ಟಗಳಲ್ಲಿ ದೇವಸ್ಥಾನ, ಕೆರೆ, ಬಾವಿ ಹಾಗೂ ಕೋಟೆಗಳ ಅವಶೇಷಗಳನ್ನು ಇಂದೂ ಕಾಣಬಹುದು.

**ಡ) ನೆಟ್ಕಲ್ ಗುಡ್ಡೆ :**

ಇಲ್ಲಿರುವ ಕೋಟೆಯು ದೇವರಗುಡ್ಡ, ಕುಸ್ಥಪ್ಪನ ಬಾಗಿಲು, ಕೋಟೆಕೆರೆ, ಮುತ್ತಿನ ಕಟ್ಟೆಗೆ ಸೇನಾದಾಳಿಯ ಸಂಕೇತಗಳನ್ನು ತಿಳಿಸುವ ಸೂಕ್ಷ್ಮ ಸ್ಥಳವಾಗಿತ್ತು. ಈ ಕೋಟೆಯು ಅಂದಿನ ಅರಸರ ವೀಕ್ಷಣಾ ಸ್ಥಳವೂ ಆಗಿರಬಹುದಾಗಿದೆ. ಇಲ್ಲಿಂದ ಅನತಿದೂರದ ಕಡಲತೀರ, ಕುಂದಾಪುರ, ಗಂಗೊಳ್ಳಿ, ಕಂಡ್ಲೂರು, ಕೊಲ್ಲೂರು, ಶಂಕರನಾರಾಯಣ, ಸಿದ್ಧಾಪುರ, ಹಟ್ಟಿಯಂಗಡಿ, ತೊಂಬಟ್ಟು ಇತ್ಯಾದಿಯಾಗಿ ತಾವು ಆಳುವ ಎಲ್ಲ ಪ್ರದೇಶಗಳನ್ನು ಸುಲಭದಲ್ಲಿ ನೋಡಬಹುದಾಗಿತ್ತು.

ಇಲ್ಲೆರಡು ಗುಹಾಂತರ್ಬಾವಿಗಳಿವೆ. ಇದರಲ್ಲೊಂದು ಬಾವಿ ೧೨ ಅಡಿ ಉದ್ದ ೭ ಅಡಿ ಅಗಲ ಹಾಗೂ ೭ ಅಡಿ ಆಳವಿದೆ. ಒಂದುಪಾರ್ಶ್ವದಲ್ಲಿ ಕಲ್ಲುಗೋಡೆ ಕಟ್ಟಲಾಗಿದೆ. ಇದರ ಕೆಳಗಡೆ ಸ್ವಲ್ಪ ಸಾಹಸಪಟ್ಟರೆ ಚಿಕ್ಕದಾದ ಇನ್ನೊಂದು ಬಾವಿ ಕಾಣಸಿಗುತ್ತದೆ. ಇಲ್ಲೊಂದು ಗಣಪತಿ ದೇವಾಸ್ಥಾನವಿದ್ದು ೬×೬ ಚದರಡಿ ವಿಸ್ತೀರ್ಣ ಹೊಂದಿದೆ. ಈ ದೇವಸ್ಥಾನದ ಎದುರಲ್ಲೇ ೮ ಅಡಿ ಆಳ, ೨೨ ಅಡಿ ಸುತ್ತಳತೆಯ ಸಾಕಷ್ಟು ನೀರಿರುವ ಬಾವಿ ಇದೆ. ಅತ್ಯಂತ ಜೀರ್ಣಾ

---

25 "MYSORE" A gazetteer complied for Government, Vol. No. 11 Mysore by Districts, Author : B.Lewis Rice.
Published by Madras Govt' 1897, P. No. 463-64.

ವಸ್ಥೆಯಲ್ಲಿರುವ ಇಲ್ಲಿಯ ಕೋಟೆಯ ಅವಶೇಷಗಳನ್ನು ನಮ್ಮ ಮುಂದಿನ ಪೀಳಿಗೆ ಚಿತ್ರದಲ್ಲೇ ನೋಡ ಬೇಕಾಗುತ್ತದೇನೋ.

**ನೆಲಕೋಟೆಗಳು :–**

ಅ) ಕೋಟೆಕೆರೆ, ಆ) ಮುತ್ತಿನ ಕಟ್ಟೆ

**ಅ) ಕೋಟೆಕೆರೆ :**

ಈ ಕೋಟೆಯ ಬದಿಯಲ್ಲೇ ಸುಮಾರು ೧೫ ಎಕರೆಯಷ್ಟು ವಿಶಾಲವಾದ ಕೆರೆಯಿರುವುದರಿಂದ ಈ ಕೋಟೆಗೆ ಕೋಟೆಕೆರೆಯಂತಲೇ ಕರೆಯುತ್ತಾರೆ. ಇದೊಂದು ಹತ್ತು ಎಕರೆಯಷ್ಟು ವಿಸ್ತಾರವಾದ ನೆಲಕೋಟೆ, ಹೊನ್ನಕಂಬಳಿಯರಸರ ಖಾಸಾ ಭದ್ರ ಕೋಟೆ ಇದಾಗಿತ್ತು. ಇಲ್ಲಿಯೇ ರಾಜಧಾನಿಗೆ ಸಂಬಂಧ ಪಟ್ಟ ಟಂಕಸಾಲೆ, ದಾಖಲೆ ಪತ್ರ ಹಾಗೂ ಇನ್ನಿತರ ಪ್ರಮುಖ ವಿಷಯಗಳ ಕೇಂದ್ರವಾಗಿತ್ತು. ಇದು ಅರ ಮನೆ, ಕೆರೆ, ಬಾವಿ ಹಾಗೂ ಸುತ್ತಲೂ ಕಾವಲು ಬುರುಜುಳ್ಳ ಕೋಟೆಯಾಗಿದ್ದು ಇದನ್ನು ಆಳವಾದ ಕಂದಕ ಸುತ್ತುವರಿದಿತ್ತು. ಈ ಕೋಟೆಯ ಒಂದು ಪಿರಂಗಿಯನ್ನು ಕುಂದಾಪುರ ತಾಲೂಕ್ ಕಚೇರಿಯ ಎದುರುಗಡೆಗೆ ಇಡಲಾಗಿರುವುದನ್ನು[26] ನಾವು ಈಗಲೂ ಕಾಣಬಹುದು. ಈ ಕೋಟೆಯನ್ನು ಅರಸನ ಖಾಸಾ ಕಾವಲುಪಡೆ ಕಾಯುತ್ತಿತ್ತು. ಕೋಟೆಯ ಹೊರಗೆ ಇರುವ ಕೆರೆಯ ಮೂಲಕವಾಗಿಯೇ ಕಂದಕಕ್ಕೆ ನೀರು ಬಿಡಲಾಗುತ್ತಿತ್ತು. ಈಗ ಆ ಮಾರ್ಗ ವನ್ನು ತಪ್ಪಿಸಿ ಬೇರೆಡೆಗೆ ಬಿಡಲಾಗುತ್ತಿದೆ. ಇದು ನೆಲ ಕೋಟೆಯಾದರೂ ಕಮ್ಯುನಿಷ್ಟ್ ಗಿಡದ ಹಾವಳಿಯಿಂದ ನೋಡಲು ದುಸ್ಸಾಧ್ಯವಾಗಿದೆ.

**ಆ) ಮುತ್ತಿನಕಟ್ಟೆ :**

ಇಲ್ಲಿ ಮೊದಲು ಮುತ್ತಿನ ವ್ಯಾಪಾರ ಮಾಡಲಾಗುತ್ತಿತ್ತಾದ್ದರಿಂದ ಇದು ಮುತ್ತಿನಕಟ್ಟೆ.[27] ಮುತ್ತು ಮಾರುತ್ತಿದ್ದರೆಂದು ಹೇಳಲಾಗುವ ಏಳು ಕಟ್ಟೆಗಳನ್ನು ನಾವಿಲ್ಲಿ ಕಾಣಬಹುದು. ೧೫೭ನೇ ಸರ್ವೆ ನಂಬರ್‌ನಲ್ಲಿ ಬರುವ ಈ ಕೋಟೆಯ ಬಯಲು ಸು. ೧೩೦ ಎಕರೆ ಇದೆ. ಕೆ.ಪಿ.ಸಿ. ಕಾಲೋನಿಯ ಸಮೀಪವಿರುವ ಈ ಕೋಟೆ ಆಳವಾದ ಕಂದಕವನ್ನು ಹೊಂದಿದೆ. ಬಹುಶಃ ಇದು ಮುತ್ತುವ ಕೋಟೆ ಯೆನೋ ! ಈ ಮುತ್ತಿನ ಕಟ್ಟೆ (ಮುತ್ತಿನಕೋಟೆ) ಅಂದು ಕೇವಲ ಭದ್ರತಾ ದೃಷ್ಟಿಯಿಂದ ನಿಂತಿರದೆ ಘಟ್ಟದ ಮೇಲಿಂದ ಬರುವ ವ್ಯಾಪಾರದ ಸರಕುಗಳನ್ನು ಕೂಡಿಡುವ ಗೋದಾಮಾಗಿಯೂ ಕೆಲಸ ನಿರ್ವಹಿಸುತ್ತಿ ತ್ತೆಂದು ತೋರುತ್ತದೆ. ಇದೀಗ ಈ ಸ್ಥಳವನ್ನು ಗದ್ದೆ ಗಳು, ವಸತಿಗಳೂ ಆಕ್ರಮಿಸುತ್ತಿರುವುದರಿಂದ ಹಾಗೂ ಈ ಕೋಟೆಯ ಕಲ್ಲುಗಳು ಒಂದೊಂದಾಗಿ ಮಾಯಾ ವಾಗುತ್ತಿರುವುದರಿಂದ ಕೆಲವೇ ಕೆಲವು ವರ್ಷಗಳಲ್ಲಿ ಈಗ ಹೇಳಿರುವ ಕೋಟೆ ಮುಂದೆಯೂ ನೋಡಲು ಸಿಕ್ಕೀತು ಎಂಬ ಗ್ಯಾರಂಟಿ ಇಲ್ಲ.

---

26 ಸ್ಥಳೀಯ ವ್ಯಕ್ತಿಗಳ ಪ್ರತ್ಯಕ್ಷ ಸಾಕ್ಷಿಗಳ ಹೇಳಿಕೆಯ ಪ್ರಕಾರ.

27 ೧೦೫ ವರ್ಷ ಪ್ರಾಯದ ಶ್ರೀ ಶಂಕರ ನಾಯಕ ಹಾಗೂ ೯೩ ವರ್ಷದ ಶ್ರೀ ಹುದಾರ ಗೋವಿಂದ ಅವರ ಹೇಳಿಕೆಯನ್ವಯ

ಕಲ್ಲನಗೌಡ ತಿಪ್ಪನಗೌಡ ಪಾಟೀಲ*

# ಇರಕಲ್ ಗಡ ಕೋಟೆ

ಇರಕಲ್ ಗಡ ರಾಯಚೂರ ಜಿಲ್ಲೆಯ ಕೊಪ್ಪಳ ತಾಲೂಕಿನ ಚಿಕ್ಕ ಹಳ್ಳಿ. ಕೊಪ್ಪಳದಿಂದ ಉತ್ತರಕ್ಕೆ ೧೫ ಕಿಲೊಮೀಟರ ದೂರದಲ್ಲಿದೆ. ದಾರಿಯ ಪಕ್ಕಕ್ಕೆ ಹೊಂದಿಕೊಂಡ ಇಪ್ಪತ್ತೆರಡು ಎಕರೆಯ ಬಿಳಿ ಕಪ್ಪು ಚಿಕ್ಕೆಗಳಿಂದ ಕೂಡಿದ ವಜ್ರ ಕಲ್ಲಿನ ಗುಡ್ಡದ ಮೇಲಿದೆ ಕೋಟೆ ಇಡೀ. ಕೋಟೆಯು ಐದು ಎಕರೆ ವಿಸ್ತಾರವುಳ್ಳದಾಗಿದ್ದು ಒಳ ಪ್ರದೇಶದ ಕೋಟೆಯ ಗೋಡೆ ೪೦ ಅಡಿಯಿಂದ ೬೦ ಅಡಿಗಳಷ್ಟು ಎತ್ತರವಿದೆ. ಕನ್ನಡ ಅಕ್ಷರ'ಊ'ಆಕಾರವಾಗಿ ಆಯತಾಕಾರದ ಕಿಂಡಿಗಳನ್ನು ಬಿಟ್ಟು ಚೌಕಾಕಾರದ ಕಲ್ಲುಗಳಿಂದ ಕಟ್ಟಲ್ಪಟ್ಟಿದೆ. ದಾಖಲಾತೆಗಳಿಂದ ಇದು ೧೬ನೆ ಶತಮಾನದ ನಿರ್ಮಾಣವೆಂದು ಹೇಳಬಹುದು. ವಿಜಯ ನಗರದ ತುಳುವ ವಂಶದ ನರಸನಾಯಕನೆಂಬುವವನು ಕಟ್ಟಿದ, ಮುಂಡಗೈ ತಿಮ್ಮಪ್ಪನಾಯಕನಿಗೆ ಒಪ್ಪಿಸಿದನೆಂದು ತಿಳಿದು ಬರುತ್ತದೆ.[1]

ಕೋಟೆಯನ್ನು ಭದ್ರವಾಗಿ ಇಕ್ಕಟ್ಟಾದ ಜಾಗೆಯಲ್ಲಿ ಕಟ್ಟಲಾಗಿದೆ. ಪಶ್ಚಿಮ ದಿಕ್ಕಿನಲ್ಲಿ ಪ್ರವೇಶ ದ್ವಾರವಿದ್ದು. ಪೂರ್ವಕ್ಕೆ ಚಿಕ್ಕ ಗುಪ್ತದ್ವಾರವಿದೆ. ಕೋಟೆಯ ಕೆಳಗಡೆ ದೊಡ್ಡ ದೊಡ್ಡ ಬಂಡೆಗಲ್ಲುಗಳು ಇವೆ. ಗುಡ್ಡದ ಅಡಿಯಲ್ಲಿ ನೀರಿನ ಕಂದಕವಿದ್ದು ಇದರ ಸಲುವಾಗಿ ನಲ್ವತ್ತು ಎಕರೆ ಕೆರೆ ಇದೆ. ಇದರ ನೀರು ಸುತ್ತಲು ಗುಡ್ಡಕ್ಕೆ ಹೊಂದಿಕೊಂಡಿತ್ತೆಂದು ಹೇಳಬಹುದು.

ಕೋಟೆಯ ಒಳಭಾಗದಲ್ಲಿ ನೀರಿನ ಹೊಂಡವಿದ್ದು ಇದನ್ನು ಕುಡಿಯುವದರ ಸಲುವಾಗಿ ಮಾಡಿಸಿದೆ. ಆಳವಾಗಿರುವ ಇದಕ್ಕೆ ಇಳಿಯಲು ಪಾವಟಿಗೆಗಳಿವೆ. ಸುರಂಗದ ಮಾರ್ಗವೊಂದಿದ್ದು ಈಗ ಇದನ್ನು ಮುಚ್ಚಿರುತ್ತಾರೆ. ಅರಮನೆಯ ಅವಶೇಷವಿದ್ದು ಇದು ಕಲ್ಲಿನ ಕಟ್ಟಡವಾಗಿದ್ದು ಈಗ ಬಿದ್ದು ಹೋಗಿ ಅವಶೇಷಗಳು ಮಾತ್ರ ಉಳಿದಿರುತ್ತವೆ. ಇದು ಕೋಟೆಯ ಮಧ್ಯದಲ್ಲಿ ಎತ್ತರವಾಗಿದೆ. ಇಲ್ಲಿ ಗುಪ್ತ ಗುಹೆಯಿದ್ದು ಇದಕ್ಕೆ ಒಂದೆ ಕಲ್ಲಿನ ಚಪ್ಪಡಿಯ ಹೊದಿಕೆ ಇದ್ದು ಒಳಗೆ ಇನ್ನೂರು ಜನ ಕುಳಿತುಕೊಳ್ಳುವಷ್ಟು ವಿಶಾಲವಾಗಿದೆ. ಇದು ನಿಸರ್ಗ ನಿರ್ಮಿತವಾದುದಿರಬಹುದು. ಕೋಟೆಯ ಉತ್ತರದಲ್ಲಿ ಮದ್ದಿನ ಮನೆಯಿದ್ದು ಆರು ಅಡಿ ಅಗಲವಾಗಿ ಹನ್ನೆರಡು ಅಡಿ ಉದ್ದವಾಗಿ ಎಂಟು ಅಡಿ ಆಳವಾಗಿದ್ದು ಭದ್ರವಾದ ಕಲ್ಲಿನಿಂದ ಚೌಕಾಕಾರವಾಗಿ ಕಟ್ಟಿ ಗಚ್ಚಿನಿಂದ ಒಳಗೆ ಲೇಪನ ಮಾಡಿದೆ.

ಕೋಟೆಯ ಒಳಗೆ ಪೂರ್ವಕ್ಕೆ ಧಾನ್ಯ ಕಣಜವಿದು ಇದನ್ನು ಭೂಮಿಯೊಳಗೆ ದೊಡ್ಡ ತೆಗ್ಗು ತೋಡಿ ಮೇಲ್ಗಡೆ, ಚೌಕಾಕಾರವಾಗಿ ಕಲ್ಲಿನ ಕಟ್ಟಡ ಮಾಡಿ ಒಳಗೆ ಕಾಳುಗಳನ್ನು ಕೆಡದಂತೆ ಕಾಪಾಡಲು ಭದ್ರವಾಗಿ ಕಟ್ಟಿದೆ.

ಧಾನ್ಯ ಕಣಜ ಮತ್ತು ಮದ್ದಿನ ಮನೆ ಮಧ್ಯೆ ಶಸ್ತ್ರಕೊಠಡಿ ಮತ್ತು ಖಜಾನೆಯಿದ್ದು, ಇದೂ ಕೂಡ ಭೂಮಿಯೊಳಗೆ ಇದ್ದು ಒಳಗೆ ಹೋಗಲು ಚಿಕ್ಕ ಚಿಕ್ಕ ಪಾವಟಿಗೆಗಳು ಇವೆ.

---

* ಬೆಳಧಡಿ, ಗದಗ ತಾಲೂಕು, ಧಾರವಾಡ ಜಿಲ್ಲೆ.

1 ಶರಕಲ ಶೆಟ್ಟಿ ಯಮನಪ್ಪ ಗೌಡರ ಹೇಳಿಕೆ.

ಅರಮನೆಯಿದ್ದ ಸ್ಥಳದ ಮುಂದೆ ಮಾರುತಿ ವಿಗ್ರಹವಿದ್ದು[2] ಇಲ್ಲಿ ಮೊದಲು ದೇವಸ್ಥಾನಗಳು ಇದ್ದ ಕುರುಹುಗಳು ಕಾಣುತ್ತವೆ. ಒಂದೇ ಕಲ್ಲಿನ ಬಂಡೆಯಲ್ಲಿ ವಿಗ್ರಹವನ್ನು ಕೆತ್ತಲಾಗಿದೆ. ಅಲ್ಲಲ್ಲಿ ಬಿದ್ದ ತೊಲೆ ಕಂಬಗಳ ಅವಶೇಷಗಳು ಇರುತ್ತವೆ. ಆನೆ ಚಿತ್ರ ಇರುವ ಎರಡು ಕಲ್ಲುಗಳು ಇದರ ಹತ್ತಿರ ಬಿದ್ದಿವೆ.[3] ಕೋಟೆಯ ಉತ್ತರ ಮತ್ತು ದಕ್ಷಿಣದ ಅಂಚುಗಳಲ್ಲಿ ಸೈನಿಕರು ಕುಳಿತು ಕೊಳ್ಳಲು ಚಿಕ್ಕ ಚಿಕ್ಕ ಗೂಡುಗಳಿವೆ. ಸೈನಿಕರ್ರ ವಿಶ್ರಾಂತಿ ಪಡೆಯಲು ಕಟ್ಟೆಗಳು ತೋಪು ಹಾರಿಸಲು ಜಾಲಂಧ್ರಗಳು ಇವೆ. ಊರಿನಲ್ಲಿ ಪ್ರಾಚೀನ ಅವಶೇಷಗಳಿವೆ ಶಿಲ್ಪಗಳು ಇವೆ. ಇವು ಜೈನ ತೀರ್ಥಂಕರ ಮೂರ್ತಿಗಳಾಗಿದ್ದು, ಇವುಗಳ ಅಡಿಯಲ್ಲಿ ಶಾಸನಗಳು ಇವೆ. ಅವು ಅಸ್ಪಷ್ಟವಾಗಿವೆ. ಊರಲ್ಲಿ ಒಂದು ಚಿಕ್ಕ ಮಾರುತಿ ದೇವಸ್ಥಾನವಿದ್ದು ಇದರ ಬಂಡೆಯಲ್ಲಿ ದಪ್ಪ ಅಕ್ಷರವಿರುವ ಶಾಸನ ಉಂಟು ಹಾಗೂ ಕೋಟೆ ಹತ್ತುವ ಮಾರ್ಗದಲ್ಲಿ ಒಂದು ವೀರಗಲ್ಲು ಒಂದು ಮಹಾಸತಿಯ ಕಲ್ಲು ವಿಗ್ರಹಗಳು ಇದ್ದು ವೀರಗಲ್ಲು ಮೂರು ಅಡಿ ಉದ್ದ ಎರಡು ಅಡಿ ಅಗಲ ಇದ್ದು ವೀರನು ಕೈಯಲ್ಲಿ ಭರ್ಜಿಯನ್ನು ಹಿಡಿದು ಕೊಂಡು ನಿಂತಿರುವನು. ಇವನ ಹೆಸರು ಸೋಮಲಿಂಗೇಶ್ವರ. ಇನ್ನು ಮಹಾಸತಿಯ ಕಲ್ಲು ಎರಡು ಅಡಿ ಉದ್ದ ಒಂದು ಅಡಿ ಅಗಲವಾಗಿದ್ದು ಕುಳಿತು ಕೊಂಡಿದ್ದಾಳೆ. ಇವಳ ಹೆಸರು ಚೌಡಿಮಲ್ಲಮ್ಮ ಇವರ ಮೆಲ್ಗಡೆ ಛತ್ರಿ ಆಕಾರವಾಗಿ ದೊಡ್ಡ ಬಂಡೆಗಲ್ಲು ಇರುತ್ತದೆ. ಮತ್ತು ಊರಿನ ಮಧ್ಯ ರಾಯಪ್ಪ ದೇಸಾಯಿ ಗುಡಿ ಇದೆ. ಒಳಗೆ ವೀರಗಲ್ಲು ಇದ್ದು ಇವನು ಕುದುರೆಯ ಮೇಲೆ ಸವಾರಿ ಮಾಡುತ್ತಾ ಇದ್ದಾನೆ. ಕೈಯಲ್ಲಿ ಭರ್ಚಿಡಾಲು ಹಿಡಿದಿದ್ದಾನೆ. ಇವನ ಹಿಂದೆ ಚ್ಯಾಮರ ಹಿಡಿದು ಸೇವಕ ಹೊರಟಿದ್ದಾನೆ. ಈ ವೀರಗಲ್ಲಿನ ಪೂಜೆಯನ್ನು ಈ ಊರಿನ ದೇವಾಯರ ಮನೆತನದವರು ಮಾಡುತ್ತಾರೆ. ಇವರು ಈ ವೀರಗಲ್ಲಿನ ವೀರನ ವಂಶದವರು.

ನಿಜಾಮು ಸೈನಾಧಿಕಾರಿ ಅಲ್ಲಾ ಮಗೀರ ಹಮ್ಮದನು ಈ ಕೋಟೆಯನ್ನು ಮೋಸದಿಂದ ಗೆದ್ದು ಕೊಂಡನೆಂದು ಹೇಳಲಾಗಿದೆ. ಆತನ ಹೆಸರಿನ ಹಳ್ಳಿ. ಈ ಕೋಟೆಯ ಪಕ್ಕದಲ್ಲಿ ಇದ್ದು ಅಲ್ಲಮಗಿರಿ ಎಂದು ಕರೆಯುತ್ತಾರೆ. ಮುಂದೆ ಹದಿನೇಳನೆಯ ಶತಮಾನಕ್ಕೆ ಮರಾಠಾ ಛತ್ರಪತಿ ಶಿವಾಜಿ ಸೈನಿಕರು ಗಜೇಂದ್ರ ಗಡದಿಂದ, ದಕ್ಷಿಣ ಮುಖವಾಗಿ ಬಂದು ಕೊಪ್ಪಳ ಕೋಟೆಯನ್ನು ಗೆದ್ದು ತಮ್ಮ ವಶಕ್ಕೆ ತೆಗೆದು ಕೊಂಡರು ಮುಂದೆ ಇದಕ್ಕೆ ಇರಕಲ್ ಗುಡ್ಡವೆಂದು ನಾಮಕರಣವಾಯಿತು.[4] ಮೊದಲು ಈ ಊರಿಗೆ ವೀರಕಲ್ಲು, ಇರಬಗಲ್ಲು, ಇರಕಲ್ಲು ಗಿರಿ, ಇರಕಲ್ಲು ಗಡಿಯಾಗಿ ಕೊನೆಗೆ ಇರಕಲ್ಲ ಗಢವಾಯಿತು. ಈ ಗುಡ್ಡದ ಪೂರ್ವಕ್ಕೆ ಕುಮ್ಮಟ ದುರ್ಗವಿದ್ದು ಇಲ್ಲಿ ಕುಮಾರರಾಮನೆಂಬ ವೀರನು ನೆಲಿಸಿದ್ದನೆಂದು ತಿಳಿದು ಬರುತ್ತದೆ. ಈ ಇರಕಲ್ ಗಡಕ್ಕೆ ಹೊಂದಿಕೊಂಡ ನಾಲ್ವತ್ತು ಎಕರೆ ಕೆರೆ ಇದೆ. ಈ ಕೆರೆ ನೀರಿನಿಂದ ತೋಟ ಪಟ್ಟಿಗಳು ಇದ್ದವೆಂದು ಊಹಿಸಲಾಗಿದೆ. ಊರಲ್ಲಿ ಗೋಪುರ ಬಸವಣ್ಣನ ಗುಡಿ ರುದ್ರಸ್ವಾಮಿ ಮಠ, ನಾಯಕ ಜನಾಂಗದ ಮನೆತನಗಳಿವೆ ಕೋಟೆಯ ಪಶ್ಚಿಮಕ್ಕೆ ದುರ್ಗಾಂಬಿಕಾ ದೇವಿಯ ಗುಡಿ ಬಿದ್ದು ನೆಲಸಮವಾಗಿ ದೀಪಸ್ತಂಭ ಮಾತ್ರ ಉಳಿದಿದೆ. ಇದರ ಸಮೀಪವೇ ಖಿನ್ನಾಳ ಎಂಬ ಗ್ರಾಮವು ಬಣ್ಣಕ್ಕೆ ಪ್ರಸಿದ್ಧಿಯಾಗಿದೆ. ಇಲ್ಲಿಂದ ಹತ್ತು ಕಿಲೊ ಮೀಟರ ದೂರದಲ್ಲಿ ಕನಕ ಗಿರಿ ಎಂಬ ಗ್ರಾಮವಿದ್ದು ಇದು ಪುರಾತನ ಕೋಟೆ ಗುಡಿ ಗೋಪುರಗಳು ಇದ್ದು ಚಿತ್ರ ಕಲೆಗೆ ಪ್ರಸಿದ್ಧಿ ಪಡೆದಿದೆ.

---

2 ನಾರಾಯಣಾಚಾರ್ಯ ಸಾಮಲಪುರ ಇವರು ಬರೆದ ಪುಸ್ತಕದ ಆಧಾರ.

3 ನಾಟಕ ಕರ್ತೃ ಕವಿ ಮಮನಪ್ಪ ಗೌಡ್ರ ತರಕಟ್ಟಿ ಇವರು ಬರೆದ ರಕ್ತಗತ್ತಿ ಎಂಬ ನಾಟಕದಲ್ಲಿ ಉಲ್ಲೇಖ.

4 ಕರ್ನಾಟಕ ರಾಜ್ಯಗ್ಯಾಸೆಟಿಯರ್ II ಪುಟ. ೨೬೨

[ನನ್ನ ಶೋಧನೆಯ ಕಾರ್ಯದಲ್ಲಿ ಸಹಾಯ ಸಲ್ಲಿಸಿದ ಇರಕಲ್ ಗಡಾದ ಶ್ರೀ ಹನಮಂತಪ್ಪ ತಲ್ಲೂರ ಇವರಿಗೂ ಹಾಗೂ ಬೆಳಧಡಿ. ಶ್ರೀ ಶಿವಪುತ್ರಯ್ಯ, ಬ. ಬರದೂರ ಮಠ ಇವರಿಗೆ ನಾನು ಚಿರಋಣಿಯಾಗಿದ್ದೇನೆ.]

ವೈ. ಹನುಮಂತರೆಡ್ಡಿ *

# ಕುರುಗೋಡು ನಾಡಿನ ಧಾರ್ಮಿಕ ಪರಿವರ್ತನೆ

ಕುರುಗೋಡು ಪಟ್ಟಣವು ಕ್ರಿ. ಶ. ೧೦–೧೨ನೇ ಶತಮಾನಗಳ ಕಾಲದಲ್ಲಿ "ಬಲಕುಂದೆ ೩೦೦ ನಾಡಿನ ರಾಜಧಾನಿ"ಯಾಗಿ ಮೆರೆದಿದೆ. ಈ ರಾಜ್ಯವನ್ನು ಕುರುಗೊಡು ಸಿಂಧ ವಂಶದ ರಾಚಮಲ್ಲ ಮತ್ತು ಅವನ ವಂಶದ ರಾಜರು ಆಳಿದ್ದಾರೆ. ಇವರು ವೀರಶೈವ ಧರ್ಮಿಯರಾಗಿದ್ದು, ಶೈವ ಧರ್ಮದ ಪೋಷಕರೂ ಆಗಿದ್ದರು.

ಕುರುಗೋಡು ಮತ್ತು ಸುತ್ತಲಿನ ಪ್ರದೇಶದಲ್ಲಿ ಪ್ರಾಚೀನ ಕಾಲದಿಂದಲೂ ಶೈವ ಧರ್ಮ ಪ್ರಧಾನವಾಗಿತ್ತೆಂದು ತೋರುತ್ತದೆ. ಪುರಾತನ ಕಾಲದಲ್ಲಿ ನಿರ್ಮಿಸಲ್ಪಟ್ಟಿರುವ ಹಲವಾರು ಶೈವ ದೇವಾಲಯಗಳು, ಮಂದಿರಗಳು, ಮೂರ್ತಿಗಳೂ ಈಗಲೂ ಇಲ್ಲಿ ಕಂಡು ಬರುತ್ತಿವೆ. ಇವುಗಳನ್ನು ಈ ಕೆಳಗಿನಂತೆ ಸ್ಥೂಲವಾಗಿ ೫ ವರ್ಗಗಳಾಗಿ ವಿಂಗಡಿಸಬಹುದು.

**೧ನೇ ವರ್ಗ :**

ಕಲ್ಲೇಶ್ವರ, ಹಿಂಡುಸಂಗಮೇಶ್ವರ, ಉಜ್ಜಾಳೇಶ್ವರ, ಘನಲಿಂಗೇಶ್ವರ, ನೀಲಕಂಠೇಶ್ವರ, ಗೌರೀಶ, ಮುದ್ದೇಶ, ಮಲ್ಲಿಕಾರ್ಜುನ (ತ್ರಿಕೂಟ ದೇವಸ್ಥಾನ), ತಳವಾರ ಈಶ್ವರ, ರಾಚನಮಲ್ಲನ ಗುಡಿ, ಮೊದಲಾದವು.

**೨ನೇ ವರ್ಗ :**

ದೊಡ್ಡಬಸವೇಶ್ವರ ಗುಡಿ, ವಜ್ರಬಂಡೆ ಬಸಪ್ಪನ ಗುಡಿ ಮೊದಲಾದವು.

**೩ನೇ ವರ್ಗ :**

ಪಂಚಮುಖಿ ವೀರಭದ್ರನ ಗುಡಿ, ಗವಿವೀರಭದ್ರ ಮತ್ತು ಕೊಳದ ವೀರಭದ್ರ (ಇವು ೩ ಗುಹಾಂತರ ದೇವಾಲಯಗಳು.)

**೪ನೇ ವರ್ಗ :**

ಕೆಳಗಿನ ಪೇಟೆಯ ಬೃಹತ್ ಗಣೇಶನ ಮೂರ್ತಿ ಎತ್ತರ ಸುಮಾರು ೧೬ ಅಡಿ, ಹಳೇ ಗೋಡೆಯ ಗಣೇಶನ ಮೂರ್ತಿ ಎತ್ತರ ಸುಮಾರು ೬ ಅಡಿ ಮತ್ತು ಊರಿನ ಮಧ್ಯದ ಗಣೇಶನ ಮೂರ್ತಿಗಳು ಎತ್ತರ ಸುಮಾರು ೩ ಅಡಿ.

**೫ನೇ ವರ್ಗ :**

ಸುಂಕಲಮ್ಮನ ಗುಡಿ ಮತ್ತು ಕಾಳಮ್ಮನ ಗುಡಿ ಮೊದಲಾದವು ಮೇಲೆ ತಿಳಿಸಿದ ದೇವಸ್ಥಾನಗಳಲ್ಲಿ ೧ನೇ ವರ್ಗದಲ್ಲಿರುವ ಎಲ್ಲಾ ಗುಡಿಗಳು ಶಿವಲಿಂಗವಿರುವ ಶಿವಾಲಯಗಳು. ೨ನೇ ವರ್ಗದಲ್ಲಿರುವವು ಬೇರೆ ಬೇರೆ ಗಾತ್ರದ ಬಸವಣ್ಣನ ಮೂರ್ತಿ ಇರುವ ಗುಡಿಗಳು. ೩ನೇ ವರ್ಗದವು ಬೇರೆ ಬೇರೆ ಆಕಾರದ ಗಾತ್ರದ ವೀರಭದ್ರನ ಗುಡಿಗಳು. ೪ನೇ ವರ್ಗದವು ಬೇರೆ ಬೇರೆ ಅಳತೆ ಪ್ರಮಾಣದ ಗಣೇಶನ ಮೂರ್ತಿಗಳು ಹಾಗೂ ಗುಡಿಗಳು. ೫ನೇ ವರ್ಗದವು ಶೈವ ಚಿಹ್ನೆಯುಳ್ಳ ಆಯುಧಗಳನ್ನು ಹಿಡಿದು, ಕುಳಿತ ಭಂಗಿಯಲ್ಲಿರುವ ಪಾರ್ವತಿಯ ಗುಡಿಗಳು.

---

* ಉಪನ್ಯಾಸಕರು, ಸರ್ಕಾರಿ ಪದವಿಪೂರ್ವ ಕಾಲೇಜು, ತೆಕ್ಕಲಕೋಟೆ, ಬಳ್ಳಾರಿ ತಾಲ್ಲೂಕು

ಮೇಲಿನ ದೇವಾಲಯುಗಳನ್ನು ಪರಿಶೀಲಿಸಿದಾಗ ಶಿವ, ಆತನ ಸತಿ ಪಾರ್ವತಿ, ಮಕ್ಕಳಾದ ಗಣೇಶ ಮತ್ತು ವೀರಭದ್ರ ಅಲ್ಲದೆ ಆತನ ವಾಹನನಾದ ನಂದಿ ಅಥವಾ ಬಸವಣ್ಣನಿಗೆ ಸಂಬಂಧಿಸಿದವುಗಳು. ಮೇಲಿನ ದೇವಾಲಯುಗಳಲ್ಲಿ ಹಲವು ಉತ್ತಮ ಸ್ಥಿತಿ ಯಲ್ಲಿದ್ದು ಪೂಜೆ ಪುನಸ್ಕಾರಗಳು ನಿರಂತರವಾಗಿ ಜರುಗುತ್ತಾ ಇವೆ. ಈ ದೃಷ್ಟಿಯಿಂದ ಕುರುಗೋಡು ಮೊದಲಿನಿಂದಲೂ 'ಶೈವ ಮತ' ಪ್ರಧಾನ ಕ್ಷೇತ್ರವಾಗಿದೆ ಎಂದು ತಿಳಿದುಬರುತ್ತದೆ.

ಆದರೆ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮೇಲೆ ೧ನೇ ವರ್ಗದಲ್ಲಿರುವ ಶಿವಾಲಯುಗಳಲ್ಲಿ **'ಘನಲಿಂಗೇಶ್ವರ'** ಎಂದು ಕರೆಯಲ್ಪಡುತ್ತಿರುವ ದೇವಾಲಯ ಹಿಂದೆ ಒಂದು **'ಜೈನ ಬಸದಿ'**ಯಾಗಿತ್ತೆಂದು ತಿಳಿದುಬಂದಿದೆ. ಈ ದೇವಾಲಯುದ ವಾಸ್ತುಶಿಲ್ಪ ಮತ್ತಿತರ ವಿಷಯುಗಳನ್ನು ಪರಿಶೀಲಿಸಿದಾಗ ಇದು ಇತರ ದೇವಾಲಯುಗಳಂತೆ ಇರದೆ ವಿಭಿನ್ನ ರೀತಿಯಲ್ಲಿದೆ. ಇದು ದಕ್ಷಿಣ ದಿಕ್ಕಿಗೆ ಮುಖವಾಗಿದ್ದು ಏಳುವರೆ × ಏಳುವರೆ ಅಡಿ ಚೌಕದ ಮುಖಮಂಟಪ, ೨೫ × ೨೫ ಅಡಿ ಚದರದ ೯ ಅಂಕಣದ ಸಭಾ ಮಂಟಪ, ಏಳುವರೆ ಅಡಿ ಚದರದ ಸುಕನಾಸಿ ಮತ್ತು ಹನ್ನೊಂದುವರೆ × ಒಂಭತ್ತುವರೆ ಅಡಿ ಅಳತೆಯ ಗರ್ಭಗೃಹಗಳನ್ನು ಹೊಂದಿದೆ. ಇದರ ದ್ವಾರಗಳ ದ್ವಾರಬಂಧದ ಇಕ್ಕೆಡೆಗಳಲ್ಲಿ ಪೂರ್ಣಕುಂಭದ ಚಿಹ್ನೆ ಗಳಿದ್ದು, ದ್ವಾರಬಂಧದ ಮೇಲೆ ಲಲಾಟ ಬಿಂಬದಲ್ಲಿ ಸಾಮಾನ್ಯವಾಗಿ ಗಜಲಕ್ಷ್ಮಿ ಇರುವ ಸ್ಥಳದಲ್ಲಿ ಮುಕ್ಕೊಡೆಯ ಕೆಳಗಡೆ ಕುಳಿತ ಭಂಗಿಯ ಜಿನಮೂರ್ತಿ ಇದ್ದು, ತದನಂತರದಲ್ಲಿ ಆ ಚಿಹ್ನೆಯನ್ನು ಅಳಿಸಿ ಲಿಂಗದ ಆಕೃತಿಯನ್ನು ರಚಿಸಲಾಗಿದೆ. ಇದೇ ರೀತಿಯ ಚಿಹ್ನೆ ಗಳು ಶುಕನಾಶಿಯ ದ್ವಾರಬಂಧಗಳಲ್ಲಿಯೂ ಇವೆ. ಗರ್ಭಗೃಹದಲ್ಲಿ ಆಯಾತಾಕಾರ ಐದೂವರೆ × ಎರಡು × ಎರಡು ಅಡಿ ಅಳತೆಯ ಪೀಠವಿದ್ದು ; ಅದರ ಮುಂಭಾಗದ ಮಧ್ಯದಲ್ಲಿ ನಿಂತ ಭಂಗಿಯಲ್ಲಿರುವ ಒಂದು ಸಿಂಹ ಮತ್ತು ಅದರ ಎಡ-ಬಲಗಳಲ್ಲಿಯೂ ವಿರುದ್ಧ ದಿಕ್ಕಿಗೆ ಮುಖಮಾಡಿ ನಿಂತಿರುವ ಎರಡು ಸಿಂಹಗಳ ಶಿಲ್ಪಗಳಿದ್ದು, ಇದೊಂದು ಸಿಂಹಪೀಠವಾಗಿದೆ.

ಈ ಪೀಠದ ಮೇಲೆ ಮೊದಲಿದ್ದ ಜಿನಮೂರ್ತಿ ಯನ್ನು ತೆಗೆದು ಆ ಸ್ಥಾನದಲ್ಲಿ ಅನಂತರದಲ್ಲಿ 'ಶಿವಲಿಂಗ' ಸ್ಥಾಪನೆ ಮಾಡಲಾಗಿದೆ. ಶಿವಲಿಂಗಕ್ಕೆ ಸಾಮಾನ್ಯವಾಗಿ ದುಂಡಗಿನ ಇಲ್ಲವೆ ಚೌಕಾಕಾರದ ಪಾಣಿಪೀಠ (ಪಾಣಿಪಟ್ಟ, ಪಾಣಿವಟ್ಟ) ಇರುತ್ತದೆ. ಆದ್ದರಿಂದ ಇದು ಶಿವಲಿಂಗಕ್ಕಾಗಿ ನಿರ್ಮಿಸಿದ ಪಾಣಿಪೀಠವಲ್ಲವೆಂದು ದೃಢಪಡುತ್ತದೆ.

ಈ ದೇವಸ್ಥಾನದ ಮಹಾದ್ವಾರದ ಪಕ್ಕದ, ಎಡಭಾಗದ ಗೋಡೆಯ ಮೇಲೆ ಶಕವರ್ಷ ೧೪೬೭ (ಕ್ರಿ.ಶ. ೧೫೪೫)ನೆಯ ವಿಶ್ವಾವಸು ಸಂವತ್ಸರದ ೧೩ ಸಾಲಿನ ಶಾಸನವಿದ್ದು, ಅದರಲ್ಲಿ ಶ್ರೀಮನ್ ಮಹಾದೇವ ದೇವೋತ್ತಮ ಕುರುಗೋಡು ಬಸ್ತಿಯ ಜಿನದೇವರಿಗೆ ಧರ್ಮ ಮಹಾ ರಾಜಾಧಿರಾಜ ಪರಮೇಶ್ವರ ಶ್ರೀವೀರ ಪ್ರತಾಪ ಶ್ರೀ ವೀರಸದಾಶಿವ ಮಹಾರಾಯರು ಪೃಥ್ವೀ ರಾಜ್ಯಂ ಗೈಯ್ಯುತ್ತಿರುಲು ಶ್ರೀಮನ್ ಮಹಾ ಮಂಡಳೇಶ್ವರ ಕೊಟಗಾರ ರಾಮರಾಜ ಒಡೆಯರ ಮೊಮ್ಮಕ್ಕಳು ಅಳಿಯ ಲಿಂಗರಾಜದೇವ ಮಹಾ ಅರಸುಗಳ ಅಣ್ಣಂದಿರು ರಾಮರಾಜಯ್ಯಗಳು ತಮ್ಮ ತಂದೆ ಮಲ್ಲರಾಜ ಒಡೆಯರಿಗೆ ಪುಣ್ಯವಾಗಬೇಕೆಂದು ಅಮೃತಪಡಿ ನೈವೇದ್ಯಕ್ಕೆ ಭೂಮಿ ದತ್ತಿಬಿಟ್ಟಿರುವ ಬಗ್ಗೆಯು ತಿಳಿದುಬರುತ್ತದೆ. ಅಲ್ಲದೆ ಶ್ರೀ ಗೋವಿಮಸೆಟ್ಟಿ ಎಂಬುವವನು ಈ ಬಸದಿಯನ್ನು ದುರಸ್ತಿಗೊಳಿಸಿದ ಬಗ್ಗೆಯೂ ತಿಳಿದುಬರುತ್ತಿದೆ. ಮೇಲಿನ ಎಲ್ಲಾ ಅಂಶ ಗಳಿಂದ ನಿಸ್ಸಂಶಯವಾಗಿ ಇದು ಒಂದು 'ಜೈನ ಬಸದಿ' ಎಂದು ದೃಢಪಡುತ್ತದೆ.

ಈ ಜೈನ ಬಸದಿಯಿಂದ ಪೂರ್ವ ದಿಕ್ಕಿಗೆ ಸು. ೨೫೦ಮೀ. ದೂರದಲ್ಲಿ ಇನ್ನೊಂದು ಜೈನ ಬಸದಿ ಇದ್ದು, ಅದು ಈ ಮೊದಲೇ ಪೂರ್ಣ ಹಾಳಾಗಿದೆ. ನೆಲಮಟ್ಟ ದಲ್ಲಿ ಅದರ ನೆಲಗಟ್ಟು ಮಾತ್ರ ಈಗ ಕಾಣಬರುತ್ತದೆ. ಈ ಸ್ಥಳದಲ್ಲಿ (ನೆಲಗಟ್ಟಿನ ಮೇಲೆ) ನಿಂತ ಭಂಗಿಯಲ್ಲಿರುವ ಸುಮಾರು ೪ ಅಡಿ ಎತ್ತರದ ಬಿಳಿ ಶಿಲೆಯಲ್ಲಿ ನಿರ್ಮಿ ಸಿರುವ ತೀರ್ಥಂಕರಮೂರ್ತಿ ಬಯಲಿನಲ್ಲಿ ನಿಂತಿದೆ. ಕೆಲವೇ ದಿನಗಳಲ್ಲಿ ಇದು ಕೂಡ ಕಣ್ಮರೆಯಾಗಬಹುದು.

---

1 ಶಾಸನ SII-IX-ii-618 ಕುರುಗೋಡು ಬಳ್ಳಾರಿ ತಾಲ್ಲೂಕು

ಹೀಗೆ ಮೇಲಿನ ವಿಷಯದ ಪರಿಶೀಲನೆಯಿಂದ ಶೈವ ಮತ ಪ್ರಧಾನವಾದ ಈ ಪ್ರದೇಶದಲ್ಲಿ ಜೈನ ಧರ್ಮವೂ ಮೊದಲು ಅಸ್ತಿತ್ವದಲ್ಲಿದ್ದ ಬಗ್ಗೆ ತಿಳಿದುಬರುತ್ತಿದೆ. ಆದರೆ ಈಗ ಕುರುಗೋಡಿನ ಸುತ್ತಲಿನ ಪ್ರದೇಶದಲ್ಲಿ ಜೈನ ಧರ್ಮದ ಒಂದು ಕುಟುಂಬವೂ ಕಂಡುಬರುತ್ತಿಲ್ಲ. ಹಾಗಾದರೆ ಇಲ್ಲಿದ್ದ ಜೈನಧರ್ಮೀಯರು ಏನಾದರು ? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಬಗ್ಗೆ ಸರಿಯಾದ ಪುರಾವೆ ದೊರೆಯುತ್ತಿಲ್ಲ. ಹಾಗಾದರೆ ಇಲ್ಲಿದ್ದ ಜೈನರು ಇಲ್ಲಿಂದ ಬೇರೆ ಕಡೆಗೆ ವಲಸೆ ಹೋದರೇ? ಎಂಬ ಪ್ರಶ್ನೆಯೂ ಬರುತ್ತದೆ. ಇತರ ಜನಾಂಗದವರೆಲ್ಲರೂ (ಇತರ ಧರ್ಮೀಯರು) ಆ ಕಾಲದಿಂದ ಇಂದಿನವರೆಗೆ ನಿರಂತರವಾಗಿ ಯಾವುದೇ ತೊಂದರೆಯಿಲ್ಲದೆ ಈ ಸ್ಥಳದಲ್ಲಿಯೇ (ಊರಿನಲ್ಲಿಯೇ) ವಾಸನಾಗಿರಲು, ಜೈನರು ಮಾತ್ರ ಬೇರೆ ಕಡೆಗೆ ವಲಸೆ ಹೋಗಲು ಕಾರಣವೇನು ? ಆದ್ದರಿಂದ ಅವರು ಬೇರೆಡೆಗೆ ವಲಸೆ ಹೋಗಿರುವ ಸಾಧ್ಯತೆ ಕಂಡುಬರುತ್ತಿಲ್ಲ. ಹಾಗಾದರೆ ಈ ಕೆಳಗಿನ ಇತರ ಕಾರಣಗಳನ್ನು ಪರಿಶೀಲಿಸೋಣ.

೧. ಬಹುಶಃ ಜೈನ್ಯಧರ್ಮ ಪ್ರಾಬಲ್ಯ ಕಳೆದು-ಕೊಳ್ಳುತ್ತಿದ್ದರಿಂದಲೂ,

೨. ಅದರ ಕಟ್ಟುನಿಟ್ಟಾದ ಆಚರಣೆ ವಿಧಿವಿಧಾನಗಳಿಂದ ದಣಿದುದರಿಂದಲೋ

೩. ಈ ಪ್ರದೇಶದಲ್ಲಿ ರಾಜ್ಯಭಾರ ಮಾಡುತ್ತಿದ್ದ ವೀರಶೈವ-ಅರಸರ ಪ್ರೋತ್ಸಾಹದಿಂದಲೋ ಅಥವಾ ಸಂಸ್ಕೃತಿ ಒತ್ತಡದಿಂದಲೋ ಮೊದಲು ಜಿನ ಧರ್ಮಿಯನಾಗಿದ್ದ ಬಿಟ್ಟಿದೇವ, ಶ್ರೀರಾಮಾನುಜಾಚಾರ್ಯರ ಪ್ರಭಾವಕ್ಕೊಳಗಾಗಿ ವೈಷ್ಣವ ಧರ್ಮವನ್ನುಸ್ವೀಕರಿಸಿ' ವಿಷ್ಣುವರ್ಧನ' ನಾದಂತೆ ಇಲ್ಲಿದ್ದ ಜೈನರು, ವೀರಶೈವ ಮತವನ್ನು ಸ್ವೀಕರಿಸಿರಬಹುದೆಂದು ತೋರುತ್ತದೆ.

2 ಕುರುಗೋಡು ಕೈಫಿಯತು (ಮೆಕೆಂಜಿ ಸಂಗ್ರಹ)

ಡಾ|| ಕೃಷ್ಣ ಕೊಲ್ಹಾರಕುಲಕರ್ಣಿ

# 'ವಿಜಾಪುರ ಆದಿಲಶಾಹಿ ಕಾಲದ (ಕ್ರಿ.ಶ. ೧೪೮೯-೧೬೮೬) ಹಿಂದು-ಮುಸ್ಲಿಮರ ಸಂಬಂಧ' ಆಕರಗಳು, ಮತ್ತು ಅಧ್ಯಯನ

ಕಳೆದ ಒಂದು ನೂರು ವರುಷಗಳಲ್ಲಿ ವಿಜಾಪುರ ಇತಿಹಾಸ, ಕಲೆ ಹಾಗು ವಾಸ್ತು ಶಿಲ್ಪಗಳ ಕುರಿತು ಹಲವಾರು ದೇಶ-ವಿದೇಶೀಯ ಲೇಖಕರು ಬರೆದಿದ್ದಾರೆ. ಅವರಲ್ಲಿ ಫರ್ಗ್ಯೂಸನ್, ಕಸಿನ್ಸ್, ಮೆಡೋಸ ಟೇಲರ್ ಮೊದಲಾದ ಆಂಗ್ಲ ಲೇಖಕರಿದ್ದರೆ, ಭಾರತೀಯರಾದ ಡಾ|| ಪಿ. ಎಂ. ಜೋಶಿ, ಡಾ|| ಭಗವತ್‌ದಯಾಲ ವರ್ಮಾ, ಡಾ|| ಡಿ. ಸಿ. ವರ್ಮಾ, ಡಾ|| ಎಂ.ಎ. ನಯೀಮರು ಪ್ರಮುಖರು. ಡಾ. ಎ.ಆರ್. ಕುಲಕರ್ಣಿ, ಡಾ|| ಜಿ.ಟಿ. ಕುಲಕರ್ಣಿ, ಡಾ|| ಮಾಟೆ ಮುಂತಾದವರು ಕೂಡ ಈ ದಿಶೆಯಲ್ಲಿ ಕೆಲಸ ಮಾಡಿದ್ದಾರೆ. ಅಮೇರಿಕೆಯ ಡಾ|| ರಿಚರ್ಡ ಈಟನ್ ಎಂಬವರು ವಿಜಾಪುರದ ಸೂಫಿ ಸಂತರ ಕುರಿತಾಗಿಯೇದೀರ್ಘವಾಗಿ ಅಭ್ಯಸಿಸಿ ಬರೆದಿದ್ದಾರೆ ಇವುಗಳಲ್ಲಿ ವಿಶೇಷವಾಗಿ ಚಾರಿತ್ರಿಕ ಘಟನೆಗಳು, ರಾಜಕೀಯ ಸಂಬಂಧ, ಕಲೆ, ಸಂಗೀತ, ವಾಸ್ತುಶಿಲ್ಪ ಹಾಗು ಕೊನೆಯದಾದ ಸೂಫಿಸಂತರ ಗ್ರಂಥದಲ್ಲಿ ಒಂದು ನಿರ್ದಿಷ್ಟ ಪಂಥದ ವಿವರವಾದ ಅಭ್ಯಾಸ ಆಗಿದೆ. ಆದರೆ ಆದಿಲಶಾಹಿ ಕಾಲದ ಜನ ಸಾಮಾನ್ಯ ಪರಿಸ್ಥಿತಿ, ವಿವಿಧ ಮತ-ಧರ್ಮಗಳ ಪರಸ್ಪರ ಸಂಬಂಧ, ವಿಶೇಷ ವಾಗಿ ಹಿಂದು-ಮುಸ್ಲಿಮರ ಸಂಬಂಧದ ಕುರಿತು ವಿವರ ವಾದ ಅಭ್ಯಾಸ ಇನ್ನೂ ಆಗಿಲ್ಲ ಆದರ ಅಗತ್ಯ ಇದೆ. ಅಂಥದೊಂದು ಅಭ್ಯಾಸದ ಪ್ರಮುಖ ಅಂಶಗಳನ್ನು ಈ ರೀತಿಯಾಗಿ ಗುರುತಿಸಬಹುದಾಗಿದೆ.

೧. ಹಿಂದು-ಮುಸ್ಲಿಮರ ಮಧ್ಯದ ಸಾಮಾಜಿಕ ಸಂಬಂಧ.

೨. ಹಿಂದು ಸಾಧು-ಸಂತರು ಹಾಗು ಮುಸ್ಲಿಮ ಸೂಫಿಗಳ ಮಧ್ಯದ ಆಂತರಿಕ ಪ್ರಕ್ರಿಯೆಗಳು.

೩. ಆಡಳಿತದಲ್ಲಿ ಹಿಂದುಗಳು ಹಾಗು ಧಾರ್ಮಿಕ ಮುಖಂಡರು. ವಿಶೇಷವಾಗಿ ಆಸ್ಥಾನದ ಮರಾಠಾ ಸರದಾರರು, ಅಲ್ಪಸಂಖ್ಯಾತರು, ಉದಾಹರಣೆಗೆ ಬ್ರಾಹ್ಮಣರು, ಬೇಡರು, ಕುರುಬರು ಇತ್ಯಾದಿ.

೪. ಆಡಳಿತದಲ್ಲಿ ಆದಿಲ್‌ಶಾಹಿಗಳ ಮುಸ್ಲಿಮ್‌ಪರ ವಾದ ಧೋರಣೆ ಹಾಗು ಸಮಾಜದ ಮೇಲೆ ಅದರ ಪರಿಣಾಮ.

೫. ಅವರಂತೆ ಆಡಳಿತದಲ್ಲಿ ಹಿಂದು ಪರವಾದ ಧೋರಣೆ ಹಾಗು ಮುಸ್ಲಿಂಮರ ಮೇಲೆ ಪರಿಣಾಮ. ವಿಶೇಷವಾಗಿ ಜಗದ್ಗುರು ಎನಿಸಿಕೊಂಡ ೨ನೆಯ ಇಬ್ರಾಹಿಮ ಆದಿಲ್‌ಶಹನ ಆಡಳಿತ.

೬ ಈ ಅವಧಿಯಲ್ಲಿ ವಿಶೇಷವಾಗಿ ಪ್ರಭಾವ ಬೀರಿದ ಕೆಲವು ಹಿಂದು ಮತ ಪಂಥಗಳು ಉದಾ-ನಾಥ, ರಾಮದಾಸಿ, ಅವಧೂತ ಇತ್ಯಾದಿ.

೭. ವಿವಿಧ ಭಾಷೆಗಳ ಬಳಕೆಯಿಂದಾಗಿ 'ದಖಣಿ'

---

* ನಿವೃತ್ತ, ಅಂಚೆ ಇಲಾಖಾ ಅಧಿಕಾರಿ, ಕೊಲ್ಹಾರ, ೫೮೬೨೧೦, ಬಿಜಾಪುರ ಜಿಲ್ಲೆ.

ಎಂಬ ಹೊಸ ಭಾಷೆಯ ಉದಯ, ಪ್ರಚಲಿತ ಭಾಷೆಗಳ ಮೇಲೆ ಆದರ ಪ್ರಭಾವ.

೮. ಒತ್ತಾಯದ ಮುಸ್ಲಿಮ್ ಧರ್ಮಾಂತರಗಳು, ಘಟನೆಗಳ ಸಂದರ್ಭ, ಸ್ಥಳ-ಕಾಲ-ನಾಮ ನಿರ್ದೇಶನ, ಧರ್ಮಾಂತರದ ಕಾರಣ-ಪ್ರತಿಫಲ ನೀಡಲಾಯಿತೆ ? ವ್ಯಕ್ತಿಗತ-ಸಾಮೂಹಿಕ ಧರ್ಮಾಂತರಗಳು.

೯. ಹಿಂದು ಧಾರ್ಮಿಕ ಕ್ಷೇತ್ರ, ಮಠ-ಮಂದಿರಗಳ ನಾಶ, ನಾಶಗೊಂಡ ಖ್ಯಾತ ದೇವಾಲಯಗಳು-ದೇವತೆಗಳು.

೧೦. ಸುಲ್ತಾನರ ರಾಣೀವಾಸದಲ್ಲಿ ಒತ್ತಾಯದಿಂದ ಸೇರಿಸಿದ ಹಿಂದು ಮಹಿಳೆಯರು.

೧೧. ಲೈಂಗಿಕ ತೃಪ್ತಿಗಾಗಿ ಸುಲ್ತಾನರು-ರಾಣೀವಾಸದವರು ಬಳಸಿಕೊಂಡ ಹಿಂದು ತರುಣರು.

೧೨. ಹಿಂದು ಮಠ-ಮಂದಿರಗಳ ರೂಪಾಂತರ ಮಸೀದಿ ಮದರಸಾ.

ಹೀಗೆ ಗುರುತಿಸಲಾದ ಆಂಶಗಳ ಅಭ್ಯಾಸಕ್ಕೆ ದೊರೆಯಬಹುದಾದ ಆಕರಗಳನ್ನು ಹೀಗೆ ಸವಿಂಗಡಿಬಹುದು.

೧. ಮುದ್ರಿತ ಸಾಧನಗಳು

ಅ) ಶಾಸನಗಳು, ತಾಮ್ರಪಟಗಳು, ಫರ್ಮಾನುಗಳು, ಸನದುಗಳು.

ಬ) ೧೯ನೆಯ ಶತಮಾನದಲ್ಲಿ ಪ್ರಕಟಿಸಿದ ಮುಂಬಯಿ ಸರಕಾರದ ವರದಿಗಳು.

ಕ) ವಿಜಯನಗರ, ಮೊಘಲ್, ಬಹಮನಿ, ಶಾಹಿ ಹಾಗೂ ಮರಾಠರ ಇತಿಹಾಸದಲ್ಲಿ ಬರುವ ವಿಜಾಪುರ ಆದಿಲ್‌ಶಾಹಿಗಳ ಸಂದರ್ಭ ಉದಾ : ಬಖೈರುಗಳು, ಕೈಫಿಯತ್ತುಗಳು. ಮೊಘಲ್ ದೊರೆಗಳ ಆತ್ಮಚರಿತ್ರೆ, ಚರಿತ್ರೆಗಳು.

ಡ) ಸ್ಥಳೀಯ ಭಾಷೆಗಳಾದ ಕನ್ನಡ-ಮರಾಠಿಯಲ್ಲಿ ಲಭ್ಯವಿದ್ದ ಪುಸ್ತಕಗಳು-ಲೇಖನಗಳು.

೨. ಇತರ ಸಾಧನಗಳು

ಅ) ಮನೆತನಗಳ ಇತಿಹಾಸ, ವಿಶೇಷವಾಗಿ ಸಂಸ್ಥಾನಿಕರು, ಜಹಗೀರದಾರರು, ದೇಸಾಯಿ, ದೇಶಪಾಂಡೆ, ದೇಶಮುಖ, ಪೀರಜಾದೆ-ಮನೆತನದ ಕಾಗದ ಪತ್ರಗಳು.

ಬ) ಭಾರತ ಇತಿಹಾಸ ಸಂಶೋಧಕ ಮಂಡಳ ಪುಣೆ, ಕರ್ನಾಟಕ ಇತಿಹಾಸ ಸಂಶೋಧಕ ಮಂಡಳ ಧಾರವಾಡ ಹಾಗೂ ತಂಜಾವೂರು, ಧುಳೆ, ಜಯಪುರ ಗ್ರಂಥಾಲಯಗಳಲ್ಲಿ ಲಭ್ಯವಿದ್ದ ಮಾಹಿತಿ.

ಕ) ಪುಣೆ, ಮುಂಬಯಿ, ಬೆಂಗಳೂರು, ಮೈಸೂರು, ದೆಹಲಿ, ಕಲಕತ್ತಾ ಹಾಗೂ ಹೈದರಾಬಾದ್ ಪತ್ರಾಗಾರಗಳಲ್ಲಿ ಲಭ್ಯವಿದ್ದ ಮಾಹಿತಿ.

ಡ) ಗ್ಯಾಜಿಟಿಯರ್‌ಗಳ ಅಭ್ಯಾಸ.

೩ ಪ್ರಕಟಿತ ಪರ್ಶಿಯನ್ ಸಮಕಾಲೀನ ಸಾಹಿತ್ಯ ಕೃತಿಗಳಲ್ಲಿ ಬರುವ ಸಂದರ್ಭಗಳು, ಉದಾ-ಇಬ್ರಾಹಿಮ್‌ನಾಮಾ, ಮಹಮೂದನಾಮಾ, ಅಲಿನಾಮಾ, ಸಿಕಂದರನಾಮಾ, ಕಿತಾಬ-ಇ-ನೌರಸ್, ಖುಶನಾಮಾ, ಮನಲಗನ ಇತ್ಯಾದಿ.

೪ ಸ್ಥಳಿಯ ಭಾಷೆಗಳಲ್ಲಿ ಲಭ್ಯವಿದ್ದ ಪ್ರಕಟಿತ-ಅಪ್ರಕಟಿತ ಸಾಹಿತ್ಯಿಕ ಕೃತಿಗಳು.

ಅ) ಮಧ್ಯಕಾಲೀನ ಯುಗದ ಸಾಧು-ಸಂತರ ಪದ ಪದ್ಯಗಳು: ಕನ್ನಡ-ಮರಾಠಿ-ಹಿಂದಿ.

ಬ) ಇತರ ಕೃತಿಗಳು.

೫) ಸಂಗ್ರಹಿಸಬಹುದಾದ ಜಾನಪದ ಸಾಹಿತ್ಯ

ವಿಜಾಪುರ ಅದರ ಸುತ್ತ-ಮುತ್ತ ಹಾಗು ಅದರ ಪ್ರಭಾವವಿದ್ದ ಮುಸ್ಲಿಮರ ದೈನಂದಿನ ಕಾರ್ಯಕ್ರಮ ಹಾಗು ವಿಶಿಷ್ಟ ಸಂದರ್ಭಗಳಲ್ಲಿ ಹಾಡುವ ದಖಿಣಿ-ಉರ್ದು ಭಾಷೆಯ ಜಾನಪದ ಗೀತೆಗಳು. ಚಕ್ಕೀನಾಮಾ (ಬೀಸುವ ಕಲ್ಲಿನ ಪದ), ಚರಖಾನಾಮಾ (ನೂಲುವ ಪದ) ಸುಹಾಗ ನಾಮಾ (ಸೋಬಾನಪದ), ಶಾದಿನಾಮಾ (ಮದುವೆ ಹಾಡು) ಲೋರಿನಾಮಾ ಇತ್ಯಾದಿಗಳ ಸಂಗ್ರಹ ಹಾಗು ಅಭ್ಯಾಸ.

೬ ಸ್ಥಳನಾಮಗಳ ಅಧ್ಯಯನ

ವಿಜಾಪುರ ಹಾಗು ಅದರ ಸುತ್ತ ಮುತ್ತ ಮುಸ್ಲಿಮ ಪ್ರಭಾವದ ಹೆಸರುಗಳನ್ನು ಸೂಚಿಸುವ ಅನೇಕ ನಗರ ಗ್ರಾಮಗಳಿವೆ. ಉದಾ–ಮಹ್ಮದ ಪುರ, ಚಾಂದಪುರ, ಖತೀಜಾಪುರ, ತಾಜಪುರ, ಇಬ್ರಾಹಿಮಪುರ, ರಂಭಾಪುರ ಇತ್ಯಾದಿ ಸ್ಥಳ ನಾಮ ಮೂಲಗಳ ಅಭ್ಯಾಸ.

೭ ಬಾಯಿ ಮಾತಿನ ಇತಿಹಾಸ ಹಾಗು ದಂತಕಥೆಗಳು–ವಿಜಾಪುರ, ಗುಲಬರ್ಗಾ, ಹೈದರಾಬಾದ ಮುಂತಾದ ನಗರಗಳು, ಕೆಲವು ಹಳ್ಳಿಗಳಲ್ಲಿ ವಾಸಿಸುತ್ತಿರುವ ಹಿರಿಯ ಮನೆತನಗಳ ವೃದ್ಧರನ್ನು ಸಂದರ್ಶಿಸಿ ಐತಿಹಾಸಿಕ ಹಾಗು ಸಾಂಪ್ರದಾಯಿಕ ಆಖ್ಯಾಯಿಕೆಗಳನ್ನು ಪಡೆಯುವುದು.

ಹೀಗೆ ಸಂಗ್ರಹಿಸಿದ ಸಾಧನಗಳನ್ನು ಉದ್ದೇಶಿತ ವಿಷಯದ ಅಭ್ಯಾಸಕ್ಕೆ ಬಳಸಿಕೊಂಡಾಗ ಕೆಳಗಿನ ಕೆಲವು ಸಂಗತಿಗಳನ್ನು ಗಮನಿಸಬಹುದಾಗಿದೆ.

ಅ) ಸನದುಗಳು, ಫರ್ಮಾನುಗಳು, ಹಸ್ತಪ್ರತಿಗಳು ಹಾಗು ಅಭ್ಯಸಿಸದೆ ಇದ್ದ ವರದಿಗಳ ಅಧ್ಯಯನದಿಂದ ಆದಿಲಶಾಹಿಕಾಲದ ಇತಿಹಾಸಕ್ಕೆ ಸಂಬಂಧಪಟ್ಟ ಕೆಲವು ಹೊಸ ಐತಿಹಾಸಿಕ ಸಂಗತಿಗಳ ಹೊರ ಬೀಳುವಿಕೆ.

ಬ) ಈ ವರೆಗೆ ಗಮನ ಹರಿಸದ ಕನ್ನಡ, ಮರಾಠಿ, ಪರ್ಶಿಯನ್, ಸಂಸ್ಕೃತ ಹಾಗು ದಖಣಿ ಸಾಹಿತ್ಯಕ ಕೃತಿಗಳಲ್ಲಿರುವ ಪ್ರಮುಖ ಐತಿಹಾಸಿಕ ಮೂಲಗಳನ್ನು ಗುರುತಿಸುವುದು.

ಕ) ಈ ಹಿಂದೆ ಚರಿತ್ರೆಗಳಲ್ಲಿ ಸಾಧಾರಣವಾಗಿ ಕಂಡು ಬರುವ ರಾಜಕೀಯ ಕಲೆ, ವಾಸ್ತುಶಿಲ್ಪದ ಇತಿಹಾಸದ ಹೊರತಾಗಿ ಪ್ರಾದೇಶಿಕ ಭಾಷೆಗಳಲ್ಲಿ ದೊರೆಯುವ ಶ್ರೀಮಂತ ಮೂಲ ಸಾಧನಗಳ ಬಳಕೆ ಹಾಗು ಅದರಿಂದ ವಿವಿಧ ವಿಷಯಗಳ ಅಭ್ಯಾಸ.

ಒಟ್ಟಾರೆಯ ಅಭ್ಯಾಸದಿಂದ ಆದಿಲಶಾಹಿ ಕಾಲದ ಸಾಮಾಜಿಕ ಪರಿಸ್ಥಿತಿ ಅಥವ ಸಮಕಾಲೀನ ವಿವಿಧ ಮತ ಧರ್ಮ ಸಂಪ್ರದಾಯಗಳ ಮಧ್ಯದ ಸಂಬಂಧವನ್ನು ಗುರುತಿಸಬಹುದು. ಅದು ಇಂದಿನ ಕಾಲದ ಪರಿಸ್ಥಿತಿಗೆ ಸಂಗತವೂ ಆಗುವುದಲ್ಲದೆ ಈ ಅಭ್ಯಾಸದಿಂದ ಹೊರ ಬೀಳುವ ಕೆಲವು ಸಂಗತಿಗಳು ಪ್ರಸ್ತುತ ವಿವಿಧ ಸಮಾಜಗಳ ಸಾಮರಸ್ಯಕ್ಕೆ ಪೋಷಕವೂ ಆಗಬಹುದು.

ಡಾ|| ಕೆಳದಿ ವೆಂಕಟೇಶ್ ಜೋಯಿಸ್*

# ಕೆಳದಿ ಇತಿಹಾಸದ ಅವಶೇಷಗಳ ರಕ್ಷಣೆ ಮತ್ತು ಸೂಚಿಯ ಅಗತ್ಯತೆ

ಕೆಳದಿ, ಇಕ್ಕೇರಿ, ನಗರ, ಕವಲೆದುರ್ಗ, ಶೃಂಗೇರಿ, ಕೊಲ್ಲೂರು, ಬಸ್ರೂರು, ಆನಂದಪುರ, ಉಡುಪಿ ಮೊದಲಾದ ಸ್ಥಳಗಳ ಜೊತೆಗೆ ಕರ್ನಾಟಕದ ಒಂಭತ್ತು ಜಿಲ್ಲೆಗಳಲ್ಲಿ ಕೆಳದಿ ಇತಿಹಾಸದ ಸ್ಮಾರಕಗಳು, ದೇವಾಲಯ, ಅರಮನೆ, ಕೆರೆ, ಕೊಳ, ಮಠ, ಸೇತುವೆ, ಸರಸ್ಸುಗಳು ಸಾಕಷ್ಟು ಪ್ರಮಾಣದಲ್ಲಿ ಉಪಲಬ್ಧವಿವೆ. ಕೆಳದಿಯ ಶಿಲ್ಪಕಲೆ ವಿಶಿಷ್ಟವಾಗಿತ್ತು. ಇದನ್ನು ಪ್ರಸಿದ್ಧ ವಿದ್ವಾಂಸರಾದ ಲೂಯೀಸ್ ರೈಸರೇ 'ಇಕ್ಕೇರಿ ಸ್ಕೂಲ್ ಆಫ್ ಆರ್ಕಿಟೆಕ್ಚರ್' ಎಂದು ಕರೆದಿದ್ದಾರೆ. ಇಂತಹ ಸ್ಮಾರಕಗಳು ಜಿಲ್ಲೆಯಲ್ಲಿಯ ಶರಾವತಿ ಯೋಜನೆಯಲ್ಲಿ ಮುಳುಗಡೆಯಾಗಿವೆ. ಭಾರತ ಸರಕಾರದ ಪುರಾತತ್ವ ಇಲಾಖೆಯ ವತಿಯಿಂದ ಇವುಗಳ ಸರ್ವೇಕ್ಷಣೆ ನಡೆಸಿ ಸರಕಾರಕ್ಕೆ ವರದಿ ಸಲ್ಲಿಸಿಯಾಗಿದೆ.[1] ಅದೇ ರೀತಿ ವರಾಹಿ ಯೋಜನೆಯಲ್ಲಿ ಮುಳುಗಡೆಯಾಗಿರುವ ಅವಶೇಷಗಳ ಸಮೀಕ್ಷೆಯ ವರದಿಯೂ ಸರ್ಕಾರಕ್ಕೆ ಸಲ್ಲಿಸಲ್ಪಟ್ಟಿದೆ.[2] ಈ ವರದಿಗಳು ಸಲ್ಲಿಸಲಾಗಿದ್ದು ಹಲವು ವರ್ಷಗಳೇ ಕಳೆದಿದ್ದರೂ ಏನೂ ಪ್ರಯೋಜನವಾಗಿಲ್ಲ. ಈ ವರದಿಗಳಿಂದ ಸಾಕಷ್ಟು ಸ್ಮಾರಕಗಳು ನಾಶವಾಗಿರುವುದು ವ್ಯಕ್ತವಾಗುತ್ತದೆ.

ಕೆಳದಿ ಇತಿಹಾಸದ ಸ್ಮಾರಕಗಳು ಜೀರ್ಣೋದ್ಧಾರದ ನೆಪದಲ್ಲಿ ಮಾರ್ಪಾಡಾಗುತ್ತಿರುವುದನ್ನು ಈಚೆಗೆ ಕೊಲ್ಲೂರು ಮತ್ತು ಇತರ ಕಡೆಗಳಲ್ಲಿ ಗಮನಿಸಬಹುದು. ಕೊಲ್ಲೂರಿನ ದೇವಾಲಯದ ಪ್ರದಕ್ಷಿಣಾ ಪಥದ ನೆಲಹಾಸಿನ ಮೇಲಿದ್ದ ರಾಣಿ ಚೆನ್ನಮ್ಮಾಜಿಯ ಉಬ್ಬು ಚಿತ್ರ ಹಾಗೂ ಬರಹದ ಮೇಲೆ ಅಮೃತಶಿಲೆಯ ಮೇಲುಹಾಸು ಹಾಕಲಾಗಿದೆ.[3] ಹಾಗೆಯೇ ಸುಬ್ರಹ್ಮಣ್ಯದ ಶ್ರೀ ಸುಬ್ರಹ್ಮಣ್ಯ ದೇವಾಲಯದಲ್ಲಿ ಕೆಳದಿ ವೀರಭದ್ರನಾಯಕನ ಶಾಸನವಿರುವ ಶಿಲ್ಪವೊಂದು ಮೂಲೆಗುಂಪಾಗಿರುವುದು ಖೇದವೆನಿಸುತ್ತದೆ. ಕೆಳದಿ, ಇಕ್ಕೇರಿ ದೇವಾಲಯಗಳಲ್ಲಿರುವ ಭಗ್ನ ಶಿಲ್ಪಗಳು, ನಗರದಲ್ಲಿರುವ ಕೆಳದಿ ಅರಸರ ಒಂಭತ್ತು ಸಮಾಧಿಗಳು, ಸಮಾಧಿ ಕಲ್ಲುಗಳು,[4] ತ್ರಿಮತಸ್ಥ ಸಮಾಧಿಗಳು,[5]

---

* ಕ್ಯುರೇಟರ್, ಕೆಳದಿ ವಸ್ತು ಸಂಗ್ರಹಾಲಯ, ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

1 ಡಾ|| ನರಸಿಂಹಯ್ಯನವರು ಈ ಸರ್ವೇಕ್ಷಣೆಯನ್ನು ನಡೆಸಿ ಅವರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುವರು.

2 ಡಾ|| ಡಿ. ದೇವರಾಜ್‌ರವರು ಸರ್ವೇಕ್ಷಣೆ ನಡೆಸಿ ಸರ್ಕಾರಕ್ಕೆ ವರದಿ ಸಲ್ಲಿಸಿದ್ದಾರೆ.

3 ಕೆಳದಿ ಅರಸರ ಶಾಸನ ಸಂಪುಟ, ಶಾಸನದ ಸಂಖ್ಯೆ ೨೦೭, ಪು. ೩೨೮.

4 ಕೆಳದಿ ಅರಸರ ಮೂರನೇ ರಾಜ್ಯಧಾನಿ ನಗರದಲ್ಲಿ ಕೆಳದಿ ಅರಸರ ಸಮಾಧಿಗಳು, ಸಮಾಧಿ ಕಲ್ಲುಗಳು ಕೆಳದಿ ನೃಪವಿಜಯದ ಆಧಾರದಿಂದ ಗುರುತಿಸಲಾಗಿದೆ. ಅವು ಅವನತಿಯ ಹಂತದಲ್ಲಿವೆ.

5 ನಗರದ ಬಸವನ ಬ್ಯಾಣದ ಸಮೀಪ ಹಿಂದೂ, ಮುಸ್ಲಿಂ, ಕ್ರಿಶ್ಚಿಯನ್ ಮೂರು ಜಾತಿಗಳ ಸಮಾಧಿಗಳು ಒಂದೇ ಕಡೆ ಇವೆ.

ಕೊಪ್ಪಲುಮಠ ಅಂದಿನ ಬಂದಿಖಾನೆ,[6] ಹಿರೇಮಠದ ಅವಶೇಷಗಳು, ಸೇತುವೆ, ಕಲ್ಲುಕೋಟೆಗಳು ಮೊದಲಾದವುಗಳಿಗೆ ಸರಿಯಾದ ರಕ್ಷಣೆ ಇಲ್ಲದೆ, ಮಾರ್ಗಸೂಚಿಗಳಿಲ್ಲದೆ ಇತಿಹಾಸದಿಂದ ಕಣ್ಮರೆಯಾಗಲು ಮಾನವನ ಆಕ್ರಮಣಕ್ಕೆ ಬಲಿಯಾಗುತ್ತಿವೆ.ರಾಣಿ ಚೆನ್ನಮ್ಮಾಜಿಯು ರಕ್ಷಣೆ ಕೊಟ್ಟ ಕೃತಜ್ಞತೆಗಾಗಿ ರಾಜಾರಾಮನು ನಿರ್ಮಿಸಿದ ಪಾರ್ವತಿ ದೇವಾಲಯ ಹಾಳಾಗುತ್ತಿದೆ.[7] ಕೆಳದಿ ಕಾಲದಲ್ಲಿ ನಗರದಲ್ಲಿ ಇದ್ದ ೩೬೫ ದೇವಾಲಯಗಳಲ್ಲಿ ಸುಮಾರು ೬೫ ದೇವಾಲಯಗಳು ಈಗಲೂ ನೋಡಲು ದೊರೆಯುತ್ತಿದ್ದು ಅವು ಸರಿಯಾದ ರಕ್ಷಣೆ ಇಲ್ಲದೆ ಅವನತಿಯ ಹಂತ ತಲುಪಿವೆ.

ಕೆಳದಿಯ ಕಾಲದಲ್ಲಿ ಟಂಕಸಾಲೆಯಿದ್ದ ಸ್ಥಳವನ್ನು ಚಿನ್ನ ಹುಡುಕುವ ನೆವದಲ್ಲಿ ಅಗೆದು ಹಾಕಲಾಗುತ್ತಿದೆ. ಕೆಳದಿ ಅರಸರ ನಾಲ್ಕನೇ ರಾಜಧಾನಿ ಕವಲೇದುರ್ಗವಂತೂ ಪೂರ್ಣ ಹಾಳಾಗಿದೆ. ಸರ್ವಧರ್ಮ ಸಮನ್ವಯತೆಗೆ ಸಾಕ್ಷಿಯಾಗಿ ಉಳಿದಿದ್ದ ಮಸೀದಿ ಈಗ ಅವಶೇಷವಾಗಿದೆ. ಸಾಗರದ ಸಮೀಪ ಆನಂದಪುರದ ಹತ್ತಿರದ ಮಲಂದೂರು ಎಂಬಲ್ಲಿದ್ದ ಚಂಪಕಸರಸ್ ಈಗ ಆತ್ಮಹತ್ಯಾ ತಾಣವಾಗಿದೆ. ಅದಕ್ಕೆ ಹತ್ತಿರವೇ ಇದ್ದ ಮಲಹಗೊಪ್ಪದ ತಾವರೆಗೆರೆಗೆ ಹೊಂದಿ ಕಟ್ಟಿಸಿದ ಮಸೀದಿಯ ಅವಶೇಷವೂ ಇಲ್ಲವಾಗಿದೆ.

ಇನ್ನು ಕೆಳದಿ ಕಾಲದಲ್ಲಿ ಸ್ಥಾಪಿತವಾದ ಅಗ್ರಹಾರಗಳ ಅವಶೇಷಗಳಂತೂ ಸಾಕಷ್ಟು ದೊರೆಯುತ್ತದೆ. ಅವುಗಳಲ್ಲಿ ತೀರ್ಥಹಳ್ಳಿ ಸಮೀಪದ ಬೊಮ್ಮರಸಯ್ಯನ ಅಗ್ರಹಾರ, ಭದ್ರರಾಜಪುರ ಅಗ್ರಹಾರಗಳಲ್ಲಿ ಸಾಗರ, ಕೋಣಂದೂರು, ಗಾಜನೂರು ಸಮೀಪದ ಅಗ್ರಹಾರಗಳು ಉಲ್ಲೇಖನೀಯ.[8] ಅಲ್ಲಿ ಕೆಳದಿ ಕಾಲದ ಸಾಕಷ್ಟು ಅವಶೇಷಗಳು ದೊರೆಯುತ್ತವೆ. ಜೊತೆಗೆ ಶಿವಪ್ಪನಾಯಕನು ಹಾಸನ ಜಿಲ್ಲೆ ಸಕಲೇಶ್ವರ ಸ್ವಾಮಿ ದೇವಾಲಯಕ್ಕೆ ಭೇಟಿ ಇತ್ತ ಬಗ್ಗೆ, ಕೆಳದಿ ಸಮೀಪದ ಸಂಗಳ ಗ್ರಾಮದಲ್ಲಿದ್ದ ಅವಶೇಷಗಳು (ಇಲ್ಲಿದ್ದ ಎರಡು ಫಿರಂಗಿಗಳನ್ನು ಈಗ ಶಿವಮೊಗ್ಗ ಪೋಲೀಸ್ ಇಲಾಖೆಯ ಎದುರಲ್ಲಿ ಇಡಲಾಗಿದೆ) ಮೈಸೂರಿನ ಜಗನ್ಮೋಹನ ಅರಮನೆಯ ಆವರಣದಲ್ಲಿರುವ ಕೆಳದಿ ರಾಣಿಯ ಕಲ್ಲಿನ ಮಂಚ,[9] ನಗರದ ಶಂಕರಮಠದ ಆವರಣದಲ್ಲಿರುವ ಕಲ್ಲಿನ ಮಂಚ, ಮದ್ರಾಸು ವಸ್ತು ಸಂಗ್ರಹಾಲಯದಲ್ಲಿರುವ ಕೆಳದಿ ಶಿವಪ್ಪನಾಯಕನು ನಿರ್ಮಿಸಿದ್ದೆನ್ನಲಾದ ಮರದ ಬೃಹತ್ ರಥ ಇವುಗಳೂ, ಆ ಕಾಲದಲ್ಲಿ ಕಟ್ಟಲಾದ ಕೆರೆಗಳು. ಉದಾಹರಣೆಗೆ ಶಿವಪ್ಪನಾಯಕ ನಿರ್ಮಿಸಿದ ಮಲಂದೂರಿನಲ್ಲಿರುವ ಕೆರೆ ಇರುವಂತೆ ಸಮೀಪದಲ್ಲಿ ದೊಡ್ಡ ಸಂಕಣ್ಣನಾಯಕನು ನಿರ್ಮಿಸಿದ ಸಂಕಣ್ಣನ ಕೆರೆ, ನರಸಿಂಹರಾಜಪುರದಲ್ಲಿರುವ ಕೆಳದಿ ವೀರಮ್ಮಾಜಿ ಕೆರೆ[10] ಮೊದಲಾದವು ನಾಮಾವಶೇಷವಾಗುತ್ತಿದೆ. ಇವುಗಳೆಲ್ಲವನ್ನು ಛಾಯಾಚಿತ್ರ, ಸಮೀಕ್ಷೆ ಇವುಗಳ ಮೂಲಕ ಸಂಗ್ರಹಿಸಿ ಮುಂದಿನ ಸಂಶೋಧನೆಗೆ ಸೂಚಿಯೊಂದನ್ನು ತಯಾರಿಸುವ ಅಗತ್ಯವಿದೆ.

ಕೆಳದಿ ಅರಸರು ದಾನದತ್ತಿಗಳನ್ನು ಕೊಟ್ಟ ಶಾಸನಗಳು ಮತ್ತು ನಿರೂಪಗಳು ಸುಮಾರು ಆರುನೂರಕ್ಕೂ ಹೆಚ್ಚು ಭಾರತದಾದ್ಯಂತ ಲಭಿಸಿದೆ.

---

6 ನಗರ ಕೋಟೆ ಸುಮಾರು ೨೫ ಮೈಲು ಸುತ್ತಳತೆಯಿಂದ ಕೂಡಿತ್ತು. ಕಾರ್ಗಡಿ ಎಂಬಲ್ಲಿಂದ ಕೋಟೆಯ ಅವಶೇಷಗಳು ಲಭ್ಯವಿವೆ. ಅಂದಿನ ಬಂಧಿಖಾನೆ ೧೬ ಎಕರೆ ವಿಸ್ತೀರ್ಣ ಹೊಂದಿತ್ತು. ಈಗ ಅದನ್ನು ಬಗರ್ ಹುಕುಂ ಮಾಡಲಾಗಿದೆ. ಬಂಧಿಖಾನೆಯ ಎದುರಲ್ಲಿದ್ದ ಕಟ್ಟಡ, ಮದ್ದು ಅರೆಯುವ ಕಲ್ಲುಗಳನ್ನು ನೆಲ ಮಟ್ಟ ಮಾಡುವ ನೆವದಲ್ಲಿ ಡೈನಾಮೈಟ್‌ನಿಂದ ಒಡೆಯಲಾಗಿದೆ.

7 ಕೆಳದಿ ಗುಂಡಾಜೋಯಿಸ್, ಬಿದನೂರಿನ ಕೆಳದಿ ನಾಯಕರು, ಮೈ. ವಿ.ವಿ. ೧೯೮೦, ಪು. ೬೪.

8 ಅದೇ ಶಾಸನ ಸಂ. ೧೨೩, ಪು. ೧೮೦, ೧೨೭ ಪು. ೧೮೬ ಮತ್ತು ನನ್ನ ಅಪ್ರಕಟಿತ ಲೇಖನ.

9 ಮೈಸೂರು ಗೆಜಿಟಿಯರ್, ಭಾಗ ೫, ೧೯೩೦, ಪು. ೧೩೦೩, ಛಾಯಾಚಿತ್ರ.

10 ಕರ್ನಾಟಕ ಗೆಜಿಟಿಯರ್, ಚಿಕ್ಕಮಗಳೂರು ಜಿಲ್ಲೆ.

ಕಾಶಿಯೂ ಸೇರಿದಂತೆ[11] ಇದುವರೆಗೆ ಸುಮಾರು ಮೂನ್ನೂರೆಪ್ಪತ್ತೊಂಭತ್ತು ಶಾಸನಗಳನ್ನು ಕಲೆಹಾಕಿ ಸಂಪುಟವೊಂದನ್ನು ಪ್ರಕಟಿಸಲಾಗಿದೆ. ಇನ್ನೂ ಒಂದು ಸಂಪುಟ ಆಗುವಷ್ಟು ಶಾಸನಗಳು ಶೃಂಗೇರಿ, ಕವಲೇದುರ್ಗ, ದೂರ್ವಾಸಪುರ, ಕಾಸರವಳ್ಳಿ, ಗೋವಾ, ಲಂಡನ್ ಮೊದಲಾದಕಡೆಗಳಲ್ಲಿವೆ. ಈಗಾಗಲೇ ಸಾಕಷ್ಟು ದಾಖಲೆಗಳು ನಾಶವಾಗಿವೆ. ಮದ್ರಾಸು ವಸ್ತು ಸಂಗ್ರಹಾಲಯದಲ್ಲಿರುವ ರಾಣಿ ಚೆನ್ನಮ್ಮಾಜಿಯು ಧರ್ಮಪುರಂ ಮಠಕ್ಕೆ ಕೊಟ್ಟ ಶಾಸನ, ಮತ್ತು ವೀರಭದ್ರನಾಯಕನು ಉಪ್ಪಾರಗೇರಿಗೆ ನೀಡಿದ ಶಾಸನ[12] ಈ ಮೊದಲಾದವು ಪ್ರಮುಖ ಶಾಸನಗಳಾಗಿವೆ. ನಗರದಲ್ಲಿ ಹಲವು ಶಿಲಾ ಶಾಸನಗಳು ಬಚ್ಚಲು ಕಲ್ಲುಗಳಾಗಿ ಬಳಸಲಾಗುತ್ತಿವೆ. ತಾಮ್ರ ಶಾಸನಗಳು ದೋಸೆ ಕಾವಲೆಗಳಾಗಿ[13] ಹಂಡೆಯ ತಳ ಕಟ್ಟುವುದಕ್ಕಾಗಿ ಉಪಯೋಗವಾಗುತ್ತಿವೆ. ಶಾಸನಗಳೆಲ್ಲವೂ ಹೀಗೆ ಕಣ್ಮರೆಯಾಗುವ ಮೊದಲೇ ಅವುಗಳ ಪಾಠಗಳನ್ನು ಹಾಗೂ ಪಡಿಯಚ್ಚುಗಳನ್ನು ಸಂಗ್ರಹಿಸಿ, ಕ್ರೋಡೀಕರಿಸಿ ಪ್ರಕಟಿಸಬೇಕಾಗಿವೆ.

ಒಂದು ಸಣ್ಣ ಸಾಮ್ರಾಜ್ಯವಾದ ಕೆಳದಿಯು ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದುದು ವಿಶೇಷ. ಕೆಳದಿ ಪ್ರಾಂತ್ಯದಲ್ಲಿ ಅಂದಿನ ಚಿನ್ನದ ಇಕ್ಕೇರಿ ವರಹಗಳು ಸಾಕಷ್ಟು ಪ್ರಮಾಣದಲ್ಲಿ ಈಗಲೂ ದೊರೆಯುತ್ತವೆ.[14] ಅವುಗಳ ಛಾಯಾಚಿತ್ರ, ಸೂಚಿಗಳು ತಯಾರಾಗಬೇಕಿದೆ. ಕೆಳದಿ ಕಾಲದಲ್ಲಿ ನಾಣ್ಯಗಳನ್ನು ಅಚ್ಚು ಹಾಕಲು ಬಳಸುತ್ತಿದ್ದ ಟಂಕಸಾಲೆ ಯಂತ್ರವೊಂದು ಈವರೆಗೆ ಹೊಸನಗರದಲ್ಲಿದ್ದುದು ಈಚೆಗೆ ರಾಮನಗರ ವಸ್ತುಸಂಗ್ರಹಾಲಯಕ್ಕೆ ಒಯ್ಯಲಾಗಿವೆ. ಕೆಳದಿ ಕಾಲದ ಆನೆಯ ತೊಟ್ಟಿ (ಕಲ್ಲಿನ ಬಾನಿ) ಗಳೆರಡು ಹೊಸನಗರ ತಾಲೂಕಿನಲ್ಲಿದ್ದುದು ರಾಮನಗರ ಸಂಗ್ರಹಾಲಯಕ್ಕೆ ಕೊಂಡೊಯ್ಯಲಾಗಿದೆ. ಸಾಗರ ತಾಲೂಕಿನ ಹಂದಿಗೋಡು ಸಮೀಪ ರಸ್ತೆಯ ಪಕ್ಕದಲ್ಲಿರುವ ಕಲ್ಲುಬಾನಿ ಕತ್ತಿಮಸೆತಕ್ಕೆ ಸಿಕ್ಕಿ ಅದರಲ್ಲಿದ್ದ ಶಾಸನ ಅಳಿಸುತ್ತಿದೆ. ಧರ್ಮಸ್ಥಳದ ವಸ್ತುಸಂಗ್ರಹಾಲಯಕ್ಕೆ ಕೆಲವು ವಸ್ತುಗಳು ಸೇರಿವೆ.

ಕೆಳದಿ ಅರಸರು ಕೆಳದಿ, ಇಕ್ಕೇರಿ, ನಗರ, ಕಳಸ, ಶೃಂಗೇರಿ, ಕೊಲ್ಲೂರು, ಶಂಕರನಾರಾಯಣ, ಗದಗ–ಡಂಬಳ ಆದಿಯಾಗಿ ಹಲವು ದೇವಾಲಯಗಳಿಗೆ ಚಿನ್ನ ಬೆಳ್ಳಿಯ ಆಭರಣಗಳನ್ನು ನೀಡಿದ್ದಾರೆ. ದೇವಾಲಯಗಳಲ್ಲಿ, ಮುಂಜರಾಯಿ ಇಲಾಖೆಗಳಲ್ಲಿ ಆಭರಣಗಳ ಪಟ್ಟಿ ದೊರೆಯದೆ ಆಭರಣಗಳು ಕಣ್ಮರೆಯಾಗುತ್ತಿವೆ. ಕೆಲವು ದೇವಾಲಯಗಳಲ್ಲಿ ಮೂಲ ಆಭರಣಕ್ಕೆ ಬದಲಾಗಿ ಬೇರೊಂದು ಆಭರಣಗಳನ್ನು ಸೇರಿಸುವ ಪರಿಪಾಠ ಪ್ರಾರಂಭವಾಗಿದೆ. ಕೆಳದಿ ಅರಸರು ದೇವಾಲಯಗಳಿಗೆ ನೀಡಿದ ಆಭರಣಗಳನ್ನಾಧರಿಸಿ ಈಗಾಗಲೇ ವಾರ್ಷಿಕ ಸಮ್ಮೇಳನವೊಂದರಲ್ಲಿ ಪ್ರಬಂಧವೊಂದು ಮಂಡಿತವಾಗಿದೆ.[15] ಕೊಲ್ಲೂರು ಮೂಕಾಂಬಿಕಾ ದೇವಾಲಯದಲ್ಲಿರುವ ಹಿರಿಯ ವೆಂಕಟಪ್ಪನಾಯಕನ ಪತ್ನಿ ವೀರಮ್ಮಳು ನೀಡಿರುವ ದ್ವಾರಪಾಲಕಿಯರ ವಿಗ್ರಹಗಳೂ ಈ ನಿಟ್ಟಿನಲ್ಲಿ ಪ್ರಮುಖವಾಗಿವೆ.[16] ಇಂತಹವುಗಳನ್ನು ಸಮೀಕ್ಷಿಸಿ ಅವು ಕಣ್ಮರೆಯಾಗುದ ಮೊದಲು

---

11 ಕೆಳದಿ ವೆಂಕಟೇಶ್ ಜೋಯಿಸ್, (ಸಂ) ಕೆಳದಿ ಅರಸರ ಶಾಸನ ಸಂಪುಟ, ಶ್ರೀ ತೋಂಟದಾರ್ಯ ಮಠ, ಗದಗ-ಡಂಬಳ ೧೯೯೧. ಶಾಸನ ಸಂಖ್ಯೆ ೬೫. ೧೩೮, ೨೮೩ ಇತರೆ

12 ರಾಬರ್ಟ ಸೀವೆಲ್, ಲೀಸ್ಟ್ ಆಫ್ ಇನ್ಸ್ಕ್ರಿಪ್ಷನ್ ಎಂಡ್ ಸ್ಕೆಚ್ ಆಫ್ ದಿ ಡೈನಾಸ್ಟೀಸ್ ಆಫ್ ಸದರ್ನ್ ಇಂಡಿಯಾ, ಗೌರ್ನಮೆಂಟ್ ಪ್ರೆಸ್, ಮದ್ರಾಸ್ ೧೮೮೪, ಶಾಸನ ಸಂ. ೧೦೫, ೧೦೬

13 ಶ್ರೀಧರ ಎಚ್. ಜಿ, ರೊಟ್ಟಿಹೆಂಚಾಗಿ ಬಳಕೆಯಾಗುತ್ತಿದ್ದ ತಾಮ್ರಶಾಸನ, ಪ್ರಜಾವಾಣಿ ಜುಲೈ ೧೦, ೧೯೮೮ ಪುಟ ೩ (ಸಾಪ್ತಾಹಿಕ)

14 ಶಾಸನ ಸಂಪುಟ, ಸಂಖ್ಯೆ ೨೮೨ ಮತ್ತು ಡಾ: ಎ.ವಿ. ನರಸಿಂಹಮೂರ್ತಿ ನಾಣ್ಯ ಶಾಸ್ತ್ರ ಮತ್ತು ಶಾಸನಗಳು, "ಸಂಶೋಧನ" ಅಭಿನಂದನ ಗ್ರಂಥ, ಪುಟ ೭೬೭.

15 ಕೆಳದಿ ಗುಂಡಾಜೋಯಿಸ್, ಡಾ: ಜಿ.ಎಸ್. ದೀಕ್ಷಿತ್ ಫೆಲಿಸಿಟೇಷನ್ ವಾಲ್ಯುಂ,

16 ಕೆಳದಿ ಅರಸರ ಶಾಸನ ಸಂಪುಟ, ಶಾಸನ ಸಂಖ್ಯೆ ೫೩, ಪುಟ ೯೦.

ಛಾಯಾಚಿತ್ರದೊಂದಿಗೆ ಅವುಗಳ ಸೂಚಿಯನ್ನು ಪಡಿಯಚ್ಚನ್ನು ಸಿದ್ಧಪಡಿಸುವ ಅಗತ್ಯವಿದೆ.

ಕೆಳದಿ ಅರಸರ ಕಾಲದ ಚಾರಿತ್ರಿಕ ದಾಖಲೆಗಳು ಅನೇಕ ವಸ್ತುಸಂಗ್ರಹಾಲಯಗಳಲ್ಲಿ, ಪುರಾತತ್ವ ಗ್ರಂಥಾಲಯಗಳಲ್ಲಿ ಇವೆ. ಲಂಡನ್ ಬೋಡ್ಲಿನ್ ಲೈಬ್ರರಿಯಲ್ಲಿ ಕೆಳದಿ ವೀರಭದ್ರನಾಯಕನ ಸ್ವಹ-ಸ್ತಾಕ್ಷರದ ಪತ್ರವಿದೆ. ಗೋವಾ, ಮುಂಬಯಿ, ತಲಚೇರಿಗಳಲ್ಲಿರುವ ಮರಾಠಿ ದಾಖಲೆಗಳು ಕೆಳದಿ ಮತ್ತು ಮರಾಠಾ ಸಂಬಂಧವನ್ನು ತಿಳಿಸಿದರೆ; ಲಂಡನ್,ಲೆಸ್ಬೆನ್, ಹಾಲೆಂಡ್, ಸ್ಪೇನ್, ಇಟಲಿ, ಜರ್ಮನಿ, ಮೊದಲಾದ ಕಡೆಗಳಲ್ಲಿ ಇರುವ ಪೋರ್ಚುಗೀಸ್, ಡಚ್, ಇಂಗ್ಲೀಷ್ ಭಾಷೆಯಲ್ಲಿರುವ ದಾಖಲೆಗಳು ಕೆಳದಿ ಅರಸರು ಮತ್ತು ವಿದೇಶಿ ಸಂಬಂಧವನ್ನು ತಿಳಿಸುತ್ತವೆ.[17] ಕೇರಳದ ಕಣ್ಣಾನೂರು ಕೆಳದಿ ರಾಜ್ಯಕ್ಕೆ ಸೇರಿದ ಒಪ್ಪಂದ ಒಂದರ ಮೂಲ ದಾಖಲೆ ತಲಚೇರಿಯಲ್ಲಿದೆ. ಬಟೇವಿಯ ಡಾಗ್ ರಿಜಿಸ್ಟರ್, ಪಬ್ಲಿಕ್ ಡಿಪಾರ್ಟ್‌ಮೆಂಟ್ ಡೈರಿ, ಮೆಕೆಂಜಿ ಸಂಗ್ರಹಗಳು ಇವುಗಳಲ್ಲಿ ಕೆಳದಿಗೆ ಸಂಬಂಧಿಸಿ ಸಾಕಷ್ಟು ಮಾಹಿತಿಗಳಿವೆ. ಇವುಗಳೆಲ್ಲವನ್ನು ಒಂದೇ ಕಡೆ ದೊರಕಿಸಿಕೊಳ್ಳುವ ಅಗತ್ಯವಿದೆ. ಪೋರ್ಚುಗೀಸ್, ಡಚ್ ದಾಖಲೆಗಳು ಕನ್ನಡಕ್ಕೆ ಭಾಷಾಂತರ ಆಗಬೇಕಿದೆ. ಜೊತೆಗೆ ಬೆಂಗಳೂರು, ಮಡಿಕೇರಿ ವಸ್ತು ಸಂಗ್ರಹಾಲಯದಲ್ಲಿರುವ ಕೆಳದಿ ಅರಸರ ಕಾಲದ ಹಸ್ತಪ್ರತಿಗಳು, ಕವಲೇದುರ್ಗ ಮಠದಲ್ಲಿರುವ ಸುಮಾರು ಮೂನ್ನೂರು ಕಡತಗಳು.[18] ಕಳಸದ ಕಳಸೇಶ್ವರ ದೇವಾಲಯದಲ್ಲಿರುವ ಕಡತಗಳು, ಶೃಂಗೇರಿ ಮಠದ ಕಡತ, ದಾಖಲೆಗಳು,[19] ಕೂಡ್ಲಿ ಮಠದ ದಾಖಲೆಗಳು ಇವುಗಳ ವರ್ಣನಾತ್ಮಕ ಸೂಚಿಯನ್ನು ತಯಾರಿಸಿ ಪ್ರಕಟಿಸದಲ್ಲಿ ಸಂಶೋಧಕರಿಗೆ ತುಂಬಾ ಪ್ರಯೋಜನವಾಗುತ್ತದೆ.

ಪಿಯತ್ರೋ ಡೆಲ್ಲಾವಲ್ಲೆ, ಪೀಟರ್ ಮುಂಡಿ ಮೊದಲುಗೊಂಡು ಜಾಕೋಬಸ್ ಕ್ಯಾಂಟರ್ ವಿಶ್ಚರ್‌ರವರೆಗೆ ಕೆಳದಿ ರಾಜ್ಯಕ್ಕೆ ಭೇಟಿ ಇತ್ತ ಪ್ರವಾಸಿಗಳ ಕಥನಗಳ ಮೂಲ ಸಾಮಗ್ರಿಗಳು ಸಂಗ್ರಹ ಯೋಗ್ಯವಾಗಿವೆ. ಇಟಲಿಯ ತ್ರಿಯಾಸ್ತೆ ಪ್ರಾಚ್ಯ ಸಂಗ್ರಹಾಲಯದಲ್ಲಿದ್ದ ಪಿಯತ್ರೋ ಡೆಲ್ಲಾವಲ್ಲೆಯ ಮೂಲ ದಾಖಲೆಯನ್ನಾಧರಿಸಿ ಪ್ರಬಂಧವೊಂದು ರಾಯಚೂರು ಇತಿಹಾಸ ಅಕಾಡೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಸಾದರಪಡಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಈ ಪ್ರವಾಸಿ ಕಥನಗಳಲ್ಲಿ ಕಂಡುಬರುವ ಮಾಹಿತಿಗಳು, ಮೂಲ ಸಾಮಾಗ್ರಿಗಳನ್ನು ಸಂಗ್ರಹಿಸಿ ಭಾಷಾಂತರಿಸಿಕೊಟ್ಟಲ್ಲಿ ಸಂಶೋಧನೆಗೆ ತುಂಬಾ ಪ್ರಯೋಜನವಾಗುತ್ತದೆ.

ಕೆಳದಿ ನೃಪವಿಜಯ, ಶಿವತತ್ವ ರತ್ನಾಕರ ಆದಿಯಾಗಿ ಈ ಕಾಲದ ಸಾಹಿತ್ಯ ಆಕರಗಳು ವಿಪುಲವಾಗಿವೆ. ಇವುಗಳ ಮೂಲ ಆಕರ ಗ್ರಂಥಗಳು ಮದ್ರಾಸು, ಪುಣೆ, ಮುಂಬಯಿ, ಜೋಧ್‌ಪುರ್, ಕೇರಳ ಹಾಗೂ ಕರ್ನಾಟಕದ ವಿವಿಧ ವಸ್ತುಸಂಗ್ರಹಾಲಯಗಳಲ್ಲಿ ಹಾಗೂ ಮಠಗಳಲ್ಲಿವೆ. ಶೃಂಗೇರಿ ಮಠದಲ್ಲಿರುವ ರಾಮಚಂದ್ರ ಮಹೋದಯ (ಅಪ್ರಕಟಿತ), ಹುಬ್ಬಳ್ಳಿ ಮೂರು ಸಾವಿರ ಮಠದಲ್ಲಿರುವ ನಿರ್ವಾಣಯ್ಯನ ಶಿವಪೂಜಾವಿಧಿ, ಜೋಧ್‌ಪುರದಲ್ಲಿರುವ ಪುರಾತತ್ವ ಇಲಾಖೆಯಲ್ಲಿರುವ ಗೀತಗೌರಿವರ, ಕೆಳದಿ ವಸ್ತು ಸಂಗ್ರಹಾಲಯದಲ್ಲಿರುವ ಲಿಂಗಣ್ಣ, ವೆಂಕಣ್ಣ, ಇವರ ಪ್ರಕಟಿತ, ಅಪ್ರಕಟಿತ ಕೃತಿಗಳು, ಇವುಗಳನ್ನು ಕ್ರೋಢೀಕರಿಸಿ ಸಂಸ್ಕೃತ ಹಾಗೂ

---

17 ಡಾ: ಬಿ. ಎಸ್. ಶಾಸ್ತ್ರಿ, ಕೆಳದಿ ಅರಸರು ಮತ್ತು ಪೋರ್ಚುಗೀಸರು, ಕವಿವಿ, ಧಾರವಾಡ. ಡಾ: ಜಿ. ಎಸ್. ದಿಕ್ಷೀತ್, ಕೆಳದಿ ನಾಯಕರು, ಕವಿವಿ, ಧಾರವಾಡ ೧೯೬೯ ; ಡಾ: ವಸಂತಮಾಧವ, ರಿಲಿಜನ್ಸ್ ಇನ್ ಕೋಸ್ಟೇಲ್ ಕರ್ನಾಟಕ ನವದೆಹಲಿ ; ಡಾ: ಕೆ.ಜಿ. ವೆಂಕಟೇಶ ಜೋಯ್ಸ್, ಕಲೆಕ್ಷನ್ ಅಂಡ್ ಕಂಪೈಲೇಶನ್ ಅಫ್ ದಿ ಹಿಸ್ಟಾರಿಕಲ್ ರೆಕಾರ್ಡ್ಸ್‌ಪರ್ಟೈನಿಂಗ್ ಟು ಕೆಳದಿ ರೂಲರ್ಸ್ ಎಂಡ್ ನೇಬರಿಂಗ್ ಸ್ಟೇಟ್ಸ್-ಪ್ರಾಜೆಕ್ಟ್ ಸಬ್ಮಿಟೆಡ್ ಟು ದಿ ಐಸಿಎಚ್‌ಆರ್. ನವದೆಹಲಿ-೧೯೯೨; ಹೊಸನಗರ ತಾಲೂಕಿನಲ್ಲಿ ಮುಳುಗಡೆಯಲ್ಲಿ ದೊರೆತ ಕೆಲವು ಶಿಲ್ಪಗಳನ್ನು ಸಾಗರತಾಲೂಕು ಕಾರ್ಗಲ್‌ನಲ್ಲಿ ಪಿಡಬ್ಲ್ಯುಡಿ ಇಲಾಖೆಯ ಎದುರಲ್ಲಿ ಇಡಲಾಗಿದೆ.

18 ಕವಲೇದುರ್ಗದ ಒಂಭತ್ತು ಕಡತಗಳನ್ನು ಬೆಂಗಳೂರು ವಿ.ವಿ.ಯಲ್ಲಿ ಸಂಗ್ರಹಿಸಲಾಗಿದೆ.

19 ಶೃಂಗೇರಿ ಮಠದ ದಾಖಲೆಗಳನ್ನು ಡಾ: ಎ. ಕೆ. ಶಾಸ್ತ್ರಿಯವರು ಪರಿಶೋಧಿಸಿದ್ದಾರೆ. ಕೆಳದಿ ವಸ್ತುಸಂಗ್ರಹಾಲಯ ಇದರ ಪ್ರಕಟಣೆ ಕೈಗೊಂಡಿದೆ-

ಕನ್ನಡದಲ್ಲಿ ಬೃಹತ್ ಸಂಪುಟಗಳನ್ನು ತರಬಹುದಾಗಿದೆ. ಜೊತೆಗೆ ಕೆಳದಿ ಇತಿಹಾಸಕ್ಕೆ ಸಂಬಂಧಿಸಿದಂತೆ ಸುಮಾರು ೫೦೦ಕ್ಕೂ ಹೆಚ್ಚು ಲೇಖನಗಳು ದೇಶದ ಹಲವು ಪತ್ರಿಕೆಗಳು, ನಿಯತಕಾಲಿಕೆಗಳಲ್ಲಿ ಪ್ರಕಟವಾಗಿವೆ. ಅವುಗಳನ್ನು ಸಂಗ್ರಹಿಸಿ ಸಂಪುಟವೊಂದನ್ನು ಹೊರತರುವುದರ ಜೊತೆಗೆ ಅವುಗಳ ಸೂಚಿ ಪ್ರಕಟವಾಗುವುದು ಅಗತ್ಯವಿದೆ.

ಕೆಳದಿ ಅರಸರ ಕಾಲದ ವರ್ಣಚಿತ್ರಗಳಲ್ಲಿ ಪುತ್ತಿಗೆ ಮಠದಲ್ಲಿದ್ದ ಶಿವಪ್ಪನಾಯಕನ ವರ್ಣಚಿತ್ರವೊಂದು ಸುಣ್ಣ ಹಚ್ಚಿದ್ದರಿಂದ ನಷ್ಟವಾಗಿದೆ. ಬನಾರಸ್ ನ ಜಂಗಮವಾಡಿ ಮಠದಲ್ಲಿರುವ ಶಿವಪ್ಪನಾಯಕನ ವರ್ಣಚಿತ್ರ ಅಪರೂಪದ್ದಾಗಿದೆ. ಕೆಳದಿ ಲಿಂಗಣ್ಣಕವಿಯ ಪೀಳಿಗೆಯ ಸಾಗರದ ಕವಿ ಲಿಂಗಣ್ಣಯ್ಯನವರ ಚಿತ್ರಗಳೂ ಸಂಗ್ರಹ ಯೋಗ್ಯವಾಗಿವೆ.

ದೇಶಿಯ ಸಂಸ್ಥಾನಗಳ ಅದರಲ್ಲೂ ಕೆಳದಿ ಇತಿಹಾಸದ ಮೂಲ ಸಾಮಗ್ರಿಗಳು ಹೀಗೆ ವಿಫುಲವಾಗಿ ಉಪಲಬ್ಧವಿದ್ದು ಚದುರಿಹೋಗಿ ಇತಿಹಾಸಕ್ಕೆ ನಷ್ಟವಾಗುತ್ತಿವೆ. ಮೇಲ್ಕಂಡಂತೆ ಶಾಸ್ತ್ರೀಯವಾಗಿ ಇವುಗಳ ಸೂಚಿ (ಕ್ಯಾಟಲಾಗ್) ಸಿದ್ಧಪಡಿಸಿ ಮುಂದಿನ ಅಧ್ಯಯನಕ್ಕೆ ಒದಗಿಸುವುದು ಸರ್ವಥಾ ಯೋಗ್ಯವಾದುದು. ಇದೇ ಮಾದರಿಯಲ್ಲಿ ಆಯಾ ಸಂಸ್ಥಾನಗಳ ಇತಿಹಾಸದ ಮೂಲ ಸಾಮಗ್ರಿಗಳ (ಜೊತೆಗೆ ರಾಜಮನೆತನಗಳ) ಸೂಚಿ ಸಿದ್ಧಪಸಿದಲ್ಲಿ ಇದೊಂದು ಮಾರ್ಗಸೂಚಿಯೂ ಆಗಬಹುದು.

ಪ್ರೊ|| ಎಂ. ಪ್ರಸನ್ನಕುಮಾರ್*

# ಕಳಲೆ ಮನೆತನದ ವೀರಶೈವ ದಳವಾಯಿ ನಂಜರಾಜನ ಒಂದು ಬ್ರಹ್ಮದೇಯ

ಮೈಸೂರಿನ ದಳವಾಯಿ ನಂಜರಾಜನು ವೀರ–ರಾಜನ ಮಗ ಮತ್ತು ದಳವಾಯಿ ದೇವರಾಜನ ತಮ್ಮ. ಆತನು ಕ್ರಿ. ಶ. ೧೭೩೪ ರಿಂದ ೧೭೩೯ರ ವರೆಗೆ ಅಣ್ಣನ ಸಹಾಯಕನಾಗಿದ್ದು ಕ್ರಿ. ಶ. ೧೭೩೯ ರಿಂದ ೧೭೫೯ರ ವರೆಗೆ ಸರ್ವಾಧಿಕಾರಿಯೂ ಕಿರಿಯ ದಳವಾಯಿಯೂ ಆಗಿದ್ದನು. ಕನ್ನಂಬಾಡಿಯ ಬ್ರಾಹ್ಮಣ ವೆಂಕಟಪತಯ್ಯನು ಅವನ ಪ್ರಧಾನಿಯಾಗಿದ್ದನು.[1]

ಕರಾಚೂರಿ ನಂಜಜರಾಜನೆಂದೇ ಅಡ್ಡ ಹೆಸರು ಪಡೆದಿದ್ದ ನಂಜರಾಜನು ಮೊದಲಿನಿಂದಲೂ ಮಹತ್ವಾ–ಕಾಂಕ್ಷಿಯೂ, ಸಂಚುಗಾರನೂ ಆಗಿದ್ದನು. ತನ್ನ ಅಣ್ಣನ ಮತ್ತು ದಾಯಾದಿಯಾಗಿದ್ದ ನಂಜರಾಜನ (ಬಸವರಾಜನ ಮಗ) ಜೊತೆ ಸೇರಿಕೊಂಡು ಆರನೆಯ ಚಾಮರಾಜನನ್ನು ಪದಚ್ಯುತಿಗೊಳಿಸುವ ಹಾಗೂ ಒಂದು ಮಗುವನ್ನು ಕೃಷ್ಣರಾಜ ಒಡೆಯರೆಂಬ ಹೆಸರಿನಿಂದ ಕ್ರಿ. ಶ. ೧೭೩೪ರ ಜೂನ್ ೧೫ರಂದು ಪಟ್ಟಕ್ಕೇರಿಸಿ ಆಡಳಿತಾಧಿಕಾರವನ್ನೆಲ್ಲಾ ಅಪಹರಿಸುವ ಒಳಸಂಚಿನಲ್ಲಿ ಸೇರಿಕೊಂಡಿದ್ದನೆಂದು ಇತಿಹಾಸಕಾರರಾದ ಹಯವದನರಾಯರು ಅಭಿಪ್ರಾಯ ಪಡುತ್ತಾರೆ.[2] ಸರ್ವಾಧಿಕಾರಿಯಾದ ನಂಜರಾಜನು (ಬಸವರಾಜನ ಮಗ) ಇವನ ಬಗ್ಗೆ ಎಚ್ಚರವಹಿಸಬೇಕೆಂದು ರಾಜನಿಗೆ ಸೂಚನೆಯನ್ನು ಕೂಡ ಕೊಟ್ಟಿದ್ದನು.[3] ಅಂದರೆ ಕ್ರಿ. ಶ. ೧೭೩೯ರಲ್ಲಿ ಸರ್ವಾಧಿಕಾರಿಯಾಗಿ ನೇಮಕ ವಾಗುವ ವೇಳೆಗೆ ರಾಜಕೀಯ ಕ್ಷೇತ್ರದಲ್ಲಿ ಈತನ ಮಹತ್ವಾಕಾಂಕ್ಷೆಯು ವ್ಯಕ್ತಪಟ್ಟಿದ್ದಿತು. ಅಣ್ಣನಾದ ದಳವಾಯಿ ದೇವರಾಜನ ಸಹಾಯದಿಂದ ಸರ್ವಾಧಿಕಾರಿಯಾಗಿ ನೇಮಕಗೊಂಡರೂ ತನ್ನ ಸ್ಥಾನವನ್ನೂ, ಅಧಿಕಾರವನ್ನೂ ಮತ್ತಷ್ಟು ಬಲಪಡಿಸಿಕೊಳ್ಳುವ ಬಗ್ಗೆ ಈತನಿಗೆ ಒಳಮನಸ್ಸಿನಲ್ಲಿ ಆತಂಕವಿದ್ದಿರಬೇಕು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಬ್ರಹ್ಮದೇಯವನ್ನು ಪರಿಶೀಲಿಸಲಾಗಿದೆ.

೧೮ನೇ ಶತಮಾನದ ಪೂರ್ವಾರ್ಧದಲ್ಲಿ ಮೈಸೂರು ಒಡೆಯರ ರಾಜ್ಯದಲ್ಲಿ ಬ್ರಾಹ್ಮಣ ವರ್ಗವು ವಿದ್ಯೆ ಮತ್ತು ಸದ್ವರ್ತನೆಗಳಿಂದ ಸಮಾಜದಲ್ಲಿ ಸಾಕಷ್ಟು ಮಾನ್ಯತೆ ಪಡೆದು ಜನಸಾಮಾನ್ಯರ ಯೋಜನೆಗಳಿಗೂ ಕಾರ್ಯಗಳಿಗೂ ತನಗೆ ಬೇಕಾದ ರೂಪವನ್ನು ಕೊಡುವ ಸ್ಥಿತಿಯಲ್ಲಿದ್ದಿತು. ಅಧಿಕಾರವನ್ನು ಪಡೆಯಬಯಸುವ

* ೨೨೫/ಎ, ೧೨ನೇ ಮುಖ್ಯರಸ್ತೆ, ಸರಸ್ವತೀಪುರಂ, ಮೈಸೂರು-೫೭೦೦೦೯

1 Hayavadana Rao C. : History of Mysore (1399-1799 A.D.), Banglore 1946, Vol. II, P. 69

2 Ibid P.P. 61–63

3 Hayavadana Rao C. : Mysore Gazetteer. B.R. Publishing Corp , Delhi 1984, Vol. II Pt. IV, P. 2466

ಯಾರೇ ಆಗಲಿ ಬ್ರಾಹ್ಮಣ ಬುದ್ಧಿಜೀವಿಗಳನ್ನು ಒಲಿಸಿಕೊಂಡು ಅವರ ಮೂಲಕ ಜನಸಾಮಾನ್ಯರು ತಮಗೆ ಸುಮುಖರಾಗುವಂತೆ ಮಾಡಿಕೊಳ್ಳುವ ಪ್ರಯತ್ನಗಳು ಅಂದಿನ ಪರಿಸ್ಥಿತಿಯಲ್ಲಿ ಆಳುವ ವರ್ಗಕ್ಕೆ ಆವಶ್ಯಕವಾಗಿದ್ದಿತೆಂದು ಹೇಳಬಹುದು.

ಆಗತಾನೇ ಅಧಿಕಾರಕ್ಕೆ ಬಂದಿದ್ದ, ತತ್ರಾಪಿ ಕುಟಿಲನೆಂಬ ಆಪಾದನೆಗೆ ಗುರಿಯಾಗಿ ಕರಾಚೂರಿ ಎಂಬ ಅಡ್ಡ ಹೆಸರನ್ನೇ ಪಡೆದಿದ್ದ ನಂಜರಾಜನಿಗೆ ಈ ವರ್ಗವನ್ನು ಒಲಿಸಿಕೊಂಡು, ಅವರಿಗೆ ಒಳ್ಳೆಯವನಾಗುವುದರ ಮೂಲಕ ಜನಸಾಮಾನ್ಯರಿಗೆ ಒಳ್ಳೆಯವನಾಗಿ ಕಾಣಿಸಿ-ಕೊಂಡು ಆ ಮೂಲಕ ತನ್ನ ಅಧಿಕಾರವನ್ನು ಭದ್ರಪಡಿಸಿಕೊಳ್ಳಬೇಕೆಂಬ ಮಹತ್ವಾಕಾಂಕ್ಷೆ ಹುಟ್ಟಿದ್ದರೆ ಅದು ಸಹಜ. ಇದಕ್ಕೆ ಪ್ರಧಾನಿಯಾಗಿದ್ದ ಬ್ರಾಹ್ಮಣನಾದ ವೆಂಕಟಪತಯ್ಯನ ಅನುಮೋದನೆಯೂ ಇದ್ದಿರಬೇಕು. ಅದಕ್ಕಾಗಿ ಅನೇಕ ಜನ ಬ್ರಾಹ್ಮಣರಿಗೆ ಒಂದು ದೊಡ್ಡ ಅಗ್ರಹಾರವನ್ನು ನಿರ್ಮಿಸುವ ಯೋಜನೆಯನ್ನು ಅವನು ಹಾಕಿರಬೇಕು. ಕನ್ನಂಬಾಡಿಯವನೇ ಆದ ವೆಂಕಟಪತಯ್ಯನ ಪ್ರಭಾವದಿಂದಾಗಿ ಕನ್ನಂಬಾಡಿಯನ್ನೇ ಅಗ್ರಹಾರವನ್ನಾಗಿ ಪರಿವರ್ತಿಸುವ ಯೋಜನೆ ಹುಟ್ಟಿಕೊಂಡಿರಬೇಕು. ಈತನು ಸರ್ವಾಧಿಕಾರಿಯಾದುದು ಕ್ರಿ. ಶ. ೧೭೩೯ರಲ್ಲಿ ಮತ್ತು ಆ ಅಗ್ರಹಾರದ ನಿರ್ಮಾಣವಾದುದು ೧೭೪೧ರ ಆಗಸ್ಟ್ ತಿಂಗಳ ೨೨ನೇ ದಿನಾಂಕ, ಶನಿವಾರ, ಗೋಕುಲಾಷ್ಟಮಿಯ ಶುಭದಿನದಂದು.[4]

ಕಳಲೆ ನಂಜರಾಜನ ಅಗ್ರಹಾರದ ವಿವರಗಳು ದೊರೆಯುವುದು ಕನ್ನಂಬಾಡಿ ಶಾಸನವೆಂದು ಪ್ರಸಿದ್ಧವಾಗಿರುವ ಐದು ಹಲಗೆಗಳ ತಾಮ್ರ ಶಾಸನದಿಂದ. ಆದರ ಕೊನೆಯ ಕೆಲವು ಹಲಗೆಗಳು ಕಾಣೆಯಾಗಿರುವುದರಿಂದ ಅದು ಅಪೂರ್ಣವಾಗಿದೆ. ಉಪಲಬ್ಧವಿರುವ ಭಾಗದಲ್ಲಿ ಒಟ್ಟು ೩೯೭ ಸಾಲುಗಳಿದ್ದು ಮೊದಲ ೧೪೪ ಸಾಲುಗಳು ಸಂಸ್ಕೃತದಲ್ಲಿವೆ. ೧೪೫ನೇ ಸಾಲು ಸಂಸ್ಕೃತದಲ್ಲಿ ಮೊದಲಾಗಿ ಅರ್ಧದಲ್ಲಿ ಕನ್ನಡವನ್ನು ಬಳಸುತ್ತದೆ. ೧೪೬ನೇ ಸಾಲಿನಿಂದ ಕೊನೆಯವರೆಗೂ ಕನ್ನಡದಲ್ಲಿದೆ. ಈ ಶಾಸನದ ಸಂಸ್ಕೃತ ಭಾಗವು ಸ್ತೋತ್ರದಿಂದ ಮೊದಲಾಗಿ ಮೈಸೂರಿನ ಆಳರಸರ ಯದು ವಂಶದ ವರ್ಣನೆಯನ್ನೂ, ಅನಂತರ ಕಳಲೆಯ ದಳವಾಯಿ ವಂಶದ ವರ್ಣನೆಯನ್ನೂ ಹೊಂದಿದ್ದು, ಅನಂತರ ಕಾವೇರಿಯ ಉತ್ತರದಲ್ಲಿ ಪ್ರಸನ್ನ ವೇಣುಗೋಪಾಲ ಜನಾರ್ಧನರಿಂದ ಪ್ರಕಾಶಿಸುವ ಕಣ್ವೇಶ್ವರ ಕ್ಷೇತ್ರರಾಜ ಎಂಬ ಹೆಸರಿನ ಕನ್ನಂಬಾಡಿಯ ವರ್ಣನೆಯನ್ನು ಹೊಂದಿದೆ. ಅನಂತರ ಕನ್ನಂಬಾಡಿ ಮತ್ತು ೨೬ ಉಪಗ್ರಾಮಗಳಿಂದ ಕೂಡಿದ ನಂಜರಾಜ ಸಮುದ್ರವೆಂಬ ಪ್ರತಿನಾಮವುಳ್ಳ ಅಗ್ರಹಾರವನ್ನು ೧೨೦ ಜನ ವಿಪ್ರರಿಗೆ ಕೊಟ್ಟ ದಾಖಲೆ ಇದೆ. ಅಲ್ಲಿ ಬ್ರಾಹ್ಮಣರಿಗೆ ಮನೆಗಳನ್ನು ನಿರ್ಮಿಸಿದ್ದೇ ಅಲ್ಲದೆ ಅವುಗಳಲ್ಲಿ ಆಹಾರ ಧಾನ್ಯಗಳು, ಪೂಜಾ ವಸ್ತುಗಳು, ಆಸನಾದಿಗಳೇ ಅಲ್ಲದೇ ವಸ್ತ್ರಗಳು, ಆಭರಣಗಳು ಮೊದಲಾದುವನ್ನು ಕೂಡ ತುಂಬಿಟ್ಟ ದಾಖಲೆ ಇದೆ. ಅನಂತರ ಶಾಸನದಲ್ಲಿ ದಾನಪಡೆದ ೧೨೦ ಜನ ಬ್ರಾಹ್ಮಣರ ಹೆಸರು, ತಂದೆಯ ಹೆಸರು, ವೇದದ ಗೋತ್ರ ಸೂತ್ರಗಳ ಹೆಸರುಗಳೂ ಇವೆ. ಒಟ್ಟು ೩೩ ಜನ ಋಗ್ವೇದ ಬ್ರಾಹ್ಮಣರಿಗೂ, ೮೦ ಜನ ಯಜುರ್ವೇದದವರಿಗೂ, ೭ ಜನ ಸಾಮವೇದದವರಿಗೂ ವೃತ್ತಿಗಳನ್ನು ಕೊಡಲಾಯಿತೆಂದು ಮಾತ್ರ ಹೇಳಬಹುದು.

ಈ ಬ್ರಹ್ಮದೇಯವನ್ನು ಕೂಲಂಕಷವಾಗಿ ಪರಿಶೀಲಿಸಿದರೆ ಅಂದಿನ ಮೈಸೂರು ಒಡೆಯರ ರಾಜ್ಯದ ಬ್ರಾಹ್ಮಣ ಪಂಡಿತ ವರ್ಗದ ಸಂರಚನೆಯ ಅನೇಕ ಅಂಶಗಳು ಬೆಳಕಿಗೆ ಬರುತ್ತವೆ. ಈ ಶಾಸನದಲ್ಲಿ ಆಂಧ್ರದ, ತಮಿಳುನಾಡಿನ ಹಾಗೂ ಕನ್ನಡನಾಡಿನ ಬ್ರಾಹ್ಮಣರ ಹೆಸರುಗಳಿವೆ. ಉದಾ : ಪೇರಾವಧಾನಿ, ಅಹೋಬಲ, ವೇಂಗಾವಧಾನಿ ಮೊದಲಾದವು ಆಂಧ್ರದ ಹೆಸರುಗಳಂತೆ ತೋರುತ್ತವೆ. ರಂಗರಾಜ, ಪೆರುಮಾಳಯ್ಯ ಮೊದಲಾದವು ತಮಿಳುನಾಡಿನ ಹೆಸರುಗಳಂತೆ ಕಾಣುತ್ತವೆ. ಕೋನೇರಿಶಾಸ್ತ್ರೀ

4 ಎ.ಕ. (ಹೊ) ಮೈಸೂರು ೧೯೭೭, ಸಂಪುಟ. ೫, ಕೃ. ನ. ೧೨೭, ಕ್ರಿ.ಶ. ೧೭೪೧. ಈ ಲೇಖನಕ್ಕೆ ಆಧಾರವಾಗಿ ಈ ಶಾಸನವನ್ನು ಬಳಸಿದೆ.

ಮೊದಲಾದವು ಕರ್ನಾಟಕದ ಮಾಧ್ವ ಸಂಪ್ರದಾಯದ ಹೆಸರುಗಳಿರಬೇಕು.

ಈ ಹೆಸರುಗಳಲ್ಲಿ ಅಪ್ಪಟ ಸ್ಮಾರ್ತ ಹೆಸರುಗಳು, ಮಾಧ್ವ ಹೆಸರುಗಳು ಮತ್ತು ಶ್ರೀವೈಷ್ಣವ ಹೆಸರುಗಳೂ ಇದ್ದು ನಂಜರಾಜನು ತ್ರಿಮತಸ್ಥರಲ್ಲಿ ಯಾವ ಭೇದವನ್ನು ತೋರಲಿಲ್ಲವೆಂಬುದನ್ನೂ ಮೂರೂ ಮತದವರ ಬೆಂಬಲ ಪಡೆಯಲು ಪ್ರಯತ್ನಿಸಿದನೆಂಬುದನ್ನೂ ಸೂಚಿಸುತ್ತದೆ. ಅಥರ್ವವೇದದ ಬ್ರಾಹ್ಮಣರ ಹೆಸರು ಒಂದಾದರೂ ಇಲ್ಲದಿರುವುದು ಈ ಕಾಲಕ್ಕೆ ಅಥರ್ವವೇದದ ಅಧ್ಯಯನ ಕಡಿಮೆಯಾಗಿದ್ದಿತೆಂಬುದನ್ನು ಸೂಚಿಸಬಹುದೇ ?

ಈ ಶಾಸನದಲ್ಲಿ ಇಂದಿನ ಬ್ರಾಹ್ಮಣ ವರ್ಗದಲ್ಲಿ ಪ್ರಚಲಿತವಲ್ಲದ ಅನೇಕ ವ್ಯಕ್ತಿನಾಮಗಳು ಸಿಕ್ಕುತ್ತವೆ. ಉದಾ : ಮಹೀಸುರ, ಜನ್ನೇಯ, ತಿರುವಳೂರ ವೈಷ್ಣವ, ಚೌಡಿಭಟ್ಟ, ಮುದ್ದುಕೋಟಂಭಟ್ಟ, ಜವನ, ಚಿಕ್ಕಯ್ಯ, ಚನ್ನಯ್ಯ, ಅಪ್ಪಾಜಿ, ಚೆನ್ನುದೀಕ್ಷಿತ್ ಇತ್ಯಾದಿ. ಇಲ್ಲಿ ಮೀನಾಕ್ಷಿ ಶ್ರೌತಿ ಎಂಬ ಗಂಡಸಿನ ಹೆಸರು ಸಿಕ್ಕುತ್ತದೆ. ಹಾಗೆಯೇ ಈ ಕಾಲದಲ್ಲಿ ವೃತ್ತಿ ಸೂಚಕ ಹೆಸರುಗಳನ್ನು ವ್ಯಕ್ತಿನಾಮಕ್ಕೆ ಸೇರಿಸಿಕೊಳ್ಳುವ ಪದ್ಧತಿ ಇದ್ದುದು ಗೊತ್ತಾಗುತ್ತದೆ. ಉದಾ : ದೈವಜ್ಞ ಗಂಗಾಧರ, ಸೀತಾರಾಮ ಭಿಷಕ್ ಇತ್ಯಾದಿ.

ಇಲ್ಲಿ ಹವ್ಯಾಸಗಳು ಮತ್ತು ಸ್ವಭಾವಗಳನ್ನು ಸೂಚಿಸುವ ಹೆಸರುಗಳು ಸಿಗುತ್ತವೆ. ಉದಾಹರಣೆಗೆ ಕವಿತಾರ್ಕಿಕ ಸಿಂಹ, ಮೌನಿ ನರಸಿಂಹ ಶಾಸ್ತ್ರೀ, ವೇಂಕಟಾದ್ರಿ ಕವಿ ಇತ್ಯಾದಿ. ಈ ಶಾಸದದಲ್ಲಿ ವಂಶ ಪಾರಂಪರ್ಯವಾದ ಕಸುಬುಗಳನ್ನು ಸೂಚಿಸುವ ಹೆಸರುಗಳು ಕೂಡ ದಾಖಲಾಗಿವೆ. ಉದಾ : ದೈವಜ್ಞ ಗೋಪಾಲ, ವೆಂಕಟೇಶ ಉಪಾಧ್ಯಾಯ ಇತ್ಯಾದಿ.

ಈ ಕಾಲದಲ್ಲಿ ತಂದೆಯ ಶಾಸ್ತ್ರೀಯ ನೈಪುಣ್ಯವನ್ನೇ ಮಗನು ಬೆಳೆಸುತ್ತಿರಲಿಲ್ಲವೆಂಬುದಕ್ಕೆ ಅವರ ಹೆಸರುಗಳಲ್ಲಿ ಪುರಾವೆ ಸಿಕ್ಕುತ್ತವೆ. ಉದಾ : ತಂದೆಯು ಶಾಸ್ತ್ರೀ ಎಂದು ಹೆಸರಿಟ್ಟುಕೊಂಡಿದ್ದರೆ ಮಗನು ದೀಕ್ಷಿತನೆಂದೋ ಶ್ರೌತಿ ಎಂದೋ ಹೆಸರಿಟ್ಟುಕೊಂಡುದು ಕಂಡುಬರುತ್ತದೆ.

ಅನೇಕ ಬ್ರಾಹ್ಮಣರ ಹೆಸರುಗಳು ಅವರಿಗೆ ಸಂಸ್ಕೃತದಲ್ಲಿದ್ದ ಪಾಂಡಿತ್ಯವನ್ನು ಪ್ರದರ್ಶಿಸುತ್ತವೆ. ನಾಗಾಶಾಸ್ತ್ರೀ ಶಾಸ್ತ್ರದಲ್ಲಿ ಪರಿಣತನಾಗಿದ್ದರೆ ನಾಗಾವಧಾನಿಯು ಅವಧಾನದಲ್ಲಿ ಗಟ್ಟಿಗ. ಕವಿತಾರ್ಕಿಕ ಸಿಂಹನು ಕವಿತೆಯಲ್ಲಿಯೂ ತರ್ಕದಲ್ಲಿಯೂ ಗಟ್ಟಿಗನಾಗಿದ್ದರೆ ಶೇಷಾವಧಾನಿಯ ಮಗ ಸುಬ್ಬಾಭಟ್ಟನು ಷಟ್‌ಶಾಸ್ತ್ರ ಪಾರಂಗತನು (ಷಟ್‌ಶಾಸ್ತ್ರ ಪಾರಂಗತೋ ಭಟ್ಟ :). ವೀರರಾಘವಯಜ್ವಾ ಯಜ್ಞ ಮಾಡಿದವನಾಗಿದ್ದರೆ ಸುಬ್ಬಾಜಟಾವಲ್ಲಭ ಜಟಿ ಹೇಳುವುದರಲ್ಲಿ ಸಿದ್ಧಹಸ್ತನು. ಪೂತಿಮಾಷ, ರೇಫಕಾಶ್ಯಪ, ಸಂಕೃತಿ ಮೊದಲಾದ ಅಪರೂಪದ ಗೋತ್ರನಾಮಗಳು ಕಾಣಸಿಕ್ಕುತ್ತವೆ. ಹೀಗೆ ಈ ಬ್ರಹ್ಮದೇಯದಲ್ಲಿ ದಾಖಲಾಗಿರುವ ಬ್ರಾಹ್ಮಣರ ವ್ಯಕ್ತಿನಾಮಗಳು ಕುತೂಹಲಕಾರಿಯಾಗಿವೆ.

ಈ ಪಂಡಿತರ ಹೆಸರುಗಳಲ್ಲದೆ ಶಾಸನದ ಕನ್ನಡ ಭಾಗವು ಕನ್ನಂಬಾಡಿಯ ಉಪಗ್ರಾಮಗಳ ಹೆಸರುಗಳನ್ನೂ ಕೊಡುವುದರ ಜೊತೆಗೆ ಆಗಿನ ಕಾಲದ ಆರ್ಥಿಕ ಮತ್ತು ಸಾಮಾಜಿಕ ಜೀವನವನ್ನು ಸೂಚಿಸುವ ಹೆಸರುಗಳನ್ನೂ ಹೊಂದಿದೆ. ಆ ಕಾಲದಲ್ಲಾಗಲೇ ಕಾವೇರಿಯಿಂದ ತೋಡಿದ ಅನೇಕ ಕಾಲುವೆಗಳ ಜಾಲವೇ ಇದ್ದಿತೆಂಬುದು ಕನ್ನಂಬಾಡಿ ಕಾಲುವೆ, ಹಳೇ ಕಾಲುವೆ, ಹಂಪಾಪುರದ ಕಾಲುವೆ, ಹಂಪಾಪುರದ ಹಳೇ ಕಾಲುವೆ ಮೊದಲಾದ ಹೆಸರುಗಳು ಸೂಚಿಸುತ್ತಿದ್ದರೆ, ಚಿಕ್ಕೈನ ಆಣೆ ಕೋಡಿ ನದಿಗೆ ಆಣೆಕಟ್ಟು ಕಟ್ಟಲಾಗಿದ್ದಿತೆಂಬುದನ್ನು ಸೂಚಿಸುತ್ತದೆ. ಪಟ್ಟಣದಮ್ಮನ ಗುಡಿ, ಜನಾರ್ಧನಸ್ವಾಮಿ ಗುಡಿ, ಮಸಣಕಮ್ಮನ ಗುಡಿ, ಬೈರೇದೇವರ ಗುಡಿ, ಚಿಕ್ಕವಡ್ಡರ ಗುಡಿ ಮೊದಲಾದವು ಆ ಪರಿಸರದಲ್ಲಿ ವಾಸಮಾಡುತ್ತಿದ್ದ ಜನಪದದ ದೇವದೇವತೆಗಳನ್ನು ಸೂಚಿಸುತ್ತಿದ್ದರೆ, ಬ್ರಹ್ಮದೇವರ ಗುಡಿ ಎಂಬ ಹೆಸರು ಆಗಿನ ಕಾಲದಲ್ಲಿ ಬ್ರಹ್ಮನಿಗೆ ಗುಡಿಕಟ್ಟಿ ಪೂಜೆ ನಡೆಸಲಾಗುತ್ತಿದ್ದಿತೆಂಬುದನ್ನು ಸೂಚಿಸುತ್ತದೆ. ಹೊಸ ಅಗ್ರಹಾರ ಎಂಬ ಹೆಸರು ಆ ಸ್ಥಳದಲ್ಲಿ ಅಗ್ರಹಾರವೊಂದು ಜೀರ್ಣೋದ್ಧಾರವಾದುದನ್ನು ಸೂಚಿಸುತ್ತಿರಬಹುದು.

ಈ ಬ್ರಹ್ಮದೇಯವನ್ನು ಅಧ್ಯಯನ ಮಾಡಿದಾಗ ಏಳುವ ಪ್ರಶ್ನೆಯೆಂದರೆ ಶಾಸನವನ್ನು ಅರ್ಧ ಸಂಸ್ಕೃತ

ದಲ್ಲಿಯೂ ಅರ್ಧ ಕನ್ನಡದಲ್ಲಿಯೂ ಏಕೆ ಬರೆಯಲಾಯಿತು ಎಂಬುದು. ಇದಕ್ಕೆ ಉತ್ತರ ಸ್ಪಷ್ಟವಾಗಿಯೇ ಇದೆ. ಪಂಡಿತರಾದ ಬ್ರಾಹ್ಮಣರ ಬಗ್ಗೆ ಹಾಗೂ ರಾಜಮನೆತನ ಮತ್ತು ದಳವಾಯಿ ಮನೆತನಗಳ ಬಗ್ಗೆ ಹೇಳುವಾಗ ಅಂದಿನ ಪ್ರತಿಷ್ಠಿತರ ಗೌರಯುತವಾದ, ಶಿಷ್ಟ ಮತ್ತು ದೇವಭಾಷೆ ಎಂದು ಅಂದು ಗೌರವಿಸಲಾಗಿದ್ದ ಸಂಸ್ಕೃತದಲ್ಲಿಯೇ ವರ್ಣಿಸುವುದು ಸಹಜವೇ ಆಗಿತ್ತು. ಬ್ರಾಹ್ಮಣ ಪಂಡಿತರಿಗೆ ಭೂಮಿಯನ್ನು ದಾನಕೊಟ್ಟರೂ ಆ ನೆಲವನ್ನು ಉಳುವವನು ಪಾಮರನಾದ ರೈತ ತಾನೇ ? ಆದ್ದರಿಂದಲೇ ಅವನಿಗೂ ಮತ್ತು ಸಂಬಂಧಪಟ್ಟ ಇತರ ಜನಸಾಮಾನ್ಯರಿಗೂ ಬೇಕಾಗುವ ಹೊಲದ ವಿಸ್ತೀರ್ಣವನ್ನೂ, ಎಲ್ಲೆಗಳನ್ನೂ ವಿವರಿಸುವಾಗ ಜನಸಾಮಾನ್ಯರ ಆಡುಭಾಷೆಯಾದ ಕನ್ನಡವನ್ನೇ ಬಳಸಿರುವುದು ಸಹಜವಾಗಿಯೇ ಇದೆ.

ವೀರಶೈವ ಧರ್ಮದ ನಂಜರಾಜನು ಇಂತಹ ದೊಡ್ಡ ಅಗ್ರಹಾರವನ್ನು ಬ್ರಾಹ್ಮಣರಿಗೇಕೆ ಕೊಟ್ಟನು ಎಂಬ ಮತ್ತೊಂದು ಪ್ರಶ್ನೆ ಈ ಬ್ರಹ್ಮದೇಯದ ಅಧ್ಯಯನದಿಂದ ಉದ್ಭವಿಸುತ್ತದೆ. ಅನೂಚಾನ ಕ್ರಮಬದ್ಧವಾಗಿ ಜನಸಮ್ಮತಿಯಿಂದ ಅಧಿಕಾರರೂಢರಾಗಿದ್ದ ಮೈಸೂರು ಒಡೆಯರ ಅಧಿಕಾರವನ್ನು ಕಳಲೆಯ ದಳವಾಯಿಗಳು ನಿರ್ಲಕ್ಷಿಸಿದ್ದು ಸಮಾಜದ ಗಣ್ಯವರ್ಗದವರ ಅಸಮಾಧಾನಕ್ಕೆ ಎಡೆಮಾಡಿಕೊಟ್ಟರಬೇಕು. ಅಂತಹ ವರ್ಗಗಳಲ್ಲಿ ಸಮಾಜದಿಂದ ಅಂದು ಹೆಚ್ಚು ಗೌರವಾದರಗಳನ್ನು ಪಡೆಯುತ್ತಿದ್ದ ವರ್ಗವೆಂದರೆ ವಿದ್ಯಾವಂತರಾದ ಬ್ರಾಹ್ಮಣವರ್ಗ. ಈ ವರ್ಗವು ಆಡಳಿತದ ವಿವಿಧ ಶಾಖೆಗಳಲ್ಲಿಯೂ ತನ್ನ ಪ್ರಭಾವವನ್ನು ಬೆಳೆಸಿಕೊಂಡಿದ್ದಿತು. ಇಂತಹ ವರ್ಗದ ನಿಷ್ಠೆ ಸಂಪಾದನೆ ಆಗತಾನೇ ಅಧಿಕಾರ ವಹಿಸಿಕೊಂಡಿದ್ದ ಮತ್ತು ಮಹತ್ವಾಕಾಂಕ್ಷಿಯಾಗಿದ್ದ ಕಳಲೆ ನಂಜರಾಜಯ್ಯನಿಗೆ ಅಗತ್ಯವಾಗಿ ಕಂಡಿರಬೇಕು. ಆದುದರಿಂದಲೇ ರಾಜ್ಯದಲ್ಲಿಯೇ ಅತ್ಯಂತ ಪ್ರಶಸ್ತವಾದ ಮತ್ತು ಕೃಷಿಯ ಸಂಪನ್ಮೂಲಗಳಿಂದ ಆವೃತವಾಗಿದ್ದ ಇಪ್ಪತ್ತಾರುವರೆ ಗ್ರಾಮಗಳ ಬಹುದೊಡ್ಡ ಬ್ರಹ್ಮದೇಯವನ್ನು ನೀಡಿದನೆಂದು ಹೇಳಬಹುದು. ಎರಡನೆಯದಾಗಿ, ವೀರಶೈವನಾಗಿಯೂ ಬ್ರಾಹ್ಮಣರಿಗೆ ದಾನಕೊಟ್ಟುದು ಅವನ ಧಾರ್ಮಿಕ ಸಹಿಷ್ಣುತೆಯ ದೃಷ್ಟಿಯನ್ನು ಪ್ರತಿಪಾದಿಸುತ್ತದೆ. ಇದು ಕಳಲೆ ಮನೆತನದ ರಕ್ತದಲ್ಲಿಯೇ ಬಂದ ಗುಣ. ಮೂರನೆಯದಾಗಿ ನಂಜರಾಜನು ಸ್ವಂತಃ ಪಂಡಿತ, ಕವಿ, ಮತ್ತು ವಿದ್ವಾಂಸ. "ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ" ಎಂಬಂತೆ ಅಂದಿನ ಬ್ರಾಹ್ಮಣರ ಪಾಂಡಿತ್ಯವು ಆತನನ್ನಾಕರ್ಷಿಸಿದ್ದಿರಬೇಕು. ಪ್ರಾಯಶಃ ಅವರ ಸಂಪರ್ಕದಿಂದ ಆತನ ಪಾಂಡಿತ್ಯ ಕೂಡ ಹೆಚ್ಚಿರಬೇಕು. ಕೊನೆಯದಾಗಿ, ಶಾಸನದಲ್ಲಿಯೇ ಹೇಳಿರುವಂತೆ ಆತ "ಧರ್ಮದಲ್ಲಿ ವಾತ್ಸಲ್ಯವುಳ್ಳವ"ನಾಗಿದ್ದುದರಿಂದ ("ಧರ್ಮೈಕವತ್ಸಲಃ") ಆಗಿನ ಧಾರ್ಮಿಕ ಪರಂಪರೆಯನ್ನು ಮುಂದುವರಿಸುವ ಸಲುವಾಗಿ ವೀರಶೈವ ದಳವಾಯಿಯಾದ ಆಡಳಿತಗಾರ ನಂಜರಾಜನು ಯಾವ ಸಂಕೋಚವೂ, ಅಡತಡೆಯೂ ಇಲ್ಲದೆ ಈ ಬ್ರಹ್ಮದೇಯವನ್ನು ನೀಡಿದನು.

ಡಾ|| ಶ್ರೀನಿವಾಸ ಹಾವನೂರ*

# ಪರ್ಶಿಯಾದ ರಾಯಭಾರಿ ಹಾಗೂ ದಿವಾನ್ ಪೂರ್ಣಯ್ಯ

ಕ್ರಿ. ಶ. ೧೮೦೨ ಮೈಸೂರು ಸಂಸ್ಥಾನದ ಆಡಳಿತವನ್ನು ಬ್ರಿಟಿಷರು ವಹಿಸಿಕೊಂಡು ಮೂರೇ ವರ್ಷಗಳು ಸಂದಿದ್ದವು. ಮೈಸೂರಿನಲ್ಲಿ ಪೂರ್ಣಯ್ಯನವರು ದಿವಾನರಾಗಿಯೂ ಬ್ಯಾರಿ ಕ್ಲೋಸ್ ಅವರು ರೆಸಿಡೆಂಟರಾಗಿಯೂ ಕಾರ್ಯ ನಿರ್ವಹಿಸುತ್ತಿದ್ದರು. ಕಲ್ಕತ್ತೆಯಲ್ಲಿ ಲಾರ್ಡ್ ವೆಲ್ಲಿಂಗ್‌ಟನ್ ಅವರು ಗವರ್ನರ್ ಜನರಲ್ ಆಗಿದ್ದರು. ಇವರೇ ಈ ಕುತೂಹಲ ಘಟನಾವಳಿಯ ಪಾತ್ರಧಾರಿಗಳು.

ಆ ವರ್ಷ ಪರ್ಶಿಯಾದ ಅಂಕಿತ ರಾಯಭಾರಿಯಾಗಿದ್ದ ಹಾಜಿ ದೌಲತ್ ಖಾನ್ ಎಂಬಾತ ಕಲ್ಕತ್ತೆಯ ಗವರ್ನರ್ ಜನರಲ್ಲರಿಗೆ ತನ್ನ ಪರಿಚಯ ಪತ್ರಗಳನ್ನು ಸಲ್ಲಿಸುವ ಸಲುವಾಗಿ ಹೊರಟು, ಮೊದಲು ಮುಂಬೈಗೆ ಬಂದ. ಮುಂಬೈನಲ್ಲಿ ಆತನಿಗೆ ಗೌರವಾದರ ಸ್ವಾಗತ ದೊರೆಯಿತು. ಅದೇ ಸಮಯಕ್ಕೆ ಆತನಿಗೆ, ಇತ್ತೀಚಿನವರೆಗೆ ಟೀಪೂ ಆಳಿದ ಖ್ಯಾತ ಶ್ರೀರಂಗಪಟ್ಟಣ ನೋಡುವ ಮನಸ್ಸಾಯಿತು.

ಆತ ಶ್ರೀರಂಗಪಟ್ಟಕ್ಕೇನೋ ಬಂದ. ಆದರೆ ಪ್ರಮಾದವಶಾತ್ ಇಲ್ಲಿಗೆ ಬಂದೊಡನೆ ಕೊನೆಯುಸಿರೆಳೆದ. ಹೇಗಾಯಿತೀ ಘಟನೆ ? ಆರೋಗ್ಯವಂತ ವ್ಯಕ್ತಿ ಇದ್ದಕ್ಕಿದ್ದಂತೆ ಸಾಯುವುದೆಂದರೇನು ? ಅಥವಾ ಯಾರಾದರೂ ಆತನನ್ನು ಕೊಂದರೇ ? ಇವಕ್ಕೆ ಉತ್ತರವಿಲ್ಲ. ತನ್ನ ರಾಯಭಾರತ್ವದ ಉದ್ದೇಶಗಳನ್ನು ಬಲಪಡಿಸುವ ಸಲುವಾಗಿ ತನ್ನಲ್ಲಿಗೆ ಹೊರಟಿದ್ದ ವ್ಯಕ್ತಿ ಹಠಾತ್ ಇಲ್ಲವಾದರೆ, ಕಲ್ಕತ್ತೆಯ ಗವರ್ನರ್ ಜನರಲ್ ಏನೆಂದಾರು ?

ಈ ಸಾವಿನಿಂದ ನಿಜವಾಗಿಯೂ ಚಿಂತೆಗೀಡಾದವರು ಪೂರ್ಣಯ್ಯನವರು. ತಮ್ಮ ಬ್ರಿಟಿಷ್ ಮೇಲಧಿಕಾರಿಗಳಿಗೆ, ದೌಲತ್‌ಖಾನನದು ಸಾಮಾನ್ಯ ಸಾವು ಎಂದು ಮನವರಿಕೆಮಾಡಿಕೊಡುವುದು ಅವರ ಆದ್ಯ ಕರ್ತವ್ಯವಾಯಿತು. ತಕ್ಷಣ ಅವರು ಸ್ಥಳೀಯ ರೆಸಿಡೆಂಟರನ್ನು ಒಲೈಸಿ ಅವರಿಂದಲೂ ಪಕ್ಕದ ತಿರುವಾಂಕೂರಿನ ರಾಜ ಮತ್ತು ರೆಸಿಡೆಂಟರಿಂದಲೂ ಪರ್ಶಿಯಾದ ರಾಯಭಾರಿಯ ಸಾವು ಸಾಮಾನ್ಯ ಸಾವೆಂಬಂತೆ ಒಂದು ರೀತಿಯ ಟಿಪ್ಪಣಿ ಪಡೆದರು. ಮುಂದೆ ಈ ಬಗ್ಗೆ ಗವರ್ನರ್ ಜನರಲ್ಲರಿಗೆ ಅಧಿಕೃತ ಪ್ರಕಟಣೆಯನ್ನು ಕಳುಹಿಸಲಾಯಿತು. ಘಟಣೆಯ ಬಗ್ಗೆ ಅವರು ತಮ್ಮ ಅಸಮಾಧಾನ ವ್ಯಕ್ತ ಪಡಿಸಿದರೆಂದು ನಂತರ ತಿಳಿದು ಬಂದಿತು.

ಅದು ನಿಜವಾದ ಅಸಮಾಧಾನ ಮಾತ್ರವೇ ಆದರೂ, ಮದರಾಸ್ ಗವರ್ನರ್ ಮೂಲಕ ಮೈಸೂರು ಸೇರುವ ವೇಳೆಗೆ, ಗವರ್ನರ್ ಜನರಲ್ಲರು ಘಟನೆಯ ಬಗ್ಗೆ

* ಶುಭತಾರಾ, ಚಾಫೇಕರ್ ಮಾರ್ಗ, ಪುಣೆ ೪೧೧ ೦೦೪

ಕುಪಿತರಾದರು ಎಂದು ವರದಿಯಾಯಿತು. ಇದರ ಶಮನಕ್ಕಾಗಿ ಏನಾದರೂ ಮಾಡಲೇಬೇಕಿತ್ತು! ರಾಜ್ಯಾದ್ಯಂತ ಈ ಸಾವಿನ ಶೋಕವನ್ನು 'ಆಚರಿಸಲು' ಪೂರ್ಣಯ್ಯನವರು ನಿರ್ಧರಿಸಿದರು.

ದೆಹಲಿಯ ರಾಷ್ಟ್ರೀಯ ಪತ್ರಾಗಾರದಲ್ಲಿ ಈ ಬಗ್ಗೆ ಲಭ್ಯವಿರುವ ಹಲವಾರು ದಾಖಲೆಗಳಲ್ಲಿ ಒಂದು ದಾಖಲೆ ಈ ವಿವರ ನೀಡುತ್ತದೆ: "ಮಹಮ್ಮದೀಯ ಧಾರ್ಮಿಕ ವಿಧಿಗಳನ್ನು ನಡೆಸಲು ಈ ಕೋಮಿನ ಧಾರ್ಮಿಕ ಹಾಗೂ ಸಹಾಯ ಬೇಕಾಗಿರುವ ಮಂದಿಗೆ ಈ ಸರಕಾರ (ಮೈಸೂರು ಸರಕಾರ) ಆಹಾರ ಒದಗಿಸಬೇಕು. ಈ ವಿಧಿಗಳು ಈಗಾಗಲೇ ಪ್ರಾರಂಭವಾಗಿವೆ."

ಇದೆಲ್ಲ ಸರಿ. ಆದರೆ ಒಬ್ಬ ಸಾಮಾನ್ಯ, ಅಷ್ಟೇನೂ ಸುಪರಿಚಿತನಾಗದ ವ್ಯಕ್ತಿಯ ಬಗ್ಗೆ ಇದೆಲ್ಲ ಬೇಕಿತ್ತೇ? ಸದರಿ ದಾಖಲೆಯ ಕೊನೆಗೆ ನಿಜವಾದ ಕಾರಣ ಸುಸ್ಪಷ್ಟವಾಗಿತ್ತು:

"ದೇವರ ದಯೆಯಿಂದ ಘನತೆವೆತ್ತ ಖಾವಂದರ ಕೋಪ ಬೇಗ ಸಂಪೂರ್ಣವಾಗಿ ತೊಲಗುತ್ತದೆ."

"ಘನತೆವೆತ್ತ ಖಾವಂದರಾದ ಗವರ್ನರ್ ಜನರಲ್ಲರ ಮನೋಕ್ಲೇಶ ಚದುರಿಸಲು" ಇದಿಷ್ಟೆ ಸಾಲದೆಂದು ಅತಿ ಜಾಗರೂಕರಾದ ಪೂರ್ಣಯ್ಯನವರಿಗೆ ಅನ್ನಿಸಿತು. ಶೋಕಾಚರಣೆ ಹಿಂದೂಗಳ ದೇವಸ್ಥಾನಗಳಲ್ಲಿಯೂ ನಡೆಸುವುದು ಅವಶ್ಯವಾಯಿತು! ಮೈಸೂರು ಹಾಗೂ ಶ್ರೀರಂಗಪಟ್ಟಣದ ಪ್ರಾಂತ್ಯಗಳ ನಿವಾಸಿಗಳಾದ ಒಂದು ಲಕ್ಷ ಇಪ್ಪತ್ತು ಸಾವಿರ ಬ್ರಾಹ್ಮಣರಿಗೆ ಧಾರ್ಮಿಕ ವಿಧಿ ಸಾಮಗ್ರಿಗಳನ್ನು ಹಂಚಲು ನಿರ್ಧರಿಸಲಾಗಿದೆ. ಈ ಬ್ರಾಹ್ಮಣರು ಈ ಸಂದರ್ಭದಲ್ಲಿ ತಮ್ಮ ದೇವಾಲಯಗಳಲ್ಲಿ ದೀಪ ಬೆಳಗಿಸಿ ಧಾರ್ಮಿಕ ವಿಧಿಗಳನ್ನು ನಿರ್ವಹಿಸತಕ್ಕದ್ದು."

ಶೋಕಾಚರಣೆಯ ಕೊನೆಯಲ್ಲಿ ಅಕ್ಟೋಬರ್ ೧೮೦೫ರಲ್ಲಿ ಒಂದು ವಿಶೇಷ ದರ್ಬಾರನ್ನು ಏರ್ಪಡಿಸಲಾಗಿತ್ತು. ಅಂದು ವಿದ್ವತ್ಪೂರ್ಣ ಭಾಷಣಗಳನ್ನು ಏರ್ಪಡಿಸಿದ್ದೇ ಅಲ್ಲದೆ, ಗವರ್ನರ್‌ಜನರಲ್ಲರ ಪ್ರಕಟಣೆಯನ್ನು ರಾಜೋಚಿತವಾಗಿ ಓದಲಾಯಿತು. ಇದನ್ನೆಲ್ಲ ಅವಲೋಕಿಸಿದಾಗ, ಪೂರ್ಣಯ್ಯನವರೇ ಅಲ್ಲ, ಟೀಪೂ ಸುಲ್ತಾನನ ವಿರೋಚಿತ ಯುದ್ಧದ ನಂತರವೂ ಇಡೀ ಮೈಸೂರು ರಾಜ್ಯ ಬ್ರಿಟಿಷರಿಗೆ ಎಷ್ಟರ ಮಟ್ಟಿಗೆ ಅಡಿಯಾಳಾಗಿತ್ತೆಂಬುದರ ಬಗ್ಗೆ ಅಚ್ಚರಿ ಮೂಡುತ್ತದೆ. ಈ ಬಗ್ಗೆ ಮತ್ತಷ್ಟು ನಿದರ್ಶನ ಇಲ್ಲಿದೆ.

"ದೇವರಿಗೆ ಸಂದಷ್ಟೇ ಗೌರವಾದರಗಳು ಇಂಗ್ಲಿಷ್ ಸಾಮ್ರಾಜ್ಯಕ್ಕೂ ಸಲ್ಲಲಿ....ತನ್ನ ಸ್ನೇಹದಲ್ಲಿ ಪ್ರಾಮಾಣಿಕತೆ, ಕಾರ್ಯಗಳಲ್ಲಿ ನಿಷ್ಠೆ ಮತ್ತು ಉಪಕಾರ ಪ್ರವೃತ್ತಿಗಳಿಂದ, ಎಲ್ಲಾ ದೇಶಗಳಿಗಿಂತ ಇದು ಹೆಸರುವಾಸಿಯಾಗಿದೆ. ಬ್ರಿಟಿಷರ ಮನೋಭಿಪ್ರಾಯಗಳು ನೇರವಾಗಿದ್ದು, ಭಗವಂತನಿಂದ ನಿಯಂತ್ರಿಸಲ್ಪಡುತ್ತವೆ ಹಾಗೂ ಅವರ ಪ್ರಯತ್ನಗಳು ಪ್ರಾಪಂಚಿಕ ಸುಖಕ್ಕಾಗಿ ಮತ್ತು ಮಾನವ ಕುಲದ ಉಪಯೋಗಕ್ಕಾಗಿ ಮಾತ್ರ ನಡೆಸಲಾಗುತ್ತವೆ...."ಇತ್ಯಾದಿ.

(ಇದರ ಮೂಲ ದಾಖಲೆ ಪರ್ಶಿಯನ್ ಭಾಷೆಯಲ್ಲಿದ್ದು, ಯಾರಿಂದಲೋ ತರ್ಜುಮೆ ಮಾಡಲಾಗಿದ್ದು ಪೂರ್ಣಯ್ಯನವರ ಹೆಸರಿಗೆ ಆರೋಪಿಸಲಾಗಿದೆ).

ಇದೇ ರೀತಿಯ ಮತ್ತೊಂದು ಘಟನೆ ಇದೇ ವರ್ಷ ಅಂದರೆ ಕ್ರಿ. ಶ. ೧೮೦೫ರಲ್ಲಿ ಮುಂಬೈಯಲ್ಲಿ ನಡೆಯಿತು. ಮತ್ತೊಬ್ಬ ಪರ್ಶಿಯಾದ ರಾಯಭಾರಿ (ಮುಂಬೈಗೆ ಹೊರಟವ?) ಸಾರ್ವಜನಿಕ ರಸ್ತೆಯಲ್ಲಿ ಸಿಪಾಯಿಯೊಬ್ಬನ ಗುಂಡಿಗೆ ಬಲಿಯಾದ.

ಜಾನ್ ಮಾಲ್ಕಂ ಎಂಬುವಾತ ತನ್ನ ಜೀವನ ಚರಿತ್ರೆಯಲ್ಲಿ ಈ ಘಟನೆಯ ಬಗ್ಗೆ ಈ ರೀತಿ ಅಭಿಪ್ರಾಯ ಪಡುತ್ತಾನೆ:

"ಇಂತಹ ಪ್ರಸಂಗಗಳನ್ನು ಆ ಕಾಲದಲ್ಲಿ ಸುಲಭವಾಗಿ ಪರಿಹರಿಸುತ್ತಿದ್ದರು. ಆದೆಂದರೆ ಕಾಣಿಕೆಗಳ ರೂಪದಲ್ಲಿ ಒಂದು ಲಕ್ಷ; ಪಿಂಚಣಿಯಾಗಿ ೫೦,೦೦೦ ರೂ; ಮತ್ತು ದೇಹವನ್ನು ಯುದ್ಧ ನೌಕೆಯಲ್ಲಿ ಕೆರ್ಬಾಲಾಕ್ಕೆ ರವಾನೆ ವೆಚ್ಚಗಳು ಸೇರಿದ್ದವು. ಶಿರಾಜ್ ಬಜಾರ್‌ನಲ್ಲಿ ಕೇಳಿ ಬಂದ ನಂತರದ ಮಾತೆಂದರೆ, ಇದೇ ರೀತಿ ಹಣ ಸಂದಾಯವಾದಲ್ಲಿ ನಾವು ಹತ್ತು ರಾಯಭಾರಿಗಳನ್ನು ಇಟ್ಟುಕೊಳ್ಳಬಹುದು !"

(ಅನು : ಟಿ. ಜಿ. ನರಸಿಂಹಮೂರ್ತಿ)

ಕೆಳದಿ ಗುಂಡಾಜೋಯಿಸ್*

# ಮೈಸೂರು ಒಡೆಯರ ಕಾಲದ ಐತಿಹಾಸಿಕ ಕಾಗದ ಪತ್ರಗಳು

ಕರ್ನಾಟಕ ಸರಕಾರದ ಪತ್ರಾಗಾರ ಇಲಾಖೆ ಆರಂಭಕ್ಕೆ ಮುನ್ನ ಡಾ. ಜಿ.ಎಸ್. ದೀಕ್ಷಿತ್, ಡಾ. ದೇಶಿಕಾಚಾರ್ ಹಾಗೂ ಡಾ. ಕಾಮತ್‌ರವರು ನಾನು ಕೈಗೊಂಡಿರುವ ತಾಳೆಯೋಲೆ ಸರ್ವೇಕ್ಷಣೆಯಲ್ಲಿ ಐತಿಹಾಸಿಕ ಕಾಗದ ಪತ್ರಗಳನ್ನೂ ಶೇಖರಿಸಲು ಸೂಚನೆ ನೀಡಿದ್ದರು. ಆಗ ದೊರೆತ ಪೂರ್ಣ ಪತ್ರಗಳನ್ನು ಕೆಳದಿ ಸಂಶೋಧನಾಲಯದಲ್ಲಿರಿಸಿದೆ. ಈ ದಾಖಲೆಗಳಲ್ಲಿ ಶ್ರೀ ಜಯಚಾಮರಾಜ ಒಡೆಯರ್, ಸರ್ ಸಿ. ರಾಜಗೋಪಾಲಾಚಾರಿ, ಸರ್ ಎಂ. ವಿಶ್ವೇಶ್ವರಯ್ಯ, ಸರ್ ಮಿರ್ಜಾ ಇಸ್ಮಾಯಿಲ್, ತಂಬೂಚೆಟ್ಟಿ ಮುಂತಾದವರ ಅಪ್ರಕಟಿತ ಸ್ವಹಸ್ತಾಕ್ಷರ ಪತ್ರಗಳು ಗಮನಾರ್ಹವಾಗಿವೆ. ಮೈಸೂರು ಸಂಸ್ಥಾನದ ಆಡಳಿತವನ್ನು ಕುರಿತು ಬೆಳಕು ಬೀರುವ ಹಾಗೂ ಆಂಗ್ಲ ಭಾಷೆಯಲ್ಲಿರುವ ಸ್ವಹಸ್ತಾಕ್ಷರಗಳಿಂದ ಕೂಡಿದ ಕೇವಲ ಕೆಲವೇ ಐತಿಹಾಸಿಕ ಪತ್ರಗಳನ್ನು ಮಾತ್ರ ಇಲ್ಲಿ ನಿರೂಪಿಸಲಾಗಿದೆ.

I ೧. ಶ್ರೀ ಜಯಚಾಮರಾಜ ಒಡೆಯರು ಸರ್ ಮಿರ್ಜಾ ಇಸ್ಮಾಯಿಲ್‌ರವರಿಗೆ ದಿ. ೧೨-೫-೧೯೪೧ ರಂದು ಬರೆದ ಪತ್ರ.

೨. ಶ್ರೀ ಕೃಷ್ಣರಾಜ ಒಡೆಯರು ದಿ. ೨೧-೬-೧೮೨೪ ರಂದು ಕವಲೇದುರ್ಗ ಮಂಡಗದ್ದೆ ತಾಲ್ಲೂಕು ಅಮೀಲ ತಿಮ್ಮಪ್ಪರಾಜಯ್ಯಗೆ ಬರೆಸಿದ ನಿರೂಪ.

೩. ಶ್ರೀ ಕಂಠೀರವ ನೃಸಿಂಹರಾಜ ಒಡೆಯರ್ ಹಾಗೂ ದಳವಾಯಿ ದೇವರಾಜೇ ಅರಸಿನವರ ನಾಲ್ಕನೆಯ ಕುಮಾರ್ತಿ ಕೆಂಪು ಚೆಲುವಾಜಮ್ಮಣಿರವರ ವಿವಾಹ ಆಮಂತ್ರಣ ಪತ್ರಿಕೆ.

೪. ಶ್ರೀಮದ್ಯುವರಾಜರ ವಿವಾಹ ಮಹೋತ್ಸವಕ್ಕೆ ದಯಮಾಡಿಸಿದ ದೊಡ್ಡ ಮನುಷ್ಯರುಗಳ ೨೦ ಸೇರು ಸಣ್ಣಕ್ಕಿ ಲವಾಜಮಾ ತಪ್ಸೀಲು ಪಟ್ಟಿ.

II ೧. ಭಾರತದ ಗೌರ್ನರ್ ಜನರಲ್ ಸರ್. ಸಿ. ರಾಜಗೋಪಾಲಾಚಾರಿರವರು ಮಾಜಿ ದಿವಾನ್ ಸರ್. ಮಿರ್ಜಾ ಇಸ್ಮಾಯಿಲ್‌ರವರಿಗೆ ೩-೧೨-೧೯೪೬ ರಂದು ಬರೆದ ಪತ್ರ.

೨. ಶ್ರೀ ತಂಬೂಚೆಟ್ಟಿರವರು ಸರ್. ಮಿರ್ಜಾ ಇಸ್ಮಾಯಿಲ್ ರವರಿಗೆ ದಿ. ೧೮-೯-೧೯೩೧ ರಂದು ಬರೆದ ಪತ್ರ.

೩. ಅವರೇ ಮೀರ್ಜಾರಿಗೆ ಬರೆದ ೩-೬-೧೯೩೨ರ ಪತ್ರ.

೪. ಸರ್. ಪಿ.ಎಸ್. ಶಿವಸ್ವಾಮಿ ಅಯ್ಯರ್ ಸರ್ ಮಿರ್ಜಾಇಸ್ಮಾಯಿಲ್‌ರವರಿಗೆ ೨೦-೪-೧೯೪೧ರಂದು ಬರೆದ ಪತ್ರ.

III ೧. ಸರ್. ಎಂ. ವಿಶ್ವೇಶ್ವರಯ್ಯನವರು ೧೮-೯-೧೯೦೧ರಂದು ತಮ್ಮ ಚಿಕ್ಕಪ್ಪನಿಗೆ ಬರೆದ ಪತ್ರ.

---

* ಕೆಳದಿ, ಸಾಗರ ತಾಲೂಕು,

೨. ಸರ್ ಎಂ.ವಿ. ಅವರು ೮-೧೧-೧೯೦೭ ರಂದು ಮಾಧವರಾಯರಿಗೆ ಬರೆದ ಪತ್ರ.

ಇವುಗಳಲ್ಲಿ I ೧, II ೧ ಮತ್ತು ೩ ಮತ್ತು III ೨ ಪತ್ರಗಳನ್ನು ಮಾತ್ರ ನಿರೂಪಿಸಲಾಗಿದೆ.

**ಶ್ರೀ ಜಯಚಾಮರಾಜ ಒಡೆಯರ ಪತ್ರ :**

My dear Sir Mirza Ismail,

I have already told you in person with what great regret I have received the intimation conveyed in your note of the 7th instant that you wish to withdraw from the office which you have filled with such conspicious ability since you took it up in May 1926.

I fully realize how deeply attached you were to my late uncle and how you have been feelling ever since his death how difficult it was to carry on without his constant counsel and support. I am grateful to you that you have contiuned your great services to the state under these conditions for so many months.

I need hardly say that I shall do everything I can to meet your wishes in respect of the matters refered to in your note.

Yours Sincerely
**Jayachamaraja Wodeyar**

II (a) **ಸರ್. ಸಿ. ರಾಜಗೋಪಾಲಾಚಾರಿರವರ ಪತ್ರ –**

My dear Sir Mirza,

Who can question and no wonder Sir Arther Lothian complimented you on your capacity for friendliness ? Other wise how could you have tolerated me and thought kindly of me in spite of my—— may be involuntary—— churlishness in not being at home on both the occasions you tried to find me and in being too late when I tried to see you at the Hyderabad guest house ? I join Sir Arther Lothia in Considering it a price of good luck and misdeed that H.E.H. has you to guide the affairs of the State.

Yours affectionately!
**C. Rajagopalachar**

How I wish I had an Indian State to look after where there is no democracy and no committees and other hurdles to cross over before you could do a single usefulthing.

II (c) **ತಂಬೂಚೆಟ್ಟಿರವರ ಪತ್ರ –**

My dear Sir Mirza Ismail.

In appreciation of the invaluable and distinguished services rendered by you to the palace for eighteen years as His Highness's Assistant Secretary, Huzur Secretary and Private Secretary and subsequently to His Highness's and the State as the Dewan of Mysore for six years, it is his Highness's pleasure that you should, when His Highness's graciously permits you to retire receive as a special case a pension of Rupces Two thousand per mensem.

Yours Sincerely
**Thomboo Chetty**

III (b) **ಸರ್ ಎಂ. ವಿಶ್ವೇಶ್ವರಯ್ಯನವರ ಪತ್ರ.**

10 Queens Gardens
Poona November 8th 1907

My dear Mr. Madhav Rao,

I am much obliged to you for your courtesy in sending me a copy of your Dussara address. I read it with great interest as soon as it was published.

I take this opportunity to refer to your kind enquiries through Mr. Ramaiya when your Message reached me, my, first mistake was to seek an interview and discuss the situation with you ; best that feeling soon wore away.

I am despair to retire from service here as soon as they will let me but it appears to me unwise—— my part to take up service elsewhere, I know my ——— in mysore will be very pleasant· My work will be work admitted (unofficial) surroundings. At the time the Mysore appointment had great auhorities for me but now on account of age (I am now on the worry side of forty six) and circumstances. I have decided not to be a candidate. Need I say that this decision has lost me————

I nevertheless feel deeply grateful for this fresh proof of your desire to—— me writh your——

This is the second time you have done me this signal honours within the past few years.

I have read with great satisfaction the accounts of the many sided activities of your administration and particularly of the growing feeling of——& trustfulness noticiable in——side in the relations between His Highness government and the people.

Praying that those relations may grow to the losting credit of your administration.

I ever am,

yours Sincerely
M· Visweswaraya

## ಐತಿಹಾಸಿಕ ಮಹತ್ವದ ಇತರೆ ಪತ್ರಗಳು

ಚಾಮರಾಜ ಒಡೆಯರ್ ೨೮-೪-೧೮೭೫ರಂದು ಊಟಿಯಿಂದ ಬರೆದ ಕಾಗದ, ಮೈಸೂರು ಲೇಕ್ ವ್ಯೂನಿಂದ ಬರೆದ ವರದಾಚಾರ್ಯರ ಪತ್ರ, (೧೨-೧೦-೧೯೨೮), ಮೈಸೂರು ಚೀಫ್ ಕಮೀಷನರ್ ಆಫೀಸಿನಿಂದ ೨೭-೧-೧೮೮೦ ರಂದು ದರೋಡೆಕೋರನೊಬ್ಬನನ್ನು ಹಿಡಿಯಲು ರೂ. ೫೦೦/- ಇನಾಂ ಘೋಷಿಸಿ ಹೊರಡಿಸಿದ ಪ್ರಸಿದ್ಧ ಪತ್ರಿಕೆ (ಇದು ಕನ್ನಡದಲ್ಲಿದೆ.) ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು ಸೆಕ್ರೆಟರಿಯಾಗಿದ್ದಾಗ ಹೊರಡಿಸಿದ ಸುತ್ತೋಲೆ ಕನ್ನಡದಲ್ಲಿದೆ.)ನಗರ (ಬಿದನೂರು) ಸೂಪರಿಂಟೆಂಡೆಂಟ್ ಸ್ಟೋಕ್ಸ್‌ರವರು ಸರ್ ಸಾಯರಿಗೆ ಬರೆದ ಪತ್ರ, ಮೈಸೂರು ಸಂಸ್ಥಾನದ ರೈಲು ಸಂಚಾರದ ಯೋಜನೆಗೆ ಕಾಸರವಳ್ಳಿ ಸಾಹುಕಾರರು ನೀಡಿದ ಸಾಲ ಕುರಿತು ಸಂಗತಿಗಳು.[1] ೧೯೨೭ ರಂದು ಮಹಾತ್ಮಾಗಾಂಧಿ ಸಾಗರಕ್ಕೆ ಬಂದಾಗ ಗಂಧದ ಕೆತ್ತನೆ ಕುರಿತು ನೀಡಿದ ಅಭಿಪ್ರಾಯ, ಲೇಡಿ ವೇವೆಲ್, ಎಡ್ಮಂಡ್ ಹಾಗೂ ಜಯಚಾಮರಾಜೇಂದ್ರ ಒಡೆಯರು ಕೆಳದಿಗೆ ಭೇಟಿ ನೀಡುವ ಪತ್ರ ವ್ಯವಹಾರಗಳು, ಬ್ರಿಟಿಷ್ ರಾಜಕುಮಾರರು ಸೊರಬಕ್ಕೆ ಭೇಟಿ ನೀಡಿದ್ದು, ಪ್ರಾಮಾಣಿಕ ಗ್ರಾಮಾಧಿಕಾರಿಗಳನ್ನು ಪ್ರಜಾಪ್ರತಿನಿಧಿ ಸಭೆಗೆ ಆಯ್ಕೆ ಮಾಡಿದ್ದು, ಮೈಸೂರಿನ ಕಾಶೀ ಲಕ್ಷ್ಮಣರಾಯರಿಂದ ೧೯೧೦ರಲ್ಲಿ ಪ್ರಕಟವಾದ ಮಹಾ ಯಾತ್ರಾಕ್ರಮ ಸಂಗ್ರಹದಲ್ಲಿ ರೈಲ್ವೆ ಸ್ಟೇಷನ್ ಚಾರ್ಜುಗಳ ಪಟ್ಟಿ,[2] ನೆಹ್ರೂ, ಅಮೇರಿಕಾ ರಾಯಭಾರಿ ಡಲ್ಲೆಸ್ ಜೋಗದಲ್ಲಿ ಬರೆದ ಪತ್ರಗಳು,[3] ದಿವಾನ್ ವಿಶ್ವೇಶ್ವರಯ್ಯನವರು ಜೋಗ ಜಲಪಾತದಲ್ಲಿರುವ ಅಭಿಪ್ರಾಯ ಪುಸ್ತಕದಲ್ಲಿ ಬರೆದ ಅಂಶಗಳು,[4] ಡಾ. ಎಸ್. ಎಸ್. ಆಚಾರ್ಯರವರಲ್ಲಿರುವ

---

1 ಮಂಜುವಾಣಿ (ಧರ್ಮಸ್ಥಳ) ಜೂನ್ ೧೯೮೮ರ ಸಂಚಿಕೆಯಲ್ಲಿನ ನನ್ನ ಲೇಖನ ನೋಡಿರಿ, ಧರ್ಮಸ್ಥಳದಲ್ಲಿ ವಸ್ತು ಸಂಗ್ರಹಾಲಯದಲ್ಲಿರುವ ಮೈಸೂರು ಅರಸರ ಹಳೆಯ ಕಾರುಗಳನ್ನು ಕೊಂಡ ಪತ್ರ ವ್ಯವಹಾರವೂ ಇದೆ.

2 ಲವಾಜಮಾ ಪಟ್ಟಿಯಂತೆ ಇದೂ ಬೆಲೆಗಳ ಐತಿಹಾಸಿಕ ಪರಂಪರೆಯನ್ನು ಕುರಿತು ಆಕರಗಳಾಗಿವೆ.

3 ಇವುಗಳ ಛಾಯಾಚಿತ್ರ ವಗೈರೆ ಸಾಹಿತ್ಯಗಳು ಶ್ರೀ ಜಿ.ವಿ.ಕೆ. ರಾಯರಲ್ಲಿದೆ.

4 ಪ್ರವಾಸಿಗಳು ಸೌಂದರ್ಯ ವೀಕ್ಷಣೆ ಕೈಗೊಂಡರೆ ವಿಶ್ವೇಶ್ವರಯ್ಯನವರು ವಿದ್ಯುದಾಗಾರವಿಲ್ಲದ ಆ ಕಾಲದಲ್ಲಿ "what a waste of Energy" ಎಂದು ಅಭಿಪ್ರಾಯ ಪ್ರಕಟಿಸಿದ್ದಾರೆ.

ಸಿ. ರಾಜಗೋಪಾಲಾಚಾರ್ಯರ ಖಾಸಗೀ ಪತ್ರ ಮುಂತಾದ ಪತ್ರಗಳು ಗಮನಾರ್ಹವಾಗಿವೆ.

**ಉಪಸಂಹಾರ**

ಮೈಸೂರು ಒಡೆಯರ ಆದಿಯಾಗಿ, ಬ್ರಿಟಿಷ್ ಆಡಳಿತ ಕಾಲದಲ್ಲಿನ ಅಳಿದುಳಿದ ಐತಿಹಾಸಿಕ ಕಾಗದ ಪತ್ರಗಳನ್ನು ಶೇಖರಿಸಿ ಆಯಾ ವಿಷಯ ವ್ಯಾಪ್ತಿಗನುಗುಣವಾಗಿ, The Mysore letters and Dispatches of the Duke of Wellnigton 1799-1805, Printed Verbatim from the orignial Manuscripts ಮಾದರಿಯಲ್ಲಿ ಸೂಚಿಯನ್ನು (Catalogue)ಸಿದ್ಧಪಡಿಸುವುದು ಅಗತ್ಯ.

ಡಾ|| ಎಂ. ಬಿ. ರಾಜಾಮಣಿ*

# ನಂಜರಾಜ ಸಮುದ್ರ ಅಗ್ರಹಾರ

## (ಒಂದು ಸಮಾಜ ಶಾಸ್ತ್ರೀಯ ವಿಶ್ಲೇಷಣೆ)

ಮೈಸೂರು ಜಿಲ್ಲೆಯ ಕೃಷ್ಣರಾಜನಗರ ತಾಲ್ಲೂಕು ಮಾಚನಹಳ್ಳಿಯ ಶ್ರೀ ಲಕ್ಷ್ಮೀನರಸಿಂಹ ಶಾಸ್ತ್ರಿ ಎಂಬುವವರ ಬಳಿ ಇದ್ದ ೫ ತಾಮ್ರದ ಹಲಗೆಗಳ ಮೇಲೆ ನಾಗರಿ ಲಿಪಿಯಲ್ಲಿ ಕೆತ್ತಲಾಗಿದ್ದ ಒಂದು ದೀರ್ಘವಾದ ಶಾಸನವನ್ನು (ಎ ಕ. ೫ (ಪ) ಕೃ ನ. ೧೧೭) ಏಕ-ವಿಷಯ ಅಧ್ಯಯನ ವಿಧಾನ ಮತ್ತು ಒಳ ವಿಷಯ ಹಾಗೂ ಸಂದರ್ಭ ಸಂಬಂಧವಾದ ವಿಶ್ಲೇಷಣಾ ತಂತ್ರದ ಮೂಲಕ ಸ್ಪಷ್ಟವಾಗಿ ವಿವರಿಸುವ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ. ಮೈಸೂರಿನ ಪ್ರಭುವಾಗಿದ್ದ ಇಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ದಳವಾಯಿ ನಂಜರಾಜನಕೋರಿಕೆಯ ಮೇರೆಗೆ ಕ್ರಿ. ಶ. ೧೭೪೧ರ ಆಗಸ್ಟ್ ೨೨ರಂದು ಪುಣ್ಯಕರವಾದ ಗೋಕುಲಾಷ್ಟಮಿ ಹಬ್ಬದ ಸಂದರ್ಭದಲ್ಲಿ ನಂಜರಾಜ-ಸಮುದ್ರ ಎಂಬ ಅಗ್ರಹಾರವನ್ನು ಸ್ಥಾಪಿಸಿ, ಸಂಸ್ಕೃತ ಹಾಗೂ ಕನ್ನಡ ಎರಡೂ ಭಾಷೆಗಳಲ್ಲಿ ಈ ಶಾಸನವನ್ನು ಹೊರಡಿಸಿದರು.

ಈ ದಾಖಲೆಯಲ್ಲಿ ಮೈಸೂರಿನ ಒಡೆಯರ್ ಪ್ರಭುಗಳ ವಂಶಾವಳಿಯನ್ನು ಕೊಡಲಾಗಿದೆ, ಈ ಅಗ್ರಹಾರ ಸ್ಥಾಪಕನಾದ ಒಂದನೆಯ ಕೃಷ್ಣರಾಜನ ಹಾಗೂ ಅವನ ದಾನಶೀಲ ಗುಣಗಳನ್ನು ಪ್ರಶಂಸಿಸಲಾಗಿದೆ ಮತ್ತು ಈ ಶಾಸನವನ್ನು ಹೊರಡಿಸಿದ ಇಮ್ಮಡಿ ಕೃಷ್ಣರಾಜ ಒಡೆಯರ್ ಅವರೂ ಸಹ ಸರ್ವರಿಗೂ ಕಲ್ಪವೃಕ್ಷದಂತಿದ್ದರು ಎಂದು ಹೊಗಳಲಾಗಿದೆ. ಇದರೊಂದಿಗೆ ಈ ಶಾಸನದಲ್ಲಿ ಈ ಕೆಳಕಂಡಂತೆ ಕಳಲೆ ಮುಖ್ಯಸ್ಥರ ವಂಶಾವಳಿಯ ವಿವರಣೆಯನ್ನು ಕಾಣಬಹುದು.




* ೭೧೦, ತ್ಯಾಗರಾಜ ರಸ್ತೆ, ಎರಡನೇ ಅಡ್ಡರಸ್ತೆ, ಕೆ.ಆರ್. ಮೊಹಲ್ಲಾ, ಮೈಸೂರು–೫೭೦೦೨೪

ಈ ಶಾಸನದಲ್ಲಿ ಪ್ರಶಂಸೆಗೆ ಪಾತ್ರರಾಗಿರುವ ಕಳಲೆಯ ದೇವರಾಜ ಹಾಗೂ ನಂಜರಾಜರೂ ಸಹ ದಾನಶೂರರೇ ಆಗಿದ್ದರು, ಅವರು ತಾವು ನೀಡಿದ ದಾನಗಳಿಂದ ಕಲ್ಪವೃಕ್ಷವನ್ನೇ ತೃಣೀಕರಿಸಿದಂತೆ ವರ್ಣಿಸಲಾಗಿದೆ. ಕಲಿಗಳಾಗಿದ್ದ ಅವರು ಬ್ರಾಹ್ಮಣರ ಸಂರಕ್ಷಕರಾಗಿದ್ದರು. ಕೃಷ್ಣರಾಜ ಒಡೆಯರ ಸೇನಾಧಿಪತಿಯಾಗಿ ದೇವರಾಜನು ಮಿಡಿಗೇಶಿ, ಮಾಗಡಿ, ಸಾವಂದಿ ಮುಂತಾದ ಇತರ ರಾಜರುಗಳಿಗೆ ಆಕ್ರಮಿಸಿಕೊಳ್ಳಲು ಸಾಧ್ಯವಾಗದೇ ಹೋಗಿದ್ದ ಪ್ರದೇಶಗಳನ್ನೆಲ್ಲಾ ಜಯಿಸಿ ಮೈಸೂರಿನ ದೊರೆಯ ಅಧೀನಪಡಿಸಿದನು. ಬಸವರಾಜ ಹಾಗೂ ಮೀನನಯನ ದಂಪತಿಗಳ ಪುತ್ರನಾಗಿದ್ದ ನಂಜರಾಜನು ಸರ್ವಾಧಿಕಾರಿ ಸ್ಥಾನವನ್ನು ಅಲಂಕರಿಸಿದ್ದನು. ಇವರಿಬ್ಬರ ಪ್ರೀತಿಪಾತ್ರನಾಗಿದ್ದ ವೆಂಕಟಪತಿ ಕೃಷ್ಣರಾಜ ಒಡೆಯರ್‌ರವರ ಅಮಾತ್ಯನಾದನು. ದೊರೆಯ ಅನುಮತಿ ಪಡೆದು ನಂಜರಾಜನು ಬ್ರಾಹ್ಮಣರಿಗೆ ನಾನಾ ವಿಧವಾಗಿದ್ದ ದಾನಗಳನ್ನು ನೀಡಿದನು. ಈ ಶಾಸನದಲ್ಲಿ ಕಂಡುಬರುವ ಬ್ರಹ್ಮಾಂಡ, ವಿಶ್ವಚಕ್ರ, ಚಿನ್ನದ ಆನೆ–ಕುದುರೆ–ರಥ, ಗೋಸಹಸ್ರ, ಕಲ್ಪಧ್ರುಮ, ಕಲ್ಪವಲ್ಲಿ, ಹಿರಣ್ಯಗರ್ಭ, ಎತ್ತು, ಚಿನ್ನದ ಜೋಡಿ ಹಸುಗಳು, ಜಮೀನು, ತುಲಾಭಾರ ಮಾಡಿಕೊಂಡು ತನ್ನ ತೂಕದ ಚಿನ್ನ ಮುಂತಾಗಿ ಸರ್ವಾಧಿಕಾರಿ ಅರ್ಪಿಸಿದ ದಾನಗಳ ಪಟ್ಟಿಯಿಂದ ಆ ಕಾಲದಲ್ಲಿ ಪ್ರಚಲಿತವಾಗಿದ್ದ ದಾನಗಳು, ಅವುಗಳನ್ನು ನೀಡಲು ಶಕ್ತರಾಗಿದ್ದವರ ಆರ್ಥಿಕ ಸಂಪತ್ತು, ಈ ಬಗೆಯ ದಾನಗಳನ್ನು ಕೊಟ್ಟರೆ ಪುಣ್ಯ ಲಭ್ಯ ಹಾಗೂ ಘನತೆ–ಗೌರವ, ಸ್ಥಾನಮಾನಗಳ ವೃದ್ಧಿ ಎಂಬ ದೃಢವಾದ ನಂಬಿಕೆ ಬಲವಾಗಿದ್ದ ವಿಷಯಗಳು ಸ್ಪಷ್ಟವಾಗುತ್ತವೆ.

ಇದರೊಂದಿಗೆ, ಸರ್ವಾಧಿಕಾರಿ ನಂಜರಾಜನು ಕಣ್ವಪುರಿಯಲ್ಲಿ ಬ್ರಾಹ್ಮಣರಿಗಾಗಿ ಒಂದು ಅಗ್ರಹಾರವನ್ನು ಸ್ಥಾಪಿಸಿ, ಅದಕ್ಕೆ ತನ್ನ ಹೆಸರನ್ನು ಇಡಬೇಕೆಂದು ದೊರೆ ಇಮ್ಮಡಿ ಕೃಷ್ಣರಾಜ ಒಡೆಯರ್ ಅವರನ್ನು ಕೇಳಿಕೊಂಡನು. ದಾನ ಪಡೆದವರು ವೇದ–ವೇದಾಂಗ ಸಂಪನ್ನರೂ, ಸರ್ವಶಾಸ್ತ್ರ ವಿಚಕ್ಷಣರೂ, ಸತ್ಕರ್ಮ ನಿರತರೂ, ಸಾಧುಗಳೂ, ಸಜ್ಜನರೂ, ಶ್ರೌತ ಹಾಗೂ ಸ್ಮಾರ್ತ ವಿಶಾರದರೂ, ಅತ್ಯುತ್ತಮ ಗೃಹಸ್ಥರೂ, ಸರ್ವಭೂತ ಹಿತಾಸಕ್ತರೂ, ಪವಿತ್ರಾಗ್ನಿ ರಕ್ಷಕರೂ, ಶಾಂತ ಸ್ವಭಾವದವರೂ, ಅರಿಷಡ್ವರ್ಗ ಜಿತರೂ, ಜಿತೇಂದ್ರಿಯರೂ ಆಗಿದ್ದ ದ್ವಿಜೋತ್ತಮರನ್ನು ಗುರುತಿಸಿ ಅವರಿಗಾಗಿ ಕಾವೇರಿ ನದಿಯ ಉತ್ತರ ದಡದಲ್ಲಿ ಕಣ್ವೇಶ್ವರದ ಬಳಿ ಇದ್ದ, ಪ್ರಸನ್ನ ವೇಣುಗೋಪಾಲ ಹಾಗೂ ಜನಾರ್ಧನ ದೇವರುಗಳ ದೇಗುಲಗಳ ಇರುವಿಕೆಯಿಂದ ಪವಿತ್ರವೂ, ವೈಭವಯುಕ್ತವೂ ಆಗಿದ್ದ ಮತ್ತು ಕ್ಷೇತ್ರಗಳಲೆಲ್ಲಾ ಅತ್ಯುತ್ತಮವಾಗಿದ್ದ ಕನ್ನಂಬಾಡಿ ಎಂಬ ಹೆಸರಿನ ಪ್ರದೇಶದಲ್ಲಿ ಒಂದು ಸೊಗಸಾಗಿದ್ದ ಅಗ್ರಹಾರವನ್ನು ಸ್ಥಾಪಿಸಿದರು. ಅದಕ್ಕೆ ತಮ್ಮ ಸರ್ವಾಧಿಕಾರಿ ನಂಜರಾಜನ ಹೆಸರಿನ ಮೇರೆಗೆ ನಂಜರಾಜಸಮುದ್ರ ಎಂಬುದಾಗಿ ನಾಮಕರಣ ಮಾಡಿದರು. ಅವರು ಈ ಬ್ರಾಹ್ಮಣರ ಕುಟುಂಬ ನಿರ್ವಹಣೆಗೆ ಅತ್ಯಂತ ಸೂಕ್ತವಾದ ವೃತ್ತಿಗಳನ್ನು ಏರ್ಪಡಿಸುವುದಕ್ಕಾಗಿ ಬೂವನಹಳ್ಳಿ, ಕಗ್ಗಲೀಪುರ, ಸಾಂಪ್ಪನಹಳ್ಳಿ, ಹೊಂನೇಹಳ್ಳಿ, ಹಂಪಾಪುರ, ಬಸವನಹಳ್ಳಿ, ಬೈರಾಪುರ, ಮಂಚನಹಳ್ಳಿ, ಬಾಲೂರು, ಸನ್ಯಾಸಿಪುರ, ಯಡಹಳ್ಳಿ, ಚಂಗ, ಅರ್ಜುನಹಳ್ಳಿ, ಕಂಚಿನಕೆರೆ, ಚಿಕ್ಕವಡ್ಡರಗುಡಿ, ಬೊಮ್ಮೇನಹಳ್ಳಿ, ಗಂಧನಹಳ್ಳಿ, ಬೀರನಹಳ್ಳಿ, ದೊಡ್ಡವಡ್ಡರಗುಡಿ, ಅಯ್ಯಪ್ಪನಹಳ್ಳಿ, ಮಾಬಹಳ್ಳಿ, ಕಟ್ಟೆಕೇತನಹಳ್ಳಿ, ಬೆಲತೂರು, ಕೋಟಿಕುರ, ಕಾಕನಹಳ್ಳಿ, ಮಾರಗೊಂಡಹಳ್ಳಿಯ ಅರ್ಧಭಾಗ ಮತ್ತು ಹೆರಗನಹಳ್ಳಿ ಗದ್ದೆಗಳು ಮೊದಲಾಗಿ ಫಲವತ್ತಾಗಿದ್ದ ಜಮೀನು, ತೋಟ, ಜಲಸಂಪತ್ತು, ಸಸ್ಯರಾಶಿ ಮುಂತಾಗಿ ಎಲ್ಲಾ ಸಂಪತ್ತಿನಿಂದ ಕೂಡಿ ಎಲ್ಲಾ ಬಗೆಯಲ್ಲೂ ಸಮರ್ಪಕವಾಗಿದ್ದ ಉಪಗ್ರಾಮಗಳನ್ನು ಸೇರಿಸಿ ಕನ್ನಂಬಾಡಿಗೆ ಪ್ರತಿನಾಮಧೇಯವಾಗಿ ನಂಜರಾಜ–ಸಮುದ್ರ ಅಗ್ರಹಾರವನ್ನು ಸ್ಥಾಪಿಸಿದರು. ಅಲ್ಲಿ ೧೨೦ ವೃತ್ತಿಗಳನ್ನು ವಿಂಗಡಿಸಿ ೧೨೧ ಬ್ರಾಹ್ಮಣೋತ್ತಮರಿಗೆ ದಾನ ಮಾಡಿದರು. ಅವರು ಭಾರದ್ವಾಜ ಗೋತ್ರಕ್ಕೆ ಸೇರಿದ್ದವರೂ, ಯಜುರ್ವೇದಿಗಳೂ ಹಾಗೂ ತಮ್ಮ ಅಮಾತ್ಯ ವೆಂಕಟಪತಿಯ ಜನಕರೂ ಆಗಿದ್ದ ತಿಮ್ಮಪ್ಪಯ್ಯಾರ್ಯರಿಗೆ ೫ ವೃತ್ತಿಗಳನ್ನು; ತಿಮ್ಮಪ್ಪ, ನಾರಾಯಣ, ಕೃಷ್ಣಯ್ಯ, ಕೃಷ್ಣ, ಗೋಪಾಲಯ್ಯ ಎಂಬ ಒಂದೇ ಹೆಸರಿನ ಮೂವರು ಬ್ರಾಹ್ಮಣರು, ನಂಜಯ್ಯ, ಶ್ರೀರಂಗರಾಜ ಮತ್ತು ತಿರುಮಲಾಚಾರ್ಯ ಎಂಬ ಹತ್ತು ಜನರ ಬ್ರಾಹ್ಮಣರಿಗೆ ತಲಾ ಅರ್ಧ ವೃತ್ತಿ

ಯನ್ನು ಮತ್ತು ಉಳಿದ ೧೧೦ ಜನ ವಿಪ್ರರಿಗೆ ತಲಾ ಒಂದು ವೃತ್ತಿಯಂತೆ ೧೧೦ ವೃತ್ತಿಗಳನ್ನು ವಿಂಗಡಿಸಿ ಕೊಟ್ಟರು.

ಇದರೊಂದಿಗೆ ಕೃಷ್ಣರಾಜ ಒಡೆಯರ್‌ರವರು ಪ್ರತಿ ವೃತ್ತಿಯಲ್ಲೂ ಸುಪ್ಪತ್ತಿಗೆ, ತಲೆದಿಂಬು, ಆರಾಮಪೀಠ, ಪಲ್ಲಕ್ಕಿ, ಅತ್ಯಾಕರ್ಷಕವಾಗಿದ್ದ ರತ್ನಗಂಬಳಿಗಳು, ಆಸನಗಳು, ದೇವರ ಆರಾಧನೆಗೆ ಬೇಕಾಗಿದ್ದ ಎಲ್ಲಾ ಸಾಧನ ಸಂಪತ್ತು, ಗೋವುಗಳು, ಪಾತ್ರೆ-ಪಡಗ ಮುಂತಾದ ಗೃಹೋಪಕರಣಗಳು, ಅಕ್ಕಿ, ಬೇಳೆ, ನವ ಧಾನ್ಯಗಳು, ಬೆಲ್ಲ, ತುಪ್ಪ, ಎಣ್ಣೆ ಮುಂತಾಗಿ ದಿನನಿತ್ಯ ಜೀವನಕ್ಕೆ ಅಗತ್ಯವಾಗಿದ್ದ ಎಲ್ಲಾ ಪದಾರ್ಥಗಳಿಂದ ತುಂಬಿದ್ದ, ವಾಸಯೋಗ್ಯವಾಗಿದ್ದ ಮನೆಯನ್ನು ಕಟ್ಟಿ ಕೊಟ್ಟರಲ್ಲದೆ, ಪ್ರತಿಯೊಬ್ಬ ಬ್ರಾಹ್ಮಣ ದಾನಗ್ರಾಹಿಗೂ ಪ್ರತ್ಯೇಕವಾಗಿ ಜೋಡಿ ಉಡಿಗೆ-ತೊಡಿಗೆ, ಅಲಂಕಾರಿಕ ತಲೆಗಟ್ಟು, ರೇಷ್ಮೆ ಬಟ್ಟೆಗಳು, ಬೆಲೆಬಾಳುವ ಕಲ್ಲು ಗಳಿಂದ ಕೂಡಿದ್ದ ಸುಂದರ ಕರ್ಣಾಭರಣಗಳು, ಕೈ-ಉಂಗುರಗಳು ಇತ್ಯಾದಿಗಳನ್ನು ಕಾಣಿಕೆಗಳಾಗಿ ನೀಡಿದರು. ಅವರು ಇಪ್ಪತ್ತಾರುವರೆ ಉಪಗ್ರಾಮಗಳನ್ನು ಕೂಡಿಸಿ ರಚಿಸಲಾಗಿದ್ದ, ನಿರ್ದಿಷ್ಟವಾಗಿ ರೂಪಿಸಲಾಗಿದ್ದ ಗಡಿರೇಖೆಗಳನ್ನು ಹೊಂದಿದ್ದ ಮತ್ತು ಎಲ್ಲಾ ಬಗೆಯ ತೆರಿಗೆಗಳಿಂದ ಮುಕ್ತವಾಗಿದ್ದ ಆ ಅಗ್ರಹಾರ ಕ್ಷೇತ್ರದಲ್ಲಿದ್ದ ಸಮಸ್ತ ನಿಧಿ ನಿಕ್ಷೇಪ, ಭೂಮಿಯ ಮೇಲಿದ್ದ ಎಲ್ಲಾ ಸಂಪತ್ತು, ಭೂಗರ್ಭದಲ್ಲಿದ್ದ ಎಲ್ಲಾ ಖನಿಜಗಳು ಹಾಗೂ ನಿಧಿಗಳು, ಪಾಷಾಣ, ಸಿದ್ಧ, ಸಾಧ್ಯ, ಜಲಸಂಪತ್ತು, ಅಷ್ಟಭೋಗಗಳು, ನಾನಾ ಬಗೆಯ ಫಲಪುಷ್ಪಗಳಿಂದ ಕೂಡಿದ್ದ ಮರ-ಗಿಡಗಳು, ಕೆರೆ-ಕಟ್ಟೆ-ಬಾವಿಗಳು, ತೋಟಗಳು, ಜಮೀನುಗಳು, ದವಸಧಾನ್ಯಗಳು ಒಟ್ಟಿನಲ್ಲಿ ಚರಾಚರ ಸಂಪತ್ತೆಲ್ಲವೂ ಸದ್ಗೃಸ್ಥರಾಗಿದ್ದ ಬ್ರಾಹ್ಮಣರಿಗೇ ಸೇರಿದ್ದುವೇ ಹೊರತು ತನ್ನದಲ್ಲ ಎಂಬುದಾಗಿ ಹೇಳಿ, ನಂಜರಾಜನಿಂದ ದ್ವಿಜಪೂಜೆ ಮಾಡಿಸಿ, ಸಂತೋಷದಿಂದ ಹಾಗೂ ಭಕ್ತಿಯಿಂದ ಹಿರಣ್ಯಪಯೋಧಾರಾಪೂರ್ವಕವಾಗಿ ಈ ಅಗ್ರಹಾರ ವನ್ನು ದಾನ ಮಾಡಿದರು. ಅವರು ಈ ದಾನವನ್ನು ಸ್ವೀಕರಿಸಿದ್ದ ಬ್ರಾಹ್ಮಣೋತ್ತಮರು ಇದನ್ನು ಮಾರ-ಬಹುದು, ಅಡವಿಡಬಹುದು, ದಾನವಾಗಿ ನೀಡಬಹುದು ಹಾಗೂ ವಿನಿಮಯ ಮಾಡಬಹುದು, ಅಂದರೆ ಇದರ ಧಣಿಗಳು ಅವರೇ ಮತ್ತು ಇದನ್ನು ಅವರ ಪುತ್ರ-ಪೌತ್ರರು ಅನುವಂಶಿಕವಾಗಿ ಅನುಭವಿಸಿಕೊಂಡು ಬರತಕ್ಕದ್ದು ಎಂಬುದಾಗಿ ಸಹ ಸ್ಪಷ್ಟವಾಗಿ ಸೂಚಿಸಿದರು.

ಈ ತಾಮ್ರಫಲಕ ಶಾಸನದಲ್ಲಿ ಕೊಡಲಾಗಿರುವ ವಿವರಗಳು ೧೮ನೇ ಶತಮಾನದ ಮೈಸೂರು ಸೀಮೆಯ ಸಾಮಾಜಿಕ ವ್ಯವಸ್ಥೆಯ ಮೇಲೆ ಬೆಳಕು ಬೀರುತ್ತವೆ. ಬ್ರಾಹ್ಮಣರಿಗಾಗಿ ಅತ್ಯುತ್ತಮವಾಗಿದ್ದ ಪ್ರದೇಶದಲ್ಲಿ ಅಗ್ರಹಾರವನ್ನು ಸ್ಥಾಪಿಸುವ ಸಂಪ್ರದಾಯ ಈ ಸಮಾಜ ದಲ್ಲೂ ಮುಂದುವರಿದುಕೊಂಡು ಬಂದಿದ್ದಿತು ಎಂಬುದು ಇಮ್ಮಡಿ ಕೃಷ್ಣರಾಜ ನೃಪತಿಯು ನಂಜರಾಜ-ಸಮುದ್ರ ಅಗ್ರಹಾರವನ್ನು ರಚಿಸುವುದಕ್ಕಾಗಿ ಆರಿಸಿಕೊಂಡಿದ್ದ ಕಾವೇರಿ ನದಿ ದಡದ ಮೇಲಿದ್ದ ಫಲವತ್ತಾದ ಉಪ ಗ್ರಾಮಗಳ ವಿವರಣೆಯಿಂದ ತಿಳಿದುಬರುತ್ತದೆ. ಪ್ರತಿ ಉಪಗ್ರಾಮವನ್ನು ಸ್ಪಷ್ಟವಾಗಿ ಗುರುತಿಸುವುದಕ್ಕಾಗಿ ಕಲ್ಲುಗಳನ್ನು, ವಾಮನ ಮುದ್ರೆಯಿಂದ ಕೂಡಿದ್ದಂತಹ ಹಲವು ಕಲ್ಲುಗಳನ್ನು ನೆಡುವಾಗ ಉಲ್ಲೇಖಿಸಿರುವ ಕೆರೆ, ಕಟ್ಟೆ, ಅತ್ತಿ-ಬೇಲ ಮೊದಲಾದ ಮರಗಿಡಗಳು, ಹೊಲ-ಗದ್ದೆಗಳು, ಉಪಯುಕ್ತ ಭೌಗೋಳಿಕ ಲಕ್ಷಣಗಳು ಮುಂತಾದ ಅಂಶಗಳಿಂದ ಆ ಇಡೀ ಅಗ್ರಹಾರ ಪ್ರದೇಶವು ಎಲ್ಲಾ ವಿಧದಲ್ಲೂ ಅತ್ಯುತ್ತಮವಾಗಿದ್ದಿತೆಂಬುದು ಸ್ಪಷ್ಟ ವಾಗುತ್ತದೆ. ಈ ಉಪಗ್ರಾಮಗಳು ಭೌತಿಕವಾಗಿ ಉತ್ತಮವಾಗಿದ್ದುವು ಮಾತ್ರವಲ್ಲದೆ, ಸಾಮಾಜಿಕ-ಧಾರ್ಮಿಕವಾಗಿಯೂ ಸಹ ಸೌಹಾರ್ದಯುತ ಸಹಜೀವನದ ಕೇಂದ್ರವಾಗಿದ್ದುವು ಎಂಬುದು ಅವುಗಳಲ್ಲಿ ವಾಸಿಸುತ್ತಿದ್ದ ಹಾಗೂ ಹೊಲಗದ್ದೆಗಳ ಒಡೆಯರಾಗಿದ್ದ ಕುರುಬರ ಹಲಗ, ಗೌಡೇಗೌಡ, ತಿರುಮಲಾಚಾರ್ಯ, ಚೂಡಾಮಣಿ ಕೃಷ್ಣಯ್ಯ, ಸಿಂಗಪೆರುಮಾಳ್, ಕರಿಸಿದ್ದ, ಚೆನ್ನಸೆಟ್ಟಿ, ಚೌಡ ಮೊದಲಾದ ವಿಭಿನ್ನ ಜಾತಿಗಳ ಸದಸ್ಯರ ಪ್ರಸ್ತಾಪ ; ಪಟ್ಟಣದಮ್ಮ, ಮಸಣಿಕಮ್ಮ ಮೊದಲಾದ ಗ್ರಾಮದೇವತೆಗಳ ಗುಡಿಗಳು, ಭೈರಾದೇವ, ಬ್ರಹ್ಮದೇವ ದೇಗುಲಗಳು : ಲಿಂಗಯ್ಯ, ಚಿಕ್ಕಯ್ಯ ಮೊದಲಾದವರ ತೋಟಗಳು, ವಡ್ಡರ ಪಾಳುಬಿದ್ದ ತೋಟ, ವೆಂಕಣ್ಣನ ಕೆರೆ ಹಾಗೂ ಮಾವಿನತೋಪು, ಜಲಗಾರರ ಮರಟಿ ಇತ್ಯಾದಿಗಳ ಉಲ್ಲೇಖದಿಂದ ಸೂಚಿತವಾಗುತ್ತದೆ. ಈ ಕಾರಣಗಳಿಂದಲೂ ಮತ್ತು

ಸರ್ವ ಗೌರವಾರ್ಹರೂ ಎಂಬುದಾಗಿ ಹೆಸರುವಾಸಿಗಳಾಗಿದ್ದ ಬ್ರಾಹ್ಮಣರಿಗೆ ಅಗ್ರಹಾರಗಳನ್ನು ಸ್ಥಾಪಿಸಿ ನಾನಾ ಬಗೆಯ ದಾನದತ್ತಿಗಳನ್ನು, ಕಾಣಿಕೆಗಳನ್ನು ಅರ್ಪಿಸಿದರೆ ಪುಣ್ಯವೂ ಹಾಗೂ ಸಾಮಾಜಿಕ ಘನತೆಯೂ ಲಭ್ಯವಾಗುತ್ತವೆ ಎಂಬ ನಂಬಿಕೆಯು ಈ ಸಮಾಜದ ಸದಸ್ಯರಲ್ಲೂ ಬಲವಾಗಿದ್ದುದರಿಂದಲೂ, ಈ ಅಗ್ರಹಾರದಲ್ಲಿ ಹೊರಗಿನಿಂದ ಬಂದಿದ್ದ ಬ್ರಾಹ್ಮಣರು ಯಾವ ಪ್ರತಿರೋಧವನ್ನು ಎದುರಿಸಬೇಕಾಗಲಿಲ್ಲ, ಅದಕ್ಕೆ ಬದಲಾಗಿ ಅವರಿಗೆ ಎಲ್ಲಾ ಸೌಕರ್ಯ, ಘನತೆ-ಗೌರವಗಳು ಲಭ್ಯವಾಗಿ ಅವರು ಶಾಂತಿ ನೆಮ್ಮದಿಯಿಂದ ಬಾಳಿ, ತಮ್ಮ ಅತ್ಯುತ್ತಮ ಕೊಡುಗೆಗಳನ್ನು ನೀಡಿ, ಸಮಾಜದ ಮೇಲ್ಮುಖ ಪ್ರಗತಿಗೆ ಸಹಾಯ ಮಾಡಲು ಶಕ್ತರಾದರು.

ಬ್ರಾಹ್ಮಣರು ಆಳುವ ವರ್ಗವನ್ನು ಹರಸಿ ಬೆಂಬಲಿಸುತ್ತಿದ್ದ ಗಣ್ಯವರ್ಗವಾಗಿದ್ದರು. ಸಕುಟುಂಬ ಸಮೇತರಾಗಿ ಈ ಅಗ್ರಹಾರಕ್ಕೆ ವಲಸೆ ಬಂದು ನೆಲಸಿದ್ದ ಬ್ರಾಹ್ಮಣೋತ್ತಮರಿಗೆ ಕೊಡಲಾದ ಕೃಷಿ ಸಂಬಂಧಿ ಎಲ್ಲಾ ಆರ್ಥಿಕ ಹಕ್ಕು ಅಧಿಕಾರ ಮತ್ತು ಈ ಎಲ್ಲಾ ಗ್ರಾಮಗಳ ಮೇಲೆ ಸ್ಥಿರೀಕರಿಸಲಾದ ಅವರ ಪರಮಾಧಿಕಾರ ಇತ್ಯಾದಿಗಳ ಕಾರಣ ಅವರು ಹೊಸ ಪ್ರಬಲ ವೃತ್ತಿ ಸಮೂಹವಾಗಿ, ದೊರೆಗೆ ಬಹು ಬೆಂಬಲ ನೀಡಿ, ಅವನ ರಾಜ್ಯಾಧಿಕಾರವನ್ನು ಬಲಪಡಿಸಿದ ಶಕ್ತಿಗಳಾದರು. ಈ ಬೆಂಬಲ ನಿರಂತರವಾಗಿ ಮುಂದುವರಿದುಕೊಂಡು ಬರುವಂತೆ ಮಾಡುವ ಉದ್ದೇಶಕ್ಕಾಗಿಯೇ ಈ ಅಗ್ರಹಾರದ ಮೇಲಿದ್ದ ಅವರ ಅಧಿಕಾರವನ್ನು ಅವರ ಪುತ್ರ-ಪೌತ್ರರು ಚಲಾಯಿಸಿಕೊಂಡು ಬರತಕ್ಕದ್ದು ಎಂಬುದಾಗಿ ನಿರೂಪಿಸಲಾಯಿತು. ಹೀಗೆ ಆನುವಂಶಿಕ ಅಧಿಕಾರ ವ್ಯವಸ್ಥೆಯನ್ನು ಎತ್ತಿ ಹಿಡಿಯಲಾಯಿತು. ಈ ಅಗ್ರಹಾರ ಸ್ಥಾಪನೆಯಿಂದ ರಾಜಕೀಯ ಹಾಗೂ ಧಾರ್ಮಿಕ ಪ್ರಭುವಾಗಿ ದೊರೆಗಿದ್ದ ಸ್ಥಾನಮಾನಕ್ಕೆ ಇನ್ನು ಹೆಚ್ಚಿನ ಮಾನ್ಯತೆ, ಮನ್ನಣೆ ಹಾಗೂ ಸಮರ್ಥನೆ ಸಿಕ್ಕಿತು. ಬ್ರಾಹ್ಮಣರು ರಾಜತ್ವದ ಹಿರಿಮೆಗೆ ಇನ್ನೊಂದು ಪ್ರಬಲ ಸಮರ್ಥನಾ ಮೂಲಾಧಾರವಾದರು.[1]

ಈ ಶಾಸನದಲ್ಲಿ ನೋಡಬಹುದಾದ ಬ್ರಾಹ್ಮಣರ ಅತ್ಯುತ್ತಮ ಗುಣಲಕ್ಷಣ ಹಾಗೂ ಸಾಧನೆಗಳ ವಿವರಣೆಯಿಂದ ಅವರುಗಳು ಆಧ್ಯಾತ್ಮಿಕವಾಗಿ, ನೈತಿಕವಾಗಿ ಹಾಗೂ ಬೌದ್ಧಿಕವಾಗಿ ಅತ್ಯುನ್ನತ ಮಟ್ಟದಲ್ಲಿದ್ದರು. ಅವರುಗಳು ಎಷ್ಟು ಶ್ರೇಷ್ಠರೂ, ಘನತೆವೆತ್ತವರೂ, ಉದಾತ್ತರೂ ಆಗಿದ್ದರೆಂದರೆ ಅವರನ್ನು ನಾಡಿನ ಕೀರ್ತಿ ಕಳಶ ಹಾಗೂ ಸಮಾಜಕ್ಕೆ ಭೂಷಣ ಎಂಬುದಾಗಿ ಪರಿಗಣಿಸಲಾಗುತ್ತಿದ್ದಿತು ಎಂಬುದು ಗೋಚರಕ್ಕೆ ಬರುತ್ತದೆ. ಅವರಿಗಿದ್ದ ಆಧ್ಯಾತ್ಮಿಕ ಹಾಗೂ ಬೌದ್ಧಿಕ ಶಕ್ತಿಗೆ, ಈ ರಾಜ ಶಾಸನವು ಆರ್ಥಿಕಾಧಿಕಾರವನ್ನು ಹಾಗೂ ಪ್ರಭು ಶಕ್ತಿಯನ್ನು ಸೇರಿಸಿ, ಅವರ ಹಿರಿಮೆ-ಗರಿಮೆಗಳು ಇಮ್ಮಡಿಸುವಂತೆ ಮಾಡಿತು. ಇದರಿಂದ ಅವರು ಆ ಕ್ಷೇತ್ರದ ಭೂಮಾಲೀಕರಾದರು ಮತ್ತು ಸ್ಥಳೀಯವಾಗಿ ಸ್ವಯಮಾಧಿಪತ್ಯವನ್ನು ನಡೆಸಲು ಅವರಿಗೆ ಅವಕಾಶ ಸಿಕ್ಕಿತು, ಆಡಳಿತದ ಹಾಗೂ ಕಂದಾಯದ ಆದಾಯವನ್ನು ಪಡೆದು ಅನುಭವಿಸುವ ಹಕ್ಕುಗಳೂ ಲಭ್ಯವಾದುವು. ಹೀಗೆ ಈ ರಾಜಕೀಯ ರಚನೆಯಲ್ಲಿ ಈ ವರ್ಗವು ಬಹುಮಟ್ಟಿಗೆ ಊಳಿಗಮಾನ್ಯ ಪದ್ಧತಿಯ ಲಕ್ಷಣಗಳನ್ನು ಪಡೆದುಕೊಂಡು ರಾಜತ್ವವನ್ನೂ ಇನ್ನೂ ಬಲಪಡಿಸಿ ಪುಷ್ಟಿಗೊಳಿಸಿದ ಮೂಲ ಒರತೆಯಾಯಿತು.

ಬ್ರಾಹ್ಮಣರಿಗೆ ಸೇವೆ ಮಾಡುವುದರಿಂದ, ಅವರಿಗೆ ವಿವಿಧ ದಾನ-ದಕ್ಷಿಣೆ, ಕಾಣಿಕೆಗಳನ್ನು ಅರ್ಪಿಸುವುದರಿಂದ ಬಹು ಪುಣ್ಯ ಬರುತ್ತದೆ, ಅವರ ಸಹವಾಸದಲ್ಲಿದ್ದರೆ ಹೆಚ್ಚಿನ ಸಾಮಾಜಿಕ ಪ್ರತಿಷ್ಠೆ, ಗೌರವಗಳು ಸಿಗುತ್ತವೆ ಮತ್ತು ಅವರ ಧರ್ಮ ಬೋಧೆ, ಪೌರೋಹಿತ್ಯ ಹಾಗೂ

---

1 Besterman, J. C., The Conundrum of the kings Authority in J. F. Richards, (ed.), *Kingship aad Authority in South India,* 1978, PP. 1, 27 ; Inden, R,. Ritual Authority and Cyclical Time in Hindu Kingship, Ibid., pp. 28-73 ; Hocart, A, M., *Kings and Councillors* 1970.

ಮಾರ್ಗದರ್ಶನಗಳಿಂದ ಮೋಕ್ಷವನ್ನು ಪಡೆಯುವುದು ಸಾಧ್ಯವಾಗುತ್ತದೆ ಎಂಬ ನಂಬಿಕೆಗಳು ಜನರ ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿದ್ದರಿಂದ, ಸ್ವಯಂ ವಿಧಿತ ಮೌಲ್ಯಗಳಾಗಿ ಅಂಗೀಕೃತವಾಗಿದ್ದರಿಂದ, ಆ ಅಗ್ರಹಾರ ಕ್ಷೇತ್ರದ ಸಾಮಾನ್ಯ ನಿವಾಸಿಗಳು ಆ ಬ್ರಾಹ್ಮಣರನ್ನೂ ಸ್ವಾಗತಿಸಿ ಗೌರವಿಸಿದರು. ದೊರೆಯೂ ಅವರಿಗೆ ಅಲ್ಲಿದ್ದ ಅಲ್ಪ ಸರಕು-ಸೇವೆಗಳನ್ನು ನೀಡಿ ಅಧಿಕಾರವನ್ನೂ ವಹಿಸಿಕೊಟ್ಟರೂ, ಅದರಿಂದ ಈ ಕ್ಷೇತ್ರದಲ್ಲಿ ಘರ್ಷಣೆಗಳು ತಲೆದೋರದೇ ಇದ್ದುದಕ್ಕೆ ಇದು ಮುಖ್ಯ ಕಾರಣವಾಗಿದ್ದಿತು. ಉತ್ತಮ ಬ್ರಾಹ್ಮಣರ ಪ್ರತಿ ಭಕ್ತಿ-ಗೌರವ, ರಾಜನಿಷ್ಠೆ ಹಾಗೂ ರಾಜಭಕ್ತಿ ಇತ್ಯಾದಿಗಳು ಜನಜೀವನದಲ್ಲಿ ಜೀವಂತವಾಗಿದ್ದ ಮೌಲ್ಯಗಳಾಗಿದ್ದುವು. ರಾಜರು ಜನರ ಸಮ್ಮತಿಯನ್ನು ಪಡೆದು ಈ ಅಗ್ರಹಾರವನ್ನು ಸ್ಥಾಪಿಸಿದ್ದರು ಎಂಬುದಾಗಿ ಹೇಳಬಹುದು. ಕಾರಣ ದಾನಗ್ರಾಹಿ ಬ್ರಾಹ್ಮಣರನ್ನು ಸಂಸ್ಕೃತ ಭಾಷೆಯಲ್ಲಿ ವರ್ಣಿಸಿ ಪರಿಚಯ ಮಾಡಿಸಿದ ಈ ಶಾಸನವು ನಂಜರಾಜ ಸಮುದ್ರ-ಅಗ್ರಹಾರಕ್ಕೆ ಸೇರಿದ್ದ ಉಪಗ್ರಾಮಗಳನ್ನೂ, ನೆಟ್ಟ ಕಲ್ಲುಗಳು ಮತ್ತಿತರ ವಿವರಗಳನ್ನು ಆ ಗ್ರಾಮಗಳ ನಿವಾಸಿಗಳ ಆಡುಭಾಷೆಯಾಗಿದ್ದ ಕನ್ನಡದಲ್ಲಿ ನೀಡಿರುವುದು ಗಮನಾರ್ಹವಾಗಿರುವ ವಿಷಯ : ಇದರಿಂದ ಈ ಕಾರ್ಯಕ್ಕೆ ಜನರ ಅಂಗೀಕಾರವಿದ್ದಿತು, ಅವರ ಗ್ರಾಮಗಳನ್ನು ಕೂಡಿಸಿ ಒಂದು ಅಗ್ರಹಾರವನ್ನಾಗಿಸಿ, ಅದನ್ನು ದಾನ ಮಾಡುವ ಕೆಲಸಕ್ಕೆ ಅವರ ಬೆಂಬಲವಿದ್ದಿತು, ಬಹುಶಃ ಅವರು ಈ ಕೆಲಸವನ್ನೂ ಪವಿತ್ರವಾದ ಧಾರ್ಮಿಕ ಕಾರ್ಯ ಎಂಬುದಾಗಿ ಕಾಣಿಸಿದ್ದರಿಂದ, ಪ್ರತಿಭಟಿಸದೆ ಸಹಕರಿಸಿದರು ಎಂಬುದು ಧ್ವನಿತವಾಗುತ್ತದೆ ಎಂದು ಹೇಳಬಹುದು.

ಅಗ್ರಹಾರಕ್ಕೆ ಬಂದ ಬ್ರಾಹ್ಮಣರಲ್ಲಿ ವೇದ, ವೇದಾಂಗ ಹಾಗೂ ಎಲ್ಲಾ ಶಾಸ್ತ್ರಗಳಲ್ಲಿ ನಿಪುಣರಾಗಿದ್ದವರೂ, ದೈವಜ್ಞರೂ, ವಿವೇಕಿಗಳೂ, ಘನ ಪಂಡಿತರೂ, ಕವಿಗಳೂ, ವಿಬುಧರೂ, ಮಿತ-ಭಾಷಿಗಳೂ ವಿಪ್ರೇಂದ್ರರೂ, ಶ್ರೌತಿಗಳೂ, ಉತ್ತಮ ವೈದರೂ, ಮೀನಾಕ್ಷಿ ಎಂಬ ಅಪರೂಪದ ಹೆಸರನ್ನು ಹೊಂದಿದ್ದ ಸೋಮಯಾಜ್ಞಿಕರೂ ಇದ್ದರು ಮತ್ತು ನಾನಾ ಗೋತ್ರಗಳಿಗೆ ವೇದಶಾಖೆಗಳಿಗೆ ಸೇರಿದ್ದ, ತ್ರಿಮತಸ್ಥರಾಗಿದ್ದ, ಅಂದರೆ ಸ್ಮಾರ್ತ, ಮಾಧ್ವ, ಶ್ರೀವೈಷ್ಣವ ದ್ವಿಜೋತ್ತಮರೂ ಈ ಅಗ್ರಹಾರಕ್ಕೆ ಅಲಂಕಾರ ಪ್ರಾಯರಾಗಿದ್ದರು. ಆರಾಧ್ಯರೊಬ್ಬರ ಉಲ್ಲೇಖವನ್ನೂ ಕಾಣಬಹುದು. ಸಾಮಾನ್ಯ ಗ್ರಾಮವಾಸಿಗಳಿಗೆ ಆ ಬ್ರಾಹ್ಮಣರ ಉತ್ತಮ ಜೀವನ ರೀತಿ ನೀತಿಗಳನ್ನು ಅನುಕರಿಸಿ ಅಳವಡಿಸಿಕೊಳ್ಳಲು ಅವಕಾಶ ಉಂಟಾಯಿತು ಎಂದು ಹೇಳಬಹುದು. ಅವರುಗಳು ಆ ಉತ್ತಮರ ಒಡನಾಟವನ್ನು ಇಚ್ಛಿಸುತ್ತಿದ್ದುದರಿಂದ ಆ ವ್ಯಕ್ತಿಗಳಿಗೆ ಹೆಚ್ಚಿನ ಬೇಡಿಕೆ ಇದ್ದಿತು ; ಅವರೂ ಸಹ ಈ ಬಗೆಯ ಸಾಮಾಜಿಕ ವಿನಿಮಯದಲ್ಲಿ ಭಾಗವಹಿಸಲು ಉತ್ಸುಕರಾಗಿದ್ದರು. ಕಾರಣ ಇದರಿಂದ ಅವರಿಗೆ ಸಮಾಜದಲ್ಲಿ ಇದ್ದ ಉಚ್ಚ ಸ್ಥಾನಮಾನ, ಜನರ ದೃಷ್ಟಿಯಲ್ಲಿ ಇದ್ದ ಘನತೆ ಗೌರವಗಳಿಗೆ ಸಮರ್ಥನೆ ಸಿಕ್ಕಿದಂತಾಯಿತು.

ಡಾ. ಲೀಲಾ ಬಿ.*

# ಸಾಮಾಜಿಕ ಸುಧಾರಣೆಯಲ್ಲಿ ನೃತ್ಯದ ಪಾತ್ರ ಒಂದು ವಿಶ್ಲೇಷಣೆ; ಮೈಸೂರಿಗೆ ಸಂಬಂಧಿಸಿದಂತೆ

ಅನಾದಿಕಾಲದಿಂದಲೂ, ನೃತ್ಯಕ್ಕೂ ಮತ್ತು ದೇವಾಲಯಕ್ಕೂ ನಿಕಟವಾದ ಸಂಬಂಧವಿರ್ಪಟ್ಟಿದ್ದಾಗ್ಯೂ ಕೂಡ ೧೯ನೇ ಶತಮಾನದ ಸಮಾಜ ಸುಧಾರಕರು, ದೇವದಾಸಿಯರು ತಮ್ಮ ನೈತಿಕತೆಯನ್ನು ಕಳೆದುಕೊಂಡು ವಾರಾಂಗನೆಯರಾಗಿ, ಸಮಾಜದ ಅವನತಿಗೆ ಕಾರಣ ರಾಗಿರುತ್ತಾರೆಂದು ವಾದಿಸಿದ್ದೂ ಅಲ್ಲದೆ, ಇದು ನಿತ್ಯ ಜನ ಜೀವನಕ್ಕೆ ಮಾರಕವಾಗಿದೆಯೆಂದೂ, ಸರ್ಕಾರವು ಇದನ್ನು ಕಾನೂನಿನ ಮೂಲಕ ಬಂಧಿಸಬೇಕೆಂದು ಸರ್ಕಾರಕ್ಕೆ ವಿನಂತಿಸಿದರು ಇದರ ಫಲವಾಗಿ ದೇವದಾಸಿ ಪದ್ಧತಿ ರದ್ದಾಯಿತು. ದೇವದಾಸಿ ಪದ್ಧತಿ ರದ್ದಾದರಿಂದ ಮನುಷ್ಯನ ನೈತಿಕ ಮಟ್ಟ ಹೆಚ್ಚಾಯಿತೆ ? ನಾಟ್ಯಕಲೆಗೆ ಇದು ಮಾರಕವಾಗಲಿಲ್ಲವೆ ? ಹಿಂದೂ ಸಂಸ್ಕೃತಿಯ ಮೇಲೆ ಇದರ ಪರಿಣಾಮವೇನಾಯಿತು ಎಂಬುದನ್ನು ಇಲ್ಲಿ ಸೂಕ್ಷ್ಮವಾಗಿ ಅವಲೋಕಿಸಿದೆ.

## ದೇವದಾಸಿ ಪದ್ಧತಿ ಬೆಳೆದು ಬಂದ ರೀತಿ

ನೃತ್ಯಕ್ಕೆ ಪ್ರಾಶಸ್ತ್ಯ ದೊರೆತು 'ದೇವದಾಸಿ ಜನಾಂಗ' ಪ್ರವರ್ಧಮಾನಕ್ಕೆ ಬಂದುದು ೮ ಅಥವಾ ೯ನೇ ಶತಮಾನದಲ್ಲಿ. ಇವರು ದೇವರಿಗೆ ವಿಶೇಷ ಸೇವೆ ಮಾಡಲು ಅರ್ಪಿತವಾದವರು "ದೇವದಾಸಿಯರ ಮುಖ್ಯ ಕೆಲಸ, ದೇವರಿಗೆ ಚಾಮರ ಬೀಸುವದು ಮತ್ತು ಮೆರವಣಿಗೆಯಲ್ಲಿ ನೃತ್ಯ ಮಾಡುವದು "[1] ಈ ದಾಸಿಯರು ತಮ್ಮ ಉತ್ತಮ ಮಟ್ಟದ ರಸಿಕತೆಯಿಂದಲೂ, ಕಲೆಯಿಂದಲೂ ದೇವಾಲಯಕ್ಕೆ ಶೋಭೆ ತರುವಂತಹ ರಾಗಿದ್ದರು. ಮೊಹಂಜುದಾರೊನಲ್ಲಿ ದೊರಕಿರುವ ಸ್ತ್ರೀ ಪ್ರತಿಮೆಯೊಂದರಲ್ಲಿ ನರ್ತಕಿಯ ಲಕ್ಷಣಗಳನ್ನು ಗುರುತಿಸಬಹುದು. ಅರ್ಥಶಾಸ್ತ್ರದಲ್ಲಿ ಗಣಿಕೆಯರ ಹೆಸರಿದ್ದರೂ ದೇವಾದಾಸಿಯರ ಹೆಸರಿಲ್ಲ. ಈ ಸಂಪ್ರದಾಯ ಉಜ್ಜಯಿನಿ ರಾಜ್ಯದಲ್ಲಿದಂತೆ ಕಾಳಿದಾಸನ ಮೇಘದೂತ ಕಾವ್ಯದಲ್ಲಿ ಉಲ್ಲೇಖವಿದೆ. ಭವಿಷ್ಯ ಪುರಾಣದಲ್ಲಿ ಇದರ ಉಲ್ಲೇಕವಿದೆ. ಕಲ್ಹಣನ ರಾಜ ತರಂಗಿಣಿಯಲ್ಲಿ ಇಂಥ ಸಂಪ್ರದಾಯವಿತ್ತೆಂದು ಅವನು ತಿಳಿಸಿದ್ದಾನೆ. ಗುಜರಾತಿನ ಸೋಮನಾಥ ದೇವಾಲಯದಲ್ಲಿ ೫೦೦ ಜನ ನರ್ತಕಿಯರಿದ್ದರು. ತಂಜಾವೂರಿನ ದೇವಾಲಯದಲ್ಲಿ ದೇವರ ಸೇವೆಗಾಗಿ ೪೦೦ ಸೇವಕಿಯರಿದ್ದರೂ ಎಂಬುದಾಗಿ ಅಲ್ತೇಕರರು ತಮ್ಮ *Women in Hindu Civilization* ನಲ್ಲಿ ಉಲ್ಲೇಖಿಸಿರುತ್ತಾರೆ.

---

* ಗ್ರಂಥಪಾಲಕಿ, ಸೌತ್ ಇಂಡಿಯನ್ ಅಸೋಸಿಯೇಶನ್ ಕಾಲೇಜು, ಸಯಾನ್, ಮುಂಬೈ.

1 *Encyclopedia of Religion and Ethics*. Vol. 10, p. 400 Sec also E. Thurston ; Castes and Tribes of Southern India. Vol 11, C-J. p. 126.

ದೇವದಾಸಿಯರು ತಮ್ಮ ಉತ್ತಮ ಪುಟ್ಟದ ಕಲೆಯಿಂದ ದೇವಾಲಯಕ್ಕೆ ಶೋಭೆ ತರುವಂತಾವ ರಾಗಿದ್ದರು. ಮುಂಬಯಿ ಪ್ರಾಂತದಲ್ಲಿ ಇವರನ್ನು "ಮುರಲಿ, ಜೋಗಿತಿ, ನಾಯಕಿನಿ, ಕಲಾವಂತಿ, ಬಸವಿ, ದೇವದಾಸಿ, ದೇವಳಿ ಜೋಗಿತಿ, ಮತಂಗಿ, ಶರನಿ."[2] ಎಂಬ ಹೆಸರಿನಿಂದ ಕರೆಯುವರು. ಸಂಗೀತ ಮತ್ತು ನೃತ್ಯ ಈ ದೇವದಾಸಿಯರ ಸ್ವತ್ತಾಗಿದ್ದರಿಂದ ಮತ್ತು ಕುಲೀನ ಮನೆತನದ ಹೆಣ್ಣುಮಕ್ಕಳು, ಈ ಕಲೆಯನ್ನು ಅಭ್ಯಾಸ ಮಾಡುತ್ತಿರಲಿಲ್ಲ. ಬಂಗಾಲದ ಕುಲೀನ ಮನೆತನದಲ್ಲಿ ಇಂಗ್ಲಿಷ್ ಪ್ರಭಾವ ಹೆಚ್ಚಾಗಿತ್ತು. ಹಾಗಾಗಿ ದುರ್ಗಾಪೂಜಾ ಅಥವಾ ಯಾವುದಾದರೊಂದು ಸಮಾರಂಭದಲ್ಲಿ ಇಂಗ್ಲಿಷ್ ಬಾಬುಗಳಿಗೆ ಕುಣಿತ, ಮನೋರಂಜನೆ ಏರ್ಪಡಿಸಲಾಗುತ್ತಿತ್ತು. ಕುಣಿತ ಮತ್ತು ಮನೋರಂಜನೆ ಎಷ್ಟರ ಮಟ್ಟಿಗೆ ಚಾಲನೆಯಲ್ಲಿ ಇತ್ತೆಂದರೆ ಕಾಲ ಕ್ರಮೇಣ, ಇಂಗ್ಲಿಷ್ ಜನರು ವಿವಿಧ ವಿನೋಧಾವಳಿಗಳನ್ನು ತಾವೇ ಏರ್ಪಡಿಸುತ್ತಿದ್ದರು. ೧೮ನೇ ಶತಮಾನದ ಪೂರ್ವಾರ್ಧದಲ್ಲಿ ನೃತ್ಯ ಮತ್ತು ಹುಕ್ಕಾ ಸೇದುವದನ್ನು ಇಂಗ್ಲಿಷರು ಸಾಮಾನ್ಯವೆಂದು ಪರಿಗಣಿಸುತ್ತಿದ್ದರು.

J. Michand ಅವರ *Histore des et de La chile de I "Empire de Mysore Sons les Regnes d' Hyder-Aly et Tipoo Shah* 1801 ಎಂಬ ಫ್ರೆಂಚ್ ಪುಸ್ತಕದಲ್ಲಿ ಈ ಕೆಳಗಿನ ದೇವದಾಸಿಯರ ವಿವರಣೆ ಸಿಗುತ್ತದೆ.

"ಟೀಪೂಸುಲ್ತಾನನ ಹತ್ತಿರ ಅತ್ಯಂತ ಪ್ರಸಿದ್ಧರಾದ ಸುಂದರರಾದ ಉತ್ತಮ ನರ್ತಕಿಯರಿದ್ದರು. ಅವರ ಕಣ್ಣು, ಕಾಲು, ದೇಹ ಮತ್ತು ಎಲ್ಲಾ ಅಂಗಗಳೂ ಅವರನ್ನು ಕಂಡವರನ್ನು ಮಂತ್ರ ಮುಗ್ಧಗೊಳಿಸುತ್ತಿತ್ತು. ಮತ್ತು ಸೊಂಟ ಅತ್ಯಂತ ಸಣ್ಣಗಿದ್ದು ಆಕರ್ಷಕವಾಗಿತ್ತಲ್ಲದೆ ಅವರ ವಯಸ್ಸು ೧೬ ಅಥವಾ ೧೭ ಇರುತ್ತಿತ್ತು. ಅವರಿಗೆ ಸ್ವಲ್ಪ ವಯಸ್ಸಾಗುತ್ತಲೂ ಅವರನ್ನು ಊರಿಗೆ ಕಳುಹಿಸಲಾಗುತ್ತಿತ್ತು. ಅವರು ದೇವಾಲಯದಲ್ಲಿ ಆಶ್ರಯ ಪಡೆಯುತ್ತಿದ್ದರು. ಮತ್ತು ಅವರ ರಮ್ಯತೆಯು ಸರ್ಕಾರ ಮತ್ತು ಬ್ರಾಹ್ಮಣರ ಬೊಕ್ಕಸವನ್ನು ತುಂಬುತ್ತಿತ್ತು.[3]

ಬ್ರಿಟೀಷ್ ಸರ್ಕಾರದ, ರಾಜಮನೆತನದ ಅಧಿಕಾರಿಯಾರೇ ಬರಲಿ ಅತಿಥಿ ಸತ್ಕಾರಕ್ಕಾಗಿ ನೃತ್ಯಕೂಟ ಏರ್ಪಡಿಸಲಾಗುತ್ತಿತ್ತು.[4] ೧೮೮೩ರಲ್ಲಿ ಡ್ಯೂಕ್ ಆಫ್ ಎಡಿನ್‌ಬರೊರವರು ಹಿಂದೂಸ್ಥಾನಕ್ಕೆ ಬಂದಾಗ ಮತ್ತು ವೇಲ್ಸ ರಾಜಕುಮಾರ ಆಲ್‌ಬರ್ಟ ಎಡ್ವರ್ಡ್ಸ್ ಭೇಟಿ ಕೊಟ್ಟಾಗ ಅವರನ್ನು ಸ್ವಾಗತಿಸಲು ಭವ್ಯವಾದ ಚಪ್ಪರ ಹಾಕಿ ನೃತ್ಯ ಏರ್ಪಡಿಸದ್ದಲ್ಲದೆ, ಮದರಾಸಿನ ರಾಯಪುರಂ ಸ್ಟೇಷನ್ನಿನಲ್ಲಿ, ಲಚ್ಮೀ ಎಂಬ ನೃತ್ಯಗಾತಿಯನ್ನು ಮಹಾರಾಜರಿಗೆ ಪರಿಚಯ ಮಾಡಿಸಲಾಯ್ತು. ಇದಕ್ಕೆ ಯಾರೂ ವಿರೋಧವನ್ನು ವ್ಯಕ್ತಪಡಿಸಲಿಲ್ಲ.[5]

ಇದರಿಂದ ಶೃತಪಡುವದೇನೆಂದರೆ, ನೃತ್ಯವು ಜೀವನದ ಒಂದು ಅಂಗವಾಗಿತ್ತು. ಮತ್ತು ಅದಕ್ಕೆ ಹೆಚ್ಚಿನ ವಿರೋಧ ಇರಲಿಲ್ಲ. ಎಲ್ಲಾ ದೇವಸ್ಥಾನದಲ್ಲೂ ನೃತ್ಯಕ್ಕೆಂದು ಬಿಡಲಾದ ದಾಸಿಯರಿದ್ದರು. ಈ ದಾಸಿಯರು ತಮ್ಮ ಚಾಣಾಕ್ಷತನದಿಂದ, ಮದುವೆಯಾದ ಗಂಡಸರ ಸಂಪರ್ಕವನ್ನು ಹೊಂದಿರುತ್ತಿದ್ದರು. ಗಂಡಸರು ಈ ಸಂಪರ್ಕವನ್ನು ತಪ್ಪಾಗಿ ತಿಳಿಯುತ್ತಿರಲಿಲ್ಲ. ಇದನ್ನು ಹೆಂಡತಿ, ಮಕ್ಕಳು ಕೂಡ ಸಹಿಸಬೇಕಾಗಿತ್ತು. ಮತ್ತು ಅವರಿಗೂ ಇದು ಹೆಚ್ಚು ತಪ್ಪಾಗಿ ಕಂಡಿರಲಾರದು. ದೇವದಾಸಿಯರು ರಂಗಭೋಗದ

---

2 Farquhar, *Modern Religious Movements in India*, p. 408

3 E. Thurston ; *Castes and Tribes of India* Vol. II p. 132. See also Henriyues Fernando, *The Pretenee of love ; prostitution and Society.* vol. I *Primitive classical Oriental.* p. 185

4 Rev : Henry Rice : *Native life in South India being Sketches of the Social and Religions charactrisation of the Hindus. p.* 58

5 *Karnatika Prakasika ;* May 1st, 1893

ಉಪಕರಣಗಳು ಎಂದು ಎಂ. ಚಿದಾನಂದಮೂರ್ತಿಗಳು ಅಭಿಪ್ರಾಯಪಡುತ್ತಾರೆ. 'ದೇವತಾ ಮೂರ್ತಿಯ ಮುಂದೆ ಸುಂದರಿಯರಿಂದ ನಡೆಯುವ ಗೀತ, ನೃತ್ಯಗಳೇ ರಂಗಭೋಗಗಳು.'[6] ೧೮೦೦ರ ಹೊತ್ತಿಗೆ ತಂಜಾವೂರಿನಲ್ಲಿ ಆಶ್ರಯ ಪಡೆದಿದ್ದ ಹಲವಾರು ಕಲಾವಿದೆಯರು, ಕಲಾಪೋಷಕ ರಾಜರ ಆಶ್ರಯವನ್ನು ಕಳೆದುಕೊಂಡು, ವಾರಾಂಗನೆಯರಾಗಿ ಜೀವಿಸಬೇಕಾಯ್ತು. ಆಂಧ್ರದ ಅಸಾಧಾರಣ ಪಂಡಿತೆ ಮುದ್ದುಪಳನಿಗೆ ಆಶ್ರಯವಿಲ್ಲದೆ ಬಡತನದಿಂದ ಬಾಳಬೇಕಾಯ್ತು.

೧೮೮೨ರಲ್ಲಿ ಹೌಸ್ ಆಫ್ ಕಾಮನ್ಸ್ ಸಭೆಯು ಒಂದು ಸಮಿತಿಯನ್ನು ರಚಿಸಿ, ವ್ಯಭಿಚಾರದ ಆಚರಣೆ ಎಷ್ಟರಮಟ್ಟಿಗೆ ವ್ಯಾಪಕವಾಗಿ ಇದೆ ಮತ್ತು ಇದರಿಂದ ಹರಡುವ ಅಂಟುರೋಗ, ಜಾಡ್ಯಗಳ ತಡೆಗಟ್ಟುವಿಕೆ ಎಷ್ಟರಮಟ್ಟಿಗೆ ಸಫಲವಾಗಿದೆಯೆಂದೂ ಕ್ರಮ ವಿಹಿತವಾಗಿ ವರದಿಮಾಡಲು ಉಪ ಸಮಿತಿಯನ್ನು ರಚಿಸಿತು. ಇದರಿಂದ ಶ್ರುತವಾದುದೇನೆಂದರೆ ವ್ಯಭಿಚಾರ ಹೆಚ್ಚಾಗಿರುವುದಕ್ಕೆ ಕಾರಣ, ಬ್ರಿಟಿಷರಿಗೆ ಇದು ಬೇಕಾಗಿದೆಯೆಂದೂ ಮತ್ತು ಇದಕ್ಕೆ ತಕ್ಕ ಅನುಕೂಲತೆಗಳು ನಾನಾ ಮೂಲಗಳಿಂದ ಒದಗಿ ಬರುವದೆಂದೂ ತಿಳಿಯಬಂತು.

*Indian Social Reformer* ಪತ್ರಿಕೆ ತನ್ನ ಏಪ್ರಿಲ್ ೧೮೯೨ರ ಅಂಕದಲ್ಲಿ ಈ ರೀತಿ ಬರೆಯಿತು. "In larger cities like Madras. I am afraid the general opinion is that a man is not worth his opinion of he does not attach himself to a dancing..........In this report even the flower of Hindu Society and the even increasing array of distinguishsed graduates does not smell sweet in Madras."

೧೮೯೨ ಆಂಗ್ಲ ವಿದ್ಯಾಭ್ಯಾಸ ಮಾಡಿದ ಅನೇಕರು ತಾಫೆ ವಿರುದ್ಧವಾಗಿ ನಿಂತರು. 'ಇಂಡಿಯನ್ ಸೋಷಲ್ ರಿಫಾರ್ಮರ್' ಪತ್ರಿಕೆ ಇದಕ್ಕೆ ಇಂಬುಕೊಟ್ಟಿತು. ಲಾಹೋರಿನ ಶುದ್ಧೀಕರಣ ಸಂಸ್ಥೆಯು ಇದಕ್ಕೆ ಸಹಾಯ ಮಾಡಿತು. ಮತ್ತಿತರರೂ ಈ ಹೋರಾಟಕ್ಕೆ ಬೆಂಬಲ ಕೊಟ್ಟರು.

ನೃತ್ಯದ ವಿರುದ್ಧ ಎದ್ದ ಚಳುವಳಿ ಬಗ್ಗೆ ಬರೆಯುತ್ತಾ 'ಕರ್ಣಾಟಕಾ ಪ್ರಕಾಶಿಕಾ' ಪತ್ರಿಕೆ "ಜನತೆಯ ದೋಷಗಳನ್ನು ತೊಡೆದು ಹಾಕುವ ಚಳುವಳಿ ಸ್ವಲ್ಪ ನಿಧಾನವಾಗಿ ಮುಂದುವರಿಯಬೇಕೆಂದೂ, ನೃತ್ಯಕ್ಕೆ ಬದಲಾಗಿ ಬೇರೆ ಯಾವುದಾದರೂ ಮನೋರಂಜನೆ ಒದಗಿಸುವ ತನಕ ನೃತ್ಯ ಬೇಕಾದೀತೆಂದೂ ಮತ್ತು ದೇವದಾಸಿಯರು ಕಾಲಕ್ರಮೇಣ ಸತ್ಪ್ರಜೆಗಳಾಗಿ ಬಾಳಲು ಸಾಧ್ಯವಾಗಬಹುದೆಂದೂ ಇದನ್ನು ನಿಧಾನವಾಗಿ ಮುಂದುವರಿಸಬೇಕೆಂದೂ, ಇಲ್ಲದಿದ್ದರೆ ಒಳಿತಿಗಿಂತ ಕೆಡುಕಾಗಬಹುದೆಂದೂ, ವೈಸ್‌ರಾಯ್ ಮತ್ತು ಬ್ರಿಟಿಷ್ ಅಧಿಕಾರಿಗಳು ನೃತ್ಯಕ್ಕೆ, ಮನೋರಂಜನೆಗೆಂದು ಹೋಗುವರೆಂದೂ ಅವರ ದೃಷ್ಟಿಯಲ್ಲಿ ಅದು ತಪ್ಪಾಗಿಲ್ಲವೆಂದೂ ವಾದಿಸಿತು."[7] ೧೮೯೩ರಲ್ಲಿ ಸಮಾಜ ಸುಧಾರಕರು ಹಲವಾರು ಜನ ಕ್ರಿಶ್ಚಿಯನ್ ಪಾದ್ರಿಗಳೊಡಗೂಡಿ[8] ವೈಸ್‌ರಾಯ್ ಲಾರ್ಡ್ ಲ್ಯಾನ್ಸಡೌನ್‌ರವರಿಗೆ ಒಂದು ಮನವಿ ಪತ್ರವನ್ನು ಸಲ್ಲಿಸಿದರು. ಮನವಿ ಪತ್ರದಲ್ಲಿ ನೃತ್ಯಗಾತಿಯರನ್ನು ಸಾಮಾಜಿಕ ಕಾರ್ಯದಲ್ಲಿ ಕರೆಯುವುದಾಗಲಿ ಅದನ್ನು ವೀಕ್ಷಿಸುವುದೇ ಆಗಲೀ ಪ್ರೋತ್ಸಾಹ ಕೊಡುವುದಾಗಲೀ ಕೂಡದೆಂದು ಕಳಕಳಿಯಿಂದ ವಿನಂತಿಸಿತು. ಇದಕ್ಕೆ ಸಿಮ್ಲಾದಿಂದ ಬಂದ ವೈಸ್‌ರಾಯ್‌ರವರ ಉತ್ತರ "ತಾವು ಒಂದು ಅಥವಾ ಎರಡು ಸಾರಿ ನೃತ್ಯದ ವೀಕ್ಷಣೆ ಮಾಡಿರುವುದಾಗಿಯೂ ಅದರಲ್ಲಿ ನೈತಿಕ ಮಟ್ಟದ ಅವನತಿಗೆ ಕಾರಣವಾಗುವಂತಹದು ಕಂಡುಬಂದಿಲ್ಲವೆಂದು ತಾವು ಇಂಡಿಯ ಬಿಡುವ ಮುನ್ನ ಇದಕ್ಕೆ ಯಾವ ಉತ್ತರವನ್ನೂ ಕೊಡಲು ಸಾಧ್ಯವಿಲ್ಲವೆಂದೂ ಬರೆದರು."[9]

---

6 ಕನ್ನಡ ವಿಶ್ವಕೋಶ, ಸಂಪುಟ ೯, ೧೯೭೭

7 "*Nautch girl movement*" Karnatika Prakasika 24 July, 1893

8 *Indian Evengical Review*, XII Oct, 1885

9 "The Anti Nautch Memorial" 16 Oct 1893 in *Karnatika Prakasika* and the reply from Viceroyal lodge, Simla, 23rd September 1893

ಮುಂಬಯಿನ 'ಇಂಡಿಯನ್ ಸೋಷಲ್‌ರಿಫಾರ್ಮರ್' ಪತ್ರಿಕೆ ಇದಕ್ಕೆ ಕೊಟ್ಟ ಉತ್ತರ. ನೃತ್ಯಗಾತಿಯರು ತಮ್ಮ ಅಶ್ಲೀಲತೆಯನ್ನು ವೈಸರಾಯರ ಎದುರಿಗೆ ಪ್ರದರ್ಶಿಸುವದಿಲ್ಲವೆಂದೂ ಅವರು ವಾರಾಂಗನೆಯಾದ್ದರಿಂದ ಅವರ ನೃತ್ಯ ವೈಸ್‌ರಾಯಿಗಳ ಹಾಜರಿ ಅನುಚಿತವೆಂದೂ ವಾದಿಸಿತು.[10]

ಮದ್ರಾಸಿನಲ್ಲಿ ನೃತ್ಯದ ವಿರುದ್ಧದ ಚಳುವಳಿ ೧೮೯೩ ರಿಂದ ಮೊದಲಾಯಿತು. ಮತ್ತು ಈ ವೃತ್ತಿಯನ್ನು ನಿರ್ಮೂಲ ಮಾಡುವುದಾಗಿ ಸಮಾಜ ಸುಧಾರಕರು ಪಣ ತೊಟ್ಟರು.

ಈ ಚಳುವಳಿಯು ಮೈಸೂರಿಗೆ ಹರಡುವದಕ್ಕೆ ಹೆಚ್ಚು ಕಾಲ ಬೇಕಾಗಲಿಲ್ಲ. ಯುವ ಜನಾಂಗಕ್ಕೆ ಸೇರಿದ ಹಲವಾರು ಜನರು ಈ ಚಳುವಳಿಯನ್ನು ಪ್ರೋತ್ಸಾಹಿಸಿದ್ದುಂಟು. ಡಿ. ವಿ. ಗುಂಡಪ್ಪನವರು, ಇದನ್ನು ಪ್ರೋತ್ಸಾಹಿಸಿ ವಾಗ್ದಾನವಾಗಿ ಒಂದು ಕರಿದಾರವನು ಕೈಗೆ ಕಟ್ಟಿದ್ದುಂಟು. (ಡಿ. ವಿ. ಗುಂಡಪ್ಪ, 'ಜ್ಞಾಪಕ ಚಿತ್ರಶಾಲೆ', ಭಾಗ ೧, ಪು. ೩೩-೩೪). ಆದರೆ ಕಾಲಕ್ರಮೇಣ ತಾವು ಮಾಡಿದ ಪ್ರತಿಜ್ಞೆ ಸರಿಯಲ್ಲವೆಂದೂ ಮತ್ತು ನೃತ್ಯವನ್ನು ವೀಕ್ಷಿಸುವುದರಲ್ಲಿ ಯಾವ ತಪ್ಪು ಇಲ್ಲವೆಂದೂ ತಾವು ತಿಳಿದುದಾಗಿ ಹೇಳಿರುತ್ತಾರೆ.[11]

ಆಗತಾನೆ ಮೈಸೂರು ಸಿವಿಲ್ ಸರ್ವೀಸ್‌ಗೆ ಸೇರಿದ ಕೆ. ಸುಬ್ಬರಾಯರಲ್ಲಿ ನ್ಯಾಯತೀರ್ಪನ್ನು ಕೇಳಲಾಯ್ತು. ಕೆ. ಸುಬ್ಬರಾಯರು 'ಸಂಗೀತ ಅಥವಾ ನಾಟ್ಯಕಲೆಯ ಮೂಲಕ ತನ್ನ ದೇಹ ವಿಕ್ರಯ ಮಾಡಿಕೊಳ್ಳುವ ವಾರಾಂಗನೆಯ ವಿರುದ್ಧ ಹೋರಾಟ ನಡೆಯುತ್ತಿದೆ ಎಂದೂ ತಿಳಿಸಿದರು.[12]

ಮೈಸೂರು ಮತ್ತು ಬೆಂಗಳೂರಿನ ಲಿಟರರಿ ಸಂಸ್ಥೆಯು ಹಲವಾರು ಬಾರಿ ಎಮ್. ವೆಂಕಟಕೃಷ್ಣಯ್ಯನವರ ನೇತೃತ್ವದಲ್ಲಿ ಚರ್ಚೆ ನಡೆಸಿ, ವಾರಾಂಗನೆಯುವರ ಹಾವಳಿ ಬಹಳವಾಗಿದೆಯೆಂದೂ ಇದಕ್ಕಾಗಿ ಲಿಟರರಿ ಯೂನಿಯೂನ್ ಸದಸ್ಯರು 'ತಾಫೆಗೆ' ಹೋಗುವದನ್ನು ನಿಲ್ಲಿಸಬೇಕೆಂದು ಕೋರಿತು. ತಾಫೆಯ ವಿರುದ್ಧ ಬಿಸಿಯಾದ ಚರ್ಚೆ ನಡೆದು ತಾಫೆಯನ್ನು ಕಾನೂನಿನಿಂದ ನಿಲ್ಲಿಸಬೇಕೆ ಅಥವಾ ಜನರ ಅಭಿಪ್ರಾಯದಿಂದ ನಿಲ್ಲಿಸಬೇಕೆಂಬುದರ ಬಗ್ಗೆ ಸರ್ಕಾರದ ಸೆಕ್ರೆಟರಿ ಹೆಚ್. ಜೆ. ಭಾಭಾ ಅಧ್ಯಕ್ಷತೆಯಲ್ಲಿ ಲಿಟರರಿ ಯೂನಿಯನ್ ಅಂಗವಾಗಿ ಮತ್ತೊಂದು ಸಭೆ ನಡೆಯಿತು. ಪಿ. ಸಿಂಗಾಚಾರ್ಯರು ಸಭೆಯನ್ನು ಉದ್ಘಾಟಿಸಿ ಎಚ್ಚರಿಕೆಯ ಮಾತಾಡಿ ಮುಜರಾಯಿ ವಿಭಾಗ ಇದನ್ನು ಗಮನಿಸಿದೆಯೆಂದೂ ಕಾಲಕ್ರಮೇಣ ನೃತ್ಯಗಾತಿಯರ ಸಂಖ್ಯೆ ಕಡಿಮೆಯಾಗುತ್ತದೆಯೆಂದೂ ವಾದಿಸಿದರು. ಬಿ. ರಾಮಸ್ವಾಮಿ ಐಯರ್ ಇದಕ್ಕೆ ಕಾನೂನು ಬೇಡವೆಂದೂ ಸ್ತ್ರೀ ವಿದ್ಯಾಭ್ಯಾಸ ಹೆಚ್ಚಾದ ಕೂಡಲೆ, ಈ ಸಮಸ್ಯೆಗೆ ತಾನೇ ಪರಿಹಾರ ದೊರಕುವದೆಂದೂ ವಾದಿಸಿದರು. ಮನೆಗಳಲ್ಲಿ ನೃತ್ಯದ ಏರ್ಪಾಡು ಮಾಡಕೂಡದೆಂದೂ ವಾದಿಸಿದರು. ಸಭೆಯಲ್ಲಿ ಹಲವಾರು ಸದಸ್ಯರು ನೃತ್ಯ ನಿಲ್ಲಿಸಿದ್ದೇ ಆದರೆ ಮತ್ಯಾವ ಮನೋರಂಜನೆ ಬದಲಾಗಿ ದೊರಕಬಹುದು ಎಂದು ಯೋಚಿಸಿದರು.

ದೇವದಾಸಿಯರು ನೃತ್ಯಕ್ಕೆ ಅರ್ಪಿತವಾದವರು. ಅತ್ಯಂತ ಗೌರವಾನ್ವಿತೆಯರಾಗಿ, ರಾಜಾಶ್ರಯವಿದ್ದ ಸಮಾಜದಲ್ಲಿ ಕೂಡ ಗೌರವಾನ್ವಿತೆಯರು ಅವರು. ನೃತ್ಯಕ್ಕೆ ಒದಗಿದ ದುರ್ಗತಿಯನ್ನು ಸಹಿಸಲಾರದೆ ಹಲವಾರುಕಲಾವಿದೆಯರು'ಹೀಗೆ ಆದದ್ದಾದರೂಹೇಗೆ,ಎಂದು ಪ್ರಶ್ನಿಸಿದರೂ 'ಇತ್ತೀಚೆಗೆ ತಮ್ಮ ನೈತಿಕ ಜೀವನ ಅಧೋಗತಿಗಿಳಿದಿದೆ ಎಂದು ಒಪ್ಪಿಕೊಂಡದ್ದೂ ಉಂಟು.'[13]

ಭದ್ರವಿಲ್ಲದ ವೃತ್ತಿಯಲ್ಲಿದ್ದ ನಟುವಗಿತ್ತಿಯರು ತಮ್ಮ ವೃತ್ತಿಗೆ ಬಂದಿರುವ ಆಪತ್ತನ್ನು ಕಾಪಾಡಲು ತಮ್ಮ ತಮ್ಮ ಭೇದಭಾವವನ್ನು ಬದಿಗಿಟ್ಟು ಎಲ್ಲರೂ ಒಟ್ಟಾಗಬೇಕೆಂದೂ ಮತ್ತು ಕಲೆಯ ಒಳಿತಿಗಾಗಿ ಶ್ರಮಿಸ

---

10 *Indian Social Refomer* 14 Oct, 1893

11 ಡಿ.ವಿ. ಗುಂಡಪ್ಪ ಜ್ಞಾಪಕ ಚಿತ್ರಶಾಲೆ, ಭಾಗ ೨, ಪು. ೩೩-೩೪

12 K. Subba Rao, Revived Memories, P. 229

13 "ವಾರಾಂಗನೆಯರ ಪ್ರಾರ್ಥನೆ", ಕರ್ನಾಟಕ ಪ್ರಕಾಶಿಕಾ, ೨೯ ಜನವರಿ, ೧೮೯೬

ಬೇಕೆಂದೂ ಇದಕ್ಕಾಗಿ ಒಂದು ನಿರ್ಧರಿಸಿದ ಮೊತ್ತವನ್ನು ಸಂಗ್ರಹಿಸಿ ಇಡಬೇಕೆಂದೂ ಮತ್ತು ಪ್ರತಿ ಕಲಾವಿದೆಯೂ ತನ್ನ ಸಂಪಾದನೆಯಲ್ಲಿ ಕಾಲುಭಾಗವನ್ನು ಮೂಲ ಧನವಾಗಿ ಇಟ್ಟು, ಇದು ಒಂದು ಹಂತಕ್ಕೆ ತಲುಪಿದ ಮೇಲೆ ಮಕ್ಕಳ ವಿದ್ಯಾಭ್ಯಾಸ, ಸಂಗೀತ, ಚಿತ್ರಕಲೆಗೆ ಉಪಯೋಗಿಸಬೇಕೆಂದು ನಿರ್ಧರಿಸಿದರು.[14]

ಆದರೆ ಇದಕ್ಕೆ ವ್ಯತಿರಿಕ್ತವಾಗಿ ಮದ್ರಾಸ್ ಪ್ರೆಸಿಡೆನ್ಸಿಗೆ ಸೇರಿದ ಬಳ್ಳಾರಿ ಜಿಲ್ಲೆಯ ಹುಡುಗಿಯರು, ತಾವು ಬಸವಿಯರಾಗಿ ವಾರಾಂಗನೆಯರಾಗಿ ಇರುವದಕ್ಕೆ ಇಷ್ಟಪಡುವದಾಗಿ ಬರೆದ ಲಿಖಿತ ಮೂಲಕವಾದ ಅರ್ಜಿಯನ್ನು ಕಾಣುತ್ತೇವೆ.[15]

"ನಮ್ಮ ತಂದೆ, ತಾಯಿ ಇಬ್ಬರೂ ತೀರಿಕೊಂಡಿರುತ್ತಾರೆ. ನಾವು ಈಗ ವಾರಾಂಗನೆಯರಾಗಿ ಬಾಳಬೇಕೆಂದು ಇಚ್ಛಿಸುತ್ತೇವೆ. ಮತ್ತು ನಾವು ವಿವಾಹ ಬಂಧನದಲ್ಲಿ ಇರಲು ಇಚ್ಛಿಸುವದಿಲ್ಲ. ನಮ್ಮ ತಾಯಿಯು ಕೂಡ ವಾರಾಂಗನೆಯಾಗಿದ್ದರು. ಆದ್ದರಿಂದ ನಮ್ಮ ಜಾತಿ ಧರ್ಮದಂತೆ ನಾವು ವಾರಾಂಗನೆಯರಾಗಿ ಬಾಳುವುದರ ಪರವಾಗಿ ಇದ್ದೇವೆ.

ಮುಜರಾಯಿ ಸಂಸ್ಥೆಯ ಮುಖ್ಯಸ್ಥರಾದ ಆರ್ಕಾಟ್ ಶ್ರೀನಿವಾಸಾಚಾರ್ ನೇತ್ರತ್ವದಲ್ಲಿ ಮುಜರಾಯಿ ಸಂಸ್ಥೆ ಚುರುಕಾಗಿ ಕೆಲಸ ಮಾಡಿತು. ೧೮೯೨[16] ರಲ್ಲಿ ತಾಫೆಯನ್ನು ಮುಜರಾಯಿ ದೇವಸ್ಥಾನದಲ್ಲಿ ನಿಲ್ಲಿಸಬೇಕೆಂದು ಸಂಚುಹೂಡಿತು. ನಂದೀದುರ್ಗದ ಭೋಗ ನಂದೀಶ್ವರಸ್ವಾಮಿ ಉತ್ಸವದಲ್ಲಿ ನಡೆಯುತಕ್ಕಂತ ತಾಫೆಯನ್ನು ಮೈಸೂರು ಸರ್ಕಾರವು ನಿಲ್ಲಿಸಿತು.

೧೮೯೯ರಲ್ಲಿ ನಂಜನಗೂಡಿನ ಶ್ರೀಕಂಠೇಶ್ವರಸ್ವಾಮಿ ದೇವಸ್ಥಾನದಲ್ಲಿ ನಡೆಯುತಕ್ಕ ತಾಫೆಯನ್ನು ನಿಲ್ಲಿಸಿತು.[17] ತಾಫೆಯನ್ನು ನಿಲ್ಲಿಸಿದರೂ ಸಕಾರವು ಜೀವಿತ ಕಾಲದಲ್ಲಿ ದೇವದಾಸಿಗೆ ದೊರಕುತ್ತಿದ್ದ ಜೀವನಾಂಶಕ್ಕೆ ಧಕ್ಕೆ ತರದೆ ದೇವದಾಸಿ ಸತ್ತ ನಂತರ ಆ ಜಾಗಕ್ಕೆ ಭರ್ತಿಮಾಡಲು ಅನುಮತಿ ನೀಡಲಿಲ್ಲ.

'ಗೆಜ್ಜೆಪೂಜೆ' ಎಂಬ ವಿಧಿವತ್ತಾದ ಶಾಸ್ತ್ರ ಸಾಮಾನ್ಯವಾಗಿ ಮುಜರಾಯಿ ದೇವಸ್ಥಾನದಲ್ಲಿ ನಡೆಯುತ್ತಿದ್ದು ಆ ದಿವಸ ವಿಧಿವತ್ತಾಗಿ ವಯಸ್ಸಿಗೆ ಪ್ರಾಪ್ತವಾದ ಹುಡುಗಿಯನ್ನು ಗಂಡನಿಗೆ ಒಪ್ಪಿಸಲಾಗುತ್ತಿತು. ಮೈಸೂರು ಸರ್ಕಾರ ಗೆಜ್ಜೆಪೂಜೆಯ ವಿರುದ್ಧ ಆಜ್ಞೆ ಹೊರಡಿಸಿ ಗೆಜ್ಜೆಪೂಜೆ ನೃತ್ಯಕ್ಕೆ ಸಂಬಧಿಸಿದ್ದರೂ, ಅವರು ವಾರಾಂಗನೆಯರೆಂದೂ ಅತ್ಯಂತ ಕಠಿಣವಾಗಿ ವರ್ತಿಸಿತು. ನಾಲ್ವಡಿ ಕೃಷ್ಣರಾಜ ಒಡೆಯರು ಗೆಜ್ಜೆಪೂಜೆ ದೇವಸ್ಥಾನಗಳಲ್ಲಿ ನಡೆಯಕೂಡದೆಂದು ರಾಜಾಜ್ಞೆ ಹೊರಡಿಸಿದರು[18] ಮೈಸೂರನ್ನು ಅನುಸರಿಸಿ ಹಲವಾರು ನೆರೆಹೊರೆ ಪ್ರಾಂತ್ಯಗಳು ದೇವದಾಸಿ ಪದ್ಧತಿಯನ್ನು ರದ್ದು 'ಮಾಡಿದವು. ೧೯೩೦ ತಿರುವಾಂಕೂರಿನಲ್ಲಿ ದೇವದಾಸಿ ಪದ್ಧತಿ ರದ್ದಾಯಿತು. ಮೈಸೂರಿನ ಈ ಕಾಯ್ದೆ ಎಲ್ಲರ ಮೆಚ್ಚಿಗೆಗೆ ಪಾತ್ರವಾಯಿತು.[19] 'ವೃತ್ತಾಂತ ಪತ್ರಿಕೆ[20] ಮೈಸೂರಿನ ಕಾಯ್ದೆಯನ್ನು ಪ್ರಶಂಸಿಸಿ, ದೇವದಾಸಿ ವೃತ್ತಿಯನ್ನು ಹೊಂದಿದ ಸಂಸಾರವನ್ನು ಕಾಪಾಡಬೇಕೆಂದೂ ಮತ್ತು ನೃತ್ಯಗಾತಿಯರ ಮಕ್ಕಳಿಗೆ ನೃತ್ಯಕ್ಕೆ ಬದಲಾಗಿ ಯಾವುದಾದರೂ ಉದ್ಯೋಗವನ್ನು ಸರಕಾರವು ಕಲ್ಪಿಸಬೇಕೆಂದು ಸೂಚಿಸಿತು.

---

14 *Mysore Standard,* 11 September 1899

15 Thurston, *Castes and Tribes of South India* Vol II P. 133

16 No M 446–54 8/Feb/1822, *Mysore Muzrai Manual*

17 No 1560-71-Muz-84-05-3 hf 10 April 1909

18 Muzrai Proccedings dated. 29/Jan/1910 No 1872-9 directs with certain observations, the discontinuance of the performance of 'Gejje Puja' or any other Similar Ceremoney by the dancing girls with in precints of Muzzrai temple.

19 *The Madras Standard* May 11, 1909, Native News 1909. United India and Native news, May 15, 1909 ಮೈಸೂರನ್ನು ಪ್ರಶಂಸಿದ ಪತ್ರಿಕೆಗಳು.

20 *Vrithanta Patrika* May 27, 1902

ಮೊಟ್ಟಮೊದಲಿಗೆ ಸಿಕ್ಕುವ ತಾಪೆ ಬಗ್ಗೆ ಅರಿವನ್ನು ಮೂಡಿಸುವ ಕೃತಿ ೧೭೯೦ ರಲ್ಲಿ ಹಸನ್ ಷಾ ಬರೆದ 'ನಾಷ್ಟಾರ್' ಎಂಬ ಕಾದಂಬರಿ. ನಾಷ್ಟಾರ್ ಎಂದರೆ ಪ್ರೀತಿಯ ಅಗಲುವಿಕೆಯಿಂದ ಬರುವ ನೋವೆಂದು ಅರ್ಥ ಮಾಡಬಹುದು. ಕಾನಮ್‌ಜಾನ್ ಎಂಬವಳು ಇದರ ನಾಯಕಿ. ಈಸ್ಟ್ ಇಂಡಿಯಾ ಕಂಪೆನಿಯ ಬ್ರಿಟೀಷ್ ಅಧಿಕಾರಿಗಳ ಮನೋರಂಜನೆಗೋಸ್ಕರ ಇದ್ದವಳು. 'ನಾಷ್ಟಾರ್' ಕಾದಂಬರಿ ಫಾರಸಿ ಭಾಷೆಯಲ್ಲಿದ್ದು ಅದನ್ನು ಇತ್ತೀಚೆಗೆ ಇಂಗ್ಲಿಷ್‌ಗೆ ತರ್ಜುಮೆ ಮಾಡಿದವರು ಜ್ಞಾನಪೀಠದ ಸಾಹಿತಿ ಕುರತಲಮ್ ಹೈದರ್ 'ನಾಚಗರ್ಲ್' ಎಂಬ ಈ ಕಾದಂಬರಿ (ಅಥವಾ ಜೀವನಚರಿತ್ರೆ) ಯಿಂದ ಬ್ರಿಟೀಷ್ ಅಧಿಕಾರಿಗಳ ಮನೋಭಾವ, ನೃತ್ಯ ಪರಿಸರ ಮತ್ತು ಅವರ ಜೀವನದ ಪರಿಚಯು ಮಾಡಿಕೊಡುತ್ತದೆ. ೨೦೦ ವರುಷದ ಹಿಂದೆ ಬರೆದ ಈ ಕಾದಂಬರಿ ಲಕ್ನೋನಗರದ ನೃತ್ಯಗಾತಿಯರ ಪರಿಚಯ ಮಾಡಿ ಕೊಡುತ್ತದೆ. ಅದು ಈಗ ಲಭ್ಯವಾಗಿದೆ.

ಮತ್ತೊಂದು ಕಾದಂಬರಿ 'ಉಮಾರಾವ್ ಜಾನ್ ಆದ' ೧೮೯೯ ಪ್ರಕಟವಾಯ್ತು ಇದು ಲಕ್ನ ನಗರದ ವಾಸವಾಗಿದ್ದ ವಾರಾಂಗನೆ ಉಮ್‌ರಾವ್ ಜಾನ್ ಆದಳ ನೈಜ ಜೀವನವನ್ನು ಪರಿಚಯಿಸುತ್ತೆ.

ಕೆ. ಶ್ರೀನಿವಾಸನ್ (ಕಸ್ತೂರಿ)ಅವರು ಬರೆದಿರುವ 'ದೇವದಾಸಿ' ಎಂಬ ಕಾದಂಬರಿ, ದಕ್ಷಿಣ ಮದ್ರಾಸಿಗೆ ಸಂಬಂಧಿಸಿದ್ದು ಇದು ದೇವದಾಸಿಯ ನೈಜ ಜೀವನವನ್ನು ತೋರಿಸಿದರೂ, ಕಲೆಗೆ ಒಲಿದ ಮೀನಾ ದೇವದಾಸಿಯಾದರೂ, ಸಾಮಾನ್ಯ ಮನುಷ್ಯನನ್ನೂ ಕೂಡಿ, ತ್ಯಾಗಮಯಿ ಎನಿಸುತ್ತಾಳೆ. ಮತ್ತು ಗೌರವದಿಂದ ಬಾಳುತ್ತಾಳೆ.

ಇನ್ನು ಕನ್ನಡದಲ್ಲಿ ಎಮ್. ಕೆ. ಇಂದಿರಾರವರು ಬರೆದ 'ಗೆಜ್ಜೆಪೂಜೆ' ಎಲ್ಲರಿಗೂ ಚಿರಪರಿಚಿತವಾಗಿದೆ.

Monier Williams ನ ಪ್ರಕಾರ ;

"Dasis drive a profitable trade under the sanction of religion and some courtesans have been known to amass enormous fortunes not do they think it in consistant with their method of making money to spend it in works of piety. Here and there Indian bridges and other useful public works owe their existence to the librality of this frail sisterhood.

The large tank at *channarayapatna in Mysore* was built by two dancing girls.[21]

ಗೋಹರಜಾನ್ ಕಲ್ಕತ್ತಾದ ಮಾಲಿಕ್‌ಜಾನ್‌ರ ವಳ ಮಗಳು. ಮಾಲಿಕ್‌ಜಾನ್ ಉರ್ದು ಕವಿಯಿತ್ರಿ ಮತ್ತು ವಾರಾಂಗನೆ. ಗೋಹರ್‌ಜಾನ್ ಆರ್ಮೆನಿಯನ್ ಪಂಗಡಕ್ಕೆ ಸೇರಿದ್ದು, ತಂದೆ ಯುರೋಪಿಯನ್. ಗೋಹರ್‌ಜಾನ್ ಕಥಕ್ ನೃತ್ಯ ಪಾರಂಗತೆ. ಮತ್ತು ಹಲವಾರು ಭಾಷೆಗಳ ಪರಿಚಯವಿದ್ದ ಈಕೆ ಇಂಡಿಯನ್ ನ್ಯಾಷನಲ್ ಕಾಂಗ್ರೆಸಿನಲ್ಲಿ ಭಾಗವಹಿಸಿದ್ದರು. ಗೋಹರ್‌ಜಾನ್ ರಬೀಂದ್ರನಾಥರ ಸಂಗೀತವನ್ನು ತಮ್ಮದೇ ಧಾಟಿಯಲ್ಲಿ ಹಾಡುತ್ತಿದ್ದರು. ಹಿಂದೂಸ್ಥಾನಿ ಸಂಗೀತದ ಎಚ್. ಎಂ. ವಿ. ಮೊಟ್ಟ ಮೊದಲ ಧ್ವನಿ ಮುದ್ರಿಕೆ ಗೋಹರ್‌ಜಾನರವರದ್ದು. ಮೈಸೂರಿಗೆ ಹಲವಾರುಸಲ ಭೇಟಿಕೊಟ್ಟ ಗೋಹರ್‌ಜಾನ ಕೈಲಾಸಂರ 'ನಮ್ಮಿಪ್ಪಾರಳ್ಳಿ' ಹಾಡನ್ನು ಉರ್ದು ದಾಟಿಯಲ್ಲಿ ಹಾಡಿ ಮನರಂಜಸಿದ್ದರು.

ಕೊನೆಯದಾಗಿ ಬೆಂಗಳೂರು ನಾಗರತ್ನಮ್ಮನವರ ಹೆಸರನ್ನು ಕೇಳಿದವರಿಗೆ ಅವರ ಪಾಂಡಿತ್ಯ, ವಿದ್ಯೆ ಸಂಗೀತ ಸೇವೆ ಗೊತ್ತಿದೆ. ಮತ್ತು ಇಂದಿನ ಕಲಾಭಿಮಾನಿಗಳು ತಿರುವಾಯೂರಿನಲ್ಲಿ ತ್ಯಾಗರಾಜರ ಸಮಾಧಿ ಕಟ್ಟಿಸಿ ಸಂಗೀತಕ್ಕೆ ಅಮೋಘವಾದ ಸೇವೆ ಸಲ್ಲಿಸಿದ ಬೆಂಗಳೂರು ನಾಗರತ್ನಮ್ಮನವರನ್ನು ನೆನೆಸದಿರಲಾರರು.[22] ಇದು ಮೈಸೂರಿಗೆ ಹೆಮ್ಮೆಯ ವಿಷಯ.

21 E. Thurston ; *Castes and Tribes of Southern India*, Vol II P. 130
22 Leela, *Socio-Cultural Aspects of Mysore* Ph. D. Thesis.

ನಾಗರತ್ನಮ್ಮನವರ ಧೈರ್ಯ ಅಪಾರವಾದದ್ದು. ಆಂಧ್ರದ ಕವಯಿತ್ರಿಯಾದ ಮುದ್ದುಪಳನಿಯ 'ರಾಧಿಕ ಸತ್ವನಂ' ಎಂಬ ಪುಸ್ತಕವನ್ನು ಪ್ರಕಟಿಸಲು ನಾಗರತ್ನಮ್ಮ ಪಟ್ಟ ಶ್ರಮ ಅಪಾರ. ಮತ್ತು ಬ್ರಿಟೀಷ್ ಸರ್ಕಾರ ಈ ಪುಸ್ತಕವನ್ನು ಬಹಿಷ್ಕರಿಸಿದಾಗ ಅವರು ತೋರಿದ ಧೈರ್ಯ ಮೆಚ್ಚಬೇಕಾದದ್ದು. ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೆ ಈ ಪುಸ್ತಕ ತಿರುಗಿ ಮುದ್ರಣ ಕಂಡಿತು.[23]

ನೈತಿಕ ಮೂಲ ಪರಿವರ್ತನೆಗೆ ಸಾಮಾಜಿಕ ಸುಧಾರಕರು ಪ್ರಯತ್ನಿಸಿದರು. ಆದರೆ ನೃತ್ಯವನ್ನು ನಿಲ್ಲಿಸಿ ಸಾಮಾಜಿಕ ಸುಧಾರಣೆಯಿಂದ ಸಮಾಜದ ನೈತಿಕ ಮಟ್ಟವನ್ನು ಏರಿಸಲು ಸಾಧ್ಯವೇ ಎಂಬ ಪ್ರಶ್ನೆ ಹಾಗೆಯೆ ಉಳಿಯಿತು. ಸುಧಾರಕರಲ್ಲೆ ನೃತ್ಯ ಸುಧಾರಣ ಚಳುವಳಿ ಮನೋವೃತ್ತಿ ಹೆಚ್ಚು ಕಾಲ ಉಳಿಯಲಿಲ್ಲ. ಸಂಗೀತ ಅಥವಾ ನೃತ್ಯ ಕಲಿತ ಅಥವಾ ಮಾಡಿದವರೆಲ್ಲಾ ವಾರಾಂಗನೆಯರಲ್ಲ. ಸರ್ಕಾರವು ವೇಶ್ಯಾ ವೃತ್ತಿಯನ್ನು ನಿಲ್ಲಿಸಲು ಮಾಡಿದ ಪ್ರಯತ್ನ ಹೆಚ್ಚಿನ ಸಫಲತೆ ನೀಡ ಲಿಲ್ಲ. ದೇವದಾಸಿಯರ ಮೂಲ ಉಚ್ಚಾಟನೆಗೆ ಸರ್ಕಾರ ಯತ್ನಿಸಿದ್ದರಿಂದ ಶಾಸ್ತ್ರೀಯ ನೃತ್ಯ ಕಲೆಗೆ ಹಾನಿ ಆದದ್ದೇ ಅಲ್ಲದೆ ಮಾನವನ ನೈತಿಕ ಮೂಲ ಪರಿವರ್ತನೆಗೆ ಯಾವ ಉಪಕಾರವಾದದ್ದೂ ಕಂಡು ಬಂದಿಲ್ಲ.

ಬುದ್ಧಿಯ ತರ್ಕಕ್ಕೆ ಸಿಕ್ಕಿದ್ದ ಸಮಾಜ ಸುಧಾರಕರು ಮಹತ್ವ ಕೊಟ್ಟಿದ್ದು ತರ್ಕಕ್ಕೇ ಹೊರತು ಸಹಜ ಪ್ರವೃತಿಗಲ್ಲ. ಇದರಿಂದ ಕಲೆಗಾದ ನಷ್ಟ ಅಪಾರ. ಇದನ್ನು ತುಂಬಲು ಒಂದು ಶತಮಾನವೇ ಬೇಕಾಯ್ತು.

23 Susie Taru and K. Lalitha ; *Women writing in India* P. 5.

ಡಾ|| ವಿ.ಎಸ್. ಸಂಪತ್ಕುಮಾರಾಚಾರ್ಯ*

# ಸಂಗೀತಕ್ಕೆ ಕರ್ನಾಟಕದ ಕೊಡುಗೆ

'ಸಮ್ಯಕ್‌ಗೀತಂ ಸಂಗೀತಂ,' ಸಂಗೀತ ಎಂಬುದು ಎಲ್ಲರಿಗೂ ಆಹ್ಲಾದಕರವಾದ ಧ್ವನಿ ವಿಶೇಷ ಹಾಗೂ ವಿದ್ಯೆ. ಪಶು, ಶಿಶು, ಸರ್ಪ ಇತ್ಯಾದಿ ಪ್ರಾಣಿಗಳೂ ಸಹ ಇದರಿಂದ ಮುಗ್ಧವಾಗಿ ಪ್ರಪಂಚವನ್ನೇ ಮರೆತು ನಿಂತುಬಿಡುತ್ತವೆ. ನಮ್ಮ ಶಾಸ್ತ್ರಗ್ರಂಥಗಳು ಸಂಗೀತವನ್ನು ಗಾಂಧರ್ವವೇದವೆಂದು ಸಾರಿವೆ. ಭಗವಂತನ ಸಾಕ್ಷಾತ್ಕಾರವನ್ನು ಪಡೆಯಲು ಮಾನವನಿಗೆ ಅನೇಕ ಮಾರ್ಗಗಳನ್ನು ನಮ್ಮ ಪೂರ್ವಿಕರು ತೋರಿಸಿರುತ್ತಾರೆ. ಇವುಗಳಲ್ಲಿ ಸಂಗೀತವು ಅತ್ಯಂತ ಸುಲಭವಾದ ಮಾರ್ಗವೆನ್ನಬಹುದು. ಈ ಮಾರ್ಗಕ್ಕೆ ಸಂಗೀತೋಪಾಸನೆ ಎಂದು ಹೆಸರು.

ದಕ್ಷಿಣ ಭಾರತದಲ್ಲಿ ಸಂಗೀತದ ನವೋದಯವನ್ನು ಆರಂಭಿಸಿದವರು ವಿಜಯನಗರದ ಪ್ರಾರಂಭದ ಕಾಲದಲ್ಲಿ ಶೃಂಗೇರಿಮಠದ ಜಗದ್ಗುರು ವಿದ್ಯಾರಣ್ಯಯತಿಗಳು. ಅವರು ದೊಡ್ಡದೊಂದು ಸಂಪ್ರದಾಯ ಹಾಕಿಕೊಟ್ಟು ನಮ್ಮ ಸಂಗೀತದ ಪ್ರವಾದಿಯಾಗಿ, ಕರ್ನಾಟಕ ಸಂಗೀತ ಸಾಮ್ರಾಜ್ಯವನ್ನು ಸ್ಥಾಪಿಸಿದರು. 'ಸಂಗೀತಸಾರ' ಎಂಬ ಲಕ್ಷಣಗ್ರಂಥವನ್ನು ರಚಿಸಿ ೧೫ ಮೇಳರಾಗಗಳನ್ನು ಹೇಳಿ, ೫೦ ಪ್ರಚುರ ಪ್ರಯೋಗಗಳುಳ್ಳ ರಾಗಗಳನ್ನು ಅಳವಡಿಸಿದರು. ಇದು ಕರ್ನಾಟಕ ಸಂಗೀತದಲ್ಲಿ ೭೨ ಮೇಳಕರ್ತ (ಜನಕ ರಾಗ) ಪದ್ಧತಿ ಮತ್ತು ಹಿಂದೂಸ್ಥಾನೀ ಸಂಗೀತದಲ್ಲಿ ಥಾಟ್ ಪದ್ಧತಿಯೂ ಬೆಳೆಯಲು ಪ್ರೇರೇಪಿಸಿತು.

ಶಾರ್ಙ್ಗದೇವನ 'ಸಂಗೀತರತ್ನಾಕರ'ಕ್ಕೆ ವಿಜಯನಗರದ ಇಮ್ಮಡಿ ದೇವರಾಯನ ಆಸ್ಥಾನ ಪಂಡಿತನಾಗಿದ್ದ, ಲಾಕ್ಷಣಿಕನಾಗಿ ಕಲ್ಲಿನಾಥನು (ಕಲ್ಲಪ್ಪದೇಶಿಕ) ಅದ್ವಿತೀಯವಾದ' 'ಕಲಾನಿಧಿ' ಎಂಬ ವ್ಯಾಖ್ಯಾನವನ್ನು ರಚಿಸಿ ಆಧುನಿಕ ಸಂಗೀತದ ಆದ್ಯಾಚಾರ್ಯನೆನಿಸಿಕೊಂಡಿದ್ದಾನೆ. ಇವನ ಸಮಕಾಲೀನನಾಗಿದ್ದ ರಾಮಾಮಾತ್ಯನು 'ಸ್ವರ ಮೇಳಕಲಾನಿಧಿ (೧೫೫೦ ಕ್ರಿ.ಶ.) ಎಂಬ ಗ್ರಂಥವನ್ನು ರಚಿಸಿ ಆಧುನಿಕ ಜನಕರಾಗಗಳ ಜನಕನಾಗಿ ಆಧುನಿಕ ವೀಣೆಯ ಆದ್ಯಾಚಾರ್ಯನಾಗಿದ್ದಾನೆ.

ಅದೇ ಕಾಲದ ಮತ್ತೊಬ್ಬ ಕನ್ನಡಿಗ ಬೆಂಗಳೂರು ಜಿಲ್ಲೆಯ ಮಾಗಡಿ ತಾಲೂಕಿನ ಸಾತನೂರಿನ ನಿವಾಸಿಯಾದ ಪುಂಡರೀಕ ವಿಠಲನು ಮೊದಲು ಖಾಂದೇಶ್ ನವಾಬನನ್ನು ಆಶ್ರಯಿಸಿ ನಂತರ ಅಕ್ಬರನಿಂದ ಆಹ್ವಾನ ಹೊಂದಿ ಹರಿದಾಸ ಸ್ವಾಮಿಗಳೊಂದಿಗೆ ತಾನಸೇನನಿಗೆ ಗುರುವಾಗಿದ್ದನು. ಈತನು ನರ್ತನ ನಿರ್ಣಯ, ರಾಗಮಂಜರಿ, ಸದ್ರಾಗಚಂದ್ರೋದಯ, ರಾಗಮಾಲಾ, ಸಂಗೀತ ರತ್ನಾಕರ ಮುಂತಾದ ಗ್ರಂಥಗಳನ್ನು ರಚಿಸಿ 'ಅಕಬರೀಯ ಕಾಳಿದಾಸ'ನೆಂಬ ಬಿರುದನ್ನು ಪಡೆದನು. ಹಿಂದೂಸ್ಥಾನೀ ಧ್ರುಪದ್‌ರೀತಿಗೆ ಈತನೇ ಮೂಲ ಕಾರಣ ಇದಲ್ಲದೆ ೯೦ ರಾಗ ಮೇಳಗಳ ವೈಜ್ಞಾನಿಕವಾದ ಗಣಿತ ಪ್ರಸ್ತಾರವನ್ನು ಹಾಕಿಕೊಟ್ಟು, ರಾಗಗಳ ಸ್ತ್ರೀಪುರುಷ ವರ್ಗೀಕರಣವನ್ನು ಮಾಡಿ ಹಿಂದೂಸ್ಥಾನಿ ಸಂಗೀತದ ಆಚಾರ್ಯ ಪುರುಷನಾದನು.

* ೯೨೭/೧, ಒಂದನೆಯ ಮುಖ್ಯರಸ್ತೆ, ಲಕ್ಷ್ಮೀಪುರ, ಮೈಸೂರು-೫೭೦ ೦೦೪.

ದಕ್ಷಿಣದ ತಮಿಳುನಾಡಿನ ಶ್ರೀರಂಗದಲ್ಲಿ ಅನೇಕ ವರ್ಷಗಳ ಕಾಲ ಇದ್ದು ತಮಿಳು ಪ್ರಬಂಧಗಳ ಗಾನದ ಪರಿಚಯ ಪಡೆದಿದ್ದ ಶ್ರೀಪಾದರಾಜರು (೧೪೦೪–೧೫೦೨ ಕ್ರಿ.ಶ ) ಚಂದ್ರಗಿರಿಯ ದೊರೆ ಸಾಳ್ವನರಸಿಂಹನ ಗುರುವಾಗಿದ್ದು ಈಗಿನ ಕೋಲಾರ ಜಿಲ್ಲೆಯ ಮುಳಬಾಗಿಲಿನಲ್ಲಿ ನೆಲೆಸಿದರು. ಮಧ್ವಾಚಾರ್ಯರ ಶಿಷ್ಯರಾದ ನರಹರಿ ತೀರ್ಥರು ಹರಿದಾಸ ಸಾಹಿತ್ಯದ ಆದ್ಯರೆಂದು ಪರಿಗಣಿಸಲ್ಪಟ್ಟರೂ, ದಾಸ ಸಾಹಿತ್ಯವನ್ನು ಬೆಳೆಸಿದವರಲ್ಲಿ ಶ್ರೀಪಾದರಾಜರು ಮೊದಲಿಗರು. ಇವರು ೧೩೩ ಸುಳಾದಿಗಳನ್ನೂ, ಹಲವು ಕೃತಿಗಳನ್ನೂ ರಚಿಸಿ ಪ್ರಯೋಗ ಸಂಗೀತಕ್ಕೆ ಮೊದಲ ಸಾಮಾಗ್ರಿಯನ್ನು ಒದಗಿಸಿದರು. ಇವರು ಉಗಾಭೋಗಗಳು, ವೃತ್ತನಾಮಗಳು, ದಂಡಕಗಳು, ಗೋಪಿಗೀತ, ವೇಣುಗೀತ, ಭ್ರಮರಗೀತೆ, ಲಕ್ಷ್ಮೀನರಸಿಂಹ ಪ್ರಾದುರ್ಭಾವ ದಂಡಕ, ರುಕ್ಮಿಣಿ ಸತ್ಯಭಾಮಾ ವಿಲಾಸ ಎಂಬುವುಗಳನ್ನು ಕನ್ನಡ ಹರಿದಾಸ ಸಾಹಿತ್ಯಕ್ಕೆ ಅಪೂರ್ವವಾದ ಕೊಡುಗೆ ನೀಡಿದ್ದಾರೆ.

ಇದರ ಶಿಷ್ಯರಾದ ಶ್ರೀವ್ಯಾಸತೀರ್ಥರು (೧೪೪೧–೧೫೩೯ ಕ್ರಿ.ಶ.) ಹರಿದಾಸ ಮಕುಟಮಣಿಗಳಾಗಿದ್ದು ಕನ್ನಡ ದಾಸ ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲೂ ಪರಿಪುಷ್ಟವಾದ ಸಾಹಿತ್ಯವನ್ನು ನೀಡಿದ್ದಾರೆ. ಪ್ರಾಚೀನ ಪ್ರೌಢನಾಗಿದ್ದ ಗೇಯ ಪ್ರಬಂಧಗಳನ್ನು ತಿಳಿಗನ್ನಡದಲ್ಲಿ ಹೊಸ ರೀತಿಯಲ್ಲಿ ರಚಿಸಿದರು. (ಇವರ ಅಂಕಿತ' 'ಶ್ರೀ ಕೃಷ್ಣ') ಇವರ ಪ್ರಮುಖ ಶಿಷ್ಯರಾದ ಪುರಂದರ ದಾಸರು (೧೪೮೪–೧೫೬೪ ಕ್ರಿ.ಶ.) ಕರ್ನಾಟಕ ಸಂಗೀತದ ಪ್ರಥಮ ಸೋಪಾನಗಳಾದ ಸರಳೆವರಿಸೆ, ಜಂಟಿವರಿಸೆ, ಅಲಂಕಾರ, ಪಿಳ್ಳಾರಿ ಗೀತೆಗಳನ್ನು ರಚಿಸಿದ್ದು ಕರ್ನಾಟಕ ಸಂಗೀತದ ಇತಿಹಾಸದಲ್ಲಿ ಕ್ರಾಂತಿಯಾಗಿ ಪರಿಣಮಿಸಿತು. ತತ್ಕಾರಣ ಪುರಂದರದಾಸರು ಕರ್ನಾಟಕ ಸಂಗೀತ ಪಿತಾಮಹ ಎಂಬ ನಂಬಿಕೆಗೆ ಪಾತ್ರರಾದರು. ಇದನ್ನು ಎತ್ತಿ ತೋರಿಸಿದ ಕೀರ್ತಿ ತಮಿಳುನಾಡಿಗೆ ಸಲ್ಲುತ್ತದೆ ಎಂಬುದನ್ನು ಇಲ್ಲಿ ಸ್ಮರಿಸಬಹುದು. ದಾಸರು ಹಲವು ಬಗೆಯ ಗೇಯಪ್ರಕಾರಗಳ ಮಹಾಪೂರವನ್ನೇ ಹರಿಸಿದರು. ಮುಂಡಿಗೆಯೆಂಬ ಹೊಸ ಸಾಹಿತ್ಯ ಪ್ರಕಾರವನ್ನು ನಮ್ಮ ಸಂಗೀತದಲ್ಲಿ ಪ್ರವೇಶಗೊಳಿಸಿದ ಕೀರ್ತಿ ಭಕ್ತ ಶ್ರೇಷ್ಠ ಕನಕದಾಸರಿಗೆ (೧೫೦೯–೧೬೦೭ ಕ್ರಿ.ಶ.) ಸಲ್ಲುತ್ತದೆ.

ಶಿವಮೊಗ್ಗ ಜಿಲ್ಲೆಯವರಾದ ಗೋವಿಂದ ದೀಕ್ಷಿತರು (೧೫೫೪–೧೬೨೪ ಕ್ರಿ.ಶ.) ತಂಜಾವೂರನ್ನು ಆಳಿದ ಚೆವ್ವಪ್ಪನಾಯಕ, ಅಚ್ಯುತಪ್ಪನಾಯಕ ಮತ್ತು ರಘುನಾಥನಾಯಕರ ಪ್ರಧಾನಿಯಾಗಿದ್ದು ರಘುನಾಥ ನಾಯಕನ ಹೆಸರಿನಲ್ಲಿ 'ಸಂಗೀತ ಸುಧಾ' ಎಂಬ ಲಕ್ಷಣ ಗ್ರಂಥವನ್ನು ರಚಿಸಿದರು ಮತ್ತು ಇಂದಿನ ಸರಸ್ವತೀ ವೀಣೆಯನ್ನು ರಚಿಸಿದರು. ಇವರ ದ್ವಿತೀಯಪುತ್ರ ವೆಂಕಟೇಶ್ವರ ದೀಕ್ಷಿತ (೧೬೫೦ ಕ್ರಿ.ಶ.) ಅಥವಾ ವೆಂಕಟಮಖಿಯು 'ಚತುರ್ದಂಡಿ ಪ್ರಕಾಶಿಕಾ' ಎಂಬ ಗ್ರಂಥವನ್ನು ರಚಿಸಿ, ಈಗ ಬಳಕೆಯಲ್ಲಿರುವ ೭೨ ಮೇಳಕರ್ತ ಅಥವಾ ಜನಕರಾಗ ಪದ್ಧತಿಗೆ ಕಾರಣರಾದರು.

ವಿಜಯನಗರದ ಕಾಲದಲ್ಲಿ, ಅಚ್ಯುತರಾಯನ 'ತಾಳಕಲಾವಾರಿಧಿ', ಅಷ್ಟಾವಧಾನ ಸೋಮನಾರ್ಯನ 'ಸ್ವರರಾಗ ಸುಧಾರಸ', ಶ್ರೀರಂಗರಾಜನ 'ಭರತಭಾಷ್ಯ', ಭಂಡಾರು ಲಕ್ಷ್ಮೀ ನಾರಾಯಣನ 'ಸಂಗೀತ ಚೂಡಾಮಣಿ', ನಿಜಗುಣ ಶಿವಯೋಗಿಯ'ವಿವೇಕ ಚಿಂತಾಮಣಿ' ಯಲ್ಲಿರುವ ಗೇಯಕೃತಿಗಳು, ದೇವಣ್ಣ ಭಟ್ಟನ 'ಸಂಗೀತ ಮಕರಂದ ಎಂಬ ಸಂಗೀತ ಮತ್ತು ನಾಟ್ಯ ಶಾಸ್ತ್ರ ಗ್ರಂಥಗಳು ರಚಿಸಲ್ಪಟ್ಟವು.

ನಂತರ ಮೈಸೂರು ಒಡೆಯರು ಕರ್ನಾಟಕ ಸಂಗೀತ ಮತ್ತು ಭರತನಾಟ್ಯವನ್ನು ವಿಪುಲವಾಗಿ ಪೋಷಿಸಿ ಬೆಳೆಸಿದರು. ರಾಜ ಒಡೆಯರು (೧೫೭೮–೧೬೧೭ ಕ್ರಿ.ಶ.) ಸಂಗೀತ ಪ್ರಿಯರಾಗಿದ್ದು ವೀಣಾವಾದನ, ಸಂಗೀತ, ಕಾವ್ಯ, ನಾಟಕಾಲಂಕಾರಾದಿ ಶಾಸ್ತ್ರಗಳನ್ನು ವಿಧ್ಯುಕ್ತವಾಗಿ ಅಧ್ಯಯನ ಮಾಡಿದ್ದರು. ಕಂಠೀರವ ನರಸರಾಜ ಒಡೆಯರು (ಕ್ರಿ.ಶ. ೧೬೩೮–೧೬೫೯) ಸಂಗೀತ ಪ್ರಿಯರೂ, ಕಲಾಪೋಷಕರು, ಸಂಗೀತ ಸಾಹಿತ್ಯ ವೀಣಾವಾದನವಿಶಾರದರೂ ಆಗಿದ್ದರೂ, ಇವರ ಆಸ್ಥಾನದಲ್ಲಿ ವೀಣೆ ವಿಠಲ ನರಸಯ್ಯ ಮುಂತಾದ ವಿದ್ವನ್ಮಣಿಗಳೂ ಕಲಾವಿದರೂ ಇದ್ದರು. ಚಿಕ್ಕ ದೇವರಾಜ ಒಡೆಯರು (ಕ್ರಿ.ಶ. ೧೬೭೨–೧೭೦೪) 'ವೈಣಿಕರೊಳ್ ಪ್ರವೀಣರು' ಕಲಾಪೋಷಕರೂ ಆಗಿದ್ದು, ಜಯದೇವಕವಿಯ ಗೀತಗೋವಿಂದದ ಮೇಲ್ಪಂಕ್ತಿಯನ್ನು ಅನುಸರಿಸಿ 'ಗೀತಗೋಪಾಲ' ಮತ್ತು 'ಚಿಕ್ಕದೇವರಾಯ ಸಪ್ತಪದಿ' ಎಂಬ ಗೇಯ ರೂಪಕಗಳನ್ನೂ, ನಂಜರಾಜನು

'ಸಂಗೀತ ಗಂಗಾಧರ' ಎಂಬ ಗ್ರಂಥವನ್ನೂ, ರಚಿಸಿದ. ಟಿಪ್ಪುವಿನ ಕಾಲದಲ್ಲಿ, ತಂಜಾವೂರು ಮತ್ತು ತಿರುವಾಂಕೂರಿನಲ್ಲಿ ಪಿಟೀಲು ವಾದ್ಯವು ಪ್ರವೇಶವಾಗುವ ಮೊದಲೇ ಕರ್ನಾಟಕ ಸಂಗೀತ ಮತ್ತು ಭರತನಾಟ್ಯದಲ್ಲಿ ಮೈಸೂರಿನಲ್ಲಿ ಪ್ರವೇಶವಾಯಿತು ಎಂಬುದು ಗಮನಾರ್ಹ. ದರಿಯಾದೌಲತ್‌ಬಾಗ್ ಅರಮನೆಯಲ್ಲಿ ಇರುವ ಸಂಗೀತಗಾರರ ವೃಂದದ ಚಿತ್ರದಲ್ಲಿ ಒಬ್ಬ ಸ್ತ್ರೀ ಪಿಟೀಲು ನುಡಿಸುತ್ತಿರುವ ದೃಶ್ಯವು (೧೭೮೪ ಕ್ರಿ.ಶ.), ಶ್ರೀರಂಗನಾಥಸ್ವಾಮಿಯ ರಥದಲ್ಲಿ ಪಿಟೀಲಿನ ಒಂದು ಕೆತ್ತನೆಯೂ ಇದಕ್ಕೆ ನಿದರ್ಶನ.

ಮುಮ್ಮಡಿ ಕೃಷ್ಣರಾಜ ಒಡೆಯರು (೧೭೯೪–೧೮೬೮ ಕ್ರಿ.ಶ.) ತಂಜಾವೂರಿನ ನಂತರ ಮೈಸೂರು ಒಂದು ಸಂಗೀತ ಕಲಾಕೇಂದ್ರವಾಗಲು ಕಾರಣರು. ತಂಜಾವೂರು ಮತ್ತು ದಕ್ಷಿಣದ ಇತರ ಕಡೆಗಳಿಂದ ಹಲವು ಖ್ಯಾತ ಸಂಗೀತ ವಿದ್ವಾಂಸರು ಮೈಸೂರಿಗೆ ಬಂದು ಆಸ್ಥಾನ ವಿದ್ವಾಂಸರಾದರು. ಒಡೆಯರು ಸ್ವತಃ ಸಂಗೀತಶಾಸ್ತ್ರ ಮತ್ತು ಭರತನಾಟ್ಯ ಕಲಾಕೋವಿದರೂ, ಕವಿಗಳೂ ಆಗಿದ್ದರು, ಅವರು 'ಸ್ವರಚೂಡಾಮಣಿ'ಎಂಬ ಸ್ವರಗಳನ್ನು ಕುರಿತು ವಿವೇಚಿಸಿರುವ ಗ್ರಂಥವನ್ನೂ, 'ಶ್ರೀ ತತ್ವನಿಧಿ' ಎಂಬ ಕೋಶವನ್ನೂ, 'ಭರತಸಾರ ಸಂಗ್ರಹ' ಎಂಬ ಭರತನಾಟ್ಯ ಮತ್ತು ಪ್ರಯೋಗವನ್ನು ಕುರಿತ ವಿಶೇಷವಾದ ಗ್ರಂಥವನ್ನೂ, 'ನಂಜುಂಡಾಷ್ಟಕ, ಮುಂತಾದುವನ್ನೂ ರಚಿಸಿದ್ದಾರೆ.

೧೬೮೪–೧೭೧೦ ಕ್ರಿ.ಶ.ರ ವರೆಗಿನ ಕಾಲದಲ್ಲಿ ಕೆಳದಿಯ ಬಸವಪ್ಪನಾಯಕನು 'ಶಿರತತ್ವರತ್ನಾಕರ'ವೆಂಬ ಸಂಸ್ಕೃತದ ವಿಶ್ವಕೋಶವನ್ನು ರಚಿಸಿದನು ಇದರ ೬ ೭,೮,೯ನೆಯ ಕಲ್ಲೋಲಗಳು ಸಂಗೀತವನ್ನು ಕುರಿತು ತಿಳಿಯಲು ಒಂದು ಆಕರ ಗ್ರಂಥ.

ಮೈಸೂರಿನ ವೀಣಾ ಪರಂಪರೆಯ ಮೂಲವನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಗುರುತಿಸಬಹುದು. 'ವೀಣೆಯ ಬೆಡಗಿದು ಮೈಸೂರು' ಎಂದು ಮೈಸೂರು ರಾಜ್ಯವು ಖ್ಯಾತಿ ಪಡೆಯಲು ಈ ವೀಣಾ ಪರಂಪರೆಗೆ ಸೇರಿದ ವೈಣಿಕರು ಮತ್ತು ರಾಜರ ಕಲಾಭಿಮಾನ, ಉದಾರ ಪೋಷಣೆ, ಪ್ರೋತ್ಸಾಹಗಳು ಕಾರಣ. ವೀಣೆಶೇಷಣ್ಣ(೧೮೫೨–೧೯೨೬ ಕ್ರಿ.ಶ.)ಮತ್ತು ವೀಣೆ ಸುಬ್ಬಣ್ಣ (೧೮೫೪–೧೯೩೯ ಕ್ರಿ.ಶ.) ನವರು ಮೈಸೂರಿನ ಕಲಾಕೀರ್ತಿಯನ್ನು ಬೆಳಗಿಸಿದವರಲ್ಲಿ ಪ್ರಮುಖರು, ಮೈಸೂರಿನ ವೀಣಾವಾದನ ಶೈಲಿಯೆಂದರೆ ಮಾರ್ದವತೆಯುಳ್ಳ ಗಾಯನವನ್ನು ಹೋಲುವ ಶೈಲಿ, ಇಂದಿನ ಮೈಸೂರು ಶೈಲಿಗೆ ಪ್ರಸಿದ್ಧರಾಗಿರುವ ವೈಣಿಕರೆಲ್ಲರೂ ಈ ಪರಂಪರೆಗೆ ಸೇರಿದವರು.

ನಾಲ್ವಡಿ ಕೃಷ್ಣರಾಜ ಒಡೆಯರು (೧೮೯೫–೧೯೪೦) ಕರ್ನಾಟಕ ಸಂಗೀತ, ಪಾಶ್ಚಾತ್ಯ ಮತ್ತು ಹಿಂದೂಸ್ಥಾನಿ ಸಂಗೀತದಲ್ಲಿ ಪರಿಣತಿ ಪಡೆದಿದ್ದರು. ಇವರ ಸಹೋದರರಾದ ಯುವರಾಜ ನರಸಿಂಹರಾಜ ಒಡೆಯರು ೧೯೧೪ರಲ್ಲೇ ಪುಂಡರೀಕ ವಿಠಲನ ಗ್ರಂಥಗಳನ್ನು ಪ್ರಕಟಿಸಿ ಮುಂದಿನ ಪೀಳಿಗೆಗಳನ್ನು ಚಿರಋಣಿಗಳನ್ನಾಗಿ ಮಾಡಿದರು.

ಕೃಷ್ಣರಾಜ ಒಡೆಯರು ಪಾಶ್ಚಾತ್ಯ ಮತ್ತು ಭಾರತೀಯ ಸಂಗೀತವಾದ್ಯಗಳನ್ನು ಶೇಖರಿಸಿ, ಸ್ಯಾಕ್ಸೋಫೋನ್‌ವಾದ್ಯವನ್ನು ಕರ್ನಾಟಕ ಸಂಗೀತಕ್ಕೆ ಅಳವಡಿಸಿ ನುಡಿಸುವಂತೆ ವಿದ್ವಾಂಸರನ್ನುಪ್ರೇರೇಪಿಸಿದರು. ಅಂತೆಯೇ ಅರಮನೆ ವಾದ್ಯವೃಂದದ ಲಕ್ಷ್ಮೀನರಸಿಂಹಯ್ಯ ಎಂಬುವರು ಇದನ್ನು ಸಾಧಿಸಿ ಸಾಕ್ಸೋಫೋನ್ ಲಕ್ಷ್ಮೀ ನರಸಿಂಹಯ್ಯನವರೆಂದು ಪ್ರಸಿದ್ಧರಾದರು. ಅರಮನೆಯ ವಿದ್ವಾಂಸರು ೭೨ ಮೇಳಕರ್ತಗಳಲ್ಲಿ ಕೃತಿರಚನೆ ಮಾಡಲು ತೊಡಗಿಸಿದರು. ಕರ್ನಾಟಕ, ಹಿಂದೂಸ್ಥಾನೀ, ಪಾಶ್ಚಾತ್ಯ ವಾದ್ಯಗೋಷ್ಠಿಗಳ ಏರ್ಪಾಡು, ಮೈಸೂರಿನ ಕ್ಷಯರೋಗದ ಆಸ್ಪತ್ರೆಯ ರೋಗಿಗಳಿಗೆ ಮಾನಸಿಕ ಚಿಕಿತ್ಸೆಗಾಗಿ ವಾರಕ್ಕೊಮ್ಮೆ ಸಂಗೀತ ಕಚೇರಿಗಳ ಏರ್ಪಾಡು, ಪರಸ್ಥಳಗಳಿಂದ ಬಂದು ಆಸ್ಥಾನದಲ್ಲಿ ಹಾಡುತ್ತಿದ್ದ ವಿದ್ವಾಂಸರ ಸ್ವಾರಸ್ಯಪೂರ್ಣ ಮತ್ತು ಅಪೂರ್ವವಾದ ಸುಮಾರು ೫೦೦ ಕೃತಿಗಳನ್ನು ಪಾಶ್ಚಾತ್ಯ ಸ್ವರಲಿಪಿಯಲ್ಲಿ ಸುಮಾರು ೪೦ ಸಂಪುಟಗಳಲ್ಲಿ ವೀಣಾ ವೆಂಕಟಗಿರಿಯಪ್ಪನವರಿಂದ ಬರೆಸಿ ಇಟ್ಟಿರುವುದು, ಉಚಿತವಾಗಿ ಸಂಗೀತ ಶಿಕ್ಷಣ ದೊರಕಲು ಚಂದ್ರಶಾಲೆ ಕೊಟ್ಟೆಯಲ್ಲಿ ಸಂಗೀತ ಶಾಲೆಯನ್ನು ಸ್ಥಾಪಿಸಿದ್ದು, ಅರಮನೆಯಲ್ಲಿ ಜರುಗುತ್ತಿದ್ದ ಸಂಗೀತ ಕಚೇರಿಗಳನ್ನು ಜನ ಸಾಮಾನ್ಯರು ಕೇಳುವಂತೆ

ಅರಮನೆಯ ಹೊರಗಡೆ ಧ್ವನಿವರ್ಧಕದ ಏರ್ಪಾಡು ಮಾಡಿದವರಲ್ಲಿ ಇವರೇ ಮೊದಲಿಗರು. ಅಭಿನವ ತ್ಯಾಗರಾಜರೆಂದು ಪ್ರಸಿದ್ಧರಾಗಿದ್ದ ಮೈಸೂರು ವಾಸು ದೇವಾಚಾರ್ಯರ (೧೮೬೫-೧೯೬೧) ರಚನೆಗಳನ್ನೊಳ ಗೊಂಡ'ವಾಸುದೇವ ಕೀರ್ತನ ಮಂಜರಿ' ಎಂಬ ಸಂಪುಟ ಗಳು ಪ್ರಕಟವಾದುವು. ಇದೇ ಕಾಲದಲ್ಲಿ ೧೧೪ ಚಾಮುಂಡೇಶ್ವರಿ ಕೃತಿಗಳನ್ನು ದೇವೋತ್ತಮ ಜೋಯಿಸರ ನೆರವಿನಿಂದ ಮುತ್ತಯ್ಯಭಾಗವತರು ರಚಿಸಲು ಕೃಷ್ಣರಾಜ ಒಡೆಯರು ಕಾರಣರು. ಇದಲ್ಲದೆ ಮೈಸೂರು ಟಿ. ಚೌಡಯ್ಯನವರ ೪ ತಂತಿಗಳ ಪಿಟೀಲನ್ನು ೭ ತಂತಿಗಳ ಪಿಟೀಲನ್ನಾಗಿ ಪರಿವರ್ತಿಸಿ, ನಂತರ ಅದನ್ನು ೧೯ ತಂತಿಗಳ ಪಿಟೀಲನ್ನಾಗಿ ಮಾರ್ಪಡಿಸಿ ತಮ್ಮ ಮಹತ್ಸಾಧನೆಯಿಂದ ಸಂಗೀತ ಕ್ಷೇತ್ರದಲ್ಲಿ ಅದ್ವಿತೀಯರಾಗಿ ಮೈಸೂರಿನ ಕೀರ್ತಿಯನ್ನು ಹರಡಿದ್ದು ಈ ಕಾಲದಲ್ಲೇ. ಕೊನೆಯ ಮಹಾರಾಜರಾದ ಜಯಚಾಮರಾಜ ಒಡೆಯರು ಸಂಗೀತಜ್ಞರಾಗಿದ್ದು, ಕರ್ನಾಟಕ ಸಂಗೀತದ ಮುಮ್ಮಣಿಗಳಲ್ಲಿ ಒಬ್ಬರಾದ ಮುತ್ತು ಸ್ವಾಮಿದೀಕ್ಷಿತರ ಕೃತಿಗಳಿಂದ ಸ್ಫೂರ್ತಿ ಪಡೆದು ರೂಢಿಯಲ್ಲಿರುವ ರಾಗಗಳಲ್ಲದೆ ಕೆಲವು ಅಪರೂಪ ರಾಗಗಳಲ್ಲಿ, ಮೈಸೂರು ವಾಸುದೇವಾಚಾರ್ಯರು ಮತ್ತು ಅವರ ಶಿಷ್ಯರಾದ ವಿದ್ವಾನ್ ಎನ್. ಚೆನ್ನಕೇಶವಯ್ಯ ನವರ ನೆರವಿನಿಂದ ೯೪ ಸಂಸ್ಕೃತದ ಕೃತಿಗಳನ್ನು ೯೪ ರಾಗಗಳಲ್ಲಿ 'ಶ್ರೀವಿದ್ಯಾ' ಎಂಬ ಅಂಕಿತದಲ್ಲಿ ರಾಗ ಮುದ್ರೆಯೂ ಬರುವಂತೆ ರಚಿಸಿ, ಕರ್ನಾಟಕ ಸಂಗೀತ ಪ್ರಪಂಚವನ್ನು ಶ್ರೀಮಂತಗೊಳಿಸಿದರು.

ವೈಣಿಕ ಆರ್. ಎಸ್. ಕೇಶವಮೂರ್ತಿಯವರು ತಮ್ಮ ವೀಣೆಗೆ ಅನುರಣನಕ್ಕಾಗಿ ಏಳು ತಂತಿಗಳನ್ನೂ, ಸಾರಣಿಗೆ ಜೋಡು ತಂತಿಗಳನ್ನೂ ಅಳವಡಿಸಿ, ಅದನ್ನು ಗಾಯಿತ್ರೀ ವೀಣೆಯನ್ನಾಗಿ ಮಾರ್ಪಡಿಸಿದರು. ಹಾಗೆಯೇ ಬೆಂಗಳೂರಿನ ವೈಣಿಕ ಜಿ. ಎನ್. ಸುಬ್ರಹ್ಮಣ್ಯಂ ಅವರು ವೀಣೆಗೆ ಒಟ್ಟು ೨೪ ತಂತಿಗಳನ್ನು ಅಳವಡಿಸಿ ಗಾಯತ್ರಿ ವೀಣಾ ಎಂಬ ವೀಣೆಯನ್ನು ಸೃಷ್ಟಿಸಿದ್ದಾರೆ.

ಹಿಂದೆ ಹೇಳಿದ ಗೋಪಾಲನಾಯಕ, ಶಾರ್ಙ್ಗ ದೇವನಿಂದ ಮೊದಲ್ಗೊಂಡು ಸಂಗೀತಶಾಸ್ತ್ರ ಗ್ರಂಥ ಗಳನ್ನು ರಚಿಸಿದ ಲಕ್ಷಣಕಾರರು, ವಾಗ್ಗೇಯಕಾರರು ಕರ್ನಾಟಕ ಸಂಗೀತವನ್ನು ರಾಜ ಮಾರ್ಗದಲ್ಲಿ ನಡೆಸಿ ಕೊಂಡು ಬಂದರು. ಈ ಮಹತ್ಕಾರ್ಯದಲ್ಲಿ ಕನ್ನಡಿಗರ ಪಾತ್ರ ಮತ್ತು ಕೊಡುಗೆ ಗುರುತರವಾದುದು ಇದಲ್ಲದೆ ಹೊಯ್ಸಳ ಮತ್ತು ವಿಜಯನಗರದ ಕಾಲದಲ್ಲಿ ದಕ್ಷಿಣ ಭಾರತ ಬಹುಭಾಗ ಕರ್ನಾಟಕ ರಾಜ್ಯಗಳ ಭಾಗ ವಾಗಿತ್ತು. ಕರ್ನಾಟಕವೆಂದರೆ ಪುರಾತನ ಎಂಬ ಅರ್ಥವೂ ಇದೇ. ಆದ್ದರಿಂದ ದಕ್ಷಿಣ ಭಾರತದ ಶಾಸ್ತ್ರೀಯ ಸಂಗೀತಕ್ಕೆ ಕರ್ನಾಟಕ ಸಂಗೀತವೆಂಬ ಹೆಸರು ರೂಢಿಯಲ್ಲಿ ನಿಂತಿದೆ.

ಎಂ. ಜಿ. ನಾಗರಾಜ್*

# ಕೊಡಗಿನ ಪನ್ಯ (ಜಮೀನು)ಗಳು

'ಪನ್ಯ' ಎಂದರೆ ಕೊಡಗಿನ ಹಾಲೇರಿ ಅರಸರ ಖಾಸಗಿ ಕೃಷಿ ಭೂಮಿಗೆ ಇದ್ದ ಹೆಸರಾಗಿತ್ತು. ರಾಜರ ವಶಕ್ಕಿದ್ದ ಅರಮನೆ ಕೃಷಿ ಜಮೀನು ಎಂಬುದಾಗಿತ್ತು. ಅದಕ್ಕೆ ಆಂಗ್ಲರ ಆಡಳಿತ ನೀಡಿದ್ದ ವಿವರಣೆ ಹೀಗಿದೆ– Pannya is a term applied to crown lands formerly held by the Rajas now given out for cultivation on condition that they should be resignated whenever required by the government.[1] ಕನ್ನಡ ನಿಘಂಟಿನಲ್ಲಿ ಪಣ್ಣಿಯ (ನಾಮಪದ)=ಹೊಲ, ಭೂಮಿ, ಕಿಟೆಲ್ ನಿಘಂಟಿನಲ್ಲಿ ಪಣ್ಯ=ಪಣ್ಣಿಯ ಎಂದಿದ್ದು A Farm, a Landed estate ಕಾರಂತರ 'ಸಿರಿಗನ್ನಡ ಅರ್ಥ ಕೋಶ'ದಲ್ಲಿ ಪಣ್ಯ=ಗೌರವ ಯೋಗ್ಯ, ವಿಕ್ರಯಕ್ಕಿರುವ; ಐ. ಮಾ. ಮುತ್ತಣ್ಣನವರ ಕೊಡವ ಕನ್ನಡ ನಿಘಂಟಿನಲ್ಲಿ ಪಣ್ಯ= ರಾಜರ ಕಾಲದ ಜಾಗ, ರಾಜರ ಕಾಲದಲ್ಲಿ ಜಾಗೀರಾಗಿ ವಿಧಿಸಿದ ಆಸ್ತಿ; ಕನ್ನಡ–ಕನ್ನಡ ನಿಘಂಟುವಿನಲ್ಲಿ[2] ಪಣ್ಣಿ=ಪಣ್ಣಿಯ=ವ್ಯವಸಾಯದ ಭೂಮಿ, ಸಾಗುವಳಿ ಭೂಮಿ, ಕೃಷಿಭೂಮಿ ಎಂಬ ಅರ್ಥಗಳಿವೆ. ಹಾಗೂ ಈ ದೇಶ್ಯ ಶಬ್ದಕ್ಕೆ ತಮಿಳಿನಲ್ಲಿ ಜ್ಞಾತಿಪದಗಳಾಗಿ ಪಣ್ಣೈ, ಪಣ್ಣೈ ಎಂಬ ಶಬ್ದಗಳಿವೆ. ಎಂದೂ ಹೇಳಲಾಗಿದೆ. ಆದರೆ ಇಂದು ಕೊಡಗಿನಲ್ಲಿ ಸಾಗುವಳಿ ಭೂಮಿ, ಗೌರವ ಯೋಗ್ಯ ಭೂಮಿ ಎಂಬ ಅರ್ಥಗಳ ಸಂಯೋಗದಿಂದ ರಾಜ ಯೋಗ್ಯ ಅಥವಾ ಗುರುಯೋಗ್ಯ ಭೂಮಿ ಎಂಬ ಸಮೀಕರಣವನ್ನು ಗಮನಿಸಿದರೆ ಈ ಶಬ್ದದ ಚಾರಿತ್ರಿಕ ಮೂಲವನ್ನು ಕ್ರಿ. ಶ. ೮೮೮ ರ ಬಿಳಿಯೂರಿನ ಗಂಗರ ಶಾಸನದಿಂದ ಹೆಕ್ಕುವುದಾಗುತ್ತದೆ.

ಈ ಶಾಸನದಲ್ಲಿ 'ಪೆಣ್ಣೆಗಡಜ್ಗದ' ಸತ್ಯವಾಕ್ಯ ಜಿನಾಲಯಕ್ಕೆ .. ಎಣ್ಬನೂಱು ಬತ್ತಮುಂ ತೆಱುವೊಂ' ಎಂದಿದೆ[3] ಪೆಣ್ಣೆ ಕಡಜ್ಗ ಎನ್ನುವಲ್ಲಿ ಕಡಜ್ಗ=ಕಡಂಗ ಎಂಬ ಶಬ್ದಕ್ಕೆ ಕಂದಕ, ಕಾಲುವೆಯಿಂದ ಗಿಡಗಂಟೆಗಳ ಮುಡಿಗೆ ನೀರು ಹಾಯಿಸಲು ಮಾಡಿಕೊಂಡ ಚಿಕ್ಕ ಹರಿ, ಎಂಬ ಅರ್ಥ ಕನ್ನಡ–ಕನ್ನಡ ನಿಘಂಟುವಿನಲ್ಲಿದೆ. ಈ ದೇಶ್ಯ ಶಬ್ದಕ್ಕೆ ತಮಿಳು, ಮಲೆಯಾಳದಲ್ಲಿ 'ಕಡಜ್ಗು' ಎಂಬ ಜ್ಞಾತಿ ಪದವೂ ಇದೆ. ಕೊಡವ ಭಾಷೆಯಲ್ಲಿ 'ಕಡಂಗಿ' ಎಂಬ ಪದವಾಗಿ ನೀರಿಲ್ಲದ ಕಂದಕ ಎಂಬ ಜ್ಞಾತಿಪದವೂ ಇದೆ. ಕೊಡವ ಭಾಷೆಯಲ್ಲಿ 'ಕಡಂಗಿ ಎಂಬ ಪದವಾಗಿ ನೀರಿಲ್ಲದ ಕಂದಕ ಎಂಬ ಅರ್ಥ ಪಡೆದಿದೆ. ಆದರೆ ಗ್ರಾಮೀಣರಲ್ಲಿ ಗ್ರಾಮದ ಸುತ್ತ ತೋಡಿದ ಹಳ್ಳಗಳಿಗೆ ಹಿಂದಿನ ಕಾಲದಲ್ಲಿ ಸಾಮಾನ್ಯವಾಗಿ 'ಕಡಂಗ' ಎಂಬ ಶಬ್ದ ಬಳಕೆ ಆಗುತ್ತಿತ್ತು. ಕೊಡವ ಕನ್ನಡ ನಿಘಂಟಿನಲ್ಲಿ 'ಕಡಂಗ' ಎಂಬ ಶಬ್ದವೂ ಇದ್ದು ಉದ್ದಕ್ಕೂ

* ಸಂ. ೨೯, ಮಹಡಿ ೨ನೆಯ ಅಡ್ಡರಸ್ತೆ ಶ್ರೀರಾಮಪುರ, ಮಹಾಲಕ್ಷ್ಮೀಪುರ, ಬೆಂಗಳೂರು

1 *Glossary of Important Vernacular Terms Occuring in Coorg Official Correspondence*, Bangalore, 1891, P. 22

2 ಕನ್ನಡ–ಕನ್ನಡ ನಿಘಂಟು ಸಂ. , ಕನ್ನಡ ಸಾಹಿತ್ಯ ಪರಿಷತ್ತು, ೧೯೮೪, ಪು. ೫೧೮೧

3 ಎ. ಕ. ನಂ. ೧ (ಪ), ಬಿಳಿಯೂರು ೯೬.

ಕಟ್ಟಿ ಏರಿಸಲಾದ ಹಿಂದಿನ ಕಾಲದ ಮಣ್ಣಿನ ದಿಣ್ಣೆ ಎಂಬ ಅರ್ಥವಿದೆ. ಹಾಗೆ ನೋಡಿದರೆ ಬುಡದಲ್ಲಿ ಕಂದಕವಿರುವ ಮಣ್ಣಿನ ದಿಬ್ಬ ಎಂಬ ಅರ್ಥ ಇಂದೂ ಕೊಡಗಿನಲ್ಲಿ ಕಾಣುವ ಕಡಂಗಗಳ ಸ್ವರೂಪದಿಂದ ವಿದಿತ ವಾಗುತ್ತದೆ. ಇಷ್ಟೆಲ್ಲ ವಿವರಣೆಯ ಅಗತ್ಯವೆಂದರೆ ಈ ಪನ್ಯ ಜಮೀನುಗಳಿಗೆ ರಕ್ಷಣಾರ್ಥವಾಗಿ ಈ ಕಡಂಗಗಳು ಪ್ರಾಚೀನ ಕಾಲದಿಂದಲೂ ನಿರ್ಮಿತವಾಗುತ್ತಿದ್ದುದೇ ಆಗಿದೆ. ಹಾಗಾಗಿ ೧೦ನೇ ಶತಮಾನದಲ್ಲಿ ಬಳಿಯೂರಿನ ಜಿನಾಲಯ 'ಪೆಣ್ಣೆಗಡಙ್ಗ'ದ ನಡುವೆ ಇದ್ದಿರಬೇಕು. ಅಂದರೆ ಸುತ್ತಲೂ ಕಡಂಗದ ರಕ್ಷಣ ಸಹಿತವಾಗಿ ಪನ್ಯದ ವಿಶಾಲ ಕೃಷಿ ಭೂಮಿ ಇದ್ದು, ಜಿನಾಲಯಕ್ಕೆ ದತ್ತಿ ಬಿಟ್ಟಿದ್ದ ಕಾರಣ ಪೆಣ್ಣೆಗಡಙ್ಗದ ಜಿನಾಲಯ' ಎಂದು ಹೆಸರಿದ್ದಿರಬೇಕು.

ಕೊಡಗಿನ ಏಳುಸಾವಿರ ಸೀಮೆಯನ್ನು ವೀರ ಕೊಂಗಾಳ್ವ ದೇವನ ಆಶ್ರಿತ ಕವಿಯೂ ಎನ್ನಲಾದ ಕ್ರಿ. ಶ. ೧೧೩೦ ರ ಮೌಕ್ತಿಕಕವಿಯ ತನ್ನ 'ಚಂದ್ರನಾಥಾಷ್ಟ'ಕದಲ್ಲಿ 'ಪೆಣ್ಣೆಂಗಡಲ ಪುರವರಾಧೀಶ್ವರ ಚಂದ್ರನಾಥಾ' ಎಂದು ಸ್ತುತಿಸಿರುವಲ್ಲಿ ಬರುವ ಶಬ್ದ 'ಪೆಣ್ಣೆಂಗಡಲು' ಗಮನಾರ್ಹವಾಗಿದೆ. ಬಹುಶಃ ಪನ್ಯ ಜಮೀನಿನ ನೆರೆಯಲ್ಲಿದ್ದ ವಿಶಾಲ ಕೆರೆಯ ಕಾರಣ ಆ ಹೆಸರು ಬಂದು ಅಲ್ಲಿದ್ದ ಪನ್ಯ ಜಮೀನಿನ ಅಸ್ತಿತ್ವ ವನ್ನೂ ಸೂಚಿಸಿದಂತಿದೆ.

ಕ್ರಿ. ಶ. ೧೬೭೧ರ ಪಾಲೂರು ಶಾಸನದಲ್ಲಿ[4] 'ನಾಲು ಮುತ್ತಾಮಯ್ಯಾಳುಮುಂ' ಎಂಬ ಪದಪುಂಜ ವಿದೆ. ಅದು ಕೊಡಗಿನ ಸಂದರ್ಭದಲ್ಲಿ ಮಯ್ಯಾಲ್ಲಾ ಮುಯ್ಯಾಳು ಎಂಬ ರೂಪ ಪಡೆಯುತ್ತದೆ. ರಾಜರು ನೀಡಿದ ಸವಲತ್ತಿನ ಕಾರಣ ಅವರ ಪನ್ಯ ಜಮೀನಿನಲ್ಲಿ ಬಿಟ್ಟಿಯಾಗಿ ನಿರ್ದಿಷ್ಟ ಸಂದರ್ಭಗಳಲ್ಲಿ ಕೆಲಸ ಮಾಡುವ ಪದ್ಧತಿ ಇತ್ತು. 'ಮುಯ್ಯಾಳು' ಎಂದರೆ ವಿನಿಮಯ ಸಹಾಯದ ದುಡಿಮೆ ವಿನಾ ಪ್ರತಿಫಲಾಪೇಕ್ಷೆಯ ಕೆಲಸ ವಲ್ಲ ಎಂಬುದು ಗ್ರಾಮೀಣ ಕೃಷಿಕರಲ್ಲಿ ಇಂದೂ ಪ್ರಚಲಿತವಿರುವ ರೂಢಿಯಾಗಿದೆ. ಅಂದರೆ ಇಂತಹ ಒಂದು ಪದ್ಧತಿ ಕೊಡಗಿನ ಪನ್ಯ ಜಮೀನುಗಳಲ್ಲಿ ೧೪ನೇ ಶತಮಾನದಲ್ಲಿತ್ತು ಎಂಬ ಸೂಚನೆ ದೊರೆಯುತ್ತದೆ. ಕ್ರಿ. ಶ. ೧೪೭೦ರ ವಿಜಯನಗರ ಕಾಲದ ಶಾಸನದಲ್ಲಿ ಹೊಲೆಯರು ವೀರ ಬಣಜರ ಕೈಕೆಳಗೆ ಹೀಗೆಯೇ ಅವಲಂಬಿತ ಆಳುಗಳಾಗಿ ಕೆಲಸ ಮಾಡುತ್ತಿದ್ದ ಬಗ್ಗೆ ಸೂಚನೆ ಇದೆ.[5] ಅಂದರೆ ಮೇಲಿನ ಪದ್ಧತಿಯ ಒಂದು ಸಂವಾದಿ ರೂಪವಿನೆನಿಸುತ್ತದೆ. ಕೊಡಗಿನ ಕೆಂಬಟ್ಟಿ, ಮಾರಂಗಿ, ಕುಕ್ಕ, ಯೆರವ ಇತ್ಯಾದಿ ದಲಿತ ವರ್ಗದ ಕೃಷಿಯಾಳುಗಳಲ್ಲಿ ಈ 'ಮುಯ್ಯಾಳು' ಹೆಚ್ಚು ಪ್ರಚಲಿತ ದಲ್ಲಿವೆ. ಕಾರಣ ರಾಜರ ಕಾಲದಲ್ಲಿ ಪನ್ಯದ ಆಳು ಗಳಾಗಿ ಕೆಲಸ ಮಾಡಿದವರ ವಂಶೀಕರಾಗಿದ್ದಾರೆ.

ಕ್ರಿ. ಶ. ೮೮೮ರ ಬಳಿಯೂರು, ಕ್ರಿ. ಶ. ೯೭೮ರ ಪೆಗ್ಗೂರು ಗಂಗರ ಶಾಸನಗಳಲ್ಲಿ 'ಮಯ್ದಾಮರಿಗರುಂ' ಎಂಬ ಶಬ್ದವಿದೆ. ರೈಸರು ಐದು ದಾಮರಿಗರು ಎಂದು ಅರ್ಥೈಸಿದ್ದಾರೆ. ದಾಮರಿಗೆ ಎಂದರೆ ಭಟ, ಯೋಧ ಎಂಬುದು ಕನ್ನಡ–ಕನ್ನಡ ನಿಘಂಟುವಿನ ಅರ್ಥವಾಗಿದೆ. 'ದಾಮ' ಎಂದರೆ 'ಹಗ್ಗ' ಎಂದು ಅರ್ಥ ವಿರುವ ಹಿನ್ನೆಲೆಯಲ್ಲಿ ದನಗಾಹಿ ಮನೆಮಕ್ಕಳು, ಕೃಷಿ ಆಳುಗಳು ಎಂದೂ ಅರ್ಥಬರುವಂತಿದೆ. 'ಎಣ್ಬನೂರು ಭತ್ತ' ಅಂದರೆ ೮೦೦ ಭಟ್ಟಿ ಕೃಷಿ ಭೂಮಿಗೂ ಅವರು ಕಾಪು=ರಕ್ಷಿಸುವ ಹೊಣೆ ಹೊರಬೇಕಿತ್ತು. ಈ ಪ್ರಮಾಣದ ಭಟ್ಟಗದ್ದೆ ವಿಶಾಲನಾದ ಕೃಷಿ ಗದ್ದೆಯೇ ಹೌದು.

ಕ್ರಿ. ಶ. ೧೧೭೫ರ ನಂದಿಗುಂದ ಶಾಸನದ 'ಬಿಟ್ಟಿ ಬೆಸೆ', ೧೬ನೇ ಶತಮಾನದ ಗೋಣಿಮರೂರು ಶಾಸನದ 'ಬಿಟ ಯಿಂನಿಪ್ಪು' ಎಂಬ ಶಬ್ದಗಳು ಚೆಂಗಾಳ್ವರ ಕಾಲದ

---

4 Neelakanta Sastry : *A History of South India, London* 1955, p. 315 ರೀತ್ಯ ಕ್ರಿ. ಶ. ೧೫೪೩-೬೪ ರ ಅವಧಿಯಲ್ಲಿ ತಂಜಾವೂರನ್ನು ಗೆದ್ದ ರಾಮರಾಜನಿಗೆ ಇತ್ತ ಉಡುಗೊರೆಗಳಲ್ಲಿ 'ಕಳಂಜು'ಗಳು (ಶಬ್ದ) ಇವೆ. ಅದಾಗಿ ಈ ಶಾಸನದ ಕಾಲ ಕ್ರಿ. ಶ. ೧೬೭೧ ಕ್ಕಿಂತ ಹಿಂದೆಸಾಗದು.

5 I. V. Mahalingam : *Administration and Social life under Vijayvn agar* Madras, 1975, p. 10

ಪನ್ಯದ 'ಮುಯ್ಯಾಳು'ತನ ಸೂಚಿಸಬಹುದು. ಬಹುಶಃ ಹಾಲೇರಿ ರಾಜರ ಕಾಲದಲ್ಲಿ ಜನರು ಹೆಚ್ಚಾಗಿ ಚಿಕ್ಕ ಹಿಡುವಳಿಗಳನ್ನು ಯಾವ ಪ್ರತಿಫಲವನ್ನು ಪಡೆಯದೆ ಉಚಿತ ದುಡಿದು ಬೇಕಿದ್ದಷ್ಟು ಮಾತ್ರ ಬೆಳೆದು ಜೀವಿಸು ತ್ತಿದ್ದರು. ಇಲ್ಲಿನ ದುಡಿಮೆಗೆ ಇಟ್ಟಬಿಟ್ಟ ಚಾಕರ್ ಎಂದು ಹೇಳುತ್ತಿದ್ದರು. ಇಂದು ಗಾದೆಯ ರೂಪದಲ್ಲಿ ಆ ಶಬ್ದ ಬಳಕೆಯಲ್ಲಿದೆ. ಆಂದರೆ ಈ ಶಬ್ದ 'ಮುಯ್ಯಾಳು' ತನದ ಒಂದು ರೂಪವಾಗಿದೆ ಎನ್ನಬೇಕು.

ಚೆಂಗಾಳ್ವರ ಕ್ರಿ. ಶ. ೧೨೭೮ರ ನಿಡುತ ಶಾಸನದಲ್ಲಿ 'ದೇವರ ಹಿಂದಣ ಪರೆಯುಗದ್ದೆ' ಎನ್ನುವುದು ಪನ್ಯದ ವಿಶಾಲರೂಪದ ಗದ್ದೆ ಎಂಬ ಸೂಚನೆ ನೀಡುತ್ತದೆ. ಶಾಸನದ ಉಳಿದ ವಿವರಗಳು ಅದಕ್ಕೆ ಇಂಬುಕೊಡು ವಂತಿದೆ. ಚೆಂಗಾಳ್ವರ ನಂತರ ಹಾವೇರಿ ಅರಸರ ಕಾಲ ದಲ್ಲಿ ಈ ಪನ್ಯದ ವ್ಯವಸ್ಥೆ ಕ್ರಮಗೊಂಡು ವಿಕಾಸವಾದ ಸ್ವರೂಪವನ್ನು ತೋರುತ್ತದೆ. ಆಂಗ್ಲರ ಕಾಲದಲ್ಲಿಯೂ ಈ ವ್ಯವಸ್ಥೆ ಮುಂದುವರಿದರೂ ಖಾಸಗಿ ಒಡತನಕ್ಕೆ ಅಂದರೆ ಕೊಡವ, ಗೌಡ ಜನಾಂಗಗಳಿಗೆ ಹಂಚಿದಂತೆ ಕಾಣುತ್ತದೆ. ಕೆಲವರು ಗದ್ದೆಗಳನ್ನಾಗಿಯೆ ಉಳಿಸಿ ಕೊಂಡರೆ ಇನ್ನು ಕೆಲವರು ತೋಟಗಳನ್ನಾಗಿ ಪರಿವರ್ತಿಸಿ ದ್ದಾರೆ. ಆದರೆ ಅವಕ್ಕೆ ಪನ್ಯ ಜಮೀನು ಎಂಬ ಹೆಸರು ಮಾತ್ರ ಉಳಿದಿದೆ. ರಾಜರ ಕಾಲದಲ್ಲಿಯೂ ಪನ್ಯದ ಜಮೀನುಗಳನ್ನು, ತಮಗೆ ಸಲ್ಲಿಸಿದ ಸೇವೆಯ ಕುರುಹಾಗಿ ಕೊಡಗಿನ ಜನರಿಗೆ 'ಜಮ್ಮ' ಭೂಮಿ ಅನ್ಯರಿಗೆ ಯಾವುದೇ ಬಗೆಯಲ್ಲಿ ವರ್ಗಾಯಿಸಲು ಬಾರದೆ ವಂಶ ಪಾರಂಪರ್ಯ ಅನುಭವಿಸುವ ಕೃಷಿ ಭೂಮಿ, ಜನ್ಮಸಿದ್ಧ ಹಕ್ಕಿನ ಭೂಮಿಯಾಗಿ ನೀಡಲಾಗಿದ್ದು ಅಂತಹವರ ವಂಶೀಕರು ಇಂದು ಇದ್ದಾರೆ.

**ಪನ್ಯಗಳಿರುವ ನೆಲೆಗಳು**

ಹಾವೇರಿ ಅರಸರ ಕಾಲದಲ್ಲಿ ಅವರಿಗೆ ಸಂಬಂಧಿಸಿ ದಂತೆ, ಶುರು ಪನ್ಯವಾಗಿ ಕುಟ್ಟದ ಪನ್ಯ, ನಡುಪನ್ಯವಾಗಿ ಅರಮೇರಿ ಪನ್ಯ, ಕೊನೆ ಪನ್ಯವಾಗಿ ಅಪ್ಪಂಗಳ ಪನ್ಯ ವಿತ್ತು. ಕುಟ್ಟದ ಪನ್ಯ ಹಾವೇರಿ ಅರಸರ ಕಾಲಕ್ಕೆ ವ್ಯವಸ್ಥೆಗೊಂಡಿದ್ದರೂ, ಸನಿಹದ ನಾಗರಹೊಳೆ–ಕುಂತೂರು ಹಾಗು ಹೈಸೊಡ್ಲೂರಿನ ಶಾಸನಗಳು ಆ ನೆರೆಯಲ್ಲಿದ್ದ ಪನ್ಯ ಗದ್ದೆಯ ಒಂದು ಸ್ವರೂಪವನ್ನೂ ಸೂಚಿಸುವಂತಿವೆ. ಚೆಂಗಾಳ್ವರು ಆ ನೆಲೆಯಲ್ಲಿ ಆಳಿದ ಕಾರಣ ಅವರ ಕಾಲದಲ್ಲಿಯೂ ಅಂತಹ ಗದ್ದೆಗಳ ನಿರ್ವಹಣೆ ಆಗಿರಬೇಕು. ಹಾವೇರಿ ಅರಸರಿಗೆ ಆ ಹಿನ್ನೆಲೆ ತಿಳಿದಿದ್ದ ಕಾರಣ, ಮಡಿಕೇರಿ, ಹಾಲೇರಿ ರಾಜಧಾನಿ ಮಾಡಿಕೊಂಡು ಕುಟ್ಟ ಪನ್ಯವನ್ನು ಶುರುಪನ್ಯವಾಗಿ ಪರಿಗಣಿಸಿ ನಿರ್ವಹಿಸಿರಬೇಕು. ಅಲ್ಲಿಂದ ಕಕ್ಕಬ್ಬೆ ಬಳಿ ನಾಲ್ನಾಡು ಅರಮನೆಗೆ ಬರುವಲ್ಲಿ ಮಧ್ಯನೆಲೆ ಅರಮೇರಿ ಆಗಿ ಅದು ನಡು ಪನ್ಯವನ್ನಾಗಿಸಿರಬೇಕು. ಮಡಿಕೇರಿ ಬಳಿ ಅಪ್ಪಂಗಳ ಉತ್ತರ ಕೊಡಗಿನ ಪಶ್ಚಿಮ ತುದಿಯಾಗಿ ಅಲ್ಲಿನ ಪನ್ಯವನ್ನು ಕೊನೆಪನ್ಯ ಎಂದಿರಬೇಕು. ಜೊತೆಗೆ ಈ ಪನ್ಯಗಳು ರಾಜರು ಹಾಗು ಆಡಳಿತದ ಅನುಕೂಲ ಕ್ಕಾಗಿಯೂ ಇದ್ದಂತಹವಾಗಿದ್ದುವು.

ಕುಟ್ಟ, ತೈಲ, ಕುರ್ಚಿ, ಮಂಚಳ್ಳಿ, ಬಿಳಿಯರು ಬೆಸಗೂರು, ಕೈಕೇರಿ, ಅಮ್ಮತ್ತಿ, ವೀರರಾಜಪೇಟೆ ಅರಮೇರಿ, ಮಲ್ಲಂಭಟ್ಟ, ಕಳತ್ಮಾಡು, ಬೇತ್ರಿ ಮುರ್ನಾಡು, ಕಗ್ಗೋಡ್ಲು, ಕುಂಜಿಲ, ನೂರಂಬಡೆ ಪನ್ಯ, ನೆಲಜಿ ಅಪ್ಪಂಗಳ ಪನ್ಯ, ಹಾಲೇರಿ, ಗಾಳಿಬೀಡು, ಗರ್ವಾಲೆ ಮಾದಾಪುರ, ಬಿಳಿಗೇರಿ, ಸಿರಂಗಾಲ, ನಾಕೂರು, ಹೆರವನಾಡು, ಬೆಟ್ಟಗೇರಿ, ಗರಗಂದೂರು, ನಂಜರಾಯಪಟ್ಟಣ, ಉಲುಗುಲಿ, ಹರದೂರು, ಕೆಳಕೇರಿ ನಿಡುಗಣೆ, ಸಿದ್ದನಬಾಣೆ ಇತ್ಯಾದಿ ಪನ್ಯಗಳ ಹೆಸರು ಸದ್ಯಕ್ಕೆ ಲಭ್ಯವಾಗಿವೆ. ಈಗ ಇವುಗಳಲ್ಲಿ ಕೆಲವು ಮಾರಿ ಹೋಗಿವೆ. ಡಿ. ಎನ್. ಕೃಷ್ಣಯ್ಯನವರ 'ಕೊಡಗಿನ ಇತಿಹಾಸ' (ಪು. ೩೪೪) ಕೃತಿಯಲ್ಲಿ ಪನ್ಯಗಳ ಸಂಖ್ಯೆ ೨೪ ಎಂದಿದೆ. ಇನ್ನೊಂದೆಡೆ ೫೪ ಎಂದಿದೆ. ಬಹುಶಃ ರಾಜರ ನೇರ ಆಡಳಿತಕ್ಕೆ ೨೪ ಪನ್ಯಗಳು ಒಳಪಟ್ಟಿದ್ದಿರ ಬೇಕು. ಇನ್ನು ಕೆಲವು ರಾಜರೇ ತಮಗೆ ಯುದ್ಧಗಳ ಸಂದರ್ಭಗಳಲ್ಲಿ ಸಹಾಯ ಮಾಡಿದವರಿಗೆ ನೀಡಿದ್ದಿರ ಬೇಕು.

---

6 ವಿ. ಮಾ. ಮುತ್ತಣ್ಣ ಕೊಡವ ನಿಘಂಟು, ಬೆಂಗಳೂರು, ೧೯೮3 ಪು. ೧೬೪.

## ಪಸ್ಯ ಜಮೀನುಗಳ ಲಕ್ಷಣಗಳು

ಪಸ್ಯ ಜಮೀನುಗಳು ಸಾಮಾನ್ಯವಾಗಿ ಒಳ್ಳೆಯ ಫಲವತ್ತಿನ ಜಮೀನುಗಳಾಗಿದ್ದವು. ನೀರು ತಡಕಟ್ಟೆದ ನೀರಾವರಿ ಸೌಕರ್ಯ ಹೊಂದಿದ್ದವು. ಇವು ಬಹಳ ವಿಶಾಲವಾದ ಗದ್ದೆಗಳಾಗಿವೆ, ನೆರೆಯಲ್ಲಿ ತೋಡು ಅಥವಾ ಕೆರೆಗಳು, ಗೆರೆಕಾಡು ಹಾಗು ಬಾಣೆಜಾಗ ಹೊಂದಿರುವಂತಹವು, ಸಾಮಾನ್ಯವಾಗಿ ಭದ್ರಕಾಳಿ, ಭಗವತಿ, ಪನ್ನಂಗಾಲತ್ತಮ್ಮೆ ದೇಸರ ಕಾಡು, ದೇವರ ನೆಲೆ ಅಥವಾ ಮಠಗಳನ್ನು ಹೊಂದಿರುತ್ತವೆ. ಸಹಜ ವಾಗಿ ಜಮೀನಿನ ನೆರೆಯಲ್ಲಿ ಕೃಷಿಯಾಳುಗಳ ವಸತಿ ಇರುತ್ತದೆ. ವಿಶೇಷತಃ ಕೆಂಬಟ್ಟೆಗಳು ಮೂಲನಿವಾಸಿ ವರ್ಗದವರಾಗಿ ಇವುಗಳಲ್ಲಿ ಹೆಚ್ಚು ನೆಲೆ ಹಾಗು ಸಂಖ್ಯೆ ಗಳಲ್ಲಿ ಇರುವುದುಂಟು. ಖಾಸಗಿ ಪಸ್ಯಗಳಾದರೆ ಮನೆತನದ ಹಿರಿಯರ ಸ್ಮಾರಕ ಕಟ್ಟಡವಾದ ಕೈ ಮಡ ಗಳನ್ನು ಹೊಂದಿರುತ್ತವೆ. ದೇವರ ಕಾಡುಗಳು ನೆರೆಯಲ್ಲಿರುತ್ತವೆ. ಐನ್‌ಮನೆ, ಕಲ್ಲು ಬೋಟಗಳು ನೆರೆಗಿರುತ್ತವೆ. ಈ ಗದ್ದೆಗಳಲ್ಲಿ ಸಾಮಾನ್ಯವಾಗಿ ಬಿಳಿ ಭತ್ತ, ಕರ್ತೆ (ಕೆಂಬತ್ತಿ ಭತ್ತ) ಲೆಳೆಯಲಾಗು ತ್ತದೆ.

## ಪಸ್ಯ ಜಮೀನಿನ ನಿರ್ವಹಣೆಯ ಉದ್ದೇಶಗಳು[7]

೧ ಸೇನೆಯು ಯುದ್ಧಕ್ಕೆ ಹೋಗುವಲ್ಲಿ ಅಥವಾ ಗಡಿ ಕಾಯಲು ಹೋಗುವಲ್ಲಿ ಪಸ್ಯ ನೆಲೆಗಳು ಹಾದಿಯ ತಂಗುದಾಣವಾಗಿರುತ್ತಿದ್ದುವು. ಸೈನ್ಯವು ಮಡಿಕೇರಿ ಯಿಂದ ಹೊರಟರೆ ಮೊದಲು ಅಪ್ಪಂಗಳ ಪಸ್ಯ ನಂತರ ಲ ಮೈಲಿ ದೂರದ ನಾಪೊಕ್ಲು ನೂರಂಬಡೆ ಪಸ್ಯ ನಂತರ ಕುಂಜಲ ಪಸ್ಯನಾಗಿ ನಾಲ್ಕನೇ ಪಸ್ಯ ನಾಲ್ನಾಡು ಅರಮನೆ ಬಳಿ ಸಾಗು ತ್ತಿತ್ತು.

೨ ಬಂದ ಸೈನ್ಯಕೆ, ಅನ್ನ ಬೇಯಿಸಿ ಊಟ ಹಾಕುವ ವ್ಯವಸ್ಥೆಗೆ ಪಸ್ಯ ಗದ್ದೆಯ ಭತ್ತ ಆಣಿಯಾಗಿರು ತ್ತಿತ್ತು. ಇಂತಹ ಪಸ್ಯದ ಪಾರು ಪತ್ಯೆಗಾರರಾಗಿ ಕೊಡವರ ಕೆಲವು ಮನೆತನೆಗಳವರು ಇದ್ದರು. ಆಯಾ ಪ್ರದೇಶಗಳಿಗೆ ಅಲ್ಲಿನ ನಾಯಕ ಮನೆತನ ಗಳು ಪಾರುಪತ್ಯಗಾರರಾಗಿ ನೇಮಕವಾಗುತ್ತಿ ದ್ದುವು.

೩ ಕಕ್ಕಬ್ಬೆ ಇಳಿಜಾರಿನಿಂದ ಮಡಿಕೇರಿ ಕಡೆ ಈಗಲೂ ಇರುವ ಕೊಂಕಣಿಗಳ ಪೂರ್ವಜರು ರಾಜರ ಈ ಕ್ಯಾಂಪುಗಳಿಗೆ ಪಸ್ಯ ಗದ್ದೆಯ ಭತ್ತದಿಂದ ಅವಲಕ್ಕಿ ಮಾಡಿಕೊಡುತ್ತಿದ್ದರು. ಗಡಿ ಕಾಯುವವರಿಗೆ ಬರಿ ಅವಲಕ್ಕಿ ಮಾತ್ರ ಒದಗಿಸ ಲಾಗುತ್ತಿತ್ತು.

## ಪಸ್ಯದ ಬಗೆಗಳು

ಅರಮನೆ ಪಸ್ಯಗಳು ರಾಜರ ಖಾಸಗಿ ಕೃಷಿ ಭೂಮಿಗಳಾಗಿ ಅರಮನೆಯ ಅಶನ ವ್ಯವಸ್ಥೆ ಹಾಗು ನಿರ್ವಹಣೆಗೆ ಯುದ್ಧದ ಸೈನಿಕರ ಅಶನ ವ್ಯವಸ್ಥೆಗೆ, ಗಡಿಕಾವಲಿನವರ ಅವಲಕ್ಕಿ ಸರಬರಾಜು ವ್ಯವಸ್ಥೆಗೆ ಬಾಧ್ಯವಾಗಿದ್ದುವು.

ಸೇವಾನುದಾನ ಪಸ್ಯಗಳು· ಪಾರುಪತ್ಯಗಾರರು ಹಾಗು ಯುದ್ಧದಲ್ಲಿ ಶೌರ್ಯ ತೋರಿದವರಿಗೆ ನೀಡಲಾಗು ತ್ತಿದ್ದ ಜಮೀನುಗಳಾಗಿ ಕಾಣ ಬರುತ್ತವೆ. ಧಾರ್ಮಿಕ ದಾನ ಪಸ್ಯಗಳು, ಮಠದಲ್ಲಿ ನಡೆಯುವ ದಾಸೋಹಕ್ಕೆ ಅನ್ನಸತ್ರಗಳ ನಿರ್ವಹಣೆಗೆ ಬಳಕೆಯಾಗಿದ್ದಂತೆ ಕಾಣ ಬರುತ್ತದೆ.

ಕುಂಜಲ ಗ್ರಾಮದ ಪಸ್ಯದಲ್ಲಿ ರಾಜರ ಕಾಲದಲ್ಲಿ ಮಂಡಿರ ಮನೆತನದವರು ನಂತರ ಅಪ್ಪಾರೆಂಡ ಮನೆತನದ ವರು ನಿರ್ವಹಿಸಲು ಬಂದರು. ನೆಲಜಿ ಪಸ್ಯಕ್ಕೆ ಮಂಡಿರ ಅವರು ನಿರ್ವಹಣೆಗೆ ನಿಂತ ಮೇಲೆ ಕೈ ಕೇರಿ ಪಸ್ಯದ ನಿರ್ವಹಣೆಗೆ ಕೊಡಂದೇರ ಮನೆ ತನದವರು ನಿಂತರು. ಕುಂಜಿಲದಲ್ಲಿ ೮೦೦ ಭಟ್ಟಿಗದ್ದೆ ಪಸ್ಯವಿದೆ.

ಕಳತ್ ಮಾಡುವಿನ ಕೊಲ್ಲೀರ ಮನೆತನದವರು ರಾಜತ ಕಾಲಕ್ಕೆ ಸಲ್ಲಿಸಿದ ಸೇವೆಗಾಗಿ ನೀಡುತ್ತಿದ್ದ ಜಮ್ಮ ಅಧಿಕಾರ–ಕೊಲ್ಲು ಕೊಲ್ಲಾಮ ಇವುಗಳಲ್ಲಿ ಆರಿಸಿ

---

7 ಈ ಅಂಶಗಳನ್ನು ನಿಳಿಸಿದವರು ಕಕ್ಕಟೆಯ ಶ್ರೀ ಅಪ್ಪಾರಂಡ ಎನ್. ಕರುಂಬಯ್ಯ (ಪಸ್ಯ ನಿರ್ವಹಣೆಕಾರರ ಬೋಪು ದಿವಾನನ ವಂಶೀಕರು)

ಕೊಂಡಿದ್ದು ಅಧಿಕಾರವಂತೆ. ಜೊತೆಗೆ ಹಾವೇರಿ ಅರಸರು ಪನ್ನ್ಯ ಭೂಮಿಯನ್ನು ನೀಡಿದರಂತೆ. ಪನ್ಯತ್ ಅರ ಮನೆಯೂ ಇತ್ತು. ಕಾಟಕಾಯಿ ಯುದ್ಧಕ್ಕೆ ಅಚ್ಚೋಣ ಅಚ್ಚಯ್ಯ (ಮನೆತನದ ವೀರ) ಹೋಗಿ ಸೇವೆ ಸಲ್ಲಿಸಿದ್ದಕ್ಕೆ ಆಂಗ್ಲರ ಕಾಲದಲ್ಲಿಯೂ ಪನ್ನ್ಯ ದೊರಕಿತು. ಅದಾಗಿ ಇವರ ಮನೆಗೆ ಪನ್ಯತ್ ಮನೆ ಎನ್ನುವುದುಂಟು. ಇವರಿಗೆ ೪ ಸಾವಿರ ಭಟ್ಟಿ ಗದ್ದೆಯಾಗಿ ಬಂದಿದೆ. ಅಚ್ಚಯ್ಯನ ಕೈಮಡವೂ ಇದೆ. ಪೂರ್ವದಿಂದಲೂ ಬಂದಂತೆ ಕಲ್ಲು ಬೋಟಿಗೆ ಕಣದ ಕಾಲದಲ್ಲಿ ಬನದ ಕೋಡುಗಳನ್ನು ಹುಲ್ಲಿನಿಂದ ಮಾಡಿ ಸಿಗಿಸಿ ದಾನ ನೀಡಿ ಆಚರಣೆಗಳನ್ನು ನಡೆಸುತ್ತಾರೆ. ಇವರ ಈ ಭೂಮಿಗೆ ಸೇರಿದಂತೆ ಐಯ್ಯಪ್ಪ ದೇವರ ಕಾಡು ಇದೆ. ಐನ್ ಮನೆಯೂ ಇದೆ. ಈ ಗದ್ದೆಗೆ ಸಂಬಂಧಿಸಿದಂತೆ ಕೆಂಬಟ್ಟಗಳ ದೇವರ ಕಾಡು ಕಡಂಗ ಸಹಿತವಾಗಿ ಇದೆ.

ರಾಜರ ಕಾಲದಲ್ಲಿ ಬ್ರಾಹ್ಮಣರಿಗೂ ಪನ್ನ್ಯ ಜಮೀನು ಗಳನ್ನು ನೀಡಲಾಗಿತ್ತು ಎಂಬುದಕ್ಕೆ ಉದಾಹರಣೆ ಆಗಿ ಪನ್ನ್ಯದ ಕರಣಿಕ ಲಕ್ಷ್ಮಿನಾರಾಯಣ ಇದ್ದಾನೆ; ಕೆಳಕೇರಿ ನಿಡುಗಣಿಯ ಅರಮನೆ ಪಳತಕ್ಕ ತಿಮ್ಮಪ್ಪಯ್ಯ ಅವರಿಗೆ ಪನ್ನ್ಯ ನೀಡಲಾಗಿದ ಬಗ್ಗೆ ಅವರ ಪತ್ನಿ ದೇವಮ್ಮನವರಿಗೆ ಪನ್ನ್ಯದ ದೇವಮ್ಮನೆಂಬ ಹೆಸರಿದ್ದು ಕಡತವೇ ಇದೆ.[8]

ಮುಲ್ಲಂಬಟ್ಟಿ ಪನ್ನ್ಯವು ಬಲ್ಲ ಚಂಡ ಮನೆತನಕ್ಕಿದೆ. ರಾಜರ ಕಾಲಕ್ಕೆ ದವಸ ಧಾನ್ಯಗಳನ್ನು ಬೆಳೆದು ಅರ ಮನೆಗೆ ಕಳುಹಿಸಲು ಇವರನ್ನು ನಿಯೋಜಿಸಿದ್ದಂತೆ ತೋರುತ್ತದೆ.

ಆನೆ ಬೆಪ್ಪುನಾಡು ಅರಮೆರಿಯಲ್ಲಿ ೨೦೦ ಭಟ್ಟಿ ಪನ್ನ್ಯ ಭೂಮಿ ಕೆಂಬಟ್ಟ ಹರಿಜನರಿಗೂ ಇದ್ದು. ಆದಕ್ಕಾಗಿ ಅವರನ್ನು ಪನ್ನ್ಯ ಹರಿಜನರೆನ್ನುತ್ತಿದ್ದರು. ರಾಜರ ಕಾಲ ದಲ್ಲಿ ಅದಕ್ಕಾಗಿ ನೀಡಿದ್ದ ವಡಿ ಕತ್ತಿ ಹಾಗು ಕ್ರಿ. ಶ. ೧೮೧೭ರ ನಿರೂಪ ಕೆಂಬಟ್ಟ ಬಾಳೆಕುಟ್ಟಿ ಮನೆತನದವ ರಲ್ಲಿದೆ. ಆದರೆ ರಾಜರ ನಂತರ ಆ ಭೂಮಿಯನ್ನು ವಿತರಣೆ ಮಾಡಿದರೆನ್ನಲಾಗಿದೆ. ಇದಲ್ಲದೆ ಅರಮೇರಿಗೆ ಪ್ರತ್ಯೇಕವಾಗಿ ೫೦೦ ಭಟ್ಟಿ ಪನ್ನ್ಯ ಭೂಮಿ ಇದೆ.

ಗರ್ವಾಲೆಯಲ್ಲಿ ರೈತರು ರಾಜರ ಆಶ್ರಿತ ಕುಳಗಳಾಗಿದ್ದರು. ಜಂಮ, ಉಂಬಳಿ ಪನ್ನ್ಯ ಭಾಗಗಳನ್ನು ಸಲ್ಲಿಸಿದ ಸೇವೆಗಾಗಿ ಪಡೆದರು. ಇಂದು ಪನ್ನ್ಯ ಜಮೀನಿನ ಕೆಲವಷ್ಟು ಭಾಗಗಳನ್ನು ಗರ್ವಾಲೆ ಶಾಲೆಗೆ ಬಿಟ್ಟು ಕೊಟ್ಟಿದ್ದಾರೆ. ಕೋಲಾಟದ ಮಂದಿ (ಮೈದಾನ) ಗೆಂದು ಎಲ್ಲ ಸೇರಿ ಒಟ್ಟು ೧೫೦ ಎಕರೆ ಬಿಟ್ಟು ಕೊಟ್ಟ ದ್ದಾರೆ.

ಮಠಗಳಿಗೆ ಇದ್ದ ಪನ್ನ್ಯಗಳು ಅಲ್ಲಿನವರಿಂದಲೇ ನಿರ್ವಹಿಸಲ್ಪಡುತ್ತಿದ್ದಂತೆ ತೋರುತ್ತದೆ.

**ಪನ್ನ್ಯ ಜಮೀನಿನ ಕೆಲಸದಾಳುಗಳು :**

ರಾಜರ ಸ್ವಂತ ಭೂಮಿಯಾಗಿ ರಾಜರ ಪನ್ನ್ಯ ಅಥವ ಅರಮನೆ ಭೂಮಿ ಇರುತ್ತಿತ್ತು. ಇದರಲ್ಲಿ ದುಡಿಯುತ್ತಿದ್ದವರು ಜಮ್ಮದಾಳುಗಳು, ಕೃಷಿಯಾಳು ಗಳು, ಅಸ್ಪೃಶ್ಯ ಅಥವಾ ಬುಡಕಟ್ಟಿನ ಜನರಾಗಿರುತ್ತಿ ದ್ದರು. ಈ ಜಮ್ಮ ದಾಳುಗಳಲ್ಲಿ ಸಾಮಾನ್ಯವಾಗಿ ೧೨ ಬಗೆ ಜಾತಿಯವರಿದ್ದು ಅವರಲ್ಲಿ ಕೆಂಬಟ್ಟ, ಮಾರಂಗಿ ಬೆಟ್ಟ ಕುರುಬರು, ಜೇನು ಕುರುಬರು, ಯೆರವರು ಇತ್ಯಾದಿ ಜನಾಂಗದವರೂ ಇರುತ್ತಿದ್ದರು.

ಕೊಡಗು ರಾಜರ ಕಾಲದಲ್ಲಿ ಹೆಚ್ಚಾಗಿ ಕೆಂಬಟ್ಟ ಗಳೇ ಪನ್ನ್ಯ ಜಮೀನುಗಳಲ್ಲಿ ಕೃಷಿಯಾಳುಗಳಾಗಿದ್ದರೆಂಬು ದಕ್ಕೆ ಜನಪದ ಹಾಡಿನ ಸಾಕ್ಷಿಯಾಗಿ, ಪನ್ನಾಂಗಾಲತ್ ಮ್ಮಯ ಹಬ್ಬದ 'ನಾಡು ಕರೆಯೋನೆ' ಆಚರಣೆಯಲ್ಲಿ ಕಾಣ ಬರುವುದೇ ಆಗಿದೆ. ಅದರಲ್ಲಿ ಇಡೀ ಕೊಡಗಿನಲ್ಲಿ ಕೆಂಬಟ್ಟಗಳು ಇದ್ದ ನೆಲೆಯನ್ನು ಸ್ಮರಿಸಿ ಈಗಲೂ ಕರೆಯುವುದು ಸಾಂಕೇತಿಕವಾಗಿದೆ.

ಅನೇಕ ಕೊಡವ ಮನೆತನಗಳ ಜಮೀನಿನಲ್ಲಿ, ಕೆಂಬಟ್ಟ, ಮಾರಂಗಿ, ದೊಂಬ, ಹಜಾಮ ವರ್ಗದ ಆಳುಗಳು, ವಂಶಪಾರಂಪರ್ಯ ಮನೆ ಕುಡಿಗಳಾಗಿ

8 ಈ ಮಾಹಿತಿಯನ್ನು ನೀಡಿದವರು ಕೊಡಗು ದೇವಾಲಯ ದತ್ತಿ ನಿಧಿ ಸಮಿತಿಯ ಮೇನೆಜರ್ ಶ್ರೀ ಎಸ್. ಎಸ್. ಸಂಪತ್‌ಕುಮಾರ್ ಅವರು

ಗರ್ವಾಲೆಯಲ್ಲಿ ಕುಕ್ಕ ಹರಿಜನರೂ ದುಡಿಯುತ್ತಾರೆ. ಇವರ ಮಧ್ಯೆ ಆತ್ಮೀಯ ಸಂಬಂಧಗಳು ಇಂದಿಗೂ ಸಹಯೋಗದಿಂದಿದೆ. ರಾಜರ ಕಾಲಕ್ಕೆ ಕೊಡವರು, ಗೌಡರು, ದಲಿತ ವರ್ಗದವರು ಎಲ್ಲರೂಪನ್ಯ ಜಮೀನಿನಲ್ಲಿ ದುಡಿಯುತ್ತಿದ್ದುದುಂಟು. ಉತ್ತುಬಿತ್ತಿ ಮುಪತ್ತಿನ ಕೆಲಸ ಮಾಡಬೇಕಿತ್ತು. ಆದರಿಂದಾಗಿ ಒಂದು ಜಾತಿ ಭೇದದ ಕಲ್ಪನೆಗೆ ಅವಕಾಶವಿರುತ್ತಿರಲಿಲ್ಲ ಎಂಬುದು ಗಮನಿಸಬೇಕಾದ ಅಂಶ.

**ಪನ್ಯ ಜಮೀನುಗಳ ಸಾಂಸ್ಕೃತಿಕ ಮಹತ್ವ**

೧ ಪನ್ಯಗದ್ದೆಗಳು ವಿಶಾಲ ಗದ್ದೆಗಳಾಗಿದ್ದುದರಿಂದ ಅಲ್ಲಿ ನಡೆಯುತ್ತಿದ್ದ ಓಟ್‌ನಾಟೆ ಸ್ಪರ್ಧೆ ನಾಟಿ ಹಾಕಿದ (ಕೆಸರುಗದ್ದೆಯ ಓಟ) ಕ್ರೀಡಾ ಮನೋಭಾವನೆಗೆ ಇಂಬುಗೊಟ್ಟಿತು. ಇದು ಬಹುಶಃ ರಾಜರಕಾಲದಿಂದ ಆರಂಭವಾಗಿರಬೇಕೆನ್ನಿಸುತ್ತದೆ. ಇಂದಿಗೂ ಓಟನಾಟೆ ಸಾರ್ವತ್ರಿಕ ಓಟದ ಸ್ಪರ್ಧೆಯಾಗಿ ನಡೆಯುತ್ತಿದೆ.

೨ ಪರಸ್ಪರ ಸಹಾಯದ ಮುಯ್ಯಾಳು ವ್ಯವಸ್ಥೆ ಪ್ರೀತಿ ಸೌಹರ್ದಗಳಿಗೆ ಅವಕಾಶ ನೀಡುತ್ತಾ ಬಂದಿದೆ.

೩ ಪನ್ನಂಗಾಲ ತಮ್ಮೆ ಹಬ್ಬದಲ್ಲಿ ನಾಡು ಕರೆಯುವಿಕೆಯಿಂದಾಗಿ ಕೊಡಗಿನ ಪನ್ಯ ಜಮೀನುಗಳ ಎಲ್ಲ ಕೆಂಬಟ್ಟಿಗಳ ಸಾಮೂಹಿಕ ಹಬ್ಬವಾಗಿ ಕೊಡವರೂ ಸೇರಿ ಅಸ್ಪೃಶ್ಯತೆಯನ್ನು ನಗಣ್ಯವಾಗಿಸುವಂಥಹ ವಾರ್ಷಿಕ ಆಚರಣೆಗೆ ಅವಕಾಶ ನೀಡುವಂತಹದಾಗಿದೆ.

೪ ಮಠಗಳ ನಿರ್ವಹಣೆಗೆ ಅವಕಾಶವಾಗಿ ಧಾರ್ಮಿಕ ಮೌಲ್ಯಗಳನ್ನು ಗುರುತಿಸಲು ಅವಕಾಶವಾಗಿತ್ತು.

೫ ಕೈ ಮಡ, ದೇವ ನೆಲೆಗಳ ದೇವರಕಾಡು, ಕಡಂಗಗಳ ಇರುವಿಕೆಯು ಆ ಪನ್ಯ ಗದ್ದೆಗಳಿಗೆ ದೈವಿಕ ಮೌಲ್ಯ ಹಿರಿಯರ ನೆಲೆ ಎಂಬ ಭಾವನಾತ್ಮಕ ಸಂಬಂಧವನ್ನು ಕುಟುಂಬಗಳಲ್ಲಿ ಹೆಣೆಯಲು ಕಾರಣವಾಗಿತ್ತು. ಅವು ಪರಿಸರ ಹಾಗು ರಕ್ಷಣೆಗಳ ವೈಜ್ಞಾನಿಕ ಸ್ವರೂಪದ ರಚನೆಯಾಗಿಯೂ ಕಾಣುತ್ತದೆ.

೬ ಇತಿಹಾಸ ಪೂರ್ವ ಕಾಲದ ಪದ್ಧತಿಯೊಂದನ್ನು ಕಲ್ಲು ಬೋಟಿಯ ಆಚರಣೆಗಳ ಮೂಲಕ ಕಾದಿಟ್ಟು ಕೊಳ್ಳುವ ಸಾಂಸ್ಕೃತಿಕ ಸಂಕೇತಕ್ಕೆ ಅನುವಾದ ನೆಲೆಗಳಾಗಿ ಪನ್ಯ ಜಮೀನುಗಳು ಉಳಿದಿವೆ.

ಹೀಗೆ ಕೊಡಗಿನ ಇತಿಹಾಸ ಜನ ಜೀವನದ ಮೇಲೆ ಸಾಂಸ್ಕೃತಿಕ ಪ್ರಭಾವಗಳನ್ನು ಉಳಿಸಿದ ರೂಪವಾಗಿ ಪನ್ಯ ಜಮೀನುಗಳು ಇಂದೂ ಕಾಣಬರುತ್ತಿವೆ.

(ಪನ್ಯ ಜಮೀನುಗಳ ಕುರಿತು ಕೆಲವು ಮಾಹಿತಿಗಳನ್ನು ತಿಳಿಯಲು ಜ್ಯೂಡಿಯಲ್ ಹೆಡ್‌ಮುನಿಷಿ ಶ್ರೀ ಟಿ. ಸಿ. ತಮ್ಮಯ್ಯ, ನಾಲಡಿರು ಗ್ರಾಮದ ಅಯ್ಯಂಡ ವೀರಪ್ಪ, ಗರ್ವಾಲೆ ಶಾಲೆಯ ಮುಖ್ಯೋಪಾಧ್ಯಾಯರು ನೆರವಾಗಿದ್ದರೆ.)

ಡಾ|| ಸೂರ್ಯನಾಥ ಕಾಮತ್*

# ಪಂಚಮರ ಸುಧಾರಣೆಗಾಗಿ ದುಡಿದ ಆರ್. ಗೋಪಾಲಸ್ವಾಮಿ ಅಯ್ಯರ್

ಪಾಶ್ಚಾತ್ಯ ಶಿಕ್ಷಣದ ಪರಿಣಾಮವಾಗಿ ವ್ಯಾಪಕವಾದ, ಉದಾರವಾದ, ಕ್ರೈಸ್ತ ಮಿಶನರಿಗಳ ಪ್ರಚಾರಕ್ಕೆ ಆದ ಪ್ರತಿಕೂಲ ಪ್ರತಿಕ್ರಿಯೆ ಹಾಗೂ ಈ ದೇಶದಲ್ಲಿ ಕಾಣಿಸಿಕೊಂಡ ಅಖಿಲ ಭಾರತ ಸುಧಾರಣಾವಾದಿ ಚಳವಳಿಗಳಾದ ಬ್ರಹ್ಮಸಮಾಜ, ಆರ್ಯಸಮಾಜ, ಥಿಯೊಸಾಫಿಕಲ್ ಸೊಸೈಟಿ ಮತ್ತು ರಾಮಕೃಷ್ಣ ಮಿಶನ್‌ಗಳ ಪ್ರಭಾವದಿಂದಾಗಿ ಹೋದ ಶತಮಾನದ ಅಂತ್ಯಕ್ಕೇ ಕರ್ನಾಟಕದಲ್ಲಿ ಅಸ್ಪೃಶ್ಯತಾ ನಿವಾರಣಾ ಚಳವಳಿ ಕಾಣಿಸಿಕೊಂಡಿತು. ಬ್ರಹ್ಮ ಸಮಾಜದಿಂದ ಪ್ರಭಾವಿತರಾಗಿದ್ದ ಕುದ್ಮುಲ್ ರಂಗರಾಯರು ಮಂಗಳೂರಿನಲ್ಲೂ,ಗೋವಿಂದಾಚಾರ್ಯಸ್ವಾಮಿ ಎಂಬ ಧಾರ್ಮಿಕ ವೃತ್ತಿಯ ವ್ಯಕ್ತಿ ಮತ್ತು ಎಂ. ವೆಂಕಟಕೃಷ್ಣಯ್ಯನವರು ಮೈಸೂರು ನಗರದಲ್ಲೂ ಸರ್ದಾರ್ ವೀರಣಗೌಡ ಪಾಟೀಲರು ಮುಂಬೈ ಕರ್ನಾಟಕದಲ್ಲೂ ಗಾಂಧೀ ಯುಗಕ್ಕೆ ಪೂರ್ವದಲ್ಲೇ ಅಸ್ಪೃಶ್ಯತಾ ನಿವಾರಣೆಗೆ ದುಡಿದವರಲ್ಲಿ ಗಣ್ಯರು. ಆದರೆ ಬೆಂಗಳೂರಿನ ಆರ್. ಗೋಪಾಲಸ್ವಾಮಿ ಅಯ್ಯರ್ ಮೈಸೂರು ಸಂಸ್ಥಾನದಲ್ಲಿ ಸುಮಾರು ಮೂರು ದಶಕಗಳ ಕಾಲ ತಾವು ಸಲ್ಲಿಸಿದ ಅಪಾರ ವ್ಯಾಪಕ ಸೇವೆಯಿಂದ ಈ ಕ್ಷೇತ್ರದ ಅಗ್ರಗಣ್ಯ ಕಾರ್ಯಕರ್ತರೆನಿಸುತ್ತಾರೆ. ಪಂಚಮರಲ್ಲಿ ಅವರು ನಡೆಸಿದ ಕಾರ್ಯದಿಂದ ಅವರು 'ಪಂಚಮ' ಗೋಪಾಲಸ್ವಾಮಿ ಅಯ್ಯರ್ ಎಂದು ಹೆಸರು ಪಡೆದರು.

ದಿವಾನ್ ಆರ್. ಶೇಷಾದ್ರಿ ಅಯ್ಯರ್ ಅವರು ಥಿಯೋಸಾಫಿಕಲ್ ಸೊಸೈಟಿಯ ಸದಸ್ಯರೂ ಮಹಾರಾಷ್ಟ್ರದ ರಾನಡೆ, ಕರ್ವೆಯವರಂಥ ಸುಧಾರಕರಿಂದ ಪ್ರಭಾವಿತರಾದವರೂ ಆಗಿದ್ದು ಅವರ ಕಾಲದಲ್ಲಿಯೇ ಪಂಚಮರಿಗೆ ಪ್ರತ್ಯೇಕ ಶಾಲೆಯನ್ನು ತೆರೆಯಲಾಗಿತ್ತು. ಮುಂದೆ ಸೆಂಟ್ರಲ್ ಪಂಚಮ ಇನ್‌ಸ್ಟಿಟ್ಯೂಟನ್ನು ಮೈಸೂರಲ್ಲಿ ಸ್ಥಾಪಿಸಿ ಪಂಚಮ ವಿದ್ಯಾರ್ಥಿಗಳಿಗೆ ಹಾಸ್ಟಲ್ ಸೌಲಭ್ಯ ನೀಡಲು ಯೋಜನೆ ಹಾಕಲಾಗಿತ್ತು. ಮೈಸೂರು, ಬೆಂಗಳೂರು, ತುಮಕೂರು, ಚಿಕ್ಕಮಗಳೂರುಗಳಲ್ಲಿ ಶಾಲೆ, ಬೋರ್ಡಿಂಗ್‌ಗಳನ್ನು ತೆರೆಯಲಾಗಿತ್ತು. ಕನಿಷ್ಠ ೨೫ ವಿದ್ಯಾರ್ಥಿಗಳಿರುವಲ್ಲಿ ಪಂಚಮರಿಗಾಗಿ ಪ್ರತ್ಯೇಕ ಶಾಲೆಗಳನ್ನು ತೆರೆಯುವ ಅಧಿಕಾರವನ್ನೂ ಇನ್‌ಸ್ಪೆಕ್ಟರ್ ಜನರಲ್ ಆಫ್ ಎಜುಕೇಶನ್ ಅವರಿಗೆ ನೀಡಲಾಗಿತ್ತು.[1]

ಮೈಸೂರಿನ ವೆಂಕಟಕೃಷ್ಣಯ್ಯ, ಯಜಮಾನ್ ವಿರೂಪಾಕ್ಷಯ್ಯ, ಮುಂದೆ ಯುವರಾಜ ಕಂಠೀರವ ನರಸರಾಜ ಒಡೆಯರು, ಇವರೆಲ್ಲ ಪಂಚಮರ ಶಿಕ್ಷಣದ ಬಗ್ಗೆ ಅಪಾರ ಶ್ರದ್ಧೆಯಿಂದ ಬೆಂಬಲ ನೀಡುತ್ತಿದ್ದರು. ಆದರೆ ಸರಕಾರದ ಈ ಯೋಜನೆಗೆ ಬೆಂಬಲ, ಚಾಲನೆ ನೀಡಿ ಮೂರು ದಶಕಗಳ ಕಾಲ ದುಡಿದವರು ಆರ್. ಗೋಪಾಲಸ್ವಾಮಿ ಅಯ್ಯರ್. ಮೈಸೂರಿನ ಸರಕಾರೀ ವಕೀಲರಾಗಿದ್ದ ರಾಮಸ್ವಾಮಿ ಅಯ್ಯರ್‌ರ ಪುತ್ರರಾದ ಇವರು

---

* ಮುಖ್ಯ ಸಂಪಾದಕ, ಕರ್ನಾಟಕ ಗ್ಯಾಸೆಟಿಯರ್, ಕಾವೇರಿ ಭವನ, ಬೆಂಗಳೂರು-೯

1 ಮೈಸೊರ್ಯಾಂಡಂ ಆನ್ ಎಜುಕೇಷನ್ ಇನ್ ಮೈಸೂರ್, ಪು. ೨೮-೨೯

ಮೈಸೂರಿನಲ್ಲಿ ೨೨-೬-೧೮೭೭ರಲ್ಲಿ ಜನಿಸಿ, ಮುಂದೆ ಅಡ್ವೊಕೇಟ್ ಜನರಲ್ ಆದ ತಮ್ಮ ತಂದೆಯ ಜೊತೆ ಬೆಂಗಳೂರಿಗೆ ವಾಸ್ತವ್ಯಕ್ಕೆ ಹೋಗಿರಲು, ತಮ್ಮ ತಂದೆ ತೀರಿಕೊಂಡ ನಂತರ, ತಮ್ಮ ೨೦ನೆಯ ವಯಸ್ಸಿನಲ್ಲಿ ತಮ್ಮ ಕಾಲೇಜು ಶಿಕ್ಷಣ ನಿಲ್ಲಿಸಿದರು. ಆಗ ಅವರ ಮದುವೆಯಾಯಿತು. ಮೊದಲ ಪತ್ನಿ ತೀರಿಕೊಂಡಾಗ ಮರುಮದುವೆ ಮಾಡಿಕೊಂಡರೂ ಅವರಿಗೆ ಮಕ್ಕಳಾಗ ಲಿಲ್ಲ. "ಹರಿಜನರೇ ಅವರ ಮಕ್ಕಳಾಗಬೇಕೆಂದು ಬಹುಶಃ ದೈವೇಚ್ಛೆ ಇರಬೇಕು" ಎಂದು ಅವರಿಂದ ಪ್ರೋತ್ಸಾಹಿತ ರಾಗಿ ಮುಂದೆ ಗಣ್ಯ ಸರಕಾರೀ ನೌಕರರಾದ ವೈ. ಸಿ. ಹೊಂಬಾಳಯ್ಯ ಹೇಳಿದ್ದಾರೆ.[2] ಯುವರಾಜ ನರಸಿಂಹ ರಾಜ ಒಡೆಯರೂ ಆಗ ಇನ್ಸ್‌ಪೆಕ್ಟರ್ ಜನರಲ್ ಆಫ್ ಎಜುಕೇಷನ್ ಆಗಿದ್ದ ಪ್ರೊ|| ಸಿ. ಆರ್. ರೆಡ್ಡಿಯವರೂ ರಾಜ್ಯದ ಇತರ ಅಧಿಕಾರಿಗಳೂ, ಮಂತ್ರಿಗಳೂ ಇವರಿಗೆ ಬೆಂಬಲವಾಗಿದ್ದರೆಂದೂ ಅವರು ಹೇಳಿದ್ದಾರೆ.

ಮೈಸೂರಿನಲ್ಲಿ ೧೯೧೩ರಲ್ಲಿ ಸ್ಥಾಪಿತವಾದ ಸೆಂಟ್ರಲ್ ಪಂಚಮ ಬೋರ್ಡಿಂಗ್ ಸ್ಕೂಲ್‌ನ ಜೊತೆ ಅವರ ಸಂಪರ್ಕವಿತ್ತು. ೧೯೧೮ರ ಸುಮಾರಿಗೆ ತುಮ ಕೂರು, ಚಿಕ್ಕಮಗಳೂರು, ಹಾಸನಗಳಲ್ಲಿ ಅಂಥ ಬೋರ್ಡಿಂಗ್ ಸ್ಕೂಲ್‌ಗಳು ಆದುವಲ್ಲದೆ ಬೆಂಗಳೂರಲ್ಲಿ ಇರುವ ಪಂಚಮರ ಶಾಲೆಗಳಿಗಾಗಿ ೧೯೨೨ರಲ್ಲಿ ಬೋರ್ಡಿಂಗ್ ಹೋಮ್ ಒಂದು ಸಿದ್ಧವಾಗಿ ಮುಂದೆ ಇದನ್ನು ನರಸಿಂಹರಾಜ ಹಾಸ್ಟೆಲ್ ಎಂದು ಕರೆದರು. ೧೯೨೬ರಲ್ಲಿ ಹಾಸನದಲ್ಲಿ ಒಂದು ಪಂಚಮ ಹುಡುಗರ ಮಿಡ್ಲ್ ಸ್ಕೂಲ್ ಮತ್ತು ೧೯೨೯ರಲ್ಲಿ ಬೆಂಗಳೂರಲ್ಲಿ ಆದಿ ಕರ್ನಾಟಕ ಬೋರ್ಡಿಂಗ್ ಗರ್ಲ್ಸ್ ಸ್ಕೂಲ್ ಆರಂಭ ವಾದುವು. "ಈ ಎಲ್ಲ ಚಟುವಟಿಕೆಗಳೆಂದರೆ ಶ್ರೀ ಅಯ್ಯರ್ ಅವರ ಸೇವೆಯ ವಿಸ್ತರಣೆಯೇ ಅಲ್ಲದೆ ಮುಂದಿನ ಅವರ ಜೀವಿತ ಕಾಲದಲ್ಲಿ ವರ್ಷಪೂರ್ತಿ ಅವರ ಪೂರ್ಣಕಾಲದ ಉದ್ಯೋಗದ ಸಂಗತಿಯಾಯಿತು" (ಹೊಂಬಾಳಯ್ಯ).[3]

ಬೆಂಗಳೂರಲ್ಲಿ ೧೯೧೫ರಲ್ಲಿ ಸ್ಥಾಪನೆಗೊಂಡ ಸಿವಿಲ್ ಅಂಡ್ ಸೋಶಿಯಲ್ ಪ್ರೋಗ್ರೆಸ್ ಎಸೋಸಿ ಯೇಶನ್‌ಗೆ ಮುಂದೆ ಗೋಪಾಲಸ್ವಾಮಿ ಅಯ್ಯರ್ ಕಾರ್ಯದರ್ಶಿಗಳಾದರು. ಎಂ. ವೆಂಕಟಕೃಷ್ಣಯ್ಯ, ಸರ್ ಕೆ. ಸಿ. ಪುಟ್ಟಣ್ಣ ಚೆಟ್ಟಿ, ಸಿ. ಆರ್. ರೆಡ್ಡಿ, ಬಿ. ಪುಟ್ಟಯ್ಯ ಮುಂತಾದ ಗಣ್ಯರೂ ಯುವರಾಜ ನರಸಿಂಹರಾಜ ಒಡೆಯರೂ ಸಂಬಂಧ ಹೊಂದಿದ್ದ ಈ ಸಂಘ ಅವರ್ಣ ರನ್ನು ಉದ್ಧಾರ ಮಾಡಲು ಹೆಣಗಿತು. "ಇದೊಂದೇ ಕೆಲಸಕ್ಕೆಂದು ಈ ಸಂಘ ಜನ್ಮವೆತ್ತಿದ್ದು ಸಾರ್ಥಕ ಎಂದು ಒಪ್ಪಬೇಕು" ಎಂದು ಈ ಬಗ್ಗೆ ಡಾ|| ಬಿ. ಸಿ. ರಾಧಾ ಕೃಷ್ಣ ಹೇಳಿದ್ದಾರಲ್ಲದೆ[4] "ಸಿವಿಕ್ ಸಂಘ ಹರಿಜನರ ಏಳಿಗೆಗಾಗಿ ಕೈಕೊಂಡ ಕಾರ್ಯಕ್ಕೆಲ್ಲ ಗೋಪಾಲಸ್ವಾಮಿ ಅಯ್ಯರರೇ ಜೀವವಾಗಿದ್ದರು" ಎಂದಿರುವರು. ಈ ಸಂಘದ ಮುಖಾಂತರ ತಮ್ಮ ಸೈಕಲ್ ಸಹಿತ ಮೈಸೂರು ಸಂಸ್ಥಾನದಲ್ಲಿ ಎಲ್ಲಿ ಬೇಕಾದರೂ ರೈಲಿನಲ್ಲಿ ಪ್ರಯಾಣ ಮಾಡಲು ಸರಕಾರವು ಅವರಿಗೆ ಪಾಸ್ ಒದಗಿಸಿತ್ತೆಂದು ಅವರು ತಿಳಿಸಿದ್ದಾರೆ.[5] ಈ ಪಾಸು ಮೊದಲ ವರ್ಗದ ಪ್ರಯಾಣದ್ದಾಗಿತ್ತೆಂದೂ ಇದರ ವಿನಾ ಸರಕಾರದಿಂದ ಅವರಿಗೆ ವೈಯಕ್ತಿಕವಾಗಿ ಯಾವುದೇ ವೇತನ ಅಥವಾ ಸವಲತ್ತು ಇರಲಿಲ್ಲವೆಂದೂ ಹೊಂಬಾಳಯ್ಯ ಸೂಚಿಸಿ ದ್ದಾರೆ.[6]

ಹರಿಜನರಿಗಾಗಿ ಶಾಲೆ ತೆರೆಸುವುದು, ಹರಿಜನರಿ ಗಾಗಿ ಸಹಕಾರ ಸಂಘ ತೆರೆಸುವುದು ಸಿವಿಕ್ ಸಂಘದ ಪ್ರಯತ್ನಗಳಲ್ಲಿ ಸೇರಿತ್ತು. ಹರಿಜನರು ತಾವಾಗಿ ಮುಂದೆ ಬಂದು ಬೆಂಗಳೂರಲ್ಲಿ ಮಾಡಿಕೊಂಡ ಸಹಕಾರ ಸಂಘದ ಮೊದಲ ಅಧ್ಯಕ್ಷರನ್ನು ಸರಕಾರವು ಪ್ರಜಾ

---

2 ವೈ. ಸಿ. ಹೊಂಬಾಳಯ್ಯ "ಎ ಡಾಯ್ನಮಿಕ್ ಸೋಶಿಯಲ್ ವರ್ಕರ್–ಆರ್. ಗೋಪಾಲಸ್ವಾಮಿ ಅಯ್ಯರ್", ಆರ್. ಗೋಪಾಲಸ್ವಾಮಿ ಅಯ್ಯರ್ ರೆಸಿಡೆನ್ಷಿಯಲ್ ಹೈಸ್ಕೂಲು, ಶ್ರೀರಾಮಪುರ, ಬೆಂಗಳೂರು, ಸೊವೆನೀರ್ ೧೯೬೨.

3 ಅದೇ ಪು. ೧೦–೧೧

4 ಬಿ. ಸಿ. ರಾಧಾಕೃಷ್ಣ, ನನ್ನ ತಂದೆ ಬೆಂಗಳೂರು, ೧೯೪೯, ಪು. ೧೪೪

5 ಮೇಲೆ ಹೇಳಿದ ಸೋವೆನೀರ್, ಪು. ೧೦

6 ರಾಧಾಕೃಷ್ಣ, ಮೇಲೆ ಹೇಳಿದ್ದು ಪು. ೧೪೫

ಪ್ರತಿನಿಧಿ ಸಭೆಗೂ ಜಿಲ್ಲಾ ಬೋರ್ಡಿಗೂ ಸದಸ್ಯರಾಗಿ ನಾಮಕರಣ ಮಾಡಿತ್ತು.[7] ೧೯೧೯ರಲ್ಲಿ ಪಂಚಮರ ಮಹಾಸಭೆಯೊಂದನ್ನು ಸಿವಿಕ್ ಸಂಘವು ಮೈಸೂರಲ್ಲಿ ಸೇರಿಸಿತು. ಹರಿಜನರಿಗೆ ಭಜನೆಗಾಗಿ ಹಾರ್ಮೋನಿಯಂ, ತಬಲಾಗಳನ್ನು ಸಿವಿಕ್ ಸಂಘ ಒದಗಿಸಿತು. ಭಜನೆ ಸಂಘಗಳ ಕಟ್ಟಡಕ್ಕೆ ಕೂಡ ಹಣ ಒದಗಿಸಿತು.[8]

ಹರಿಜನರನ್ನು ಮಳವಳ್ಳಿಯ ಸಾರ್ವಜನಿಕ ಕೆರೆಗೆ ನೀರು ತುಂಬಲು ಕರೆದೊಯ್ದು ಯಶಸ್ವಿಯಾದ ಅಯ್ಯರ್ ಅವರು ಪ್ರಾಣಾಪಾಯದ ಭಯವನ್ನೂ ಎದುರಿಸಿದರು.[9]

"ಗೋಪಾಲಸ್ವಾಮಿ ಅಯ್ಯರರು ಹೊರ ಹೊರಟಾಗ ಅವರ ಹಿಂದೆ ಐದಾರು ಹರಿಜನ ವಿದ್ಯಾರ್ಥಿಗಳು ಇಲ್ಲದಿದ್ದ ದಿನವೇ ಇಲ್ಲ. ಈ ವಿದ್ಯಾರ್ಥಿಗಳಿಗೆ ಸೀಸ ಕಡ್ಡಿ ಒದಗಿಸುವುದರಿಂದ ಹಿಡಿದು ಸರಕಾರದಲ್ಲಿ ಒಳ್ಳೆಯ ನೌಕರಿಯನ್ನು ಕೊಡಿಸುವವರೆಗೆ ಬಗೆಬಗೆಯ ಸಹಾಯ ಅಯ್ಯರ್‌ರವರಿಂದ ದೊರಕುತ್ತಿತ್ತು." ಎಂದು ಒಬ್ಬರು ಹೇಳಿದ್ದರೆ.[10] "ಶಾಲೆಕಾಲೇಜುಗಳು ಆರಂಭವಾದಾಗ (ಹರಿಜನ) ವಿದ್ಯಾರ್ಥಿಗಳ ಎಡ್ಮಿಷನ್ ಬಗ್ಗೆ ಅವರು ಓಡಾಟ ನಡೆಸುತ್ತಿದ್ದರೆ, ಮುಂದೆ ಆ ವಿದ್ಯಾರ್ಥಿಗಳ ಬೋರ್ಡಿಂಗ್, ಲಾಡ್ಜಿಂಗ್, ಪುಸ್ತಕ, ಸ್ಕಾಲರ್‌ಶಿಪ್, ಬಟ್ಟೆ ಬರೆಯ ವ್ಯವಸ್ಥೆ ಇವುಗಳ ಬಗ್ಗೆ ಕಾಳಜಿ ವಹಿಸುತ್ತಿದ್ದರು," ಎಂದು ಇನ್ನೊಬ್ಬರು ಹೇಳಿದ್ದಾರೆ. ಇದೇ ರೀತಿ ಈ ವಿದ್ಯಾರ್ಥಿಗಳಿಗೆ ಕ್ರೀಡೆ, ಗ್ರಂಥಾಧ್ಯಯನ, ಶೈಕ್ಷಣಿಕ ಪ್ರವಾಸಗಳಿಗೆ ಕರೆದೊಯ್ಯುವುದು, ಇಂಥ ಕೆಲಸಗಳಲ್ಲೂ ಅವರು ತೊಡಗಿರುತ್ತಿದ್ದರು.[12]

ಬೇರೆ ಬೇರೆ ಊರುಗಳಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳ ಪತ್ರಗಳಿಗೆ ಉತ್ತರ ಬರೆಯುವುದು, ಅವರಿಗೆ ಪತ್ರಗಳ ಮಾತಿನ ಮೂಲಕ ಹುರುಪು ತುಂಬುವುದು ಈ ಎಲ್ಲ ಕೆಲಸ ಮಾಡುತ್ತಿದ್ದ ಅವರ ಜೇಬು ವಿವಿಧ ಪತ್ರಗಳಿಂದ ತುಂಬಿದ ಒಂದು ಕಿರು ಪೋಸ್ಟಾಫೀಸಿನಂತೆ ಇರುತ್ತಿತ್ತು.[13] ಹಾಸ್ಟಲ್‌ಗಳ ಆಡಳಿತದಲ್ಲಿ ಅವ್ಯವಹಾರ ನಡೆಯದಂತೆ ಕೂಡ ಅವರು ನೋಡಿಕೊಳ್ಳುತ್ತಿದ್ದರು.

ಯಾವ ವಿದ್ಯಾರ್ಥಿ ಯಾವ ಇಲಾಖೆಯಲ್ಲಿ ಮುಂದೆ ಉದ್ಯೋಗ ಪಡೆಯಲು ಯೋಗ್ಯ, ಎಂದು ಮೊದಲೇ ಯೋಚಿಸಿ, ಎಸ್.ಎಸ್.ಎಲ್.ಸಿ. ಆದವರು, ಆಗದವರು ಇವರನ್ನೆಲ್ಲ ಬೇರ ಬೇರೆ ಸರಕಾರ ಇಲಾಖೆಯಲ್ಲಿ ಸೇರಿಸಬಹುದೆಂದು ಸಂಬಂಧಪಟ್ಟ ಇಲಾಖಾ ಮುಖ್ಯಸ್ಥರನ್ನು ಮನ ಒಲಿಸಿ ಕೆಲಸಕೊಡಿಸುತ್ತಿದ್ದರು. ಅಯ್ಯರ್ ಅವರಿಗೆ ತಮ್ಮ ವಿದ್ಯಾರ್ಥಿಗಳ ನಿರುದ್ಯೋಗದ ಸಮಸ್ಯೆ ಎಂದೂ ಕಾಡಲಿಲ್ಲ. ಅವರ ವಿನಂತಿಯನ್ನು ಯಾವುದೇ ಅಧಿಕಾರಿ ತಳ್ಳಿ ಹಾಕಲಿಲ್ಲ. ಏಕೆಂದರೆ ಅವರ ಆಕರ್ಷಕ ವ್ಯಕ್ತಿತ್ವ ಮನವೊಲಿಸುವ ಹಾಗೂ ತರ್ಕಬದ್ಧ ಮಾತುಗಾರಿಕೆ ಅಂತಹದ್ದಾಗಿತ್ತು, ಎಂದು ಹೊಂಬಾಳಯ್ಯ ಹೇಳಿದ್ದಾರೆ. ತಾವು ಪದವೀಧರರಾಗಿ ಪುಣೆಯಿಂದ ಕಾನೂನು ಶಿಕ್ಷಣ ಮುಗಿಸಿ ಬಂದಾಗ ೧೯೪೩ರಲ್ಲಿ ಅಯ್ಯರ್ ಅವರು ಅನಾರೋಗ್ಯದಿಂದ ಹಾಸಿಗೆ ಹಿಡಿದಿದ್ದರೂ ತಮ್ಮನ್ನ ಗೆಜೆಟೆಡ್ ಹುದ್ದೆಗೆ ನೇಮಿಸಬೇಕೆಂದು ದಿವಾನರಿಗೆ ಅಯ್ಯರ್ ಪತ್ರ ಬರೆದರೆಂದೂ ಹೊಂಬಾಳಯ್ಯ ತಿಳಿಸಿದ್ದಾರೆ.[14] ಅಲ್ಲದೆ ಅಸ್ಪೃಶ್ಯರಿಗೆ ಸವಲತ್ತು ನೀಡುವ ಬಗೆಗಿನ ಎಲ್ಲ ಸರಕಾರೀ ಕಾನೂನು ನಿಯಮ, ಆಜ್ಞೆಗಳ ಒಂದು ಸಂಗ್ರಹವೇ ಸದಾಕಾಲ ಅವರಲ್ಲಿದ್ದು ಕಾಲಕಾಲಕ್ಕೆ ತಾವು ಭೇಟ

---

7 ಅದೇ ಪು. ೧೪೬

8 ಹೊಂಬಾಳಯ್ಯ, ಮೇಲೆ ಹೇಳಿದ್ದ ಸೊವೆನೀರ್ ಪು. ೧೨

9 ರಾಧಾಕೃಷ್ಣ, ಮೇಲೆ ಹೇಳಿದು, ಪುಟ-೧೪೩.

10 ಹೊಂಬಾಳಯ್ಯ, ಮೇಲೆ ಹೇಳಿದ್ದು, ಪು-೧೦

11 ಅದೇ.

12 ಅದೇ ಪುಟ-೧೧

13 ಅದೇ ಪುಟ-೧೦

14 ಅದೇ ಪುಟ-೧೧

ಯಾಗುವ ಅಧಿಕಾರಿಗಳ ಗಮನಕ್ಕೆ ಅವುಗಳನ್ನು ಅವರು ತರುತ್ತಿದ್ದರಂತೆ.[15]

ಅಹಿರ್ನಿಶಿ ಸೈಕಲ್‌ನಲ್ಲಿ ಓಡಾಡುತ್ತ ಬೆಳಗ್ಗೆ ಹಾಸ್ಟಲ್‌ಗಳಿಗೆ ಭೇಟಿ, ಗ್ರಂಥಾಲಯಗಳ ಭೇಟಿ, ಮಧ್ಯಾಹ್ನ೨ ರಿಂದಽರವರೆಗೆ ಸರ್ಕಾರಿ ಆಫೀಸು, ಫ್ಯಾಕ್ಟರಿ ಗಳಲ್ಲಿ ಹರಿಜನ ವಿದ್ಯಾರ್ಥಿಗಳಿಗೆ ಕೆಲಸ ಕೊಡಿಸುವ ಕಾಯಕವನ್ನು ಮಾಡುತ್ತಿದ್ದರೆಂದು ಇನ್ನೊಬ್ಬ ಲೇಖಕರು ಹೇಳಿದ್ದಾರೆ.[16]

ಬೆಂಗಳೂರಲ್ಲಿ ೧೯೩೨ರಲ್ಲಿ ಅವರು ಆದಿಕರ್ನಾಟಕ ಏಡೆಡ್ ಹಾಸ್ಟಲ್ ಆರಂಭಿಸಿದರು. ಮುಂದೆ ಅವರ ಮರಣಾಂತರ ಆ ಹಾಸ್ಟಲ್ ಆರ್. ಗೋಪಾಲ ಸ್ವಾಮಿ ಅಯ್ಯರ್ ವಿದ್ಯಾರ್ಥಿ ನಿಲಯವಾಗಿ, ೧೯೭೮ರಲ್ಲಿ ರೆಸಿಡೆನ್ಸಿಯಲ್ ಹೈಸ್ಕೂಲಾಯಿತು.[17] ಇದಲ್ಲದೆ ೧೯೩೦ರಲ್ಲಿ ಇವರು ಆರಂಭಿಸಿದ್ದ ಮಾಗಡಿ ರಸ್ತೆಯ ಆದಿಜಾಂಬದ ವಿದ್ಯಾರ್ಥಿನಿಲಯಕ್ಕೆ[18] ೧೯೩೪ರಲ್ಲಿ ಗಾಂಧೀಜಿ ಶಿಲಾನ್ಯಾಸ ಮಾಡಲು ಇಂದಿಗೂ ಅದು ಬಾಪೂಜಿ ವಿದ್ಯಾರ್ಥಿನಿಲಯವೆಂದು ಪ್ರಸಿದ್ಧವಾಗಿದೆ.

ತಮ್ಮ ಮೂರು ದಶಕಗಳ ದೀರ್ಘ ಸೇವೆಯ ನಂತರ ೧೯-೩-೧೯೪೩ರಲ್ಲಿ ಅಯ್ಯರ್ ತೀರಿಕೊಂಡರು.

ಅಯ್ಯರ್ ಅವರು ಅಸ್ಪೃಶ್ಯರಿಗಾಗಿ ಅಷ್ಟೇ ಅಲ್ಲ, ಇತರ ಪತಿತ ಜನರಿಗಾಗಿಯೂ ದುಡಿಯುತ್ತಿದ್ದರು. ತಾವು "ದಿ ಸ್ಯಾಡ್", (ಅಸ್ಪೃಶ್ಯರು) "ದಿ ಬ್ಯಾಡ್" (ಅಪರಾಧಿ ಕೈದಿಗಳು) ಹಾಗೂ "ದಿ ಮ್ಯಾಡ್" (ಮಾನಸಿಕ ಆಸ್ಪತ್ರೆಯ ರೋಗಿಗಳು) ಇವರಿಗಾಗಿ ದುಡಿಯುವೆ ಎಂದು ಅವರು ಎನ್ನುತ್ತಿದ್ದರೆಂದೂ ಆದರೆ ಇತರ ಕೆಲಸಗಳಿಗಿಂತ ಅಸ್ಪೃಶ್ಯರ ಬಗ್ಗೆ ಅವರ ಕಾಯಕ ಕೇಂದ್ರಿಕೃತವಾಗಿತ್ತೆಂದೂ ಹೊಂಬಾಳಯ್ಯ ಹೇಳುತ್ತಾರೆ.

ಅಸ್ಪೃಶ್ಯರ ನಡುವೆ ಅವರು ಮಾಡುತ್ತಿದ್ದ ಕೆಲಸದಿಂದ ತಾವು ಸ್ವಜನರಿಂದ ಅವಹೇಳನಕ್ಕೆ ಒಳಗಾದರೂ ತಾವು ಮಾತ್ರ ತಮ್ಮ ಕೆಲಸದ ಬಗ್ಗೆ ತೀರ ದಿಟ್ಟರೂ ಹಟವಾದಿಗಳೂ ಆಗಿದ್ದು ತಾವು ಆಯ್ದುಕೊಂಡ ತಮ್ಮ ಜೀವನದ ಮಿಶನ್ ಬಗ್ಗೆ ಅವರು ತೀರ ದೃಢರಾಗಿದ್ದರೆಂದೂ, ಅವರೊಬ್ಬ ಸಜ್ಜನರು 'ದೇವರೇ ಸೃಷ್ಟಿಸಿದ ಸಜ್ಜನರು' ಎಂದು ಡಾ|| ಡಿ. ವಿ. ಜಿ. ಅವರ ಬಗ್ಗೆ ಹೇಳಿದ್ದಾರೆ.

15 ಪಿ.ಆರ್. ತಿಪ್ಪೇಸ್ವಾಮಿ, "ಅಸ್ಪೃಶ್ಯತೆ ಅಳಿಸಲು ಯತ್ನಿಸಿದ ಅಯ್ಯರ್", ಯಾತ್ರಿಕ (ಪತ್ರಿಕೆ) ದೀಪಾವಳಿ ಸಂಚಿಕೆ-೧೯೮೨ ಪುಟ-೩೯

16 ಎ. ಕೃಷ್ಣಪ್ಪ, "ನಾ ಕಂಡ ಸೇವಾದೀಕ್ಷ ಪಿತಾಮಹ ಶ್ರೀ ಡಿ.ವೆಂಕಟಯ್ಯ", ಮೇಲೆ ಹೇಳಿದ ಸೊವೆನೀರ್ ಪುಟ-೩೮-೪೦

17 ಹೊಂಬಾಳಯ್ಯ. ಮೇಲೆ ಹೇಳಿದ ಸೊವೆನೀರ್ ಪು-೧೨

18 ಅದೇ. ಪುಟ-೧೦

19 ಅದೇ. ಡಾ|| ಡಿ.ವಿ. ಗುಂಡಪ್ಪ, "ಆರ್. ಗೋಪಾಲಸ್ವಾಮಿ ಅಯ್ಯರ್, ಎ ಕ್ಯಾಂಡಲ್ ಇನ್ ಡಾರ್ಕ್‌ನೆಸ್", ಪುಟ-೨೫

ಡಾ|| ಜೆ.ವಿ. ಗಾಯತ್ರಿ*

# ದಲಿತರ ಉದ್ಧಾರಕ್ಕಾಗಿ ದುಡಿದ ಗೋವಿಂದಾಚಾರ್ಯಸ್ವಾಮಿ

ಮೈಸೂರು ಸಂಸ್ಥಾನದಲ್ಲಿ ಜನತೆಯ ರಾಜಕೀಯ ಜಾಗೃತಿಗೆ ಹಲವಾರು ಚಳುವಳಿಗಳು ಪ್ರೇರಣೆಯಾದವು. ರಾಷ್ಟ್ರ ಪ್ರೇಮದ ಭಾವನೆಗಳನ್ನು ಬೆಳಸಿಕೊಂಡಿದ್ದ ಅನೇಕ ಮಹನೀಯರು ಈ ಚಳುವಳಿಗಳಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಹರಿಜನರ ಉದ್ಧಾರಕ್ಕಾಗಿ ಮಹಾತ್ಮಾ ಗಾಂಧೀಜಿಯವರು ಮೈಸೂರು ಸಂಸ್ಥಾನದಲ್ಲಿ ಕೈಗೊಂಡ ಪ್ರವಾಸಿಗಳಿಂದ ಪ್ರಭಾವಿತರಾದ ಅನೇಕರು ೧೯೩೦ರ ದಶಕದಲ್ಲಿ ಹರಿಜನರ ಅಭ್ಯುದಯಕ್ಕಾಗಿ ಪ್ರಗತಿದಾಯಕ ಪ್ರಯತ್ನಗಳನ್ನು ನಡೆಸಿದರು.

ಮೈಸೂರು ಜಿಲ್ಲೆಯಲ್ಲಿ ಹರಿಜನೋದ್ಧಾರಕ್ಕಾಗಿ ಸಕ್ರಿಯವಾಗಿ ಶ್ರಮಿಸಿದ ಪ್ರಮುಖರೆಂದರೆ ಎಂ. ವೆಂಕಟಕೃಷ್ಣಯ್ಯ, ತಗಡೂರು ರಾಮಚಂದ್ರರಾಯರು, ಆರ್. ಗೋಪಾಲಸ್ವಾಮಿ ಅಯ್ಯರ್, ಎಂ. ಎನ್. ಜೋಯಿಸ್ ಮತ್ತು ಗೋವಿಂದಾಚಾರ್ಯಸ್ವಾಮಿಯವರು. ಹರಿಜನರಿಗೆ ಆರೋಗ್ಯದ ಮಹತ್ವದ ಬಗ್ಗೆ ತಿಳುವಳಿಕೆ ನೀಡುವುದು ಶಾಲೆಗಳಿಗೆ ಮತ್ತು ದೇವಸ್ಥಾನಗಳಿಗೆಪ್ರವೇಶಾವಕಾಶ ಒದಗಿಸುವುನು, ಕ್ರೈಸ್ತ ಮತಾಂತರ ವಿರೋಧ ಮುಂತಾದ ಚಟುವಟಿಕೆಗಳನ್ನು ಇವರು ಹಮ್ಮಿಕೊಂಡರು. ಕ್ರೈಸ್ತ ಪಾದ್ರಿಗಳ ಒತ್ತಾಯಕ್ಕೆ ಒಳಗಾಗಿ ಕ್ರೈಸ್ತ ಧರ್ಮ ಸ್ವೀಕರಿಸಿದ ಮೈಸೂರು ಜಿಲ್ಲೆಯ ಅನೇಕ ದಲಿತ ಹಿಂದೂಗಳ 'ಶುದ್ಧಿ' ಕಾರ್ಯವನ್ನು ತಗಡೂರು ರಾಮಚಂದ್ರರಾಯರು ಕೈಗೊಂಡರು. ಈ ಕಾರ್ಯಗಳಲ್ಲಿ ರಾಮಚಂದ್ರರಾಯರಿಗೆ ಬೆಂಬಲಿಗರಾಗಿ ನಿಂತು ಅತ್ಯಂತ ಉತ್ಸಾಹದಿಂದ ದಲಿತ ಹಿಂದೂಗಳ 'ಶುದ್ಧಿ' ಮತ್ತು ಮುದ್ರಾಧಾರಣೆ ನಡೆಸಿಕೊಟ್ಟವರು ಮೈಸೂರು ನಗರದ ನಿವಾಸಿಗಳಾದ ಗೋವಿಂದಾಚಾರ್ಯಸ್ವಾಮಿಯವರು.

ಆಲ್ಕೊಂಡವಿಲ್ಲಿ ಗೋವಿಂದಾಚಾರ್ಯರು ೧೮೫೭ರಲ್ಲಿ ಜನಿಸಿದರು. ಬೆಂಗಳೂರಿನ 'ಸ್ಕೂಲ್ ಆಫ್ ಎಂಜಿನಿಯರಿಂಗ್ ಮತ್ತು ನ್ಯಾಚುರಲ್ ಸೈನ್ಸ್'ನಲ್ಲಿ ೧೮೭೮ರಲ್ಲಿ ಪ್ರಥಮ ರ್‍ಯಾಂಕ್‌ಗಳಿಸಿ ಉತ್ತೀರ್ಣರಾದರು, ನಂತರ ಮೈಸೂರು ಸರ್ಕಾರದ ಮರಾಮತ್ ಇಲಾಖೆಯಲ್ಲಿ ಎಂಜಿನಿಯರ್ ಆಗಿ ನೇಮಕ ಹೊಂದಿದರು. ಇವರ ತಂದೆ ಎ. ಶ್ರೀನಿವಾಸ ಅಯ್ಯಂಗಾರ್ಯರು ಮೈಸೂರು ಸರ್ಕಾರದ ಅಧೀನ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತಿದ್ದರು. ಹಾಗೂ ಮೈಸೂರಿನ ಮಹಾರಾಜರಾಗಿದ್ದ ಹತ್ತನೆಯ ಚಾಮರಾಜೇಂದ್ರ ಒಡೆಯರ್‌ರವರಿಗೆ ಕೆಲವು ಕಾಲ ಇಂಗ್ಲೀಷ್ ಪಾಠ ಹೇಳುತ್ತಿದ್ದು, 'ಅಂಗ್ರೇಜಿ ಅಯ್ಯಂಗಾರ್ ಎಂದೇ ಅರಮನೆಯಲ್ಲಿ ಪರಿಚಿತರಾಗಿದ್ದರು. ಇವರು ತೆಂಗಲೆಪಂಗಡಕ್ಕೆ ಸೇರಿದ ಶ್ರೀವೈಷ್ಣವ ಬ್ರಾಹ್ಮಣರು. ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಸಿದ್ಧಾಂತದಿಂದ ಪ್ರಭಾವಿತರಾಗಿದ್ದ ಗೋವಿಂದಾಚಾರ್ಯರು ಕೆಲವು ಗ್ರಂಥಗಳನ್ನು ರಚಿಸಿದ್ದಾರೆ. ಇದರಲ್ಲಿ ಪ್ರಮುಖವಾದವು'ಲೈಫ್ ಆಫ್ ರಾಮಾನುಜ,' 'ಎ ಮೆಟಫಿಸಿಕ್ಸ್ ಆಫ್ ಮಿಸ್ಟಿಸಿಸಮ್,' 'ಹೋಲಿ ಲೈಫ್ ಆಫ್ ದಿ ಆಳ್ವಾರ್ಸ್,' 'ಐಡ್ಸ್ ಆಫ್ ಇಂದ್'

* ೧೭೨೧, ೩ನೇ ಮುಖ್ಯ ರಸ್ತೆ, ೮ನೇ ಅಡ್ಡರಸ್ತೆ, ವಿವೇಕಾನಂದನಗರ, ಮೈಸೂರು-೫೭೦ ೦೨೩

ಮತ್ತು 'ದಿ ಡಿವೈನ್ ವಿಸ್ಡಮ್ ಆಫ್ ದಿ ದ್ರಾವಿಡಾ ಸೇಂಟ್ಸ್'. ಭೂತದಯಾ ಪ್ರವೃತ್ತಿಯುಳ್ಳ ಈ ಕುಟುಂಬದಲ್ಲಿ ಇವರೊಡನೆ ಇಂತಹ ಕಾರ್ಯಗಳಲ್ಲಿ ಪಾಲ್ಗೊಂಡವರು ಇವರ ಪತ್ನಿ ವೇದನಾಯಕಮ್ಮ. ಆಚಾರ್ಯರ ಸಹೋದರಿ ವೆಂಕಟಕೃಷ್ಣಮ್ಮ ಮತ್ತು ಆಕೆಯ ಪತಿ ಶ್ರೀನಿವಾಸ ಅಯ್ಯಂಗಾರ್ಯರು ಸಹ ಬೆಂಗಳೂರಿನಲ್ಲಿ ಅನಾಥ ಬಾಲಕಿಯರ ಏಳಿಗೆಗಾಗಿ 'ಶ್ರೀನಿವಾಸ ಮಂದಿರಂ ಚಾರಿಟೀಸ್' ಎಂಬ ಸೇವಾ ಸಂಸ್ಥೆಯನ್ನು ಸ್ಥಾಪಿಸಿ ಶ್ರಮಿಸಿದರು.

ಮೈಸೂರು ಜಿಲ್ಲೆಯಲ್ಲಿ ೧೯೩೫ರಲ್ಲಿ ಸಮಾಜ ಸುಧಾರಣೆಯ ಆಂದೋಲನದಲ್ಲಿ ಜರುಗಿದ ಮುಖ್ಯ ಘಟನೆಯೆಂದರೆ 'ಕಣಿಯರು' ಎಂಬ ಜಾತಿಯ ಜನರಿಗೆ ಮುದ್ರಾಧಾರಣೆ ಮಾಡಿ ಉತ್ತಮ ಹಿಂದೂಗಳಾಗಿ ಪರಿವರ್ತಿಸುವ ಕಾರ್ಯ. ಈ ಜನರಿಗೆ ಮುದ್ರಾಧಾರಣೆ ಮಾಡಿ ಇವರ ಸಾಮಾಜಿಕ ಅಭ್ಯುದಯಕ್ಕಾಗಿ ಗೋವಿಂದಾಚಾರ್ಯರು ವಹಿಸಿದ ಶ್ರಮ ಅಪಾರ. ತಿರುಮಕೂಡ್ಲು ನರಸೀಪುರದಲ್ಲಿ ಸೆಪ್ಟೆಂಬರ್ ೫, ೧೯೩೫ ರಂದು ಗಾಂಧಿ ಮೈದಾನದಲ್ಲಿ ಜರುಗಿದ ಅಖಿಲ ಕರ್ನಾಟಕ ಕಣಿಯರ ಮಹಾಸಮ್ಮೇಳನದ ಅಧ್ಯಕ್ಷತೆಯನ್ನು ಮೈಸೂರಿನ ಎಂ. ವೆಂಕಟಕೃಷ್ಣಯ್ಯ ವಹಿಸಿದ್ದರು. ಕಣಿಯರ ಜನಾಂಗಕ್ಕೆ ಸಾಮಾಜಿಕನ್ಯಾಯ ದೊರಕಿಸಿ ಕೊಡಲು ಕಾತರರಾಗಿದ್ದ ಮಹನೀಯರಾದ ಎ. ಗೋವಿಂದಾಚಾರ್ಯಸ್ವಾಮಿ, ತಿ. ತಾ. ಶರ್ಮ, ಜಿ.ಆರ್.ಎಸ್. ರಾವ್, ವಿ. ಎಸ್. ಸಂಜೀವರಾವ್, ಪಿ. ಆರ್. ರಾಮಯ್ಯ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಅಗರಂ ರಂಗಯ್ಯ, ತಗಡೂರು ರಾಮಚಂದ್ರರಾವ್ ಮುಂತಾದವರು ಇಲ್ಲಿ ಸೇರಿದ್ದರು. ಕಣಿಯ ಜನಾಂಗದ ೩೬ ಜನರುಳ್ಳ ಒಂದು ಸಭೆಯನ್ನು ಆಯ್ದು, ಪ್ರತಿ ಸದಸ್ಯನೂ ತನ್ನ ಕ್ಷೇತ್ರದ ಕಣಿಯರ ಅಭಿವೃದ್ಧಿಗೆ ಶ್ರಮಿಸಬೇಕೆಂದು ಮತ್ತು ವರದಿಯನ್ನು ತಗಡೂರು ರಾಮಚಂದ್ರರಾಯರಿಗೆ ಸಲ್ಲಿಸಬೇಕೆಂದು ಇಲ್ಲಿ ನಿರ್ಣಯವಾಯಿತು. ಕಣಿಯರು ಪಡೆದ ಈ ಸಾಮಾಜಿಕ ನ್ಯಾಯವನ್ನು ಜನತೆಯ ಗಮನಕ್ಕೆ ತರಲು ಫೆಬ್ರವರಿ ೧೪, ೧೯೩೬ ರಂದು ಬೆಂಗಳೂರಿನ ಮುಖ್ಯ ಬೀದಿಗಳಲ್ಲಿ ಕಣಿಯರು ಭಜನೆ ಮಾಡಿಕೊಂಡು ಮೆರವಣಿಗೆ ಹೋಗಿ ಗವಿಗಂಗಾಧರೇಶ್ವರಸ್ವಾಮಿ, ಶ್ರೀನಿವಾಸ ಮಂದಿರ ಮುಂತಾದ ದೇವಸ್ಥಾನಗಳಲ್ಲಿ, ತೀರ್ಥ, ಪ್ರಸಾದ ತೆಗೆದುಕೊಳ್ಳುವ ಕಾರ್ಯಕ್ರಮ ಏರ್ಪಟ್ಟಿತು. ಈ ಕಾರ್ಯಕ್ರಮದ ಮುಂದಾಳತ್ವ ವಹಿಸಿದವರು ಗೋವಿದಾಚಾರ್ಯಸ್ವಾಮಿ ಮತ್ತು ಇವರ ಪತ್ನಿ ವೇದನಾಯಕಮ್ಮ. ಬೆಂಗಳೂರಿನಲ್ಲಿ ಕಣಿಯರಿಗೆ ದೊರೆತ ಸ್ಥಾನಮಾನಗಳನ್ನು ಇತರ ಪ್ರದೇಶಗಳಲ್ಲಿಯೂ ದೊರಕಿಸಿಕೊಡಬೇಕೆಂದು ಮರುದಿನ ಗಾಂಧಿ ಮೈದಾನದಲ್ಲಿ ನಡೆದ ಸಭೆಯಲ್ಲಿ ತೀರ್ಮಾನವಾಗಿ ಈ ಕಾರ್ಯಕ್ಕಾಗಿ ಗೋವಿಂದಾಚಾರ್ಯಸ್ವಾಮಿ, ಕೆ. ಸಂಪದ್ಗಿರಿರಾವ್, ಸಿಂಗಮ್ಮ, ದೇವುಡು ನರಸಿಂಹಶಾಸ್ತ್ರಿ ನೇಮಿಸಲ್ಪಟ್ಟರು. ನಂತರ ಬೆಂಗಳೂರಿನಲ್ಲಿ ಜುಲೈ ೨೫, ೧೯೩೬ ರಂದು 'ಕಣಿಯರ ಸಂಘ' ಏರ್ಪಟ್ಟು ಆಗಸ್ಟ್ ೧೦, ೧೯೩೬ ರಂದು ಅದು ಸರ್ಕಾರದಲ್ಲಿ ರಿಜಿಸ್ಟರಾಯಿತು.

ಗೋವಿಂದಾಚಾರ್ಯರು ಮೊಟ್ಟಮೊದಲು ೧೯೩೫ರಲ್ಲಿ ಕೈಗೊಂಡ ಮುದ್ರಾಧಾರಣ ಕಾರ್ಯಕ್ರಮವು ಮೈಸೂರು ಜಿಲ್ಲೆಯ ತಗಡೂರಿನ ಕಿರಗುಂದ ಗ್ರಾಮದಲ್ಲಿ ಸಂತೆಯೊಂದರ ದಿನ ಬೃಹತ್ ಸಮಾರಂಭದೊಂದಿಗೆ ಪ್ರಾರಂಭವಾಯಿತು. ಸುತ್ತಮುತ್ತಲಿನ ೧೩-೧೪ ಗ್ರಾಮಗಳಿಂದ ಮುದ್ರಾಧಾರಣೆಗಾಗಿ ಕಣಿಯರು ಬಂದು ಸೇರಿದ್ದರು. ಸರ್ಕಾರದ ಅಧಿಕಾರಿಗಳಾದ ಡೆಪ್ಯುಟಿ ಕಮಿಷನರ್, ಪೋಲಿಸ್ ಸೂಪರಿಂಟೆಂಡೆಂಟ್ ಮತ್ತಿತರ ಸಿಬ್ಬಂದಿಯ ಬಿಗಿ ಕಾವಲು ಬೇರೆ. ಕ್ರೈಸ್ತ ಪಾದ್ರಿ ಫಾದರ್ ಸಾಡೆಯವರು ಸಹ ಅಂದು ಹಾಜರಿದ್ದರು. ಇಂತಹ ಬಿಗುವಿನ ವಾತಾವರಣದಲ್ಲಿ ಸಮಾರಂಭಕ್ಕೆ ಬಂದಿದ್ದ ಎಲ್ಲಾ ಕಣಿಯರಿಗೂ ಗೋವಿಂದಾಚಾರ್ಯರು ಮುದ್ರಾಧಾರಣೆ ಮಾಡಿಸಿ ನೆರೆದ ಜನಸಮೂಹಕ್ಕೆ ಊಟ ಹಾಕಿಸಿ ಸರ್ಕಾರಿ ಅಧಿಕಾರಿಗಳಿಗೆ ದಿಗ್ಭ್ರಾಂತಿಯನ್ನುಂಟು ಮಾಡಿದರು. ಇಲ್ಲಿಂದ ಮುಂದೆ ಚಾಮರಾಜನಗರ, ಯಳಂದೂರು ಮತ್ತು ಕೊಳ್ಳೇಗಾಲ ತಾಲ್ಲೂಕುಗಳಲ್ಲಿ ಆಚಾರ್ಯರು ಕಣಿಯರ ಮುದ್ರಾಧಾರಣ ಕಾರ್ಯದಲ್ಲಿ ಯಶಸ್ವಿಯಾದರು. ಯಳಂದೂರು ತಾಲ್ಲೂಕಿನಲ್ಲಿ ಆಚಾರ್ಯರಿಗೆ ಆಶ್ರಯ ಕೊಡಬಾರದೆಂಬ ಸರ್ಕಾರಿ ಆಜ್ಞೆ ಜಾರಿಯಲ್ಲಿದ್ದರೂ, ಇವರಿಗೆ ರಾತ್ರಿ ಆಶ್ರಯ ನೀಡಿದ ಶ್ರೀನಿವಾಸಯ್ಯನೆಂಬ ಶ್ಯಾನುಭೋಗರು ಸರ್ಕಾರದ ಕೋಪಕ್ಕೆ ತುತ್ತಾಗಿ

ಕೆಲಸದಿಂದಲೇ ತೆಗೆಯಲ್ಪಟ್ಟರು. ಇದರಿಂದ ಹೆದರಿದ ಕಣಿಯರು ಮುದ್ರಾಧಾರಣೆಗೆ ಬರದೆ ನದಿಯ ದಡದಲ್ಲೇ ಇರುವುದನ್ನು ನೋಡಿದ ಆಚಾರ್ಯರು ಆ ದಡಕ್ಕೆ ಹೋಗಿ ತೋಟವೊಂದರ ಮಧ್ಯೆ ಕುಳಿತು ಮುದ್ರಾಧಾರಣೆಯ ಕಾರ್ಯ ನೆರವೇರಿಸಿದರು.

ಮುಂದೆ ತಿರುಮಕೂಡ್ಲು ನರಸೀಪುರದಲ್ಲಿ ಶ್ರೀಗುಂಜಾ ನರಸಿಂಹಸ್ವಾಮಿ ದೇವಸ್ಥಾನದಲ್ಲಿ ಮೇ ೧೬, ೧೯೨೮ರಂದು ಕಣಿಯರಿಗೆ ತೀರ್ಥ, ಪ್ರಸಾದ ನೀಡುವಂತೆ ಆಗಿದ್ದು ಸಮಾಜ ಸುಧಾರಣೆಯ ಒಂದು ದೊಡ್ಡ ಹಂತ. ಅಂದು ಆಚಾರ್ಯರು ನೆರವೇರಿಸಿದ ಕಣಿಯರ ಮುದ್ರಾಧಾರಣೆ ಮತ್ತು ದೇವಸ್ಥಾನದ ಪ್ರವೇಶಕ್ಕೆ ಪರೋಕ್ಷವಾಗಿ ಬೆಂಬಲ ಸಿಕ್ಕಿದ್ದು, ಮೈಸೂರಿನ ಸಬ್ ಡಿವಿಜನರ್ ಆಫೀಸರ್ ಆಗಿದ್ದ ಶ್ರೀ ವೈಷ್ಣವ ಮತಸ್ಥರಾದ ಅಪ್ಪಣ್ಣಯ್ಯಂಗಾರ್ಯರಿಂದ. ಅಂದು ಅಪ್ಪಣ್ಣಯ್ಯಂಗಾರ್ಯರು ಕಣಿಯರಿಗೆ ತೀರ್ಥ, ಪ್ರಸಾದ ಹಂಚಿದ ನಂತರ ದೇವಸ್ಥಾನದ ಮುಂದೆ ಇದ್ದ ಮೈದಾನದ ಮಂಟಪದಲ್ಲಿ ಕಣಿಯರ ಸತ್ಯಾಗ್ರಹ ೮ ದಿನಗಳ ಕಾಲ ನಡೆಯಿತು. ಅದೇ ಸಮಯದಲ್ಲಿ ಜರುಗಿದ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಹೊಸಕೊಪ್ಪ ಕೃಷ್ಣರಾಯರು, ನೀಲಗಿರಿ ಸಂಜೀವಯ್ಯ, ಬೈಯಣ್ಣ, ಎಂ. ಸಿ. ಅಂಗೇಗೌಡ, ಎಸ್.ಸಿ. ಮಲ್ಲಯ್ಯ ಮುಂತಾದ ಸದಸ್ಯರು ಕಣಿಯರ ಸತ್ಯಾಗ್ರಹ ಮತ್ತು ದೇವಸ್ಥಾನದ ಪ್ರವೇಶ ಕುರಿತು ಚರ್ಚೆ ನಡೆಸಿದರು. ಅನೇಕ ಸದಸ್ಯರು ತಿರುಮಕೂಡ್ಲು ನರಸೀಪುರಕ್ಕೆ ಬಂದು ಸತ್ಯಾಗ್ರಹಿಗಳನ್ನು ಭೇಟಿ ಮಾಡಿ ಸರ್ಕಾರದ ಗಮನ ಸೆಳೆಯುವ ಭರವಸೆ ಕೊಟ್ಟ ಮೇಲೆ ಸತ್ಯಾಗ್ರಹ ನಿಲ್ಲಿಸಲ್ಪಟ್ಟಿತು.

ಗೋವಿಂದಾಚಾರ್ಯರು ಶ್ರೀರಾಮಾನುಜರ ಸಿದ್ಧಾಂತಗಳನ್ನು ಆಚರಣೆಗೆ ತಂದ ಮಹಾನುಭಾವರು. ಮಹಾಪಂಡಿತರಾದ ಇವರಿಗೆ ಶ್ರೀ ಪರಕಾಲಮಠದ ಅಗ್ರ ತೀರ್ಥದ ಮರ್ಯಾದೆ ಇತ್ತು. 'ಕಣಿಯರ ಸಾಮಾಜಿಕ ಸುಧಾರಣೆಯನ್ನು ಕೈಗೆತ್ತಿಕೊಂಡು, ಕಣಿಯರ ನೆಲೆಗಳಿಗೆ ಭೇಟಿಕೊಟ್ಟು, ಅವರಿಗೆ ಮುದ್ರಾಧಾರಣೆ ದೇವಸ್ಥಾನದ ಪ್ರವೇಶಾವಕಾಶ ಮತ್ತು ತೀರ್ಥ, ಪ್ರಸಾದಗಳನ್ನು ವಿನಿಯೋಗಿಸುವ ಕ್ರಾಂತಿಕಾರಿ ಆಂದೋಳನದಲ್ಲಿ ಭಾಗ ವಹಿಸಿ ದುಡಿದ ಕೀರ್ತಿ ಆಚಾರ್ಯರಿಗೆ ಸಲ್ಲುತ್ತದೆ.

ಗೋವಿಂದಾಚಾರ್ಯರ ನಿಧನ(೧೯೩೨)ದ ನಂತರ ದಲಿತರ ಮುದ್ರಾಧಾರಣ ಕಾರ್ಯವನ್ನು ಇವರ ಮೊಮ್ಮಗ ಎಂ. ಯಾಮುನಾಚಾರ್ಯರು ಮುಂದುವರೆಸಿದರು. ಮೈಸೂರು ವಿಶ್ವವಿದ್ಯಾಲಯದ ತತ್ವಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಯಾಮುನಾಚಾರ್ಯರು ಗಾಂಧೀಜಿಯವರ ಕೃತಿಗಳನ್ನು ಭಾಷಾಂತರಿಸಿರುವುದಲ್ಲದೆ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ಸಿದ್ಧಾಂತಗಳ ಬಗ್ಗೆ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಮೈಸೂರು ನಗರದ ಹಾರ್ಡ್ವಿಕ್ ವೃತ್ತದ ಬಳಿಯಿರುವ ಇವರ ನಿವಾಸಕ್ಕೆ ಆಚಾರ್ಯರಿಂದ ಮುದ್ರಾಧಾರಣೆ ಪಡೆದು ಶ್ರೀ ವೈಷ್ಣವರಾದ ಇವರ ಶಿಷ್ಯರ ವಂಶಸ್ಥರು ಇಂದಿಗೂ ಗೋಕುಲಾಷ್ಟಮಿ ಮತ್ತು ವರಮಹಾಲಕ್ಷ್ಮಿ ಹಬ್ಬಗಳಂದು ಆಗಮಿಸಿ ಆಚಾರ್ಯರ ವಂಶಸ್ಥರಿಂದ ಆಶೀರ್ವಾದ ಪಡೆಯುವ ಪದ್ಧತಿಯಿದೆ.

## ಆಧಾರಗ್ರಂಥಗಳು

'ಕರ್ಮಯೋಗಿ,' ಸಂ. ಎಂ.ಎನ್. ಜೋಯಿಸ್ 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಭಾಗ–೨ ಸಂ. ಡಾ|| ಸೂರ್ಯನಾಥಕಾಮತ್

ಈ ಲೇಖನ ಸಿದ್ಧಪಡಿಸಲು ಮಾಹಿತಿ ನೀಡಿ ಸಹಕರಿಸಿದ ದಿವಂಗತ ಎ. ಗೋವಿಂದಚಾರ್ಯಸ್ವಾಮಿಯವರ ಮೊಮ್ಮಗ ಡಾ|| ಎಂ. ಮುತ್ತು ಮತ್ತು ಮೈಸೂರಿನ ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಎಂ. ಎನ್. ಜೋಯಿಸ್‌ರಿಗೆ ಲೇಖಕರ ಕೃತಜ್ಞತೆಗಳು.

ಎಂ. ಬಿ. ಪಾಟೀಲ*

# ಮೈಸೂರು ಜಿಲ್ಲೆಯ ಬ್ಯಾಂಕಿಂಗ್ ಉದ್ಯಮದ ಪ್ರಾರಂಭದ ಹಂತ (೧೮೯೪-೧೯೧೫)

ಹಿಂದಿನ ಮೈಸೂರು ಸಂಸ್ಥಾನವು ೧೯ ನೇ ಶತಮಾನದ ಪ್ರಾರಂಭದಲ್ಲಿ ಮತ್ತು ನಂತರದ ದಶಕಗಳಲ್ಲಿ ಭಾರತದ ಇತರೇ ದೇಶಿಯ ಸಂಸ್ಥಾನಗಳಿಗೆ ಹೋಲಿಸಿದರೆ ಹಲವಾರು ವಿಧದಲ್ಲಿ 'ಮಾದರಿ ಮೈಸೂರು' ಎಂದೇ ಕರೆಯಲ್ಪಡುತ್ತಿತ್ತು. ಸುಮಾರು ಐವತ್ತು ವರ್ಷಗಳ (೧೮೩೧-೧೮೮೧) ಬ್ರಿಟೀಷ್ ಕಮಿಶನರ್‌ಗಳ ನೇರ ಆಡಳಿತದಲ್ಲಿ ಸಂಸ್ಥಾನದ ಆರ್ಥಿಕ ಅಭಿವೃದ್ಧಿಗೆ ಸಹಾಯಕವಾಗುವಂತೆ ಹಲವಾರು ಯೋಜನೆಗಳನ್ನು ಹಮ್ಮಿಕೊಳ್ಳಲಾಯಿತು. ನಂತರ ಅಧಿಕಾರಕ್ಕೆ ಬಂದ ಮೈಸೂರಿನ ಅರಸರು ಮತ್ತು ದಿವಾನರುಗಳು ಅನುಸರಿಸಿದ ಉದಾರ ಆರ್ಥಿಕನೀತಿ, ಮುಂದಾಲೋಚನೆ, ಬ್ರಿಟೀಷ್ ಪ್ರಾಂತ್ಯಗಳಲ್ಲಿ ಜಾರಿಗೊಳಿಸಲಾದ ಉದಾರ ವ್ಯಾಪಾರ ವಾಣಿಜ್ಯ ನೀತಿ, ಹಣಕಾಸು ಸಂಸ್ಥೆಗಳ ಪ್ರಾರಂಭ, ಕೈಗಾರೀಕರಣ, ಸಂಚಾರ–ಸಂಪರ್ಕ ಸಾಧನಗಳ ಹೆಚ್ಚಳ ಮುಂತಾದವುಗಳು ಮಾದರಿ ಮೈಸೂರು ಇನ್ನೂ ಮುಂದುವರೆಯಲು ಪೂರಕ ಅಂಶಗಳಾದವು.

## ಬರಗಾಲದ ಬವಣೆ

೧೮೭೬–೭೮ ರಲ್ಲಿ ದೇಶದಲ್ಲೆಲ್ಲಾ ವ್ಯಾಪಕವಾಗಿ ಕಾಣಿಸಿಕೊಂಡ ತೀವ್ರ ಬರಗಾಲ. (ಡವಗಿ ಬರ) ದೇಶದ ಇತರೇ ಭಾಗಗಳಂತೆ ಮೈಸೂರು ಸಂಸ್ಥಾನದ ಆರ್ಥಿಕ ಪರಿಸ್ಥಿತಿಯನ್ನು ಬಹು ಕಷ್ಟಕರವಾಗಿ ಮಾಡಿತ್ತು. ಅದು ರಂಗಾಚಾರ್ಲು, ಅವರು ದಿವಾನರಾಗಿದ್ದ ಕಾಲ. ರಂಗಾಚಾರ್ಲು ಅವರು ೧೮೮೩ ರಲ್ಲಿ ತೀರಿಕೊಂಡ ನಂತರ ಶೇಷಾದ್ರಿಅಯ್ಯರ್ ತಮ್ಮ ಆಡಳಿತ ಕಾಲದಲ್ಲಿ ೧೮೮೩ ರಿಂದ ೧೯೦೧ ರವರೆಗೆ ಅನೇಕ ಆರ್ಥಿಕ ಸುಧಾರಣೆಗಳನ್ನು ಜಾರಿಯಲ್ಲಿ ತಂದರು. ಅವುಗಳಲ್ಲಿ ಬಹು ಮುಖ್ಯವಾದವುಗಳೆಂದರೆ ಕೋಲಾರದ ಚಿನ್ನದ ಗಣಿ ಉದ್ಯಮ (೧೮೮೬), ಕಾಫೀ ತೋಟದ ಉದ್ಯಮ, ತಾಲ್ಲೂಕು ಅಭಿವೃದ್ಧಿ ಮಂಡಳಿಗಳ ರಚನೆ (೧೮೮೪), ವ್ಯವಸಾಯ ಬ್ಯಾಂಕುಗಳು (೧೮೯೪).

## ಬಡ ರೈತರಿಗೆ ಆರ್ಥಿಕ ನೆರವು

ಅಂದಿನ ಬಡರೈತರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಿ ವ್ಯವಸಾಯ ಅಭಿವೃದ್ಧಿಗೆ ಹೊಸ ಚಾಲನೆಯನ್ನು ನೀಡಲು ಅಂದಿನ ಸರ್ಕಾರ ಅನೇಕ ಕಾನೂನುಗಳನ್ನು ಜಾರಿಯಲ್ಲಿ ತಂದಿತು. ಅವುಗಳಲ್ಲಿ ತಕಾವಿಸಾಲ ಕಾನೂನು (೧೮೭೬), ಡೆಕ್ಕನ್ ರೈತರ ಪರಿಹಾರ ಕಾನೂನು (೧೮೭೯), ಭೂಸುಧಾರಣಾ ಸಾಲ ಕಾನೂನು (೧೮೮೩) ರೈತರ ಸಾಲ ಕಾನೂನು (೧೮೮೪) ಮುಂತಾದವುಗಳು ಮುಖ್ಯವಾದವುಗಳು. ಆದರೆ, ಈ ಯಾವ ಕಾನೂನುಗಳೂ ರೈತರಿಗೆ ನಿರೀಕ್ಷಿತ ಪ್ರತಿಫಲವನ್ನು ನೀಡಲಿಲ್ಲ. ಈ ದಿಶೆಯಲ್ಲಿ ಭಾರತದ ವಿವಿಧ ಭಾಗಗಳ ರೈತರ ಸ್ಥಿತಿಗತಿಗಳನ್ನು ಸುಧಾರಿಸಲು ಪ್ರಯತ್ನಗಳು ನಡೆದವು.

* ಸಂಪಾದಕರು, ಕರ್ನಾಟಕ ಗ್ಯಾಸೆಟಿಯರ್, ಕಾವೇರಿ ಭವನ, ಬೆಂಗಳೂರು-೯.

ಮಹಾರಾಷ್ಟ್ರದ ಪುರಂದರೆಯಲ್ಲಿ ನ್ಯಾ|| ರಾನಡೆ ಮತ್ತು ವಿಲಿಯಂ ವೆಡರ್ ಬರ್ನ್ ಅವರಿಂದ ವ್ಯವಸಾಯ ಬ್ಯಾಂಕುಗಳು ಪ್ರಾರಂಭವಾದವು. ಇದನ್ನು ಮನಗಂಡು ೧೮೯೪ ರಲ್ಲಿ ವ್ಯವಸಾಯ ಬ್ಯಾಂಕುಗಳನ್ನು ಮೈಸೂರು ಸರ್ಕಾರವು ಪ್ರಾರಂಭಿಸಿತು.

## ವ್ಯವಸಾಯ ಬ್ಯಾಂಕುಗಳು

ವ್ಯವಸಾಯಗಾರರಿಗೆ ಅವರ ಆರ್ಥಿಕ ಸ್ಥಿತಿಗತಿಗಳನ್ನು ಸುಧಾರಿಸಲು ಸರ್ಕಾರ ಅನೇಕ ಕಾನೂಗಳನ್ನು ಜಾರಿಯಲ್ಲಿ ತಂದಿದ್ದರೂ, ರೈತರೇ ಸದಸ್ಯರಾಗಿರುವ ಅವರಿಂದಲೇ ನಡೆಸಲ್ಪಡುವ ಹಣಕಾಸಿನ ಸಂಸ್ಥೆಗಳು ದೇಶದಲ್ಲಿ ವ್ಯಾಪಕವಾಗಿ ಮೂಡಿ ಬಂದದ್ದು ೧೯೦೪ ರ ಸಹಕಾರಿ ಕಾನೂನಿನ ನಂತರವೇ. ಆದರೆ ಮೈಸೂರು ಸಂಸ್ಥಾನದಲ್ಲಿ ಸಹಕಾರಿ ಕಾನೂನಿನ ಪ್ರಾರಂಭದ ಹತ್ತು ವರ್ಷ ಮೊದಲೇ ಅಂದರೆ ೧೮೯೪ ರಲ್ಲಿ ಸುಸಂಘಟಿತ, ವ್ಯವಸಾಯ ಬ್ಯಾಂಕುಗಳನ್ನು ಸಣ್ಣ ಹಿಡುವಳಿದಾರರ ಕಷ್ಟ ನಿವಾರಣೆಗೆ ಪ್ರಾರಂಭಿಸಲಾಯಿತು. ಈ ಬ್ಯಾಂಕುಗಳ ವೈಶಿಷ್ಟ್ಯವೆಂದರೆ ಇವುಗಳು ರಚನೆಯಲ್ಲಿ ಅಂದಿನ (೧೮೬೦) ಕಂಪನಿ ಕಾನೂನನ್ನು, ಆಡಳಿತ ನಿರ್ವಹಣೆ ಮತ್ತು ಮೂಲೋದ್ದೇಶಗಳಲ್ಲಿ ಸಂಪೂರ್ಣವಾಗಿ ಸಹಕಾರಿ ತತ್ವದ ಹಲವಾರು ಉದ್ದೇಶಗಳನ್ನು ಮೈಗೂಡಿಸಿಕೊಂಡು ಕಾರ್ಯ ನಿರ್ವಹಿಸುತ್ತಿದ್ದವು. ಕೂಡು ಬಂಡವಾಳ ಮತ್ತು ಸಹಕಾರಿ ಸಂಸ್ಥೆಗಳ ಒಂದು ಸಮ್ಮಿಳನವೇ ಈ ಸಂಸ್ಥೆಗಳಾಗಿದ್ದವು ಎಂಬುದು ಗಮನಾರ್ಹ. ಸಹಕಾರಿ ಕಾನೂನು ಇನ್ನೂ ಜಾರಿಯಲ್ಲಿ ಬರದೇ ಇದ್ದುದರಿಂದ ಮತ್ತು ಹಣಕಾಸು ಸಂಸ್ಥೆಗಳನ್ನು ಭದ್ರತೆಯ ದೃಷ್ಟಿಯಿಂದ ಕಂಪನಿಯ ಕಾನೂನಿನ ಅನ್ವಯ ರಚಿಸಲೇಬೇಕಾಗಿದ್ದರಿಂದ ಈ ಎರಡೂ ತತ್ವಗಳನ್ನು ಇವುಗಳ ರಚನೆಯಲ್ಲಿ ಮೈಗೂಡಿಸಿಕೊಂಡಿರುವುದು ಗಮನಾರ್ಹ.

ಈ ವ್ಯವಸಾಯ ಬ್ಯಾಂಕುಗಳ ಮುಖ್ಯ ಉದ್ದೇಶ ವ್ಯವಸಾಯಗಾರರು ತಾವು ಈ ಹಿಂದೆ ಮಾಡಿದ್ದ ದುಬಾರಿ ಬಡ್ಡಿಯ ಹಳೆಯ ಸಾಲವನ್ನು ತೀರಿಸಲು ಸಹಾಯ ಮಾಡುವದು ಮತ್ತು ರೈತರಿಗೆ ದುಬಾರಿ (ಸುಲಿಗೆ) ಬಡ್ಡಿಯಿಂದ (ದೊಡ್ಡ ರೈತರು ಜಮೀನುದಾರರಿಂದ) ದೂರ ಇಡುವದು, ವ್ಯವಸಾಯ ಅಭಿವೃದ್ಧಿಗೆ ಪೂರಕವಾಗಿ ಹೊಸ ಸಾಲ ನೀಡುವುದು ಮುಂತಾದವುಗಳು. ಈ ಸಂಸ್ಥೆಗಳಿಗೆ ಸದಸ್ಯರ ಯಾವುದೇ ಷೇರು ಬಂಡವಾಳ ಇರಲಿಲ್ಲ. ಇವುಗಳು ಪರಸ್ಪರ ನಂಬುಗೆಗೆ ಪಾತ್ರರಾದ ಸ್ವಂತ ಜಮೀನು ಹೊಂದಿದ್ದ, ಪರಸ್ಪರ ಒಪ್ಪಂದದಿಂದ ಕೂಡಿದ್ದ ರೈತರ ಒಡಂಬಡಿಕೆಯ ಸಂಸ್ಥೆಗಳಾಗಿದ್ದವು. ಇಂತಹ ಸಂಸ್ಥೆಗಳು ನಷ್ಟ ಅನುಭವಿಸಿದಾಗ ಸದಸ್ಯರೇ ಪರಸ್ಪರ ಒಪ್ಪಿಕೊಂಡಂತೆ ಸದರಿ ನಷ್ಟವನ್ನು ಭರಿಸಬೇಕಾಗಿತ್ತು. ಇವುಗಳು 'ಕಂಪನೀಸ್ ಲಿಮಿಟೆಡ್ ಬಯ್ ಗ್ಯಾರಂಟಿ' ಹೊಣೆಗಾರಿಕೆ ತತ್ವದ ಮೇಲೆ ರಚನೆಗೊಂಡವುಗಳಾಗಿದ್ದವು. ಸರ್ಕಾರವು ಈ ಸಂಸ್ಥೆಗಳಿಗೆ ಠೇವಣಿ ಮತ್ತು ಸಾಲದ ರೂಪದಲ್ಲಿ ಹಣಕಾಸಿನ ನೆರವನ್ನು ನೀಡುತ್ತಿತ್ತು. ಸಾಲವನ್ನು ಸುಲಭ ಕಂತುಗಳ ಮೂಲಕ ತೀರಿಸಲು ಸಹಾಯಕವಾಗುವಂತೆ ಜಮೀನಿನ ಆಧಾರದ ಮೇಲೆ ನೀಡಲಾಗುತ್ತಿತ್ತು. ಈ ಸಂಸ್ಥೆಗಳಿಗೆ ಸರ್ಕಾರವು ತಾನು ನೀಡುವ ಸಾಲಕ್ಕೆ ಶೇ. ೪ ರಂತೆ ಬಡ್ಡಿಯನ್ನು ವಿಧಿಸಿದರೆ ಈ ಸಂಸ್ಥೆಗಳು ಸದಸ್ಯರಿಗೆ ಶೇ. ೫ ರಿಂದ ೬ ದರದಲ್ಲಿ ಸಾಲ ನೀಡುತ್ತಿದ್ದವು. ಈ ಸಂಸ್ಥೆಗಳು ತಮ್ಮ ಲಾಭಾಂಶದಲ್ಲಿ ಅಲ್ಪಭಾಗವನ್ನು ಕಾರ್ಯನಿರ್ವಹಣೆ ವೆಚ್ಚವಾಗಿ ಉಪಯೋಗಿಸಿ ಹೆಚ್ಚಿನ ಭಾಗವನ್ನು ಕಾಯ್ದು ನಿಧಿಗಳಾಗಿ ಸೇರಿಸಿ ಅದರೊಂದಿಗೆ ಸಾರ್ವಜನಿಕರ ಠೇವಣಿಗಳನ್ನು ಸಂಗ್ರಹಿಸಿ ದುಡಿಯುವ ಬಂಡವಾಳವನ್ನಾಗಿ ಉಪಯೋಗಿಸುವಂತೆ ಈ ಸಂಸ್ಥೆಗಳ ಹಣಕಾಸಿನ ನಿರ್ವಹಣಾ ವ್ಯವಸ್ಥೆ ಇತ್ತು. ಈ ಬ್ಯಾಂಕುಗಳು ವಿಧಿಸುತ್ತಿದ್ದ ಬಡ್ಡಿದರ ಇತರೇ ಮೂಲದ ಸಾಲಗಳ ಬಡ್ಡಿಗಿಂತ ಸಾಮಾನ್ಯವಾಗಿ ಕಡಿಮೆ ಇರುತ್ತಿತ್ತು. ಸಾಲಗಳನ್ನು ನಿರ್ದಿಷ್ಟಪಡಿಸಿದ ವ್ಯವಸಾಯ ಅಭಿವೃದ್ಧಿ ಕಾರ್ಯಗಳಿಗೆ ಮಾತ್ರ ನೀಡಲಾಗುತ್ತಿತ್ತು.

ಈ ಸಂಸ್ಥೆಗಳ ಆಡಳಿತವು ಸದಸ್ಯರಿಂದ ಚುನಾಯಿತರಾದ ಆಡಳಿತ ಮಂಡಳಿಯಿಂದ ನಡೆಸಲಾಗುತ್ತಿತ್ತು. ಈ ರೀತಿಯ ಮೊದಲನೆಯ ಬ್ಯಾಂಕು ೧೮೯೪ ರಲ್ಲಿ ೧೭ ಜನ ಸದಸ್ಯರನ್ನೊಳಗೊಂಡು ಶ್ರೀರಂಗಪಟ್ಟಣ ತಾಲ್ಲೂಕಿನ ಪಾಲಹಳ್ಳಿಯಲ್ಲಿ ಪ್ರಾರಂಭವಾಯಿತು, ಎರಡನೆಯ ಬ್ಯಾಂಕು ೫೩ ಜನ ಸದಸ್ಯರನ್ನು ಒಳಗೊಂಡು ನಂಜನಗೂಡಿನಲ್ಲಿ ೧೮೯೭ ರಲ್ಲಿ ಆರಂಭವಾಯಿತು. ಮುಂದಿನ ಎರಡು ವರ್ಷಗಳಲ್ಲಿ (೧೮೯೯), ಶ್ರೀರಂಗಪಟ್ಟಣ

ಮತ್ತು ಸರಗೂರುಗಳಲ್ಲಿ (ಹೆಗ್ಗಡದೇವನ ಕೋಟೆ ತಾಲ್ಲೂಕು) ಇಂತಹ ಸಂಸ್ಥೆಗಳು ಪ್ರಾರಂಭವಾದವು. ಸರ್ಕಾರದ ಈ ಯೋಜನೆಯಂತೆ ೧೯೦೪-೧೯೦೮ ರ ೫ ವರ್ಷಗಳ ಅವಧಿಯಲ್ಲಿ ಈ ಬ್ಯಾಂಕುಗಳ ಸಂಖ್ಯೆ ೫೯ಕ್ಕೆ ಹೆಚ್ಚಳಗೊಂಡು ಅವುಗಳ ಸದಸ್ಯರ ಸಂಖ್ಯೆ ೩೦೦೦ ಕ್ಕೆ ಹೆಚ್ಚಳಗೊಂಡಿತು. ಈ ಅವಧಿಯಲ್ಲಿ ಸರ್ಕಾರವು ಈ ಸಂಸ್ಥೆಗಳಿಗೆ ಸುಮಾರು ೮ ಲಕ್ಷ ರೂ. ಹಣವನ್ನು ಮುಂಗಡವಾಗಿ ನೀಡಿತ್ತು. ಸರ್ಕಾರವೇ ನಡೆಸಿದ ಸಮೀಕ್ಷೆಯಂತೆ ೧೯೦೧ ಸುಮಾರಿಗೆ ಅಂದಿನ ಮೈಸೂರು ರಾಜ್ಯದಲ್ಲಿ ೬೪ ಇಂತಹ ವ್ಯವಸಾಯ ಬ್ಯಾಂಕುಗಳು ಇದ್ದುದಾಗಿ ಕಂಡುಬರುವುದು. ಆದರೆ ಈ ಸಂಸ್ಥೆಗಳು ದೀರ್ಘಕಾಲ ಬಾಳಲಿಲ್ಲ. ಇವುಗಳ ಬಳಕೆಗಿಂತ ದುರುಪಯೋಗ ಹೆಚ್ಚಾಗಿ ಕೇವಲ ೨೫ ವರ್ಷಗಳ ನಂತರ ಅವಸಾನ ಹೊಂದಿದವು.

### ಅವಸಾನದತ್ತ ಬ್ಯಾಂಕುಗಳು

ಸರ್ಕಾರವೇ ವರದಿ ಮಾಡಿದಂತೆ ಈ ಬ್ಯಾಂಕುಗಳು ನಿರೀಕ್ಷಿಸಿದ ಪ್ರಗತಿಯನ್ನು ಸಾಧಿಸದೇ ಇದ್ದುದರಿಂದ ೧೯೧೭ ರ ಸುಮಾರಿಗೆ ಈ ಎಲ್ಲಾ ಬ್ಯಾಂಕುಗಳು ಸ್ಥಗಿತಗೊಂಡವು. ಇವುಗಳು ಸ್ಥಗಿತಗೊಳ್ಳಲು ಸಹಾಯಕವಾದ ಹಲವಾರು ಕಾರಣಗಳಲ್ಲಿ ಬಹು ಮುಖ್ಯವಾದವುಗಳು :-ಸಾಲದ ಮೇಲಿನ ಅತೀ ಕಡಿಮೆ ಬಡ್ಡಿದರ, ದೊಡ್ಡ ಭೂ ಹಿಡುವಳಿದಾರರಿಂದ ಸಾಲದ ದುರುಪಯೋಗ ಅಂದರೆ ಕಡಿಮೆ ಬಡ್ಡಿಯ ಸಾಲವನ್ನು ಪಡೆದು ಅದನ್ನು ಹೊರಗಿನ ಹೆಚ್ಚಿನ ಬಡ್ಡಿಗೆ ವಿನಿಯೋಗಿಸಿ ತಾವು ಬ್ಯಾಂಕಿಗೆ ಸುಸ್ತಿದಾರರು ಆದದ್ದು, ಬಡರೈತರಿಗೆ ಸಹಾಯ ಮಾಡುವ ಆತುರದಲ್ಲಿ ಸರ್ಕಾರವು ಧಾರಾಳವಾಗಿ ಇವುಗಳಿಗೆ ಹಣಕಾಸಿನ ನೆರವು ನೀಡಿದ್ದು, ಸದರಿ ಸಂಸ್ಥೆಗಳ ಮೇಲೆ ಸರ್ಕಾರದ ಹಿಡಿತ ಮತ್ತು ಪರಿಣಾಮಕಾರಿ ಮೇಲ್ವಿಚಾರಣೆ ಇಲ್ಲದೇ ಹೋದದ್ದು ಮುಖ್ಯವಾದವುಗಳು ಎಂದು ತಿಳಿದುಬರುವುದು.

### ವಾಣಿಜ್ಯ ಬ್ಯಾಂಕುಗಳು

ನಮ್ಮ ರಾಜ್ಯದಲ್ಲಿ ವಾಣಿಜ್ಯ ಬ್ಯಾಂಕಿಂಗ್ ಉದ್ಯಮಕ್ಕೆ ಸುಮಾರು ೧೩೦ ವರ್ಷ ದೀರ್ಘ ಚರಿತ್ರೆ ಉಂಟು, ಇಂದಿನ ಕರ್ನಾಟಕ ರಾಜ್ಯದ ವ್ಯಾಪ್ತಿಯನ್ನು ಅನುಸರಿಸಿ ಹೇಳುವುದಾದರೆ ೧೮೬೩ ರಲ್ಲಿ ಧಾರವಾಡದಲ್ಲಿ ಪ್ರಾರಂಭಿಸಲಾದ ಬೊಂಬಾಯಿ ಪ್ರೆಸಿಡೆನ್ಸಿ ಬ್ಯಾಂಕಿನ (೧೮೪೦) ಶಾಖೆಯೇ ರಾಜ್ಯದಲ್ಲಿ ಮೊದಲನೆಯದು. ಆದರೆ ಅದು ಅಲ್ಪಾವಧಿಯದಾಗಿತ್ತು. ಆ ಶಾಖೆಯನ್ನು ೧೮೭೮ ರಲ್ಲಿ ಮುಚ್ಚಲಾಯಿತು. ಬೊಂಬಾಯಿ ಕರ್ನಾಟಕದ ಹತ್ತಿಯ ವ್ಯಾಪಾರಿ ಕಂಪನಿಗಳಿಗೆ ಹುಂಡಿಯ ಮೂಲಕ ವ್ಯವಹರಿಸಲು ನೆರವಾಗಲು ಈ ಶಾಖೆಯನ್ನು ಜಿಲ್ಲಾ ಕೇಂದ್ರ ಧಾರವಾಡದಲ್ಲಿ ತೆರೆಯಲಾಗಿತ್ತು. ಹತ್ತಿಯ ವ್ಯಾಪಾರದಲ್ಲಿ ಆದ ಹಿನ್ನಡೆಯಿಂದ ಸದರಿ ಶಾಖೆಯನ್ನು ಮುಚ್ಚಲಾಯಿತು. ಮತ್ತು ಅದರ ವೈವಾಟನ್ನು ಹುಬ್ಬಳ್ಳಿ ಶಾಖೆಗೆ (೧೮೭೦) ಸ್ಥಳಾಂತರಿಸಲಾಯಿತು. ಮದ್ರಾಸ್ ಪ್ರೆಸಿಡೆನ್ಸಿ ಬ್ಯಾಂಕಿನಿಂದ ೧೮೬೪ ರಲ್ಲಿ ಬೆಂಗಳೂರಿನ ಶಾಖೆಯನ್ನು (ದಂಡು ಪ್ರದೇಶ) ೧೮೬೮ ರಲ್ಲಿ ಮಂಗಳೂರು ಶಾಖೆಯನ್ನು ತೆರೆಯಲಾಯಿತು.

### ಮೈಸೂರು ನಗರದ ಪ್ರಥಮ ಬ್ಯಾಂಕ್

ಮೈಸೂರು ನಗರದಲ್ಲಿ ೧೮೭೪ ರಲ್ಲಿ ಖಾಸಗಿ ವಲಯದ ಪ್ರಥಮ ವಾಣಿಜ್ಯ ಬ್ಯಾಂಕುಗಳು ಮೂಡಿಬಂದವು ಅವುಗಳೆಂದರೆ : ರಾಜಧಾನಿ ಬ್ಯಾಂಕ್ ಮತ್ತು ಟೌನ್‌ಬ್ಯಾಂಕ್ ಇವುಗಳು ಅನುಕ್ರಮವಾಗಿ ರೂ. ೨೦ ಸಾವಿರ ಮತ್ತು. ಒಂದು ಲಕ್ಷ ರೂ. ಬಂಡವಾಳದೊಂದಿಗೆ ಪರಿಮಿತ ಹೊಣೆಗಾರಿಕೆಯೊಂದಿಗೆ ಪ್ರಾರಂಭಿಸಲ್ಪಟ್ಟವು. ಆದರೆ ಇವುಗಳು ೧೯೧೩ ರ ನಂತರ ಮುಂದುವರೆದಂತೆ ಕಾಣುವುದಿಲ್ಲ. ಮೈಸೂರು ನಗರವು ರಾಜಧಾನಿಯಾಗಿದ್ದರೂ ವಾಣಿಜ್ಯ ವ್ಯವಹಾರದಲ್ಲಿ ಬೆಂಗಳೂರಿನಷ್ಟು ಮುಂದುವರೆದಿರಲಿಲ್ಲ. ೧೮೯೮ ರಲ್ಲಿ ಪ್ರಾರಂಭವಾದ ಬೆಂಗಳೂರಿನ ದಂಡು ಪ್ರದೇಶ ಮತ್ತು ೧೮೩೧ ರ ನಂತರ ಮೈಸೂರಿನಿಂದ ಬೆಂಗಳೂರಿಗೆ ವರ್ಗಾಯಿಸಲಾದ ಹಲವಾರು ಆಡಳಿತ ಕಛೇರಿಗಳು, ಬೆಳೆಯುತ್ತಿರುವ ನಗರೀಕರಣ ಮತ್ತು ಕೈಗಾರಿಕೆ, ವಾಣಿಜ್ಯ ವೈವಾಟುಗಳು ಬೆಂಗಳೂರಿನ ಬೃಹತ್ ಬೆಳವಣಿಗೆಗೆ ಕಾರಣವಾದವು. ಈ ಕಾರಣಗಳಿಂದ ಮೈಸೂರಿಗಿಂತ ಸುಮಾರು ಆರು ವರ್ಷ ಮೊದಲೇ ಅಂದರೆ ೧೮೬೮ ರಲ್ಲಿ ಬೆಂಗಳೂರಿನಲ್ಲಿ ಪ್ರಪ್ರಥಮವಾಗಿ ಖಾಸಗಿ ವಲಯದ ಬ್ಯಾಂಕುಗಳು ಮೂಡಿಬರಲು ಅನುವಾಯಿತು.

## ಜಿಲ್ಲೆಯ ಪ್ರಾರಂಭದ ಬ್ಯಾಂಕುಗಳು

ಮೈಸೂರು ಜಿಲ್ಲೆಗೆ ಸೀಮಿತವಾದಂತೆ ಹೇಳುವುದಾದರೆ ೧೮೮೫ ರಲ್ಲಿ ನಂಜನಗೂಡಿನಲ್ಲಿ ಪ್ರಾರಂಭವಾದ ಶ್ರೀಕಂಠೇಶ್ವರಸ್ವಾಮಿ ಬ್ಯಾಂಕ್ (ಲಿ) ಅತೀ ಮಹತ್ವದ್ದಾಗಿದೆ. ಮೈಸೂರು ಜಿಲ್ಲೆ ಮತ್ತು ಹಳೇ ಮೈಸೂರು ಸಂಸ್ಥಾನದಲ್ಲಿ ಪ್ರಾರಂಭಿಸಲ್ಪಟ್ಟು ಸುದೀರ್ಘ ಸೇವೆ ಸಲ್ಲಿಸಿದ ಬ್ಯಾಂಕಿನ ಹಿರಿಮೆ ಇದರದು. ಸದರಿ ಬ್ಯಾಂಕು ಸುಮಾರು ೮೦ ವರ್ಷಗಳ ಸುದೀರ್ಘ ಸೇವೆಯ ನಂತರ ೧೯೬೫ ರಲ್ಲಿ ಭಾರತೀಯ ರಿಜರ್ವ್ ಬ್ಯಾಂಕು ಲೈಸೆನ್ಸ್ ಮುಂದುವರೆಸದ ಕಾರಣ ಮುಚ್ಚಬೇಕಾಯಿತು. ಮೈಸೂರು ಜಿಲ್ಲೆಯಲ್ಲಿ ೧೮೮೪ ರಿಂದ ೧೯೦೮ ರ ಸುಮಾರು ಎರಡೂವರೆ ದಶಕಗಳ ಕಾಲಮಿತಿಯಲ್ಲಿ ಸುಮಾರು ೧೭ ಬ್ಯಾಂಕಿಂಗ್ ಕಂಪನಿಗಳು ಮೂಡಿ ಬಂದು ತದನಂತರ ಬೇರೆ ಬೇರೆ ಅವಧಿಯಲ್ಲಿ ಅವಸಾನ ಹೊಂದಿರುವುದಾಗಿ ಕಂಡುಬರುವುದು. ಅವುಗಳ ವಿವರ ಈ ರೀತಿ ಇರುವುದು :– ಶ್ರೀರಂಗಪಟ್ಟಣ ಟೌನ್ ಬ್ಯಾಂಕ್ (೧೮೯೧), ಮೈಸೂರು ನ್ಯಾಷನಲ್ ಬ್ಯಾಂಕ್ (೧೮೯೧), ಚಾಮರಾಜೇಶ್ವರ ಬ್ಯಾಂಕ್, ಚಾಮರಾಜನಗರ (೧೮೯೩) ನಂಜನಗೂಡು ಶ್ರೀನಿವಾಸ ಬ್ಯಾಂಕ್ (೧೮೯೩), ಶ್ರೀರಂಗನಾಥ ಬ್ಯಾಂಕ್, ಚಾಮರಾಜನಗರ (೧೮೯೪), ಲಕ್ಷ್ಮೀವಿಲಾಸ ಬ್ಯಾಂಕ್ ಮಂಡ್ಯ (೧೮೯೪), ವಿಜಯನಾರಾಯಣಸ್ವಾಮಿ ಬ್ಯಾಂಕ್, ಗುಂಡ್ಲುಪೇಟೆ (೧೮೯೫), ಸರ್ವಜನವೃದ್ಧಿನಿ ಕಂ. ಮೈಸೂರು (೧೮೯೫) ಶ್ರೀನಿವಾಸಸ್ವಾಮಿ ಬ್ಯಾಂಕ್ ಚಾಮರಾಜನಗರ (೧೮೯೬). ಹುಣಸೂರು ಬ್ಯಾಂಕ್ (೧೮೯೭), ಶ್ರೀನಿವಾಸ ಸ್ವಾಮಿ ಬ್ಯಾಂಕ್, ಗುಂಡ್ಲುಪೇಟೆ (೧೮೯೭), ರಾಜರಾಜೇಶ್ವರಿ ಬ್ಯಾಂಕ್, ಗುಂಡ್ಲುಪೇಟೆ (೧೯೦೦), ಶ್ರೀ ಹಿಮವತ್ ಗೋಪಾಲಕೃಷ್ಣಸ್ವಾಮಿ ಬ್ಯಾಂಕ್, ಗುಂಡ್ಲುಪೇಟೆ (೧೯೦೧) ಮತ್ತು ನಂಜನಗೂಡು ನಂಜುಂಡೇಶ್ವರ ಬ್ಯಾಂಕು (೧೯೦೮) ಮುಂತಾದವುಗಳು.

## ಸಹಕಾರಿ ವಲಯದ ಬ್ಯಾಂಕಿಂಗ್

ಭಾರತದಲ್ಲಿ ಪ್ರಪ್ರಥಮವಾಗಿ ಸಹಕಾರಿ ಕಾನೂನು ೧೯೦೪ ರಲ್ಲಿ ರೂಪಿಸಲಾಯಿತು. ಅಂದಿನ ಕಂಪನಿ ಕಾನೂನು (೧೮೬೦) ಭಾರತದಲ್ಲಿ 'ರೈಫಿಸಿಯನ್' ಮಾದರಿಯ ಸಂಘಗಳನ್ನು ಪ್ರಾರಂಭಿಸಲು ಸೂಕ್ತವಾಗಿರಲಿಲ್ಲ. ಆದ್ದರಿಂದ ಸಹಕಾರಿ ಸಂಘಗಳನ್ನು ರಚಿಸಲು ಪ್ರತ್ಯೇಕವಾದ ಕಾನೂನು ರಚಿಸಲು ೧೯೦೧ ರಲ್ಲಿ ಎಡ್‌ವರ್ಡ್ ಲಾ ಎಂಬವರ ಹಿರಿತನದಲ್ಲಿ ಲಾರ್ಡ್ ಕರ್ಜನ್ ಅವರು ಒಂದು ಆಯೋಗವನ್ನು ರಚಿಸಿದರು. ಅದರ ಅನ್ವಯ ೧೯೦೪ ರಲ್ಲಿ ಸಹಕಾರಿ ಕಾನೂನನ್ನು ಪರಿಮಿತ (ಲಿಮಿಟೆಡ್) ಹೊಣೆಗಾರಿಕೆಯೊಂದಿಗೆ ಜಾರಿಗೊಳಿಸಲಾಯಿತು. ಅಂದಿನ ಮೈಸೂರು ರಾಜ್ಯವು ೧೯೦೫ ರಲ್ಲಿ ತನ್ನದೇ ಆದ ಸ್ವತಂತ್ರ 'ಮೈಸೂರು ಸಹಕಾರಿ ಸಂಘಗಳ ರೆಗ್ಯುಲೇಷನ್ ಎರಡನ್ನು ರಚಿಸಿ ಬಳಕೆಯಲ್ಲಿ ತಂದಿತು.

ಮೈಸೂರಿನ ಸಹಕಾರಿ (ನಿಯಮಾವಳಿ) ಕಾನೂನು ೧೯೦೫, ಭಾರತದ ಸಹಕಾರಿ ೧೯೦೪ ರ ಕಾನೂನಿಗಿಂತ ಹಲವಾರು ವಿಧದಲ್ಲಿ ಭಿನ್ನವಾಗಿದ್ದು ಹೆಚ್ಚು ಪ್ರಗತಿಪರ ಧೋರಣೆಯಿಂದ ಕೂಡಿತ್ತು. ಭಾರತದ ಸಹಕಾರಿ ಕಾನೂನು ಪ್ರಾರಂಭದಲ್ಲೂ ಕೇವಲ ವ್ಯವಸಾಯ ಪತ್ತಿನ ಸಹಕಾರಿ ಸಂಘಗಳ ರಚನೆಗೆ ಒಲವನ್ನು ಹೊಂದಿದ್ದು ಮುಂದೆ ೧೯೧೨ ರಲ್ಲಿ ಸದರಿ ಕಾನೂನಿಗೆ ತಿದ್ದುಪಡಿ ಮಾಡುವ ಮೂಲಕ ವ್ಯವಸಾಯೇತರ ಮತ್ತು ಪತ್ತೇತರ ಸಹಕಾರಿ ಸಂಘ ರಚನೆಗೆ ಅವಕಾಶ ಮಾಡಿಕೊಡಲಾಯಿತು. ಸಾಮಾನ್ಯವಾಗಿ ನಗರ ಪ್ರದೇಶಗಳಲ್ಲಿ ಮಿತ ಹೊಣೆಗಾರಿಕೆ, ಹಳ್ಳಿಗಳಲ್ಲಿ ಅಪರಿಮಿತ ಹೊಣೆಗಾರಿಕೆ ನಿಯಮಗಳನ್ನು ಪಾಲಿಸಲಾಗುತ್ತಿತ್ತು. ಆದರೆ ಮೈಸೂರಿನ ೧೯೦೫ ರ ಕಾನೂನು ಪ್ರಾರಂಭದಲ್ಲಿಯೇ ಗ್ರಾಮ ಮತ್ತು ನಗರ ಪ್ರದೇಶಗಳ ಜನರ ಅವಶ್ಯಕತೆಗಳನ್ನು ಪೂರೈಸುವ ವಿವಿಧ ಬಗೆಯ ಸಹಕಾರಿ ಸಂಘ ಮೂಡಿ ಬರಲು ಅನುವು ಮಾಡಿಕೊಟ್ಟಿತಲ್ಲದೇ ಪ್ರಾರಂಭದಲ್ಲಿಯೇ ಇಲಾಖೆಯ ರಿಜಿಸ್ಟ್ರಾರ್' ಅವರನ್ನು ನಿಯಮಿಸಿ ಮುಂದೆ ೧೯೧೨ ರ ಸುಮಾರಿಗೆ ಈ ಹುದ್ದೆಯನ್ನು ಕಾಯಂಗೊಳಿಸಲಾಯಿತು. ಅಂದಿನ ಮೈಸೂರು ಸರ್ಕಾರವು ಈ ಸಂಸ್ಥೆಗಳ ಬೆಳವಣಿಗೆಯ ಬಗ್ಗೆ ಹೆಚ್ಚು ಕಾಳಜಿಯನ್ನು ವಹಿಸಿ ಯುರೋಪ್ ಮತ್ತು ಇಂಗ್ಲೆಂಡ್ ದೇಶದಲ್ಲಿನ ಸಹಕಾರಿ ಸಂಘಗಳನ್ನು ಕುರಿತು ವಿಶೇಷ ಅಧ್ಯಯನ ನಡೆಸಲು ವಿಶೇಷ ಅಧಿಕಾರಿ

ಯನ್ನು (ರಾಮರಾವ್) ಕಳುಹಿಸಿಕೊಟ್ಟಿತ್ತು. ಬೇರೆ ಭಾಗಗಳಲ್ಲಿ ಇದ್ದಂತೆ ಇಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದ ಸಹಕಾರಿ ಸಂಘಗಳ ಹೊಣೆಗಾರಿಕೆಯ ವ್ಯತ್ಯಾಸವನ್ನು ತೆಗೆದುಹಾಕಲಾಯಿತು. ಮೈಸೂರು ಪ್ರಾಂತ್ಯದಲ್ಲಿ ಎಲ್ಲಾ ಸಹಕಾರಿ ಸಂಘಗಳನ್ನು ಮಿತ ಹೊಣೆಗಾರಿಕೆ ತತ್ವದ ಮೇಲೆ ರಚಿಸಲಾಯಿತು ಇದರಿಂದ ಸಹಕಾರಿ ಚಳುವಳಿಯು ರಾಜ್ಯದಲ್ಲಿ ವ್ಯಾಪಾರವಾಗಿ ಬೆಳೆಯಲು ಸಹಾಯಕವಾಯಿತು. ಅಂತೆಯೇ ರಾಜ್ಯ ದಲ್ಲಿಯೇ ೧೯೦೯ ರಲ್ಲಿ ಮೊದಲಿಗೆ ಗೃಹ ನಿರ್ಮಾಣ ಸಹಕಾರಿ ಸಂಘ ಪಡೆದ ಕೀರ್ತಿ ಬೆಂಗಳೂರಿನದಾಗಿದೆ. ಬೇರೆ ಬೇರೆ ಪ್ರದೇಶಗಳಲ್ಲಿ ಪ್ರಥಮ ಮತ್ತು ಎರಡನೆಯ ಯುದ್ಧಾನಂತರ ಮೂಡಿಬಂದ ಗ್ರಾಹಕರ ಸಹಕಾರಿ ಸಂಘಗಳು ಇಲ್ಲಿ (ಬೆಂಗಳೂರು ಮೈಸೂರು, ಕೋಲಾರ) ಬಹು ಬೇಗನೇ ಪ್ರಾರಂಭಗೊಂಡವು. ಮೈಸೂರು ಕ್ರೆಡಿಟ್ ಸೊಸಾಯಿಟಿ (೧೯೦೬) ಸದ್ಯದ ಮೈಸೂರು ಸಹಕಾರಿ ಬ್ಯಾಂಕ್ ಮೈಸೂರು ಜಿಲ್ಲೆಯ ಮೊದಲನೆಯ ಸಹಕಾರಿ ಸಂಘ. ರಾಜ್ಯದಾದ್ಯಂತ ಇಂತಹ ಐದು ಸಹಕಾರಿ ಸಂಘಗಳು ೧೯೦೫–೦೬ ರಲ್ಲಿ ಮೂಡಿ ಬಂದವು. ಸಹಕಾರಿ ಚಳುವಳಿಯನ್ನು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ವ್ಯಾಪಕಗೊಳಿಸಲು ೧೯೧೦ ರ ಸುಮಾರಿಗೆ, ನಿವೃತ್ತ ಕಂದಾಯ ಇಲಾಖೆಯ ಅಧಿಕಾರಿ ಗಳನ್ನು ತಾಲ್ಲೂಕು ಮಟ್ಟದಲ್ಲಿ 'ಗೌರವ ಸೂಪರವಾಯಿ ಜರ್' ಎಂದು ನಿಯಮಿಸಿಕೊಂಡು ಅವರಿಗೆ ಪ್ರತಿದಿನದ ಸಹಕಾರಿ ವೆಚ್ಚಕ್ಕಾಗಿ ದಿನಕ್ಕೆ ಒಂದು ರೂ. ನಂತೆ 'ಪಾಕೇಟ್ ಮನಿ' ಕೊಡಲಾಗುತ್ತಿತ್ತು. ಈ ವ್ಯವಸ್ಥೆ ಗ್ರಾಮೀಣ ಭಾಗಗಳಲ್ಲೂ ಸಹಕಾರಿ ಸಂಘಗಳು ಮೂಡಿ ಬರಲು ಸಹಾಯಕವಾಯಿತು.

## ಫೆಡರಲ್ ಬ್ಯಾಂಕಿಂಗ್ ಯೂನಿಯನ್‌ಗಳು

೧೯೧೨–೧೩ ರ ಅವಧಿಯಲ್ಲಿ ಮೈಸೂರು ಪ್ರದೇಶದಲ್ಲಿ ಒಂದು ಅಥವಾ ಎರಡು ತಾಲ್ಲೂಕುಗಳಿಗೆ ಅನ್ವಯವಾಗುವಂತೆ ಚಿಕ್ಕ ಚಿಕ್ಕ ಬ್ಯಾಂಕಿಂಗ್ ಸಂಸ್ಥೆ ಗಳು ಪ್ರಾರಂಭಿಸಲ್ಪಟ್ಟವು. ಇವುಗಳ ಮೂಲ ಉದ್ದೇಶ ತಾಲ್ಲೂಕಿನ ಸಹಕಾರಿ ಸಂಸ್ಥೆಗಳಿಗೆ ಹಣಕಾಸಿನ ನೆರವು ಮತ್ತು ಮೇಲ್ವಿಚಾರಣೆ ಸಹ ಆಗಿತ್ತು. ಮುಂದೆ ಈ ಸಂಸ್ಥೆಗಳು ಸರಿಯಾಗಿ ಕೆಲಸ ಮಾಡದ್ದರಿಂದ ೧೯೨೧ರ ಸುಮಾರಿಗೆ ಇವುಗಳನ್ನು ವಿಲೀನಗೊಳಿಸಿ ಜಿಲ್ಲಾ ಸಹಕಾರಿ ಬ್ಯಾಂಕುಗಳು ಪ್ರಾರಂಭಿಸಲ್ಪಟ್ಟವು.

## ಗ್ರಾಮೀಣ ಉಳಿತಾಯ ಬ್ಯಾಂಕುಗಳು

ಗ್ರಾಮೀಣ ಪ್ರದೇಶದಲ್ಲಿ ಉಳಿತಾಯ ಮನೋ ಭಾವನೆಯನ್ನು ಪ್ರೇರೆಪಿಸಲು ಕನಿಷ್ಠ ಮೂರುನೂರು ಜನಸಂಖ್ಯೆ ಇರುವ ಗ್ರಾಮಗಳನ್ನು ಈ ಯೋಜನೆಯಲ್ಲಿ ಅಳವಡಿಸಿಕೊಳ್ಳಲಾಯಿತು. ಇದನ್ನು ಪ್ರಾರಂಭದಲ್ಲಿ ಪ್ರಾಯೋಗಿಕವಾಗಿ ೫ ಜಿಲ್ಲೆಗಳಲ್ಲಿ (ಮೈಸೂರು, ಹಾಸನ, ಚಿತ್ರದುರ್ಗ, ಕಡೂರು ಮತ್ತು ತುಮಕೂರು) ೧೯೧೫ ರ ಸುಮಾರಿಗೆ ಪ್ರಾರಂಭಿಸಲಾಯಿತು. ಈ ಯೋಜನೆಯು ಅಂದಿನ ಮೈಸೂರು ರಾಜ್ಯದ ಆರ್ಥಿಕ ಕಾರ್ಯದರ್ಶಿ ಚಕ್ರವರ್ತಿಯವರು ಪ್ರಾರಂಭಿಸಿ ದ್ದರಿಂದ ಅದಕ್ಕೆ 'ಚಕ್ರವರ್ತಿ ಯೋಜನೆ' ಎಂದು ಕರೆಯ ಲಾಯಿತು. ಈ ಯೋಜನೆಯ ಅನ್ವಯ ಪ್ರತಿ ವ್ಯಕ್ತಿ ಯಿಂದ ತಿಂಗಳಿಗೆ ಕನಿಷ್ಠ ಒಂದು ಆಣೆ ಇಂದ ಗರಿಷ್ಠ ಐದು ರೂ. ವರೆಗೆ ಸಂಗ್ರಹಿಸಬಹುದಾಗಿತ್ತು. ಸದರಿ ಹುಂಡಿರೂಪದ ಹಣದಲ್ಲಿ ತಿಂಗಳಿಗೆ ಕನಿಷ್ಠ ನಾಲ್ಕು ಆಣೆ ಇಂದ ಗರಿಷ್ಠ ಒಂದು ರೂಪಾಯಿವರೆಗೆ ಹಿಂದಕ್ಕೆ ಪಡೆಯಬಹುದಾಗಿತ್ತು. ಈ ಯೋಜನೆಯಲ್ಲಿ ತೊಡಗಿದ ಏಜೆಂಟರಿಗೆ ಸರ್ಕಾರವೇ ತನ್ನ ಹಣದಿಂದ ಕಮಿಶನ್ ಕೊಡುತ್ತಿತ್ತು. ಈ ವ್ಯವಸ್ಥೆಯ ಮೇಲ್ವಿಚಾರಣೆಯನ್ನು ದಕ್ಷತೆ ಇಂದ ತಾಲ್ಲೂಕು ಟ್ರೆಜರಿಗಳು (ಖಜಾನೆ) ನೋಡಿಕೊಳ್ಳುತ್ತಿದ್ದವು. ಈ ಯೋಜನೆಯನ್ನು ೧೯೨೨–೨೩ ರ ಸುಮಾರಿಗೆ ನಿಲ್ಲಿಸಲಾಯಿತು. ಸದರಿ ಯೋಜನೆಯ ಪ್ರಾರಂಭದಲ್ಲಿ ಗ್ರಾಮೀಣ ಪ್ರದೇಶದಲ್ಲೂ ಸಣ್ಣ ಉಳಿತಾಯ ಮನೋಭಾವನೆಯನ್ನು ಪ್ರೇರೇಪಿಸು ವಲ್ಲೂ ಸಹಾಯಕವಾಗಿತ್ತು.

## ಬ್ಯಾಂಕ್ ಆಫ್ ಮೈಸೂರು ೧೯೧೩

ಮೈಸೂರು ಕಂಪನಿ ಕಾನೂನು ೧೮೯೫ ರ ಅನ್ವಯ ೧೯೧೩ ರಲ್ಲಿ ಈ ವಾಣಿಜ್ಯ ಬ್ಯಾಂಕನ್ನು ಪ್ರಾರಂಭಿಸಲಾಯಿತು. ೧೯೧೨ ರಲ್ಲಿ ನಡೆದ ಆರ್ಥಿಕ ಅಭಿವೃದ್ಧಿ ಸಮ್ಮೇಳನ ಇದಕ್ಕೆ ಮೂಲ ಪ್ರೇರಣೆ ಎಂದು ಹೇಳಬಹುದು. ಈ ಬ್ಯಾಂಕಿನ ಪ್ರಾರಂಭಕ್ಕೆ ಮೂಲ ಪ್ರೇರಣೆ ಅಂದಿನ ದಿವಾನರಾಗಿದ್ದ ಸರ್ ಎಂ.

ವಿಶ್ವೇಶರಯ್ಯನವರು. ಪ್ರಾರಂಭದಲ್ಲಿ ಈ ಬ್ಯಾಂಕಿನಲ್ಲಿ ಮಹಾರಾಜರು ಷೇರು ಬಂಡವಾಳ ಮತ್ತು ಠೇವಣಿಗಳನ್ನು ಇಡುವ ಮೂಲಕ ಪ್ರೋತ್ಸಾಹಿಸಿದರು. ಅಲ್ಲದೇ ಪ್ರಾರಂಭದಲ್ಲಿ ಹಲವು ವರ್ಷಗಳವರೆಗೆ ಬ್ಯಾಂಕಿನ ನಿರ್ವಹಣಾ ವೆಚ್ಚವನ್ನು ಭರಿಸಲು ಅಂದಿನ ಸರ್ಕಾರವು ಒಪ್ಪಿಕೊಂಡಿತ್ತು. ಹೊರನಾಡಿನ ಅನೇಕ ಬ್ಯಾಂಕುಗಳು ಬರುವ ಪೂರ್ವದಲ್ಲಿ ಹಳೇ ಮೈಸೂರು ಪ್ರಾಂತ್ಯದಲ್ಲಿ ಸರ್ಕಾರಿ ಒಡೆತನದ ಈ ಬ್ಯಾಂಕು ಬಹಳ ಪ್ರಮುಖ ಬ್ಯಾಂಕಾಗಿದ್ದು ಸರ್ಕಾರದ ಹಣಕಾಸಿನ ವ್ಯವಹಾರವನ್ನು ನಿರ್ವಹಿಸುತ್ತಿದ್ದಲ್ಲದೇ ಮೈಸೂರು ರಾಜ್ಯದ ವಾಣಿಜ್ಯ ಅಭಿವೃದ್ಧಿಗೆ ತುಂಬಾ ಸಹಾಯಕವಾಗಿತ್ತು.

ಡಾ|| ಜ್ಯೋತ್ಸ್ನಾ ಕಾಮತ್

# ಗಂಡಸರಿಗೂ ಸೀರೆ

ಕರ್ನಾಟಕದ ಇತಿಹಾಸ, ಸಾಹಿತ್ಯ, ಶಿಲ್ಪ ಮತ್ತು ಭಿತ್ತಿಚಿತ್ರಗಳನ್ನು ಕೂಲಂಕಷವಾಗಿ ಅವಲೋಕಿಸಿದಾಗ ಪುರುಷರು ತಮ್ಮ ವ್ಯಕ್ತಿತ್ವ, ರೂಪಗಳಲ್ಲಿ ಹೆಚ್ಚಳ ಮಾಡಲು, ಇತರ ಅಲಂಕಾರಗಳೊಂದಿಗೆ ಸ್ತ್ರೀಯರೊಂದಿಗೆ ಸ್ಪರ್ಧಿಸಿ ಸೀರೆಗಳನ್ನು ಉಡುತ್ತಿದ್ದರೆಂಬ ಸತ್ಯದ ಅರಿವಾಗುವುದು.

'ಸೀರೆ' ಶಬ್ದ, 'ಚೀರ' ಸಂಸ್ಕೃತ ಪದದ ತದ್ಭವವಾಗಿದ್ದು, ಉಡಬಹುದಾದ ಉದ್ದಳತೆಯ ಯಾವುದೇ ಬಟ್ಟೆಯನ್ನು ಸೂಚಿಸುತ್ತದೆ. ಬೌದ್ಧಕಾಲದಿಂದ ಇಂದಿನವರೆಗೂ ಒಂದೇ ಬಟ್ಟೆ (ಸೀರೆ) ಉಡುವ ಪದ್ಧತಿ ಜಾರಿಯಲ್ಲಿದೆ. ತಾಳಗುಂದದ ಪ್ರಸಿದ್ಧ ಅಗ್ರಹಾರದಲ್ಲಿ ಹಲವು ವಿದ್ಯಾರ್ಥಿಗಳು ಓದುತ್ತಿದ್ದು ಅವರಿಗೆ ವರ್ಷ ವರ್ಷವೂ ಸೀರೆಗಳನ್ನು ಹಂಚುವ ಏರ್ಪಾಡು ಮಾಡಲಾಗಿತ್ತು.[1] ಸೀರೆಗಳ ಅಂತರ್ ರಾಜ್ಯ ವ್ಯಾಪಾರದ ಮಳಿಗೆಗಳು ಬೆಳಗಾಂವಿಯಲ್ಲಿದ್ದು ಚಿನ್ನದ ಜರಿಯ ಕಲಾಬತ್ತಿನ ಕೆಲಸ ಮಾಡಿದ, ಮಾಡದ ಸೀರೆಗಳ "ದೂಸಿಗವಸರ"ಗಳು ಹನ್ನೆರಡನೆಯ ಶತಮಾನದಲ್ಲಿ ಪ್ರಸಿದ್ಧವಿದ್ದವು.[2] ಕಬ್ಬಿಗ ಆಂಡಯ್ಯನು ತನ್ನೂರಿನ ಅಂಗಡಿಗಳ ಅಂದದ ಸೀರೆಗಳನ್ನು ವರ್ಣಿಸಲು ಮರೆತಿಲ್ಲ.

ಮಿಗೆ ಬೆಲೆಯೇರಿದ ಪೂಲಿಯ ಮಗರಿಯ
ದೋರಿಯುದ ಪರಿಯ ತಲವಟ್ಟೆಯ
ಕಾಡಿಗೆ ನೀರು ಬಟ್ಟೆಯ ಮಳಿಗೆಗಳಿಂ
ಸೋಲಿಪುದು ಸೀರೆ ವರದರ ಪಸರಂ

ಪೂಲಿ, ಮಗರಿ; ತಲವಟ್ಟೆ, ಕಾಡಿಗೆ ನೀರು ಇವೆಲ್ಲ ಊರುಗಳಲ್ಲಿ ಚೆಂದದ ಸೀರೆಗಳನ್ನು ತಯಾರಿಸುತ್ತಿದ್ದರು, ಎಂದು ಅರಿವಾಗುವುದು.

ಬಸವ ಪುರಾಣದಲ್ಲಿ ಭೀಮಕವಿಯು ಬಗೆಬಗೆಯ ಸೀರೆಗಳನ್ನು ಉಲ್ಲೇಖಿಸುತ್ತಾನೆ.

ಕಟ್ಟುವಣ್ಣದ ಪಟ್ಟೆ, ಬಲ್ಲಾಳದಟ್ಟೆ
ಭೂಸಲೆ, ಮೇಘವಣ್ಣದ ಪಟ್ಟೆ
ತವರಾಜಂ, ಮರಕತದ ಬಟ್ಟೆ
ಮೂಂದಳಿರ ಪಟ್ಟೆ, ಸಣ್ಣವಡಂಚೆಯಂ
ಪೊಂಬಟ್ಟೆ, ಸಿರಿಗಣೆ, ಗುಜ್ಜರಾಷ್ಟ್ರದ ಪಟ್ಟೆ
ವಾರಣಾಸಿಯ ದಸರಿ....[3]

ಕಟ್ಟುಬಣ್ಣದ ಅಂದರೆ ಬಣ್ಣ ಹೋಗದ ಸೀರೆಯನ್ನು ಉಲ್ಲೇಖಿಸಿದ್ದರಿಂದ ನೀರಿಗೆ ಹಾಕಿದೊಡನೆ ಬಣ್ಣಗೇಡಿಯಾಗುವ ಸೀರೆಗಳೂ ಪ್ರಚಲಿತವಿದ್ದಿರಲೇಬೇಕು.

---

* ಶಶಿಕಿರಣ ಅಪಾರ್ಟ್‌ಮೆಂಟ್ಸ್, ೧೬ನೆಯ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು–೫೬೦ ೦೦೩

1 ಎ. ಕ. VII. ಶಿಕಾರಿ, ೧೮೫, ಕ್ರಿ.ಶ. ೧೧೫೮

2 ಇ. ಐ. XIII, ಪು. ೨೧

3 ಬಸವ ಪುರಾಣ, ಕಾಂಡ ೪, ಸಂಧಿ ೧೦

ಹೊಯ್ಸಳರ ನಾಡಿನಿಂದ ಬಂದದ್ದು ಬಲ್ಲಾಳ ದಟ್ಟಿಯಿರಬೇಕು. ಮಹಾರಾಷ್ಟ್ರದಿಂದ ಬಂದುದು ಭೋಸಲೆ (ಭೂಸಲೆ) ಬಟ್ಟೆ. ಸ್ಥಾನೀಯ ಸಿರಿಗಣೆಯದು ರೇಷ್ಮೆಯಾದರೆ, ಗುಜರಾಥ ಮತ್ತು ಕಳಿಂಗದವೂ ಇಲ್ಲಿ ಜನಪ್ರಿಯವಾಗಿದ್ದವು. ವಾರಣಾಸಿಯ ದಸರಿ ಅಥವಾ ಬನಾರಸ್ ಸಿಲ್ಕು ಅಂದಿನಿಂದ ಇಂದಿನವರೆಗೂ ಜನರ ಆದರ ಉಳಿಸಿಕೊಂಡಿದೆ. ಮಾನಸೋಲ್ಲಾಸ ಬರೆದ ಚಾಲುಕ್ಯ ದೊರೆ ಸೋಮೇಶ್ವರನು ತನ್ನ ಕಾಲದಲ್ಲಿ (೧೧೨೬–೧೧೩೮ ಕ್ರಿ.ಶ.) ಕರ್ನಾಟಕಕ್ಕೆ ಯಾವ ಯಾವ ಪ್ರದೇಶಗಳಿಂದ ಸೀರೆಗಳು ಬರುತ್ತಿದ್ದವು ಎಂಬುದನ್ನು ಉಲ್ಲೇಖಿಸಿದ್ದಾನೆ. ಅವುಗಳಲ್ಲಿ ಪೊದ್ದಲಪುರ, ಚೀರಪಲ್ಲಿ, ನಾಗಪಟ್ಟಣ, ತೊಂಡೆಮಂಡಲ, ಚೋಳ ದೇಶ, ವಂಗ, ಕಳಿಂಗ, ಸಿಂಹಳ, ಅನಹಿಲವಾಡ (ಗುಜರಾಥ), ಮೂಲಸ್ಥಾನ ಅಥವಾ ಮುಲ್ತಾನದವು ಪ್ರಮುಖವಾದವುಗಳು.[4] ಶುಭ್ರ ಬಣ್ಣ, ಬೀದಿ ಬಿಳಿ (ಆಫ್ ವ್ಹೈಟ್ ?) ಗಳು ಹೆಚ್ಚು ಬೇಡಿಕೆಯ ಬಣ್ಣಗಳಾದರೂ ಮುಗಿಲು ಬಣ್ಣ, ಗಿಳಿ ಹಸಿರು, ಮಾವಿನ ತಳಿರು, ತಿಳಿ ಹಳದಿ, ಸುವರ್ಣ ವರ್ಣದ ಬಟ್ಟೆಗಳೂ ಗಂಡಸರಲ್ಲಿ ಪ್ರಿಯವಾಗಿದ್ದವು.

ಪ್ರಾಚೀನ ಕನ್ನಡ ಸಾಹಿತ್ಯ ಓದಿದವರಿಗೆ ಸೀರೆಗಳ ಸ್ವಾರಸ್ಯಕರ ವರ್ಣನೆಗಳು ಸಾಕಷ್ಟು ಪರಿಚಿತ. ಸಿದ್ಧರಾಮ ಚರಿತದಲ್ಲಿ ರಾಘವಾಂಕನು 'ಹೊಸ ದೇಸಿಕಾರತನ'ದಲ್ಲಿ ಶೋಭಿಸುವ ಹಸಿರು ಮಡಿಯ, ಬೆಳ್ಳಿಯ ಅಂಚಿನ, ಚಿನ್ನದ ನಕ್ಷೆಯ, ಚೀನಾಂಬರದ ಸಂಧ್ಯಾರಾಗದ ಹಂಸಶುಭ್ರವಾದ ಧೂಳಿಯ ಬಣ್ಣದ ಸೀರೆಗಳ ಬಗ್ಗೆ ಹೇಳಿದ್ದಾನೆ.[5] ಹರಿಹರನು ಸೀರೆಗಳ ಮೇಲಿರುವ ಲತಾವಳಿ, ಪುಷ್ಪಾವಳಿ, ಹಂಸಾವಳಿ, ಸಿಂಹಾವಳಿಗಳನ್ನು ಗಮನಿಸಿ ತನ್ನ ಪ್ರಾಣಿ ಪ್ರೇಮ, ನಿಸರ್ಗ ಪ್ರೇಮವನ್ನು ಸೂರೆ ಮಾಡಿದ್ದಾನೆ.[6] ಇದರಂತೆ ಚೌಕಡಿ, ವರ್ತುಳ, ಬಿಂದು, ಗೀರು, ರೇಖೆಗಳ ಬಗೆಬಗೆಯ ಆಕೃತಿಗಳಿಂದ ಸೀರೆಗಳನ್ನು ಅಲಂಕರಿಸುತ್ತಿದ್ದರು. ಆರ್ಥಿಕ ಸ್ಥಿತಿ-ಗತಿ, ಮತ್ತು ಕೈಕೊಂಡ ವೃತ್ತಿಗಳಿಗೆ ಅನುಗುಣವಾಗಿ ಸೀರೆಗಳನ್ನು ಉಡುತ್ತಿದ್ದರು. ಜನಸಾಮಾನ್ಯರು, ದಟ್ಟಿ, ಧೋತರ, ಪಂಚೆ, ಕಿರಿಪಂಚೆಗಳನ್ನು, ಅಂಗವಸ್ತ್ರಗಳನ್ನು ಕೊಳ್ಳುತ್ತಿದ್ದರು. ಸಿರಿವಂತರು, ರಾಜ-ಮಹಾರಾಜರು ನವಿರಾದ, ಕಲಾಪತ್ತಿನ ಕಸೂತಿಯಿದ್ದ ರೇಶ್ಮೆ ಸೀರೆಗಳನ್ನೇ ಕೊಳ್ಳುತ್ತಿದ್ದರು. ಅಲ್ಲದೇ ಋತುಮಾನಗಳಿಗೆ ಅನುಸಾರವಾಗಿ ಸೀರೆಗಳನ್ನು ಬದಲಾಯಿಸುತ್ತಿದ್ದರು. ವಸಂತ ಋತುವಿನಲ್ಲಿ ತೆಳುವಾದವುಗಳು, ಬೇಸಿಗೆಯಲ್ಲಿ ಶ್ವೇತವರ್ಣದವು, ಮಳೆಗಾಲದಲ್ಲಿ ರಬ್ಬಾದವುಗಳು ಶರದ್ ಋತುವಿನಲ್ಲಿ ಹೊಂಬಣ್ಣದವನ್ನು ಉಡುತ್ತಿದ್ದರು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಯಂತ್ರಗಳಿಂದ ಬಣ್ಣ ಹಾಕುವುದು, ಅಚ್ಚು ಹೊಡೆಯುವ ಉದ್ದಿಮೆಗಳು ಪ್ರಚಲಿತವಿದ್ದವು. ನೀರಿಗೆ ಹಾಕಿದಂತೆ ಹೆಚ್ಚೆಚ್ಚು ಕಾಂತಿಮಯವಾಗುವ ಬಟ್ಟೆಗಳ ಬಗ್ಗೆಯೂ ಹೇಳಲಾಗಿದೆ.[7]

ಕರ್ನಾಟಕದ ಗಂಡಸರು ಸೀರೆಗಳನ್ನು ಉಟ್ಟು ರಸಿಕತೆಯಿಂದ ಮೆರೆಯುವುದನ್ನು ನೋಡಿ ಕಾಶ್ಮೀರದ ದೊರೆ ಹರ್ಷನು ತನ್ನ ರಾಜ್ಯದಲ್ಲಿಯೂ ಇಂಥ ಬಟ್ಟೆ-ಬರೆಗಳನ್ನು ರೂಢಿಯಲ್ಲಿ ತಂದನೆಂದು ಕಲ್ಹಣನ ರಾಜತರಂಗಿಣಿ ಹೇಳುತ್ತದೆ.[8]

ಶಿಲ್ಪಗಳಲ್ಲಿ, ವೀರಗಲ್ಲುಗಳಲ್ಲಿ, ಅಲ್ಲೊಂದು ಇಲ್ಲೊಂದು ಸೀರೆಯುಟ್ಟ ಪುರುಷರನ್ನು ಗುರುತಿಸಬಹುದು. ಶ್ರವಣಬೆಳ್ಗೊಳದ ಜೈನಮಠದಲ್ಲಿರುವ ಭಿತ್ತಿ ಚಿತ್ರಗಳಲ್ಲಿ, ಊರ ಜಾತ್ರೆಯಲ್ಲಿ ಸೀರೆಯ ಮಳಿಗೆಗಳನ್ನು ಬಿಂಬಿಸಲಾಗಿದೆ. ಅಂಗಡಿಯವನು ತೋರಿಸಿದ ಸೀರೆಯನ್ನು ಪುರುಷನೋರ್ವನು ಮೊಳ ಹಾಕಿ ಅಳೆಯುತ್ತಿದ್ದಾನೆ. ಬಟ್ಟೆಯ ಉದ್ದಗಲಳತೆ ಕುರಿತು ಅಂದಿನ ಅಂಗಡಿಯವರೂ ಗಿರಾಕಿಗಳಿಗೆ ಮೋಸ ಮಾಡುತ್ತಿರ

---

4 ಮಾನಸೋಲ್ಲಾಸ ಭಾಗ ೨, ಪದ್ಯಗಳು ೧೦೮೬-೨೦

5 ಸಿದ್ಧರಾಮ ಚಾರಿತ್ರ ೮, ಪದ್ಯ ೫೬

6 ಗಿರಿಜಾ ಕಲ್ಯಾಣ ಮಹಾಪ್ರಬಂಧ ಆ ೧, ಪದ್ಯ ೭೧

7 ಮಾನಸೋಲ್ಲಾಸ ೨ : ೬, ಪದ್ಯ ೧೦೨೭

8 ಕಲ್ಹಣ : ರಾಜತರಂಗಿಣಿ ೭, ಪದ್ಯ ೯೨೫–೩೦

ಬೇಕು ! ಲೇಪಾಕ್ಷಿಯಲ್ಲಿರುವ, ವಿಜಯನಗರದ ದೊರೆಯಾದ ಅಚ್ಯುತದೇವರಾಯನ ಕಾಲದಲ್ಲಿ (ಕ್ರಿ. ಶ. ೧೫೩೫) ಕಟ್ಟಿಸಿದ ಪಾಪನಾಥೇಶ್ವರ ದೇವಾಲಯದ ಭಿತ್ತಿ ಚಿತ್ರಗಳಲ್ಲಿ ಆಂದು ಪ್ರಚಲಿತವಿದ್ದ ಪುರುಷರ ಬಗೆಬಗೆಯ ಸೀರೆಗಳನ್ನು ನೋಡಬಹುದಾಗಿದೆ. ಮಹಾಮಂಟಪದ ಸೂರಿನ ಒಳಗೋಡೆಯ ಮೇಲೆ ಶಿವಪುರಾಣವನ್ನಾಧರಿಸಿದ ಅನೇಕಾನೇಕ ಚಿತ್ರಗಳನ್ನು ರಚಿಸಲಾಗಿದೆ. ಪಾರ್ವತಿ ಪರಿಣಯ, ಕಿರಾತಾರ್ಜುನೀಯ, ದಕ್ಷಿಣಾಮೂರ್ತಿ, ಶ್ರೀರಾಮಪಟ್ಟಾಭಿಷೇಕ, ಶೇಷಶಾಯಿ, ವಟಪತ್ರಶಾಯಿ ಕೃಷ್ಣನ ಚಿತ್ರ ಬಿಡಿಸಿ ಆ ಕಾಲದ ಪ್ರಚಲಿತ ವೇಷ ಭೂಷಣಗಳನ್ನು ಕಾಣಿಸಲಾಗಿದೆ. ಪೆನುಕೊಂಡೆಯ ನಂದಿಲಕ್ಕಿಶೆಟ್ಟಿಯ ಮಗ ವಿರೂಪಣ್ಣನು ಮಾಡಿದ ದಾನದಿಂದ ಈ ದೇವಾಲಯವನ್ನು ಕಟ್ಟಿಸಲಾಗಿದೆ, ಎಂದು ಅಲ್ಲಿರುವ ಶಾಸನವೊಂದು ಸಾರಿ ಹೇಳುತ್ತದೆ. ಅಂತೆಯೇ ವಿರೂಪಣ್ಣ ಮತ್ತು ಅವನ ಸೋದರ ವೀರಣ್ಣನ ಭಾವ ಚಿತ್ರಗಳಿಗೆ ಆದ್ಯತೆ ಕೊಡಲಾಗಿವೆ. ಇವನ ಸೋದರರು ಕೇಸರಿ ವರ್ಣದ ನಿಲುವಂಗಿ ತೊಟ್ಟು ಅದರ ಮೇಲೆ ಓರಣವಾಗಿ 'ಸೀರೆ'ಯನ್ನು ಸುತ್ತಿಕೊಂಡಿದ್ದಾರೆ. ವಿರೂಪಣ್ಣನ ರಬ್ಬಾದ ಚೌಕಡಿ ಸೀರೆಗೆ ನಾಶೀಪುಡಿ ಬಣ್ಣದ ಅಂಚು ಇದ್ದರೆ, ವೀರಣ್ಣನ ಕೆಂಪು ಚುಕ್ಕಿಯ ಸೀರೆಗೆ ಕಪ್ಪು ಹೂಬಳ್ಳಿಯ ಅಂಚನ್ನು ಹೊಂದಿಸಲಾಗಿದೆ. ಇವರ ಮೇಲ್ಪಂಕ್ತಿಯನ್ನು ಅನುಸರಿಸಿ, ಇನ್ನಿತರ ಊರ ಪ್ರತಿಷ್ಠಿತರೂ ನಿಲುವಂಗಿಗಳ ಮೇಲೆ ಕಿರಿ ಸೀರೆಗಳನ್ನು ಪ್ರದರ್ಶಿಸಿದ್ದಾರೆ. ದೇವ, ದೇವತೆಗಳೂ ಇಂಥ ಸೀರೆಗಳಲ್ಲಿಯೇ ಚಿತ್ರಿತರಾಗಿದ್ದಾರೆ.

ಜನಸಾಮಾನ್ಯರು ನಿಲುವಂಗಿಯಿಲ್ಲದೇ ಸೀರೆಯನ್ನು ಪಂಚೆಯಂತೆ ಉಟ್ಟಿದ್ದಾರೆ. ಕೆಲವರು ಹಿಂಗಚ್ಚೆ ಹಾಕಿ ಉಟ್ಟರೆ, ಉಳಿದವರು ಮುಂಡುಪಂಚೆಯಂತೆ ಉಟ್ಟಿದ್ದಾರೆ. ವೈಗಂಟುವಂತೆ ಉಟ್ಟವರು ಇದ್ದರೆ, ಸಡಿಲಾಗಿ ಸುತ್ತಿಕೊಂಡವರೂ ಇದ್ದಾರೆ. ಈ ಸೀರೆಗಳೆಲ್ಲ ಏಕವರ್ಣೀಯವಾಗಿರದೇ ವಿವಿಧ ಬಣ್ಣ-ನಕ್ಷೆಗಳಿಂದ ಕೂಡಿದ್ದಾಗಿವೆ. ಕೆಲವೊಂದು ಚಿತ್ರಗಳಲ್ಲಿ ಬೇರೊಂದು ಅಂಗವಸ್ತ್ರವನ್ನು ಸುತ್ತಿಕೊಂಡಂತೆ ಭಾಸವಾಗುತ್ತದೆ. ಕೆಲವರು ಕಸುರಿನ ಕೆಲಸವಿದ್ದ ಶಾಲನ್ನು ಎಡಭುಜದ ಮೇಲಿಂದ ಇಳಿಬಿಟ್ಟಿದ್ದಾರೆ. ಅದೇ ಕಾಲದಲ್ಲಿ ರಚಿತವಾದ ಹಂಪೆಯ ವಿರೂಪಾಕ್ಷ ದೇವಾಲಯದ ಭಿತ್ತಿಚಿತ್ರಗಳಲ್ಲಿಯೂ ಇಂತಹವೇ ಪುರುಷರ ಸೀರೆಗಳನ್ನು ಗುರುತಿಸಬಹುದು.

ಎಸ್. ರಾಜೇಂದ್ರಪ್ಪ*

# 'ಅಮೃತಾಪುರ' ಕೆಲವು ಹೊಸ ಶೋಧಗಳು

ಚಿಕ್ಕಮಗಳೂರು ಜಿಲ್ಲೆ ತರಿಕೆರೆ ತಾಲೂಕಿನ ಅಮೃತಾಪುರ ಹೊಯ್ಸಳರ ಕಾಲದ ಅಮೃತೇಶ್ವರ ದೇವಾಲಯುದಿಂದಾಗಿ ಪ್ರಸಿದ್ಧವಾಗಿದೆ. ತರಿಕೆರೆಯಿಂದ ಸುಮಾರು ೧೫ ಕಿ.ಮೀ. ದೂರದಲ್ಲಿರುವ ಈ ಊರು ಹೊಯ್ಸಳ ದಂಡನಾಯಕ ಅಮಿತೆಯ ಚಮೂಪನ ಕಲ್ಪನೆಯ ಕೂಸಾಗಿದ್ದು, ಇಲ್ಲಿನ ಅಮೃತಸಮುದ್ರ ಹಾಗೂ ಅಮೃತೇಶ್ವರ ದೇವಾಲಯಗಳು ಸಾಕಾರ ಗೊಂಡಿದ್ದು ಅಮಿತ ದಂಡಾಧೀಶನಿಂದಲೇ[1] ಅಮೃತಾ ಪುರದ ಶಾಸನಗಳಲ್ಲಿ ಅಮಿತಪುರ, ಅಮ್ರಿತಪುರ, ಅಮೃತಪುರ ಎಂದು ಉಲ್ಲೇಖಿತಗೊಂಡಿರುವ ಈ ಊರು ಹಲವಾರು ದೃಷ್ಟಿಯಿಂದ ಮಹತ್ವ ಪಡೆದಿದೆ. ಇಲ್ಲಿನ ಶಾಸನವೊಂದರ ರಚನಕಾರ ಕವಿ ಜನ್ನ[2] ಎಂಬುದೊಂದು ವಿಶೇಷವಾದರೆ, ಅಮೃತೇಶ್ವರ ದೇವಾಲಯದ ಚಿತ್ತಾಕರ್ಷಕ ಅಲಂಕಾರಿಕ ಮೂರ್ತಿ–ಶಿಲ್ಪ ಕೆತ್ತನೆ ಮತ್ತೊಂದು ವಿಶೇಷ. ಹೊಯ್ಸಳರ ಕೆಲವೇ ವಿಶಾಲ ಗುಡಿಗಳಲ್ಲಿ ಒಂದಾದ ಇದರ ಹೊರಭಿತ್ತಿಯ ಮೇಲಿನ ಪೌರಾಣಿಕ ಕೆತ್ತನೆಗಳು ವಿಶಿಷ್ಟವಾಗಿದೆ, ಇಲ್ಲಿನ ಕಾರ್ಯವಾಸಿ ಕತ್ತೆ ಕಾಲು ಹಿಡಿದಿರುವ ವಸುದೇವನ ಕೆತ್ತನೆ[3] ಮಗದೊಂದು ವೈಶಿಷ್ಟ್ಯ. ಈ ದೇವಾಲಯದ ನಿರ್ಮಾಣದಲ್ಲಿ ಭಾಗವಹಿಸಿದ ಶಿಲ್ಪಿಗಳಲ್ಲಿ ಮಲ್ಲಿತಮ್ಮನ ಹೆಸರು ಎದ್ದು ಕಾಣುತ್ತದೆ.

## ಹೊಯ್ಸಳರ ಕಾಲದ ಅಳತೆಕೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆ

ಪೂರ್ವಾಭಿಮುಖವಾಗಿರುವ ಅಮೃತೇಶ್ವರ ದೇವಾಲಯದ ಸಭಾಮಂಟಪದ ಪ್ರವೇಶಾರಂಭದಲ್ಲೇ ಮಂಟಪದ ಎಡದಂಚಿನ ಕಕ್ಷಾಸನದ ಕೆಳಪಟ್ಟಿಯ ಮೇಲೆ ದಕ್ಷಿಣೋತ್ತರವಾಗಿ ಏಕ ಸಾಲಿನ ಅಪ್ರಕಟಿತ ಶಾಸನ ವಿದೆ. ಇದರ ಕಾಲವನ್ನು ಸುಮಾರು ಕ್ರಿ.ಶ.೧೨ನೇ ಶತಮಾನಕ್ಕೆ ಗುರುತಿಸಬಹುದು. ಈ ಅಪ್ರಕಟಿತ ಶಾಸನದ ಪಾಠ "ಕೆರೆಯಳತೆಯ ಕೋಲ ಗಡಿಂಬ" ಎಂದಿದೆಯೆಂದು ತೋರುತ್ತದೆ. ಭಾಗಶಃ ಪ್ರಕಟಿತವಾಗಿ ರುವ ಈ ಶಾಸನವನ್ನು "ಕೆರೆಯಳತೆಯ ಕೋಲ ಗಡಿಂಬ, ಗಳೆಯಳತೆಯ ಕೋಲ ಗಡಿಂಬ ಎಂದೂ ಓದಬಹು ದಾದರೂ, ಈ ಮೂರರಲ್ಲಿ 'ಗೆರೆಯಳತೆಯ ಕೋಲ ಗಡಿಂಬ' ಅಥವಾ ಗಳೆಯಳತೆಯ ಕೋಲ ಗಡಿಂಬ ಎಂದೋದುವುದೇ ಹೆಚ್ಚು ಸಮಂಜಸವೆಂದು ತೋರು ತ್ತದೆ. ಅಳತೆಕೋಲಿನ ಈ ಪ್ರಾತಿನಿಧಿಕ ರೇಖಾಕೆತ್ತನೆ,

---

* ಸಂಪಾದಕ, ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

1 ಎ.ಕ. ೬ ತರೀಕೆರೆ ೪೫, ಅಮಿತ ದಂಡನಾಯಕನ ಆದೇಶದಂತೆ ಹೆಗಡೆ ಜಕ್ಕಯ್ಯ ಅತಿಚಂದವಾಗಿ ಮಾಡಿಸಿದನೆಂದು ಈ ಶಾಸನ ಹೇಳುತ್ತದೆ. ಅಲ್ಲದೇ ಗದುಗಿನಲ್ಲೂ ಅಮಿತ ದಂಡಾಧೀಶ ಅಮೃತ ಸಮುದ್ರ ನಿರ್ಮಿಸಿದನೆಂದು ತಿಳಿಸುತ್ತದೆ.

2 ಅದೇ. ಶಾಸನ ಕರ್ತೃ, ಉದ್ದಂಡ ಕವಿ ಭಾಳನೇತ್ರ, ಸುಕವಿ ಜನಮಿತ್ರ ಜನ್ನಯ್ಯನ ಕವಿತೆ ; ಲೊಕ್ಕಿಗುಂಡಿ ನಾಗಣ್ಣನ ಬರಹ ; ರೂವಾರಿ ಮಲ್ಲೋಜನ ಕಂಡರಣೆ ಎಂದ ಹೇಳುತ್ತದೆ.

3 ದೇವಾಲಯದ ಸಭಾಮಂಟಪದ ಹೊರಭಿತ್ತಿಯ ಉತ್ತರ ಮುಖದಲ್ಲಿ ಇದನ್ನು ಗಮನಿಸಬಹುದು.

ಹೊಯ್ಸಳರ ಕಾಲಕ್ಕೆ ಸೇರಿದಂತೆ ವರದಿಯಾಗುತ್ತಿರುವ ಎರಡನೆಯ ಉದಾಹರಣೆ. ಮತ್ತೊಂದೆಂದರೆ, ಟಿ. ನರಸೀಪುರ ತಾಲ್ಲೂಕಿನ ಮುಗೂರಿನ[4] ದೇಶೇಶ್ವರ ದೇವಾಲಯದ ಹೊರಭಿತ್ತಿಯಲ್ಲಿರುವ ಉದಾಹರಣೆ. ಮೂಗೂರಿನ ದೇಶೇಶ್ವರದೇವಾಲಯದ ದಕ್ಷಿಣಗೋಡೆಯ ಮೇಲೆ "ಮೂಗೂರ ಭೂಮಿಯಳತೆದ ಗಡಿಂಬ ಪ್ರಮಾಣು" ಎಂದು ಒಂದು ಸಾಲಿನ ಶಾಸನದೊಂದಿಗೆ ೩೫ ಅಂಗುಲ ನೀಳದ ಅಳತೆಗೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯಿದೆ.[5]

ಈ ಹಿನ್ನೆಲೆಯಲ್ಲಿ ಹೊಯ್ಸಳರ ಕಾಲದ ಅಳತೆ ಕೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯನ್ನು ಮೊದಲ ಬಾರಿ ಇಲ್ಲಿ ವಿಸ್ತೃತ ಪ್ರಮಾಣದಲ್ಲಿ ಚರ್ಚೆಗೆ ಒಳಪಡಿಸುವ ಯತ್ನ ಮಾಡಲಾಗಿದೆ. ಅಮೃತಾಪುರದ ಈ ಪ್ರಾತಿನಿಧಿಕ ರೇಖಾಕೆತ್ತನೆ ೬೫ ಅಂಗುಲ (ಐದೂವರೆ ಅಡಿ) ನೀಳವಿದ್ದು, ಅಳತೆಗೋಲಿನ ಎರಡು ತುದಿಯನ್ನು ಬಾಣದ ತುದಿಯನ್ನು ವಿರುದ್ಧ ದಿಕ್ಕಿನಲ್ಲಿ ಕೆತ್ತುವುದರ ಮೂಲಕ ಸೂಚಿಸಲಾಗಿದೆ. ಇದರ ನಡುವೆ ಬಲಭಾಗದಲ್ಲಿ ಮೇಲೆ ಹೇಳಿರುವ ಒಂದು ಸಾಲಿನ ಶಾಸನವಿದೆ. ಅಳತೆಕೋಲಿನ ಮಧ್ಯೆ ೧೬ ಅಂಗುಲ ಅಂತರದಲ್ಲಿ ಎರಡು ಬಾಣ ತುದಿಗಳನ್ನು ಕೆತ್ತಿದ್ದು ಅರ್ಧ ಅಂಗುಲದಿಂದ ೨೨"ದ ವರೆಗೆ ವಿವಿಧ ಪ್ರಮಾಣಗಳನ್ನು ಸೂಚಿಸಲಾಗಿದೆ. ಈ ಅಳತೆಕೋಲು ಆಳುದ್ದ (ಐದೂವರೆ ಅಡಿ) ಇದೆ. ಅಮೃತಾಪುರ[6] ಹಾಗೂ ಮತ್ತಿತರ ಭಾಗದ ಕೆಲವು ಶಾಸನಗಳಲ್ಲಿ[7] ಉಲ್ಲೇಖಿತಗೊಂಡಿರುವ "ಗಂಗನ ಗಳೆಗೂ ಇದಕ್ಕೂ ಏನಾದರೂ ಸಂಬಂಧವಿದೆಯೇ ? ಶಾಸನೋಕ್ತ ಗಂಗನಗಳೆಯೇ ಇದಾಗಿರಬಹುದೆ ? ಎಂಬುದು ಚರ್ಚಾರ್ಹ ವಿಚಾರವಾಗಿದೆ. ಈ ಭಾಗದ ಕೆಲವು ಶಾಸನಗಳಲ್ಲಿ ೪೪ ಮೆಟ್ಟಿನ ಗಳೆ[8] ೧೦ ಮಾರು[9] ೧೩ ಮಾರಿನ ಗಳೆಯ[10] ಉಲ್ಲೇಖವಿದ್ದರೂ, ಇವುಗಳ ನಡುವಿಣ ಸಂಬಂಧ ಸ್ಪಷ್ಟವಾಗುವುದಿಲ್ಲ. ಅಮೃತಾಪುರದ ಶಾಸನದಲ್ಲೇ ಗಂಗನ ಗಳೆಯ ಉಲ್ಲೇಖವಿರುವುದರಿಂದ, ಮೂಲ ಶಾಸನದ ಕೊರತೆ ನೀಗಲು ಪೂರಕವಾಗಿ ಬರೆದ ಶಾಸನದಲ್ಲಿ ಆಗಿರುವುದರಿಂದ ಶಾಸನೋಕ್ತ ಗಂಗನ ಗಳೆಯನ್ನೇ ಇಲ್ಲಿ ಪ್ರಾತಿನಿಧಿಕವಾಗಿ ಕೆತ್ತಿರಬೇಕೆಂದು ತರ್ಕಿಸಿದರೆ ತಪ್ಪಾಗಲಾರದು. ನಮ್ಮ ತರ್ಕವನ್ನು ಒಪ್ಪುವುದಾದರೆ 'ಗಂಗನ ಗಳೆ' ಐದೂವರೆ ಅಡಿ ನೀಳದ ಗಳೆಯಾಗಿತ್ತೆಂದು ಒಪ್ಪಬೇಕಾಗುತ್ತದೆ. ಇಲ್ಲಿ ಸಾಂದರ್ಭಿಕವಾಗಿ ಹಾಸನ ಜಿಲ್ಲೆಯ ರಾಮನಾಥಪುರದ ಕ್ರಿ.ಪೂ. ೧೨೫೧ರ ಶಾಸನ[11]ವನ್ನು ಸ್ಮರಿಸುವುದು ಆಗತ್ಯ. ಇದು ೧೬ ಮೆಟ್ಟಿನ ಹಾಸಗಳೆಯಲಳೆದು ಕೊಂಡು ದಾನಕೊಟ್ಟ ೯೫ ಕಂಬ ತೋಟದ ಕ್ಷೇತ್ರವು ೪೫ × ೩೪ ಪ್ರಮಾಣದ ಆಯಾತಾಕಾರದಲ್ಲಿದ್ದ ಅಂಶವನ್ನು ಸೂಚಿಸುತ್ತದೆ. ಇದರ ಒಟ್ಟು ಕ್ಷೇತ್ರಫಲವನ್ನು ಪತ್ತೆಹಚ್ಚಿ ಲೆಕ್ಕಚಾರ ಹಾಕಿದಾಗ ದಾನ ನೀಡಿದ ಭೂಮಿ ೮.೯೭೫ ಎಕರೆ ಎಂದು ಗೊತ್ತಾಗುತ್ತದೆ. ೧೦೦ ಕಂಭ ಒಂದು ಮತ್ತರಿಗೆ ಸಮ ಎಂದು ಕೆಲವು ಶಾಸನಗಳು[12] ಹೇಳುವುದರಿಂದ, ಈ ಶಾಸಸದ ಪ್ರಕಾರ ಒಂದು ಮತ್ತರು

---

4 ಎ.ಕ. ೫ (ಪರಿಷ್ಕೃತ) ತಿ.ನ ೨೬೮

5 Dr. H.S. Usharani (1992) Agrarian System under the Hoysalas ಅಪ್ರಕಟಿತ ಪ್ರೌಢ ಪ್ರಬಂಧ ಮೈ. ವಿ. ವಿ.

6 ಎ.ಕ. ೬ ತರೀಕೆರೆ ೪೩-೯೫

7 ಅದೇ ಕಡೂರು, ೧೪೮; ತರಿಕೇರೆ ೧೯, ೩೬, ೫೯

8 ಎ.ಕ. ೬, ಕಡೂರು ೫೪, ೫೫, ೬೬.

9 ಎ.ಕ. ೬, ತರೀಕೆರೆ ೬೧ ;

10 ಅದೇ ೮೩.

11 ಎ.ಕ. ೮ (ಪರಿಷ್ಕೃತ) ಅರಕಲ ೪೬

12 ಎ.ಕ. ೬ ತರೀಕೆರೆ ೪೫.

ಸುಮಾರು ೯.೪ ಎಕರೆಗೆ ಸಮವಾಗುತ್ತದೆ. ಆದರೆ ಎಲೂಗೆರೆಯ ಕ್ರಿ.ಶ. ೧೨೦೬ರ ಶಾಸನ[13] ೧ ಮತ್ತರು, ೨೦ ಕಂಬಗಳಿಗೆ ಸಮವೆಂದು ಹೇಳುತ್ತದೆ. ಈ ಪ್ರಕಾರ ೧ ಮತ್ತರು ೨.೮ ಎಕರೆಗೆ ಸಮನಾಗುತ್ತದೆ. ಕ್ರಿ.ಶ. ೧೧೨೩ರ ಲಕ್ಷ್ಮೇಶ್ವರದ ಶಾಸನದ[14] ಹಿನ್ನೆಲೆಯಲ್ಲಿ ರಾಮನಾಥಪುರದ ಶಾಸನವನ್ನು ಪರಿಶೀಲಿಸಿದರೆ ೧ ಮತ್ತರು ಸುಮಾರು ೪೦ ಕಂಬಗಳಿಗೆ ಸಮ ಎಂದು ನಿರ್ಣಯಿಸಬೇಕಾಗುತ್ತದೆ. ಇತ್ತೀಚೆಗೆ ಬೇಲೂರಿನ ಚನ್ನಕೇಶವ ದೇವಾಲಯದ ಆಗ್ನೇಯ ದಿಕ್ಕಿನ ಹೊರ ಭಿತ್ತಿಯ ಎರಡನೇ ಅಡ್ಡಪಟ್ಟಿಯ ಮೇಲೆ ದಕ್ಷಿಣೋತ್ತರವಾಗಿ ಸುಮಾರು ೪೦ ಅಂಗುಲ ಉದ್ದದ ಅಳತೆಗೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯನ್ನು ರೇಖಿಸಿ, ಸ್ವಲ್ಪ ಮೇಲೆ 'ದೇವಹಸ್ತದ ಖಂಡೆಯ' ಎಂಬ ಒಂದು ಸಾಲಿನ ಸಂಸ್ಕೃತ ಶಾಸನವನ್ನು ದೇವನಾಗರಿ ಲಿಪಿಯಲ್ಲಿ ಬರೆದಿರುವ ಅಂಶವನ್ನು ಗಮನಿಸಲಾಗಿದ್ದು, ಇಂದಿನ ಒಂದು ಮೀಟರ್‌ಗೆ ಸಮನಾಗಿರುವುದರಿಂದ ಇದರ ಪ್ರಾಚೀನತೆ ಅಷ್ಟೇನೂ ಹಿಂದಕ್ಕೆ ಹೋಗುವುದಿಲ್ಲ. ಈ ಬಗೆಯ ಪ್ರಾತಿನಿಧಿಕ ರೇಖಾ ಕೆತ್ತನೆಗಳ ನೆರವಿನಿಂದ ಹೊಯ್ಸಳರ ಕಾಲದಲ್ಲಿ ಬಳಕೆಯಲ್ಲಿದ್ದ ಭೂಮಾಪನ ಪದ್ಧತಿ, ಭೂಗಾತ್ರಗಳೇ ಮುಂತಾದ ಕೃಷಿ ಕ್ಷೇತ್ರ ಸಂಬಂಧಿ ಅಂಶಗಳನ್ನು ಖಚಿತವಾಗಿ ಅರ್ಥೈಸಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ಹೊಯ್ಸಳರ ಕಾಲದ ಶಾಸನಗಳ, ದೇವಾಲಯಗಳ ಪುನರ್ ಅಧ್ಯಯನದ ಅವಶ್ಯಕತೆ ಎದ್ದು ಕಾಣುತ್ತದೆ. ಈ ನಿಟ್ಟಿನಲ್ಲಿ ಅಮೃತಾಪುರದ ಅಳತೆಕೋಲಿನ ಪ್ರಾತಿನಿಧಿಕ ರೇಖಾ ಕೆತ್ತನೆಯ ಈ ಹೊಸ ಶೋಧ ಮಹತ್ವ ಪಡೆಯುತ್ತದೆ.

**ವಿನಾಯಕ ಶಿಲ್ಪ :** ಈ ದೇವಾಲಯದ ಆವರಣದಲ್ಲಿ ಚದುರಿಕೊಂಡಿರುವ ಉಬ್ಬು ಶಿಲ್ಪಗಳಲ್ಲೊಂದನ್ನಿಲ್ಲಿ ಮೊದಲ ಬಾರಿಗೆ ಪ್ರಸ್ತಾಪಿಸಲಾಗುತ್ತಿದೆ. ಈ ಅಪರೂಪದ ಶಿಲ್ಪವನ್ನು ದೇವಾಲಯದ ಪ್ರಾಕಾರದ ಮೇಲ್ಭಾಗವನ್ನು ಅಲಂಕರಿಸುವ ವೃತ್ತಾಕಾರದ ತೆನೆಯಲ್ಲಿ ಕೆತ್ತಲಾಗಿದೆ. ವೃತ್ತಾಕಾರದ ಮಕರ ತೋರಣದ ಹೊರಭಾಗದುದ್ದಕ್ಕೂ ಪ್ರಭೆ ಹೊರ ಹೊಮ್ಮುತ್ತಿದೆ. ಒಳಭಾಗದಲ್ಲಿ ನರ್ತಿಸುತ್ತಿರುವ ದ್ವಿಬಾಹು ವಿನಾಯಕಿಯನ್ನು ಕೆತ್ತಲಾಗಿದೆ. ಶಿಲ್ಪಶಾಸ್ತ್ರದಲ್ಲಿ ಉಲ್ಲೇಖಿಸಲ್ಪಟ್ಟಿರುವ ೬೪ ಶಕ್ತಿ ದೇವತೆಯರಲ್ಲಿ ವಿನಾಯಕಿಯೂ ಒಬ್ಬಳಾಗಿದ್ದು, ಈಕೆಯ ಮೂರ್ತಿಶಿಲ್ಪಗಳು ವಿರಳವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕರ್ನಾಟಕದಲ್ಲಿ ಈವರೆಗೆ ಇಂತಹ ಶಿಲ್ಪವನ್ನು ಬೇಲೂರು[15] ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ[16] ವಿದ್ವಾಂಸರು ಗಮನಿಸಿರುವುದರಿಂದ, ಅಮೃತಾಪುರದ ಈ ಶೋಧ ಮಹತ್ವದೆನಿಸುತ್ತದೆ. ವಿನಾಯಕನ ಶಕ್ತಿಯೇ ವಿನಾಯಕಿಯಾಗಿದ್ದು, ಇಂತಹ ಶಿಲ್ಪಗಳ ಅಧ್ಯಯನ ಆಗಬೇಕಾಗಿದೆ. ಮೇಲಾಗಿ ಈ ಮೂರ್ತಿ ದ್ವಿಬಾಹುವಾಗಿರುವುದು ಮತ್ತೊಂದು ವಿಶೇಷ ಅಂಶವಾಗಿದೆ.[17]

**ರಾಶಿಚಕ್ರ ಶಿಲ್ಪ :** ಅಮೃತಾಪುರದ ಅಮೃತೇಶ್ವರ ದೇವಾಲಯದ ಆವರಣದಲ್ಲಿ ಗಮನಿಸಿದ ಮತ್ತೊಂದು ಶಿಲ್ಪವೆಂದರೆ "ರಾಶಿ ಚಕ್ರ"ಕಲ್ಲು ಶಿಲ್ಪ. ನವಗ್ರಹಗಳ ಆರಾಧನೆಯಂತೆ ದ್ವಾದಶ ರಾಶಿಗಳ ಆರಾಧನೆಯೂ ಪ್ರಾಚೀನ ಕಾಲದಲ್ಲಿ ಬಳಕೆಯಲ್ಲಿತ್ತೆಂದು ತೋರುತ್ತದೆ. ಇಲ್ಲಿನ ಜನ ಇದನ್ನು ಈಗಲೂ ಮಳೆರಾಯನ ಕಲ್ಲೆಂದು ಭಕ್ತಿಯಿಂದ ಪೂಜಿಸುತ್ತಾರೆ. ವೃತ್ತಾಕಾರದ ಈ ರಾಶಿ ಚಕ್ರದಲ್ಲಿ ಹನ್ನೆರಡೂ ರಾಶಿ ಚಿಹ್ನೆಗಳನ್ನು ಕೆತ್ತಲಾಗಿದೆ. ಈ ರಾಶಿ ಚಿಹ್ನೆ ಕಲ್ಲು ಹಿಂದೆಂದಾದರೂ ದೇವಾಲಯದ ನವರಂಗದಲ್ಲೊಂದರ ಛಾವಣಿಯನ್ನೇನಾದರೂ ಅಲಂಕರಿಸಿತ್ತೋ ಹೇಗೆಂದು ಪರಿಶೀಲಿಸಬೇಕಾಗಿದೆ.

---

13 ಅದೇ ೧೧

14 ಸೌ. ಇಂ. ಇ. ೨೦, ೮೩. ಈ ವಿಷಯದ ಬಗ್ಗೆ ಹೆಚ್ಚಿನ ವಿವರಗಳಿಗೆ ಇದೇ ಸಂಪುಟದ ೧೨೪-೧೨೫ನೋಡಿ (ಸಂ.)

15 ಪ್ರೊ|| ಕ. ವೆಂ. ರಾಜಗೋಪಾಲ್ ಅವರು ಒದಗಿಸಿದ ಮಾಹಿತಿ

16 ಡಾ|| ಸುಂದರ ಅವರು ನೀಡಿದ ಮಾಹಿತಿ.

17 ಡಾ. ಸುಂದರ ; ಸತ್ಯ ಶುದ್ಧ ಕಾಯಕ ಸಂ-೧೨, ಸಂಪುಟ ೩೩-೩೬

ಕೃಷಿಪ್ರಧಾನವಾದ ಈ ನಾಡಿನಲ್ಲಿ, ಮಾನವ ಜೀವನದ ಮೇಲೆ ಪ್ರಭಾವದ ಬಗ್ಗೆ ಅಚಲ ನಂಬಿಕೆಯಿರುವ ನಮ್ಮ ಸಮಾಜದಲ್ಲಿ ರಾಶಿಕಲ್ಲುಗಳ ಆರಾಧನೆ ಹಿಂದಿನಿಂದಲೂ ಇತ್ತೆಂದು ತಿಳಿಯುತ್ತದೆ.

ಅಮೃತಾಪುರದಲ್ಲಿ ಇತ್ತೀಚೆಗೆ ಕೈಗೊಂಡ ಕ್ಷೇತ್ರ ಕಾರ್ಯಾವಧಿಯಲ್ಲಿ ಪತ್ತೆಯಾಗಿರುವ ಈ ಶೋಧಗಳು ಅನೇಕ ದೃಷ್ಟಿಯಿಂದ ಮಹತ್ವ ಪಡೆದಿದ್ದು, ಈ ನಿಟ್ಟಿನಲ್ಲಿ ಆಳವಾದ ಅಧ್ಯಯನಕ್ಕೆ ಹೇರಳವಾದ ಅವಕಾಶವಿದೆ.

ಮೋಹನ ಗ. ಹೆಗಡೆ*

# ೧೯ನೇ ಶತಮಾನದ ಮೈಸೂರು ಜಿಲ್ಲಾ ಕನ್ನಡ ಪತ್ರಿಕೋದ್ಯಮ ಇತಿಹಾಸ

೧೯ನೇ ಶತಮಾನ ಭಾರತೇತಿಹಾಸದಲ್ಲೆ ಮಹತ್ವದ ಕಾಲ. ಹೊಸ ಕನ್ನಡ ಸಾಹಿತ್ಯದ ಪ್ರಾರಂಭಿಕ ಕಾಲ, ಕನ್ನಡ ಪತ್ರಿಕೆಯ ಉಗಮವಾದುದ್ದು. ಭಾರತದ ಸ್ವಾತಂತ್ರ್ಯ ಬಂಡಾಯದ ಪೀಠಿಕೆ ಹಾಕಿದ್ದು ಅನೇಕ ಪುಣ್ಯ ಪುರುಷರು ಹುಟ್ಟಿದ್ದು, ಸ್ವಾತಂತ್ರ್ಯವೀರರ ಜನನವಾದದ್ದು, ಸ್ವಾತಂತ್ರ್ಯ ಬೇಕು, "ಅದು ಮಾನವ ವಿಕಾಸಕ್ಕೆ ತುಂಬಾ ಅಗತ್ಯವಾದುದು" ಎಂಬ ಕಟ್ಟೆಚ್ಚರ ತಂದ ಕಾಲ.

ಈ ಎಲ್ಲ ಕ್ಷೇತ್ರದಲ್ಲಿ ಮುಂದುವರಿಯಲು ಪತ್ರಿಕೆ ತುಂಬಾ ಮಹತ್ವದ ಪಾತ್ರ ವಹಿಸಿದೆ. ವಿಶ್ವದ ಇತಿಹಾಸದಲ್ಲಿ ಲಕ್ಷಾವಧಿ ವರುಷ ಏನೂ ಅಲ್ಲ. ಆದರೆ ಪತ್ರಿಕೆಯ ನೂರಾರು ವರ್ಷ ಮಹತ್ವದ ಕಾಲ. ಭಾರತದಲ್ಲಿ ಆರಂಭವಾದ ಮೊದಲ ಭಾಷಾ ಪತ್ರಿಕೆ ರಾಜಾರಾಮ ಮೋಹನರಾಯರ 'ಸಂವಾದ ಕೌಮುದಿ.[1]

ಬಾಸಲ್ ಮಿಶನ್ ಕಾರ್ಯಕ್ಕಾಗಿ ಜರ್ಮನಿಯಿಂದ ಮಂಗಳೂರಿಗೆ ಬಂದ ಡಾ|| ಹೆರ್ಮನ್ ಮೋಗ್ಲಿಂಗ್, ಕನ್ನಡ ಕಲಿತು ೧೮೪೩ ಜುಲೈ ೧ರಂದು 'ಮಂಗಳೂರ ಸಮಾಚಾರ' ವಾರ್ಷಿಕ ಸುದ್ದಿ ಪತ್ರಿಕೆಯನ್ನು ಆರಂಭಿಸುವ ಮೂಲಕ ಕನ್ನಡ ಪತ್ರಿಕೋದ್ಯಮದ ಬ್ರಹ್ಮನೆನಿಸಿದ.[2] ಪತ್ರಿಕೆ ಎಂದರೇನು ? ಎಂದು ತಿಳಿಸಿ, ಕನ್ನಡಿಗರಿಗೆ ಪ್ರಪಂಚದ ಜಾಗೃತಿ ಮೂಡಿಸಿದ ಮಹಾಶಯ. ೧೮೪೯ರಲ್ಲಿ ಬೆಳಗಾವಿಯಲ್ಲಿ ಖೀರೂ ಶೇಷ ಹೊರಡಿಸಿದ 'ಸುಬುದ್ಧಿ ಪ್ರಕಾಶ' ಕನ್ನಡಿಗನ ಪ್ರಥಮ ಯತ್ನ.[3] ಸುಮಾರು ಆರು ವರ್ಷಗಳು ನಡೆಯಿತು ಎಂದರೆ ಆ ಕಾಲಕ್ಕೆ ಅದು ದೀರ್ಘ ಕಾಲವೇ. ಅಲ್ಲಿಂದ ಈಚೆಗೆ ಅಸಂಖ್ಯ ಕನ್ನಡ ಪತ್ರಿಕೆಗಳು ಹೊರಟಿವೆ. ಹೆಚ್ಚಿನ ಪ್ರಮಾಣದವೆಲ್ಲ ಬಾಲಗ್ರಹ ಪೀಡಿಗೊಳಗಾದವುಗಳೇ. ಸುಮಾರು ೧೫೦ ವರ್ಷಗಳಲ್ಲಿ ೫೦೦೦ ಪತ್ರಿಕೆಗಳು ಹೊರಟಿವೆ. ಇವುಗಳಲ್ಲಿ ಶತಮಾನ ಕಂಡವುಗಳು ಕೈಬೆರಳೆಣಿಕೆಗೆ ಸಿಗುವಂಥ ೧) ಮಠಪತ್ರಿಕೆ[4] (ಧಾರವಾಡ) (೧೮೬೫) (ಈಗ ಜೀವನ ಶಿಕ್ಷಣ), ವಿಜಾಪುರದ 'ಕರ್ನಾಟಕ ವೈಭವ'[5], ಮೈಸೂರು ಗೆಜೆಟ್ (೧೮೬೫)[6] ವಾಗ್ಭೂಷಣ (ಬೆಂಗಳೂರು) (೧೮೯೭), ಧಾರವಾಡ (೧೮೯೬) ಮಾತ್ರ.

---

* ಭಾರತಿ ಪ್ರೌಢಶಾಲೆ, ಕೆಳದಿ ಅಂಚೆ, ಸಾಗರ ತಾಲ್ಲೂಕು–೫೭೭ ೪೦೧

1 ಹೊಸಗನ್ನಡ ಅರುಣೋದಯ, ಶ್ರೀನಿವಾಸ ಹಾವನೂರ ಪುಟ ೪೭೮

2 ಕನ್ನಡ ಪತ್ರಿಕಾ ಬ್ರಹ್ಮ ಡಾ. ಹೆರ್ಮನ್ ಮೋಗ್ಲಿಂಗ್, ಕಸ್ತೂರಿ ೧೯೭೮ ಜುಲೈ ಮೋಹನ ಹೆಗಡೆ

3 ಹೊ. ಅರುಣೋದಯ, ಶ್ರೀನಿವಾಸ ಹಾವನೂರ ಪುಟ ೪೮೮

4 ಸರಕಾರಿ ಶಿಕ್ಷಕರ ತರಬೇತಿ ಕಾಲೇಜು. ಧಾರವಾಡದಲ್ಲಿಯ ಪ್ರಿನ್ಸಿಪಾಲರ ಸುಪುರ್ದಿನಲ್ಲಿರುವ ಸಂಪುಟಗಳು.

5 ಹೊ. ಅರುಣೋದಯ : ಶ್ರೀನಿವಾಸ ಹಾವನೂರು ೫೦೭

6 ಭಾರತೀಯ ಪತ್ರಿಕೋದ್ಯಮ. ನಾ. ಕೃಷ್ಣಮೂರ್ತಿ ೨೯೧

ಪತ್ರಿಕೆಗಳ ಏಳು ಬೀಳಿಗೆ, ಅಲ್ಪಕಾಲೀನತೆಗೆ ಕಾರಣಗಳು ಹಲವಾರು ಆರ್ಥಿಕ, ರಾಜಕೀಯ, ಸಾಮಾಜಿಕ, ವೈಯಕ್ತಿಕ ಇವುಗಳನ್ನು ಎದುರಿಸಿ ನಡೆಯುವುದು ಒಂದು ಸಾಹಸದ ಕಾರ್ಯವೇ ಸರಿ.

ಸತ್ವಯುತ ವಸ್ತುಮಾತ್ರ ದೀರ್ಘಕಾಲ ಬಾಳಬಲ್ಲದು. ೧೯ನೇ ಶತಮಾನ ದೇಶೀಯ ಸಂಸ್ಥಾನಿಕರ ಜೊತೆಗೆ ಅವರ ಮೇಲೂ ಜಬರ್ು ತೋರಿಸುತ್ತಿದ್ದ ಇಂಗ್ಲೀಷರ ಕಾಲ. ಸಂಸ್ಥಾನಗಳಲ್ಲೇ ಹೆಸರಾದ ಮೈಸೂರು ಸಂಸ್ಥಾನ ಕಲೆ–ಸಾಹಿತ್ಯ, ಶಿಕ್ಷಣ–ಸಂಗೀತಗಳಲ್ಲಿ ಮುಂದುವರಿದಿತ್ತು ಎಂಬುದು ಸರ್ವವಿದಿತ. ಇದಕ್ಕೆ ೩೦೦–೪೦೦ ವರ್ಷಗಳ ಹಿನ್ನೆಲೆಯ ಇತಿಹಾಸವೇ ಇವೆ. ಮೈಸೂರು ರಾಜ್ಯದ ಅಂದಿನ ರಾಜಧಾನಿ, ಇಂದಿನ "ಜಿಲ್ಲೆ ಮೈಸೂರು" ಇಂದಿಗೂ ಅದೇ ಸತ್ವವನ್ನಿರಿಸಿಕೊಂಡಿದೆ ಎಂಬುದು ಹೆಮ್ಮೆಯ ವಿಷಯ. ಈ ಹಿನ್ನೆಲೆ ಇಲ್ಲಿಯ ಪತ್ರಿಕೋದ್ಯಮಕ್ಕೆ ನೀರೆರೆದಿದೆ. ಪೋಷಿಸಿದೆ. ಇದರ ಮುಂಚೂಣಿಯಲ್ಲಿದ್ದು ಅನೇಕ ಪತ್ರಿಕೆಗಳನ್ನು ನಡೆಸಿ ಇತರರಿಗೆ ಮಾರ್ಗದರ್ಶಕರಾದ ವಿದೇಶೀಯ ಹೆನ್ರಿಹೇಗ್, ಗಲ್‌ಫೋರ್ಡ್‌ರು, ದೇಶೀಯರಾದ ಕೆ. ಟಿ. ಶ್ರೀನಿವಾಸ ದೇಶಿಕಾಚಾರ್ಲು, ಎಂ. ಎ. ರಾಮಾನುಜಯ್ಯಂಗಾರ್, ಭಾಷ್ಯಂ ಭಾಷ್ಯಾಚಾರ್ಯರು, ತಾತಯ್ಯ ಎಂದೇ ಹೆಸರಾದ ಮೈಸೂರಿನ ಎಂ. ವೆಂಕಟಕೃಷ್ಣಯ್ಯ, ಶ್ರೀನಿವಾಸಯ್ಯಂಗಾರ್, ಎಂ. ಎಸ್. ಪುಟ್ಟಣ್ಣ, ಆಗರಂ ರಂಗಯ್ಯ, ಯಜಮಾನ್ ವೀರಸಂಗಪ್ಪ ಮುಂತಾದ ಪತ್ರಕರ್ತರು. ಇಂದಿಗೂ ಈ ಕ್ಷೇತ್ರದ ದೀಪಸ್ಥಂಭಗಳಾಗಿದ್ದಾರೆ. ಪತ್ರಿಕೋದ್ಯಮದ ಪಿತಾಮಹರೆನಿಸಿದ್ದಾರೆ.

೧೮೫೦–೧೯೦೦ರವರೆಗೆ ಮೈಸೂರು ಜಿಲ್ಲೆಯಲ್ಲಿ ಸುಮಾರು ೨೦ ಪತ್ರಿಕೆಗಳು ಪ್ರಕಟವಾಗಿವೆ. ೨೦ನೇ ಶತಮಾನದ ಕೊನೆ ತಲುಪಿರುವ ನಮಗೆ ಸುತ್ತಣ ಪತ್ರಿಕಾ ಸಂಖ್ಯೆ ಗಮನಿಸಿದರೆ ಅದು ತೀರ ಕಡಿಮೆ ಎನಿಸಬಹುದು. ಆದರೆ ಇಂದಿನ ಉದ್ಯಮಕ್ಕೆ ಅದೇ ದಾರಿದೀಪವೆನಿಸಿದ್ದಂತೂ ಖರೆ.

**ಮುದ್ರಣ-ಪ್ರಕಾಶನಗಳ ಪಾತ್ರ :**

ಸಾಹಿತ್ಯ ಹಾಗೂ ಜನಾಭಿಪ್ರಾಯವನ್ನು ಬಹಳ ಜನರಿಗೆ ಕಡಿಮೆ ಖರ್ಚಿನಲ್ಲಿ ಶೀಘ್ರವಾಗಿ ತಲುಪಿಸುವ ಸಾಧನ ಮುದ್ರಣವಾಗಿದೆ. ಈ ಮುದ್ರಣ ಕಾರ್ಯವನ್ನು ಮೊಟ್ಟಮೊದಲು ಕಂಡು ಹಿಡಿದವರು ಚೀನಿಯರು ಕ್ರಿ. ಶ. ೮೬೮. ಯುರೋಪದಲ್ಲಿ ೧೪೫೬ರಲ್ಲಿ ಪ್ರಾರಂಭವಾಯಿತು.[7] ನಮ್ಮಲ್ಲಿಗೆ ಈ ಯಂತ್ರ ಬಂದುದು ೧೫೫೬ರ ಸೆಪ್ಟೆಂಬರ್[8] ಇದರ ಮಹತ್ವವನ್ನು ಮೊದಲಿಗೆ ತಿಳಿದುಕೊಂಡವರು ಜರ್ಮನರು. ಅವರು ತಮ್ಮ ಧರ್ಮಪ್ರಸಾರಕ್ಕಾಗಿ ಬೈಬಲ್ ಪ್ರತಿಗಳನ್ನು ಜನರಿಗೆ ತಲುಪಿಸಲು ಇದರ ಸಹಾಯ ಪಡೆದರು. ಕನ್ನಡ ಮುದ್ರಣ ಕಾರ್ಯ ಕರ್ನಾಟಕದಲ್ಲಿ ಆರಂಭವಾಗದೇ ದೂರದ ಬಂಗಾಲದ ಶ್ರೀರಾಂಪುರ ಪ್ರೆಸ್‌ನಲ್ಲಿ ಆದುದು ತುಂಬ ಆಶ್ಚರ್ಯದ[9] ಸಂಗತಿ. ೧೮೧೭ರಲ್ಲಿಯ A Grammer of the Curnataka Language[10] ಮುದ್ರಿತವಾದ ಪ್ರಥಮ ಕನ್ನಡ ಗ್ರಂಥ. ಮಿಶನರಿ ಕಾರ್ಯಕ್ಕೆ ಇದರಿಂದಾಗುವ ಸಹಾಯ ಕಂಡ ಅವರು ಕರ್ನಾಟಕದಲ್ಲಿ ಪ್ರಾರಂಭಿಸಲು ಕಾರಣವಾಯಿತು.

೧೮೨೬ರಲ್ಲಿ ಬಳ್ಳಾರಿಯಲ್ಲಿ ಮುದ್ರಣ ಕಾರ್ಯ ಪ್ರಾರಂಭವಾದರೆ, ೧೮೩೨ರಲ್ಲಿ ಲಂಡನ್ನಿನಿಂದ ಕನ್ನಡದ ಮೊಳೆ ಬಂತು. ಜಾನ್ ರೀಡ್ ಹಾಗೂ ಪೇನ್ ೧೯೪೦ರವರೆಗೆ ಪ್ರೆಸ್ ನಡೆಸಿದರು. ಇದು ಕರ್ನಾಟಕದ ಮೊದಲ ಮುದ್ರಣ ಶಾಲೆ. ಮದ್ರಾಸಿನಲ್ಲಿ ಕಮರ್ಷಿಯಲ್ ಪ್ರೆಸ್ ಕನ್ನಡ ಮೊಳೆಗಳು ತೆಲುಗಿಗೆ ತೀರ ಸಮೀಪಸ್ಥವಾಗಿದ್ದವು. ಈ ತೆಲುಗಿನ ರೀತಿಯಿಂದ ಕನ್ನಡಕ್ಕೆ ತಿದ್ದುಪಡಿಯಾಗಲು ವೋಲ್ಟ್ಸ್ ಕರೆಕ್ಟ್ (Volts Correct) ಹಾಗೂ ಬಿ. ರಂಗಯ್ಯನವರು

7 ಹಿರಾಕ ಸೂತ್ರ, ಪ್ರಥಮ ಗ್ರಂಥ ಬರೆದವರು : ವಿಲಿಯಂ ಕ್ಯಾರಿ, ಮೊಳೆ ಸೇರಿಸಿದವರು ಬಂಗಾಲದ ಮನೋಹರ.

8 ಭಾರತೀಯ ಪತ್ರಿಕೋದ್ಯಮ, ನಾಡಿಗ ಕೃಷ್ಣಮೂರ್ತಿ ಪುಟ ೧೨

9 ಹೊಸಗನ್ನಡ ಅರುಣೋದಯ, ಶ್ರೀನಿವಾಸ ಹಾವನೂರ ಪುಟ ೩೫

10 ಅದೇ ಪುಟ ೩೮

ಕಾರಣರಾದರು. ಇವರೇ ವೆಸ್ಲಿಯನ್ ಮುದ್ರಣ ಪ್ರಗತಿಗೆ ಕಾರಣರಾದರು. ೧೮೪೬–೪೮ರ ಕಾಲದಲ್ಲೇ ಭಗವದ್ಗೀತೆಯು ಪ್ರಥಮ ಕನ್ನಡ ಮುದ್ರಣವಾದುದೂ ಇಲ್ಲಿಯೇ. ೧೮೫೦–೭೦ರ ವರೆಗಿನ ಅವಧಿಯಲ್ಲಿ ವೇಸ್ಲಿಯನ್ ಮಿಶನ್ ಪ್ರೆಸ್ ದಕ್ಷಿಣ ಭಾರತದಲ್ಲೇ ಹೆಸರಾಯಿತು. ೧೮೭೨ರಲ್ಲಿ ಬೇರೆಯವರ ಕೈ ಸೇರಿತು. ೧೮೯೦ರ ಸುಮಾರಿಗೆ ಹೆನ್ರಿ ಹೇಗ್ ವೇಸ್ಲಿಯನ್ ಪ್ರೆಸ್‌ನ್ನು ಕೈತೆಗೆದುಕೊಂಡನು.

೧೮೫೦–೯೦ ಸುಮಾರಿಗೆ ಬೆಂಗಳೂರಿನಲ್ಲಿ ಕೆಥೋಲಿಕ್ ಪ್ರೆಸ್ ಪ್ರಾರಂಭವಾಯಿತು.[11] ಇದನ್ನು ಸಿ. ಚಾರ್ಬೋನಾ ಹಾಗೂ ಎ. ಚೌತಿಲೊ ನಡೆಸಿದರು. ಮಂಗಳೂರಿನಲ್ಲಿ ೧೮೪೧ ರಲ್ಲಿ ಬಾಸೆಲ್ ಮಿಶನ್‌ರವರು, ೧೮೮೨ರಲ್ಲಿ ಕೊಡಿಯಾಲ ಬೈಲ್ ಪ್ರೆಸನ್ನು ಡೊನೆದಾ ಸೋರ್ಸ್‌ರು ಪ್ರಾರಂಭಿಸಿದರು. ಬೆಂಗಳೂರಿನಿಂದ ಇದಕ್ಕಾಗಿ ರೋಮನ್ ಲಿಪಿಯ ಮೊಳೆಗಳ ಜೊತೆಗೆ ಕನ್ನಡದ ಮೊಳೆ ತರಿಸಿದರು. ಇದರಲ್ಲಿಯೇ ದೊನೆದಾ ಹಾಗೂ ಸೋಲ್ಲರು ಕೊಂಕಣಿ ಪುಸ್ತಕಗಳನ್ನು ಕನ್ನಡದಲ್ಲೇ ಮುದ್ರಿಸಿದರು.

ಸರಕಾರೀ ಮುದ್ರಣಾಲಯ ಸ್ಥಾಪನೆಯಲ್ಲಿ ಮದ್ರಾಸಿಗೆ ಪ್ರಥಮ ಸ್ಥಾನ ಸಲ್ಲುತ್ತದೆ. ಅದೇ ಗವರ್ನ್‌ಮೆಂಟ್ ಗೆಜೆಟ್ ಪ್ರೆಸ್, ಮುಂಬಯಿಯಲ್ಲಿ ೧೮೨೪ ರಲ್ಲಿ ಪ್ರಥಮ ಕಲ್ಲಚ್ಚಿನ ಪ್ರೆಸ್ ಆರಂಭವಾಯಿತು. ಮುಂಬಾಯಿ, ಮದ್ರಾಸ್ ವಿ. ವಿ. ಗಳು ತಮ್ಮ ಪ್ರಶ್ನೆ ಕಾಗದ ಪತ್ರಗಳಿಗಾಗಿ ೧೮೫೭ ರಲ್ಲಿ ಶುರು ಮಾಡಿದರು. ಬೆಂಗಳೂರಿನಲ್ಲಿ ೧೮೪೨–೪೩ರಲ್ಲಿ ಕಲ್ಲಚ್ಚಿನ ಪ್ರೆಸ್ ಕಾರ್ಯಾರಂಭಿಸಿತು. ಪ್ರಥಮ ಕನ್ನಡ ಪತ್ರಿಕೆ ಅಚ್ಚಾದುದೂ ಇಲ್ಲಿಯೇ ೧೮೫೦ ರಲ್ಲಿ ಜಾನ್‌ಗ್ಯಾರೆಟ್ (John Garrett) ಸರಕಾರಿ ಪ್ರೆಸ್ ಆರಂಭಿಸಿದ. ಮೈಸೂರಿನ ಹಿತಬೋಧನೀ (೧೮೮೨) ಇಲ್ಲಿಂದಲೇ ಪ್ರಕಾಶನಗೊಂಡದ್ದು[13] ೧೮೯೦ರ ಸುಮಾರಿಗೆ ಮೈಸೂರಿನಲ್ಲಿ ಇದರ ಶಾಖೆಯಾರಂಭವಾಯಿತು. ಇದರ ನಂತರ ಅಂಬಾವಿಲಾಸ ಮುದ್ರಾಕ್ಷರ ಶಾಲೆ (ಕಲ್ಲಚ್ಚಿನದು), ಸದ್ವಿದ್ಯಾಮಂದಿರ, ಸ್ಟಾರ್ ಪ್ರೆಸ್, ಜಿ. ಟಿ. ಎ. ಪ್ರೆಸ್, ಜನಮ್ನೋಹಿನೀ ಪ್ರೆಸ್, ವೀರಶೈವ ಗ್ರಂಥ ಮುದ್ರಣಗಳೆಲ್ಲ ಹುಟ್ಟಿಕೊಂಡವು, ಅನೇಕ ಧಾರ್ಮಿಕ ಪತ್ರಿಕೆಗಳೂ ಇಲ್ಲಿಂದ ಪ್ರಕಟಗೊಂಡವು.

ಅಂತೂ ೧೯ನೇ ಶತಮಾನದ ಕೊನೆಯ ವೇಳೆಗೆ ಜಿಲ್ಲೆಯಲ್ಲಿ ವೆಸ್ಲಿಯನ್ ಪ್ರೆಸ್, ಜಿ.ಟಿ.ಎ. ಪ್ರೆಸ್ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಬಿಳಿಗಿರಿ ಪ್ರಿಂಟರ್ಸ್, ಮೈಸೂರು ಸರಕಾರದ ಬ್ರಾಂಡ್ ಮುದ್ರಣಾಲಯ ಎಚ್. ಸ್ಪೆನ್ಸರ್ (H. Spener) ಪ್ರಕಾಶನ, ಮೈಸೂರು ಪ್ರಿಟಿಂಗ್ ಎಂಡ್ ಪಬ್ಲಿಷಿಂಗ್ ಹೌಸ್, ಜಯಲಕ್ಷ್ಮಿ ವಿಲಾಸ ಮುದ್ರಾಕ್ಷರ ಶಾಲೆ, ವರ್ಧಮಾನ ಪವರ್ ಪ್ರೆಸ್, ಕೌನ್ ಎಲೆಕ್ಟ್ರಿಕ್ ಪ್ರೆಸ್, ಕ್ಷೀರಸಾಗರ ಪ್ರೆಸ್, ಸಾಧ್ವೀಪ್ರೆಸ್, ನಂಜನಗೂಡು ಕೃಷ್ಣ ಪ್ರೆಸ್, ಕನ್ಯಕಾಪರಮೇಶ್ವರಿ ಪ್ರೆಸ್, ಮಧ್ವಸಿದ್ಧಾಂತ ಪ್ರಕಾಶಿನಿ ಸಭಾ, ಜನಮ್ನೋಹನ ಮುದ್ರಣ, ಕೆ. ನರಸಿಂಹಯ್ಯ ಕಂಪನಿ ಎಂಡ್ ಪ್ರಿಂಟರ್ಸ್, ಭಾರತಿ ಭವನ ಪ್ರೆಸ್ ಚಾಮರಾಜನಗರ, ಸ್ಟಾರ್ ಪ್ರೆಸ್, ಶಂಕರವಿಲಾಸ ಪ್ರೆಸ್, ದಿ ಜನರಲ್ ಪ್ರೆಸ್ ಹೀಗೆ ಅನೇಕ ಮುದ್ರಣಾಲಯಗಳು ಪ್ರಕಾಶನ ಗಳೂ ಇದ್ದವು. ಕೆಲ ಪ್ರೆಸ್‌ಗಳು ಪ್ರಕಾಶನ ಕಾರ್ಯವನ್ನೂ ಕೈಗೊಂಡಿದ್ದವು.

### ಮುದ್ರಣ ಹಾಗೂ ಪುಸ್ತಕ ಕಾಯಿದೆ

ಮುದ್ರಣ ಹಾಗೂ ಪುಸ್ತಕ ಕಾಯಿದೆಯನ್ನು ಇಂಗ್ಲಿಷರು ೧೮೬೭ ರಲ್ಲಿ ಜಾರಿಗೆ ತಂದರು. ಇದರನು ಸಾರವಾಗಿ ಪುಸ್ತಕ ಯಾ ಪತ್ರಿಕೆಯನ್ನು ಹೊರಡಿಸಿದವರು ೩ ಪ್ರತಿಗಳನ್ನು ಸರಕಾರಕ್ಕೆ ಕಳಿಸಬೇಕಿತ್ತು. ಅವುಗಳು ಪರಿಶೀಲನೆಗೊಳಪಡುತ್ತಿದ್ದವು. ಇದರ ಪರಿಣಾಮವಾಗಿ ಭಾರತದಲ್ಲೇ ನಮಗೆ ಅಲಭ್ಯವಾದ ಹಲವಾರುಮಹತ್ವದ, ಕಳೆದ ಹಾಗೂ ಈ ಶತಮಾನದ

11 ಹೊಸಗನ್ನಡ ಅರುಣೋದಯ: ಶ್ರೀನಿವಾಸ ಹಾವನೂರ: ಅನುಬಂಧ.

12 ಅದೇ.

13 ಅದೇ ೪೯೮.

ಗ್ರಂಥ ಹಾಗೂ ಪತ್ರಿಕೆಗಳು ಲಂಡನ್ ಬಿ. ಎಲ್. ಹಾಗೂ ಐ. ಓ. ಎಲ್. ಗಳಲ್ಲಿ ಸುಸ್ಥಿತಿಯಲ್ಲಿವೆ. ಅಲ್ಲದೆ ಸಂಶೋಧಕರ ವಿನಂತಿಯ ಮೇರೆಗೆ ಲಭ್ಯವಾಗುತ್ತದೆ. ಆದ್ದರಿಂದ ಬ್ರಿಟಿಷ್ ಗ್ರಂಥಾಲಯ ಸಂಶೋಧಕರಿಗೆ ಅಮೂಲ್ಯ ಭಂಡಾರ ಎನಿಸಿವೆ. ಇಂಥ ಅವಕಾಶ ಸ್ಥಳಗಳು ನಮ್ಮ ದೇಶದಲ್ಲೇ ಅಪರೂಪ ಎಂಬುದು ವಿಷಾದನೀಯವಾದರೂ ಸತ್ಯಸಂಗತಿ.

೧-೧-೧೮೫೯-೬೪ ರ ವರೆಗೆ ನಡೆದ "ಮೈಸೂರ ವೃತ್ತಾಂತ ಬೋಧಿನೀ" ಮೈಸೂರು ಜಿಲ್ಲೆಯ ಪ್ರಥಮ ಪತ್ರಿಕೆಯೆಂಬ ಹೆಗ್ಗಳಿಕೆಯದು, ತಂದೆ-ಮಕ್ಕಳಾದ ಭಾಷ್ಯಂ ತಿರುಮಲಾಚಾರ್ಯ ಹಾಗೂ ಭಾಷ್ಯಾಚಾರ್ಯರು ಇದರ ನಿರ್ವಾಹಕರು. ಸಂಪಾದಕರು, ತೆಲುಗು ಲಿಪಿಯಲ್ಲೆ ವೆಸ್ಲಿಯನ್ ಮಿಶನ್ ಮುದ್ರಾಕ್ಷರ ಶಾಲೆಯಲ್ಲಿ ಕನ್ನಡ ಇಂಗ್ಲೀಷ್ ದ್ವೈಭಾಷೆಗಳಲ್ಲಿ ಅಚ್ಚಾಗುತ್ತಿತ್ತು. ಆಗಿನ ಮುಮ್ಮಡಿ ಕೃಷ್ಣರಾಜರ ಪೋಷಣೆಯಿಂದ ಹುಟ್ಟಿತು. ಮುಖಪುಟದಲ್ಲಿ ಮಧ್ಯೆ ಕಿರೀಟ ಎರಡೂ ಕಡೆ ಸಿಂಹ ಹಾಗೂ ಏಕ ಶೃಂಗಿ (Unicorn) ಚಿತ್ರ. ಕೆಳಗಡೆ The Mysore Vrittant Bodhini or News Recorder ಎಂದಿತ್ತು. ಕೆಳಗೆ ಮೈಸೂರ ವೃತ್ತಾಂತ ಬೋಧಿನೀ Published every Saturday under the patronage of His Highness Maharaja of Mysore ಎಂದಿತ್ತು. ಎಲ್ಲ ಪ್ರಕಾರದ ಸುದ್ದಿಗಳನ್ನು ಒಳಗೊಂಡಿತ್ತು. ಜಾಹೀರಾತುಗಳು ಅಂದೂ ಇದ್ದವು ಎಂದು ತೋರಿಸುತ್ತಿತ್ತು. ಅಲ್ಲದೇ ಸಂಪಾದಕೀಯ ಇಂಗ್ಲೀಷಿನಲ್ಲಿತ್ತು. ೧೮೫೯-೭೫ರ ವರೆಗೆ ಮೈಸೂರು, ಬೆಂಗಳೂರುಗಳಿಂದ ಹೊರಡುತ್ತಿತ್ತು. ಇಂದಿನಂತೆ ರೋಟರಿ ಹಾಗೂ ಟಿಲಿಪ್ರಿಂಟರಿಗಳಿಲ್ಲದೆ ಆರು ವರ್ಷಗಳ ದೀರ್ಘಕಾಲ ಸತತ ನಡೆದುದು ಸಂಪಾದಕರ ಸಾಹಸ ಪ್ರವೃತ್ತಿಯನ್ನು ತೋರಿಸುತ್ತದೆ.

ಅಲ್ಲಿಂದ ಶತಮಾನಾಂತ್ಯದ ವರೆಗೆ ಎಂಟು ಸಾಹಿತ್ಯಕ, ಏಳು ಸುದ್ದಿಯ, ನಾಲ್ಕು ಧಾರ್ಮಿಕ ಹಾಗೂ ಒಂದು ಶೈಕ್ಷಣಿಕ ಹೀಗೆ ಸುಮಾರು ೧೫-೨೦ ಪತ್ರಿಕೆಗಳು ಕಂಡು ಬಂದಿವೆ. ಅವುಗಳ ಆದರ್ಶ ಧ್ಯೇಯ-ಧೋರಣೆಗಳೇ ಇಂದಿನವರೆಗೂ ಮಾರ್ಗದರ್ಶಕ ಎಂದರೆ ತಪ್ಪಿಲ್ಲ. ಇವು ಕನ್ನಡಿಗರ ವಿಚಾರ ಜಾಗೃತಿ, ರಾಷ್ಟ್ರೀಯ, ಧಾರ್ಮಿಕ ಮನೋಭಾವನೆಗಳನ್ನು, ಸಾಹಿತ್ಯಕ ಶೈಕ್ಷಣಿಕ ಅಸಕ್ತಿ ಹುಟ್ಟಿಸಿ, ಬೆಳೆಸಲು ಕಾರಣವಾದವು. ಸುದ್ದಿ ಪತ್ರಿಕೆಗಳು ಜನರು ಕೂಪ ಮಂಡೂಕ ವೃತ್ತಿಯಿಂದ ಹೊರ ಪ್ರಪಂಚದತ್ತ ನೋಡಲು ಕಾರಣೀ ಭೂತವಾಯಿತು.

ಈ ಮೇಲಿನ ಪತ್ರಿಕೆ ನಿಂತ ನಂತರ ಆದೇ ಸಂಪಾದಕರ ಜೋಡಿ ೧೮೬೫-೬೮ ರವರೆಗೆ ಕನ್ನಡ ಇಂಗ್ಲೀಷ್ ಗಳಲ್ಲಿ ಗೆಜೆಟ್ಟಿನ ಸಾರಾಂಶ, ಒಳದೇಶ, ತಾಲೂಕಿನ ಸುದ್ದಿ ಸಹಿತ ಪ್ರೌಢ ಲೇಖನಗಳ 'ಕರ್ನಾಟಕ ಪ್ರಕಾಶಿಕಾ' ಎಂಬ ಸುದ್ದಿ ಸಾಪ್ತಾಹಿಕವನ್ನು ಪ್ರಾರಂಭಿಸಿದರು. ಕೆಲಕಾಲ ನಿಂತರೂ ೧೮೭೪-೯೬ರ ವರೆಗೆ ಕನ್ನಡದಲ್ಲೆ ನಡೆಯಿತು. ಲೋಪ ದೋಷಗಳ ರಾಜ್ಯಾಡಳಿತೆಯನ್ನು ಟೀಕಿಸುತ್ತಿತ್ತು. ಇದು ವಿಚಾರ ಸ್ವಾತಂತ್ರ್ಯ ನೀಡಿದ ಪ್ರಥಮ ಪತ್ರಿಕೆಯಾಗಿದೆ. ಸ್ವಂತ ಅಭಿಪ್ರಾಯಗಳನ್ನು ಧೈರ್ಯವಾಗಿ ಸಂ||ರು ಅಭಿವ್ಯಕ್ತಗೊಳಿಸುತ್ತಿದ್ದರು. ಟಿ. ಶ್ರೀನಿವಾಸ ಆಚಾರ್ಯರು, ವೆಂಕಟಾಚಾರ್ಯರು, ಇದರ ಆಧಾರ ಸ್ಥಂಭರು. ಮುಂದೆ ಮಂಡಿಪೇಟೆ ಯಜಮಾನ ವಿರೂಪಾಕ್ಷಯ್ಯನವರು ಕನ್ನಡ ಇಂಗ್ಲೀಷ್ ಭಾಷೆಗಳ ಪಾಕ್ಷಿಕ "ಮೈಸೂರ್ ಸ್ಟಾರ್"ನ್ನು ಆದೇ ಹೆಸರಿನ ಪ್ರೆಸ್ ಕ್ರಾನ್ ಎಲೆಕ್ಟ್ರಿಕ್ ಪ್ರೆಸ್‌ಗಳಲ್ಲಿ ೧೮೮೦-೮೨ ರವರೆಗೆ ಸುದ್ದಿಪತ್ರಿಕೆಯಾಗಿ ನಡೆಸಿದರು. ೧೯೨೮ ರಿಂದ ದೈನಿಕವಾಗಿ ೧೯೪೦ರ ತನಕ ಪತ್ರಿಕೆಯಾಗಿ ಮೆರೆಯಿತು.

ಮೈಸೂರಿನ ತಾತಯ್ಯ, ದಿ|| ವೆಂಕಟರಾಮಯ್ಯ, ಎಸ್.ರಾಮನಾಥಯ್ಯನವರ, 'ವೃತ್ತಾಂತ ಚಿಂತಾಮಣಿ' ವಾರ, ದ್ವೈವಾರ ಪತ್ರಿಕೆಯು ಜನತೆಯಲ್ಲಿ ಜಾಗೃತಿಯನ್ನು ಹುಟ್ಟಿಸಿತು. ಇದು ತಾತಯ್ಯನವರ ಪ್ರಥಮ ಯತ್ನ, ಕ್ರೈಸ್ತ ಮತ ವಾರ್ತೆ, ಮಠ, ರಾಜಧಾನಿ ಇವರ ಟೀಕೆ ಟಿಪ್ಪಣಿಗಳಿದ್ದವು. ದೃಷ್ಟಿ, ಮಾತ್ರ ಜನಸಾಮಾನ್ಯನ ಹಿತವಾಗಿತ್ತು. ಸ್ವಾತಂತ್ರ್ಯದ ಆಸ್ಥೆ ಹುಟ್ಟಿಸಿತು. ಅಧಿಕಾರಿಗಳ ಲೋಪದೋಷ ಎತ್ತಿ ಹಿಡಿಯಿತು. ೧೮೮೭-೧೯೧೨ ರ ವರೆಗೆ ನಡೆಯಿತು.

೧೯೦೮ ರಲ್ಲಿ ಈ ಮಧ್ಯೆ ಪತ್ರಿಕಾ ಶಾಸನಕ್ಕೆ ಸಿಕ್ಕು ನಿಂತಿತ್ತು.

ವಿದೇಶಿಯ ಫಾದರ್ ಹೆನ್ರಿಹೇಗ್, ಗಲ್‌ಫರ್ಡರು ೧೮೮೬–೧೯೪೦ ರವರೆಗೆ ಚೆನ್ನಾಗಿ ನಡೆಸಿದ 'ವೃತ್ತಾಂತ ಪತ್ರಿಕೆ' ಈ ವಿಷಯದ ದೀರ್ಘಕಾಲೀನ ವಾರಪತ್ರಿಕೆ. ಆಗಲೇ ೨೦೦೦ ಪ್ರಸಾರದಲ್ಲಿತ್ತು. ದೇಶ ವಿದೇಶ ಸುದ್ದಿ, ಚೀನದ ರಾಜ್ಯಕ್ರಾಂತಿ, ಕ್ರೈಸ್ತ ಮಿಶನರಿ ವಾರ್ತೆ ಜಿಲ್ಲೆಯ ಸುದ್ದಿಯನ್ನು ಹೊಂದಿದ ಇದು ವೆಸ್ಲಿಯನ್ ಪ್ರೆಸ್‌ನಲ್ಲಿ ಅಚ್ಚಾಗುತ್ತಿತ್ತು. ಮುದ್ದಾದ, ದೋಷರಹಿತ, ಸುಂದರಮುದ್ರಣದಿಂದಾಗಿ (ಇದು ಪ್ರಕಾಶನ ಸಂಸ್ಥೆಯು ಹೌದು) ಜನಾದರ ಗಳಿಸಿತ್ತು.

೧೮೮೦ ರಲ್ಲಿಯ 'ಮೈಸೂರು ಸ್ಟಾರ್' ೧೮೯೯ ರಲ್ಲಿಯ ಅಗರಂ ರಂಗಯ್ಯ ನರಸಿಂಹಯ್ಯನವರ ಶ್ರೀರಾಮ ಪ್ರೆಸ್‌ನಲ್ಲಿ ಅಚ್ಚಾಗುತ್ತಿದ್ದ 'ಸಾಧ್ವೀ' (ಇಂಗ್ಲೀಷಿನ ಸಂಪಾದಕೀಯವಿತ್ತು) ಇಂದಿಗೂ ಪ್ರಕಟವಾಗುತ್ತಿವೆ ಎಂಬುದು ವಿಶೇಷ ಸಂಗತಿ.

ಚಿ. ಶ್ರೀನಿವಾಸ ಅಯ್ಯಂಗಾರರ 'ದೇಶಾಭಿಮಾನಿ ದೈನಿಕ' ೧೮೯೮ ರಲ್ಲಿ ಹುಟ್ಟಿ ದಿವಾನ್ ಶೇಷಾದ್ರಿಯ ವರ ಶಾಸನದಲ್ಲಿ–ಕಟು ವಿಮರ್ಶೆ ಸರಕಾರದ ಟೀಕೆಗಾಗಿ ಪತ್ರಿಕಾ ಶಾಸನಕ್ಕೊಳಗಾಗಿ ೧೯೦೮ ರಲ್ಲಿ ನಿಂತಿತು.

ತಮ್ಮ ನಿರ್ಭೀತ, ಉದಾತ್ತ ಧ್ಯೇಯೋದ್ದೇಶ ಗಳಿಂದ ಕನ್ನಡಿಗರಲ್ಲಿ ಈ ವೃತ್ತಪತ್ರಿಕೆಗಳು, ಸುತ್ತಣ ಪ್ರಪಂಚದ ಆಗುಹೋಗುಗಳನ್ನು ಅರಿಯುವ, ಆಸಕ್ತಿ ಕೆರಳಿಸಿ ಅರಳಿಸಿದ್ದಂತೂ ನಿಃಸ್ಸಂಶಯ. ಈ ಪ್ರಚೋದ ನೆಯೇ ೧೯೦೧ ರಿಂದ ಈವರೆಗೆ ವಿವಿಧ ಭಾಷೆಗಳ ಪತ್ರಿಕೆಗಳು ಈ ಜಿಲ್ಲೆಯಲ್ಲೆ ಅಸಂಖ್ಯವಾಗಿ ಹರಡಲು ಕಾರಣವಾಗಿವೆ.

**ಸಾಹಿತ್ಯಕ ಪತ್ರಿಕೆಗಳು**

೧೯ನೇ ಶತಮಾನದ ಪತ್ರಿಕೆಗಳು ತಮ್ಮ ಬಲ ವನ್ನು ಸಾಹಿತ್ಯ, ಸಂಸ್ಕೃತಿಯತ್ತ ಉಳಿದೆಲ್ಲಕ್ಕಿಂತ ಹೆಚ್ಚು ತೋರಿಸಿದದು ಬಹುಶಃ ಇಲ್ಲಿಯ ಅಳರಸರ ಒಲವಿನ ಪರಿಣಾಮವಿರಬೇಕು. ಲಕ್ಕೂರ ಸುಬ್ಬರಾಯರು ೧೮೮೮ ರಲ್ಲಿಯ ದ್ವೈಮಾಸ ಪತ್ರಿಕೆ 'ಕರ್ನಾಟಕ ವಾಣೀವಿಲಾಸ' ಈ ದಿಶೆಯಲ್ಲಿ ಮೊದಲಿಗರೆನ್ನಬಹುದು. ಕಲೆ, ಸಾಹಿತ್ಯ ಸಂಸ್ಕೃತಿ, ನಾಟಕ, ಸ್ತ್ರೀಯರಿಗಾಗಿ ಕಸೂತಿ, ಹೊಲಿಗೆ, ವಿಷಯ ಕೂಡ ಒಳಗೊಂಡಿತ್ತು. ಶ್ರೀಕೃಷ್ಣರಾಜೇಂದ್ರ ಪ್ರೆಸ್‌ನಲ್ಲಿ ಮುದ್ರಣ, ತಾತಯ್ಯ ಸ್ಥಾಪಿಸಿದ 'ಹಿತಬೋಧಿನಿ' ಮಾಸಿಕ ೧೮೮೩–೧೯೨೯ರ ವರೆಗೆ ನಡೆದಉತ್ತಮ ಸಾಹಿತ್ಯಕ ಪತ್ರಿಕೆಯಾಗಿದೆ. ಎಂ. ಎಸ್. ಪುಟ್ಟಣ್ಣ, ಎಸ್. ಜಿ. ನರಸಿಂಹಾಚಾರ್ಯ, ಆರ್. ರಾಮನಾಥಯ್ಯ, ಹೆಚ್. ಜಿ. ಶ್ರೀನಿವಾಸಯ್ಯ ಮುಂತಾದವರ ಯತ್ನದ ಫಲ. ಶ್ರೀ ಕೃಷ್ಣರಾಜ ವಾಣೀ ವಿಲಾಸ ಪ್ರೆಸ್, ಜಗನ್ಮೋಹನ ಮುದ್ರಣ, ಹಾಗೂ ಬೆಂಗಳೂರಿನ ಜಾನ್ ಗೆರೆಟರ ಸರಕಾರಿ ಮುದ್ರಣಾಲಯದಲ್ಲಿ ಅಚ್ಚಿನ ಕಾರ್ಯ. ನೈತಿಕ ಹಾಗೂ ಸಾಹಿತ್ಯ ಲೇಖನಗಳು ಇದರ ಜೀವಾಳವಾಗಿತ್ತು. ಕನ್ನಡ,ತೆಲುಗು, ಇಂಗ್ಲೀಷ್, ಒಳಗೊಂಡ ಪತ್ರಿಕೆ.

'ಆರ್ಯವಿದ್ಯಾ ಸಂಜೀವಿನೀ' ಮೇಲುಕೋಟೆ ಸಂಸ್ಕೃತ ಕಾಲೇಜು ಪ್ರಿನ್ಸಿಪಾಲ ರಾಮಸ್ವಾಮಿ ಶೆಲ್ವಪಿಳ್ಳೈ ಅಯ್ಯಂಗಾರರು,, ಪಾಂಡಿತ್ಯ ವರ್ಧಿನೀ ಸಭಾ, ಸದಾನಂದ ವರ್ಧಿನೀ ಸಭಾ ಆಶ್ರಯದಲ್ಲಿ ನಡೆಸದರು. ಜೆ. ಟಿ. ಎ. ಕ್ಕೆರವರ....'ಕರ್ನಾಟಕ ಗ್ರಂಥಮಾಲಾ' ಮಾಸಿಕವು ಸಂಸ್ಕೃತ, ಬಂಗಾಳಿ ಕಾದಂಬರಿ ಅನುವಾದಗಳನ್ನು ೧೮೯೩ ರಿಂದ ಕೆಲಕಾಲ ನೀಡಿತು. ಕನ್ನಡ ಪಂಚತಂತ್ರ ಮುಂತಾದವು ಇದರ ಆಕರ್ಷಣೆಯಾಗಿದ್ದು ಮುಂದೆ ಅವುಗಳನ್ನು ಸ್ವತಂತ್ರ ಗ್ರಂಥಗಳನ್ನಾಗಿ ಪ್ರಕಟಿಸಿತು. ಬಾಪೂ ಸುಬ್ಬರಾವ್, ಬಿ. ಕೃಷ್ಣಪ್ಪ, ಎಂ. ರಾಮರಾಯರು ೨೪ ಪುಟಗಳ ಈ ಪತ್ರಿಕೆ ನಡೆಸಿದವರು. ಬಿ. ಪದ್ಮರಾಜ ಪಂಡಿತ, ಎನ್. ಕರಿಬಸವಶಾಸ್ತ್ರಿ, ಎನ್. ರುದ್ರಪ್ಪನವರು, ಶಂಕರವಿಲಾಸ ಪ್ರೆಸ್‌ನಿಂದ ಹೊರಡಿಸುತ್ತಿದ್ದ 'ಕಾವ್ಯಾಂಬುಧಿ' ಮಾಸಿಕವು, ಒಂದೇ ವರ್ಷ (೧೮೯೪–೯೫) ನಡೆಯಿತು. ಕೆ. ಟಿ. ಶ್ರೀನಿವಾಸ ದೇಶಿಕಾಚಾರ್ಲು ಅವರ ೧೬ ಪುಟಗಳ 'ವಿವೇಕ ದೀಪಿಕಾ' ಜಯಲಕ್ಷ್ಮಿ ವಿಲಾಸದಿಂದ ಅಚ್ಚಾಗುತ್ತಿತ್ತು. ಎಂ. ಎಲ್. ಶ್ರೀ ಕಂಠೇಶಗೌಡ, ಬಸವಪ್ಪ ಶಾಸ್ತ್ರಿ, ಕರಿಬಸವಶಾಸ್ತ್ರಿಗಳ 'ಸುರಭಿ' (೧೮೯೬) ಯು ಲಲಿತ, ಜಾನಪದ ಕತೆಗಳನ್ನೊಳಗೊಂಡು ಜಿ. ಟಿ. ಎ. ಯಿಂದ

ಪ್ರಕಟವಾಗುತ್ತಿತ್ತು. ರಾ. ಸೂ. ವೆಂಕಟಕೃಷ್ಣಯ್ಯನವರ 'ವಿವೇಕಾನಂದ' (೧೮೯೮) ಧಾರ್ಮಿಕ ಸನಾತನ, ಸಂಸ್ಕೃತಿ, ಬ್ರಾಹ್ಮಣ್ಯ ಮುಂತಾದ ಲೇಖನಗಳನ್ನೊಳಗೊಂಡು ಜಯಲಕ್ಷ್ಮೀವಾಸ ಮುದ್ರಾಕ್ಷರ ಶಾಲೆಯಲ್ಲಿ ಅಚ್ಚಾಗುತ್ತಿತ್ತು. ಎಂ. ಶ್ರೀನಿವಾಸಯ್ಯಂಗಾರರ 'ನಡೆಗನ್ನಡಿ' ೧೯೦೮ ರವರೆಗೆ ನಡೆಯಿತು.

## ಧಾರ್ಮಿಕ ಪತ್ರಿಕೆಗಳು

ಶತಮಾನದ ಕೊನೆಯ ದಶಕ ವಿವಿಧ ಧರ್ಮತತ್ವ ಲೇಖನಗಳನ್ನು ಹೊಂದಿದ ಪತ್ರಿಕೆಗಳು ಕೆಲವೇ ಕಂಡು ಬರುತ್ತವೆ. ಎನ್. ಆರ್. ಕರಿಬಸವಶಾಸ್ತ್ರಿ, ಪಿ. ವಿ. ರುದ್ರಪ್ಪನವರ 'ವೀರಶೈವ ಮತ ಪ್ರಕಾಶಿಕೆ' ಈ ದಿಶೆಯಲ್ಲಿ ಪ್ರಥಮ. ೧೮೯೧–೪ ರವರೆಗೆ ನಡೆದ ಈ ಕನ್ನಡ–ಸಂಸ್ಕೃತ ದ್ವಿಭಾಷಾ ಪತ್ರಿಕೆ–ಚಾಮರಾಜ ನಗರದ ಭಾರತೀಭವನ ಪ್ರೆಸ್‌ನಲ್ಲಿ ಮುದ್ರಿತವಾಗುತ್ತಿತ್ತು. ಸಟೀಕಾ ಬಸವೇಶ ವಿಜಯ ಧಾರವಾಹಿಯಾಗಿ ಪ್ರಕಟವಾಯಿತು. ರಾಮಣ್ಣ ವಾಗ್ಮಿ ಅವರು 'ಜಿನಮತಾದರ್ಶ' (೧೮೯೮–೧೯೦೭) ದಲ್ಲಿ ಸಂಸ್ಕೃತ ಗ್ರಂಥ, ಸಂಖ್ಯಾಶಾಸ್ತ್ರಗಳನ್ನು ಹರಡಿದರು. ಕನ್ನಡ–ಸಂಸ್ಕೃತ ದ್ವೈಭಾಷೆಯ 'ವೇದಾಂತವಾದಾವಲೀ' (ಸಾಪ್ತಾಹಿಕ) ೧೮೯೮–೧೯೩೦ರವರೆಗೆ ನಡೆಯಿತು. ವಿಶ್ವ ವಿದ್ಯಾಲಯದ ಪದವೀಧರರೇ ಹೆಚ್ಚು ಬರೆಯುತ್ತಿದ್ದರು. ಇದು ಶ್ರೀ ವೈಷ್ಣವಧರ್ಮೋದ್ದೇಶಿತವಾಗಿತ್ತು. ಹಿಂದೆ ಕೆಲಸುದ್ದಿ ಸಾಹಿತ್ಯ ಪತ್ರಿಕೆಗಳೂ ಕ್ರೈಸ್ತಧರ್ಮ ತತ್ವಗಳ ಲೇಖನ ಹೊಂದಿದ್ದನ್ನು ನೋಡಿದ್ದೇವೆ.

## ಶೈಕ್ಷಣಿಕ ಪತ್ರಿಕೆಗಳು

ವಿದ್ಯಾರ್ಥಿಗಳಿಗೆ ಪಠ್ಯಕ್ರಮ, ಪರೀಕ್ಷಾ ಮಾರ್ಗದರ್ಶನ, ಅಭ್ಯಾಸಕ್ರಮ ಕುರಿತು ನೂತನ ವಿದ್ಯಸಮಿತಿಯು 'ವಿದ್ಯಾದಾಯಿನಿ' ಮಾಸಿಕದ ಕಾರ್ಯಗಮನಾರ್ಹ ಎಂ. ಶಾಮರಾವ್, ಜೆ. ಹನುಮಂತರಾವ್, ಬಾಪೂ ಸುಬ್ಬರಾವ್ ಮುಂತಾದ ಶಿಕ್ಷಣ ತಜ್ಞರು ನಡೆಸಿದ ಇದು ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್‌ನಲ್ಲಿ ಅಚ್ಚಾಗಿ ಜಿ.ಟಿ.ಎ. ದಲ್ಲಿ ಪ್ರಕಾಶನಗೊಳ್ಳುತ್ತ ೧೮೯೩–೧೯೫೩ರವರೆಗೂ ನಡೆದ ಉತ್ತಮ ಶೈಕ್ಷಣಿಕ ಪತ್ರಿಕೆ.

ಇವುಗಳ ಹೊರತಾಗಿ ಕಲೆ, ವಿಜ್ಞಾನ, ಸಂಸ್ಕೃತಿ, ಆರೋಗ್ಯ, ಔದ್ಯಮಿಕ, ವೈದಕೀಯ, ಸರಕಾರಿ ನಿರೂಪ, ಕೃಷಿ 'ಕುರಿತಾದ ಯಾವ ಪತ್ರಿಕೆಗಳೂ ಕಂಡು ಬರುತ್ತಿಲ್ಲ.' ಜನರಲ್ಲಿ ವ್ಯಾಪಾರೀ ಮನೋಭಾವನೆಯಿರಲಿಲ್ಲ. ಪತ್ರಿಕೆಯಿಂದ ಹಣ ಮಾಡುವ ಗುರಿಯಿರಲಿಲ್ಲ. ರಾಜಕೀಯದ ಕೈವಾಡವಿರದಿರುವುದು ಉದಾತ್ತತೆ, ಧರ್ಮಶ್ರದ್ಧೆ, ಪವಿತ್ರತೆಗಳೇ ಪತ್ರಿಕೋದ್ಯಮದ ಅಡಿಗಲ್ಲಾಗಿದ್ದುದು ಇದಕ್ಕೆ ಕಾರಣವಿರಬಹುದು.

ಎಂತಲೇ ಮೈಸೂರು ಜಿಲ್ಲೆಯಲ್ಲಿ ಕೆಲವೇ ಪತ್ರಿಕೆಗಳು ನಡೆದರೂ ಅಲ್ಪ ಆಯುಷಿಗಳಾದರೂ ಮಟ್ಟವನ್ನು ಉನ್ನತವಾಗಿರಿಸಿಕೊಂಡು ಬಾಳಿದವು. ಚ್ಯುತಿ ಬಂದಾಗ ಕಾರ್ಯನಿಲ್ಲಿಸಿದವೇ ಹೊರತು ತತ್ವಚ್ಯುತಿಯಾಗಿ ಬಾಳಲಿಲ್ಲ ಎಂಬುದು ಕನ್ನಡ ಪತ್ರಿಕೋದ್ಯಮಕ್ಕೇ ಒಂದು ಹೆಮ್ಮೆಯ ಸಂಗತಿಯಾಗಿದೆ.

ಡಾ|| ಬಿ. ನಂಜುಂಡ ಸ್ವಾಮಿ*

# 'ಮೈಸೂರು ಸ್ಟಾರ್' ಪತ್ರಿಕೆ ಹಾಗೂ ವೀರಸಂಗಪ್ಪನವರು

ಹಳೆ ಮೈಸೂರಿನ ಬಹಳ ಪ್ರಮುಖವಾದ 'ಮೈಸೂರು ಸ್ಟಾರ್' ಪತ್ರಿಕೆ ಪ್ರಾರಂಭದ ದಿನದಿಂದ ಹೋರಾಟದಲ್ಲೇ ಮುಂದುವರಿದು, ನಿಂತು ಹೋದ ನಂತರವೂ ಈ ಪತ್ರಿಕೆಯ ಬಗ್ಗೆ ಸರಿಯಾದ ಮಾಹಿತಿಯು ಲಭಿಸದೆ ಹೋದದ್ದು ಪತ್ರಿಕೆಯ ದುರಾದೃಷ್ಟವೇ ಸರಿ. ಸುಮಾರು ೫೭ ವರ್ಷಗಳು ಜನಸಾಮಾನ್ಯರಿಗೋಸ್ಕರ ಸರ್ಕಾರದ ಕಡೆಯಿಂದ ಸಿಕ್ಕಬೇಕಾದ 'ವಿದ್ಯೆ' 'ನೌಕರಿ' ಕೊಡಿಸಲು ಸಾಕಷ್ಟು ಹೋರಾಟ ಮಾಡಿದೆ. ಸಂಸ್ಕೃತ ವಿದ್ಯಾಭಾಸದ ಬಗ್ಗೆಯಂತೂ ಈ ಪತ್ರಿಕೆ ಅವಿರತವಾದ ಹೋರಾಟವನ್ನು ಮಾಡಿ ತನ್ನ ಪತ್ರಿಕೆಯಲ್ಲಿ ಅನೇಕ ಸಂಪಾದಕೀಯಗಳನ್ನು ಬರೆದು ಜನರಿಗೆ ತಿಳುವಳಿಕೆ ಉಂಟು ಮಾಡಿತು. ಸಂಸ್ಕೃತ ವಿದ್ಯಾಭ್ಯಾಸವನ್ನು ಎಲ್ಲರಿಗೂ ಕೊಡಿ. ಸರ್ಕಾರದ ಖರ್ಚಿನಲ್ಲಿ ನಡೆಯುವ ಸಂಸ್ಕೃತ ಪಾಠಶಾಲೆಯಲ್ಲಿ ಕಲಿಯಲು, ಎಲ್ಲಾ ನಾಗರಿಕರಿಗೂ ಹಕ್ಕಿದೆ. ಒಂದು ವರ್ಗದವರ ಕಂದಾಯ ದೀದಲೆ ಸಂಸ್ಕೃತ ಪಾಠಶಾಲೆ ನಡೆಯುತ್ತಾ ಇಲ್ಲವಲ್ಲ ಎಂದು ಬಹಳಷ್ಟು ವಾದಮಾಡಿ ತನ್ನ ಪತ್ರಿಕೆಯಲ್ಲಿ ಈ ವಿಷಯದಲ್ಲಿ ಕುರಿತು ಸಂಪಾದಕೀಯವನ್ನು ಬರೆದಿದೆ, ಬ್ರಾಹ್ಮಣೇತರ ಚಳವಳಿಗೆ ಮೈಸೂರು ರಾಜ್ಯಕ್ಕೆ ಈ ಪತ್ರಿಕೆ ಒಂದು ಬೆನ್ನೆಲಬು ಆಗಿತ್ತು ಅಂದರೆ ಅತಿಶಯೋಕ್ತಿ ಆಗಲಾರದು.

ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿದ ಕನ್ನಡ ವಿಷಯ ವಿಶ್ವಕೋಶ ಪುಟ ೮೮೪ರಲ್ಲಿ "೨೦ನೆ ಶತಮಾನದ ಆರಂಭದ ಕಾಲದಲ್ಲಿ 'ಮೈಸೂರು ಸ್ಟಾರ್' ಪ್ರಾರಂಭ ವಾಯಿತು. ಹಿಂದುಳಿದ ವರ್ಗಗಳ ಮುನ್ನಡೆಗಾಗಿ ಹೋರಾಟ ನಡೆಸುತ್ತಿದ್ದ ಈ ಪತ್ರಿಕೆ ಕೆಲವೇ ವರ್ಷ ಗಳಲ್ಲಿ ನಿಂತು ಹೋಯಿತು." ಅನ್ನುವ ಮಾಹಿತಿ ಕೊಟ್ಟಿದೆ. ಆದರೆ ಸತ್ಯವೇ ಬೇರೆ.

ಕೈ|| ಯಜಮಾನ್ ವೀರಸಂಗಪ್ಪನವರು ೧೮೯೧ ಫೆಬ್ರವರಿ ೮ನೇ ತಾರೀಖು ಭಾನುವಾರದ ಸಂಚಿಕೆಯಲ್ಲಿ 'ಮೈಸೂರು ಸ್ಟಾರ್' ಪತ್ರಿಕೆಯಲ್ಲಿ ಬರೆದ ಒಕ್ಕಣೆ ಹೀಗಿದೆ ! ಮೈಸೂರು ಸ್ಟಾರ್‌ಯೆಂಬ ಅಭಿದಾನವುಳ್ಳ ಪತ್ರಿಕೆಯೂ ೧೮೮೦ನೇ . ಇಸವಿಯಲ್ಲಿ ಹೊರಡುವುದಕ್ಕೆ ಆರಂಭವಾಗಿದ್ದು, ೧೮೮೩ ಇಸವಿ ಜನವರಿ ತಿಂಗಳಲ್ಲಿ ನಮ್ಮ ವಶವಾಗಿ ೧೮೮೭ ಜುಲೈ ಮಾಹೆವರಿಗೂ ಚಾಲ್ತಿ ಯಲ್ಲಿಯಿದ್ದು ಈ ಪತ್ರಿಕೆ ಚಂದಾದಾರರು ತಮ್ಮಗಳ ಮ್ಯಾಲೆ ಇರತಕ್ಕ ಬಾಕಿಯನ್ನು ರವಾನಿಸಿ ಸಹಾಯ ಮಾಡುವ ವಿಷಯದಲ್ಲಿ ಉದಾಸೀನರಾದ ಪ್ರಯುಕ್ತ ಹೊರಡುತಿದ್ದನ್ನು ಆಗ್ಗೆ ನಿಲಿಸಿದ್ದು ಪುನಹ ಪ್ರಚಾರ ಪಡಿಸಲು ಉಂಟಾದ ಕಾರಣವೇನೆಂದ್ರೆ"....ಎಂದು ಸ್ಟಾರ್ ಪತ್ರಿಕೆ ಹುಟ್ಟಿನ ಬಗ್ಗೆ ಸ್ಪಷ್ಟವಾದ ಮಾಹಿತಿ ಲಭ್ಯವಿದೆ.

ಮೈಸೂರು ಸ್ಟಾರ್ ಹುಟ್ಟು ಬೆಳವಣಿಗೆಯನ್ನು ಆರಂಭದಿಂದಲೂ ನೋಡಿದ, ಜೊತೆಗೆ ಆ ಪತ್ರಿಕೆಯ

* ಪಂಡಿತ ತಾರಾನಾಥ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಎಚ್. ರಸ್ತೆ, ತುಮಕೂರು-೫೭೨ ೧೦೨.

ಬಾಲ್ಯಾವಸ್ಥೆಯಲ್ಲಿ ಉತ್ತಮವಾದ ಲೇಖನವನ್ನು ಬರೆದು ಯಜಮಾನ್ ವೀರಸಂಗಪ್ಪನವರ ಕೈ ಬಲ ಪಡಿಸಿದ ಕರ್ನಾಟಕ ಭಾಷಾರತ್ನ ಆಸ್ಥಾನ ವಿದ್ವಾನ್ ಕರಿಬಸವಶಾಸ್ತ್ರಿಗಳಿಗೂ ಯಜಮಾನ್ ವೀರಸಂಗಪ್ಪ ನವರಿಗೂ ಕೆಲವು ವಿಷಯದಲ್ಲಿ ಭಿನ್ನಾಭಿಪ್ರಾಯ ಬಂದು ೧೮೯೧ರ ಜುಲೈ ತಿಂಗಳಿನಿಂದ 'ವೀರಶೈವ ಮತ ಪ್ರಕಾಶಿಕಾ' ಪತ್ರಿಕೆಯನ್ನು ಶುರು ಮಾಡಿದರು. ಮೈಸೂರು ಮಹಾರಾಜ ಕಾಲೇಜಿನ ಮುನಿಷಿಯಾಗಿ ಕೆಲಸ ಮಾಡುತಾ ಇದ್ದ ಶಾಸ್ತ್ರಿಗಳು ತಮ್ಮ ದತ್ತು ಮಗ ರುದ್ರಪ್ಪನವರನ್ನು ತಮ್ಮ ಪತ್ರಿಕೆಗೆ ಸಂಪಾದಕರನ್ನಾಗಿ ಮಾಡಿದ್ದರು. ಶ್ರೀ ರುದ್ರಪ್ಪನವರು ಶಾಸ್ತ್ರಿಗಳ ನೇತೃತ್ವದಲ್ಲಿ ನಡೆಯುತ್ತಾ ಇದ್ದ ಮೈಸೂರು ಮಂಡಿ ಪೇಟೆಯಲ್ಲಿ ಇದ್ದ ವಿದ್ಯಾಭಿವರ್ಧಿನೀ ಪಾಠಶಾಲೆಯ ಉಪಾಧ್ಯಾಯರಾಗಿ ಸೇವೆ ಸಲ್ಲಿಸುತ್ತಾ ಇದ್ದರು. "ವೀರಶೈವ ಮತ ಪ್ರಕಾಶಿಕಾ ಪತ್ರಿಕೆಯಲ್ಲಿ ೧೮೯೧ ಅಕ್ಟೋಬರ ತಿಂಗಳಲ್ಲಿ" ಮೈಸೂರು ಸ್ಟಾರ್ ಪತ್ರಿಕಾ ಪ್ರಲಾಪವು ಲೇಖನದಲ್ಲಿ ಮೈಸೂರು ಸ್ಟಾರ್ ಬಗ್ಗೆ ಕೆಳಕಂಡ ಮಾಹಿತಿ ಲಭ್ಯವಿದೆ.

### ಮೈಸೂರು ಸ್ಟಾರ್ ಮೊದಲನೆ ಜನ್ಮದ ವೃತ್ತಾಂತ :

ಮ ||ರಾ|| ಅಸಿಸ್ಟೆಂಟ್ ಶ್ರೀನಿವಾಸರಾಯರು ಮ ||ರಾ|| ಗಣೇಶಸಿಂಗರು ಕುಮಾರಸ್ವಾಮಿ ಮೊದಲಿಯಾರ ಮುಂತಾದ ದೊಡ್ಡ ಮನುಷ್ಯರು ಪರೋಪಕಾರ ಬುದ್ಧಿಯಿಂದ ಒಂದು ಮೀಟಿಂಗ್ ಮಾಡಿ ಕೆಲಸಗಾರರಿಗೆ'ಜೀವನೋಪಾಯಂಗಳಂ'ಕಲ್ಪಿಸಬೇಕೆಂದು ನಿರ್ಧರಿಸಿ ಈ ಸಂಸ್ಥಾನದಲ್ಲಿ , ಒಂದು ಮುದ್ರಾಶಾಲೆ ಯನ್ನು ಅದರಲ್ಲಿ ಕನ್ನಡ ಮತ್ತು ಇಂಗ್ಲೀಷ್ ಭಾಷೆ ಗಳಿಂದ ಕೂಡಿದ "ಮೈಸೂರು ಸ್ಟಾರ್" ಎಂಬ ವಾರ ಪತ್ರಿಕೆಯನ್ನು ಮರಗೆಲಸ ಕಾರಾಖಾನೆಯನ್ನು, ಕಬ್ಬಿಣ ಕೆಲಸ ಕಾರಾಖಾನೆಯನ್ನು, ಒಂದು ಬ್ಯಾಂಕನ್ನು ಸ್ಥಾಪಿಸಿ ೨–೩ ವರ್ಷಗಳು ನಡೆಸಿದರು. ಈಚೆಗೆ ಯಾವ ಕಾರಣದಿಂದಲೋ ಮುದ್ರಾಯಂತ್ರವನ್ನು ಮಾರಿಬಿಡ ಬೇಕು ಎಂದು ನಿರ್ಧರಿಸಿದಾಗ, ಅದನ್ನು ಯಜಮಾನ್ ವೀರಸಂಗಪ್ಪನವರು ಮತೀಯ ಗ್ರಂಥಗಳನ್ನು ಪ್ರಕಾಶ ಪಡಿಸಲು ತೆಲಗು, ಕನ್ನಡ, ಇಂಗ್ಲೀಷ್ ಅಕ್ಷರಗಳೊಡನೆ ಮೂರು ಸಾವಿರ ರೂಪಾಯಿ ಕ್ರಯತ್ಕೆ ತೆಗೆದು ಕೊಂಡದಲ್ಲದೆ ಆ ಮುದ್ರಾಶಾಲೆಯಲ್ಲಿ ನಡೆಯುತ್ತಿದ್ದ ಸ್ಟಾರ್ ಪತ್ರಿಕೆಯನ್ನು ತಮ್ಮ ಹೆಸರಿಗೆ ರಿಜಿಸ್ಟರ್ ಮಾಡಿಸಿಕೊಂಡರು. ಸ್ವಲ್ಪ ತಿಂಗಳ ನಂತರ ಇಂಗ್ಲೀಷ್ ಭಾಗವನ್ನು ಕೈಬಿಟ್ಟು ಕನ್ನಡ ಭಾಗವನ್ನು ಮಾತ್ರ ಪ್ರಕಟ ಮಾಡಲು ಪ್ರಾರಂಭಿಸಿದರು. ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ೨–೩ ಶಂಕರ ಸಂಹಿತಾ ವಚನ ಗಳನ್ನು ಬರೆದದ್ದರ ಮೇಲೆ 'ಪಾಲಹಳ್ಳಿ ರಂಗಣ್ಣ ನವರು' 'ನಾಗಮಂಗಲದ ನರಸಿಂಹಶಾಸ್ತ್ರಿಗಳು' 'ಕಳಲೆ ವೆಂಕಟರಮಣ್ಯೆಯನವರು' ಮತ್ತು ಹಾವನೂರು ಭುಜಂಗಚಾರ್ಯರು ವೀರಶೈವ ಮತದ ಮೇಲೆ ದೋಷಾ ರೋಪಣೆಗಳನ್ನು ಮಾಡಿದರು. ಅದನ್ನೆಲ್ಲಾ ವೀರಸಂಗಪ್ಪ ನವರು ವಿದ್ವಾಂಸರ ಮುಖದಿಂದಲೇ ಸಪ್ರಮಾಣವಾಗಿ ಖಂಡಿಸಿದರು. ೧೮೮೫ರ ತನಕ ವಾರ ಪತ್ರಿಕೆಯಾಗಿದ್ದ ಮೈಸೂರು ಸ್ಟಾರ್ ಮಾಸ ಪತ್ರಿಕೆಯಾಗಿ ಮಾರ್ಪಾಟ್ಟಾಯಿತು. ಹೀಗೆ ವರ್ಷ ನಡೆದ ನಂತರ ತಮ್ಮ ಮುದ್ರಾಯಂತ್ರವನ್ನು ಮ ||ರಾ|| ಮಾಸ್ತಣ ನವರ ಮೂಗಣ್ಣನವರಿಗೆ ಮಾರಿಬಿಟ್ಟರು. ೧೮೮೭ನೇ ಇಸವಿಯಲ್ಲಿ ಮೈಸೂರು ಸ್ಟಾರ್ ನಿಂತು ಹೋಯಿತು.

### ಎರಡನೆ ಜನ್ಮದ ವೃತ್ತಾಂತ :

ಮೊದಲಿನ ಸ್ಟಾರ್ ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದ ಕನಯ್ಯನಾಯಿಡು ಎಂಬುದು ಒಂದು ಮುದ್ರಾಯಂತ್ರವನ್ನು ಮದ್ರಾಸಿನಿಂದ ತರಿಸಿದ್ದರು. ಕೆಲವು ದಿನಗಳಲ್ಲಿ ಕನ್ನಯ್ಯನಾಯಿಡು ಮೃತಪಟ್ಟದರಿಂದ ಹರಾಜಿನಲ್ಲಿ ತಾವೇ ಪ್ರೆಸ್ಸನ್ನು ವಹಿಸಿಕೊಂಡರು. ೧೮೯೧ ರಿಂದ ಮತ್ತೆ ಮೈಸೂರು ಸ್ಟಾರ್ ಪ್ರಾರಂಭವಾಯಿತು.

ಹೀಗೆ ೧೮೮೦ ರಲ್ಲಿ ಪ್ರಾರಂಭವಾದ ಮೈಸೂರು ಸ್ಟಾರ್ ಪತ್ರಿಕೆ ೧೮೮೨ ಜನವರಿ ತಿಂಗಳಿನಿಂದ ಯಜಮಾನ ವೀರಸಂಗಪ್ಪನವರ ವಶವಾಗಿ ೧೮೮೭ ಜುಲೈ ತಿಂಗಳವರಿಗೂ ನಡೆದು ಮತ್ತೆ ೧೮೯೧ ಫೆಬ್ರವರಿ ೮ನೇ ತಾರೀಖು ಭಾನುವಾರ ವಾರ ಪತ್ರಿಕೆಯಾಗಿ ಪ್ರಾರಂಭವಾಯಿತು. ಯಜಮಾನ್ ವೀರಸಂಗಪ್ಪ ನವರ ನಿಧನದ ನಂತರ ಅವರ ಮಗ ಯಜಮಾನ್ ವಿರೂಪಾಕ್ಷಪ್ಪನವರು ೧೯೪೨ರ ತನಕ ಪತ್ರಿಕೆಯನ್ನು ನಡೆಸಿದರು. ಹೀಗೆ ತಂದೆ ಮತ್ತು ಮಗನಿಂದ ಮೈಸೂರು

ಸ್ಟಾರ್ ಸುಮಾರು ೫೬ ವರ್ಷ ಸೇವೆಯನ್ನು ಸಲ್ಲಿಸಿದೆ. ೧೮೮೦ ರಿಂದ ೧೮೮೩ ಬೇರೆಯುವರಿಂದ ೨ ವರ್ಷ ಒಟ್ಟು ಈ ಪತ್ರಿಕೆ ೫೮ ವರ್ಷ ನುಡಿಸೇವೆಯನ್ನು ಮಾಡಿದೆ.

**ಯಜಮಾನ್ ವೀರಸಂಗಪ್ಪನವರ ಪರಿಚಯು :**

ಮೈಸೂರಿನ ಯಜಮಾನ್ ಮಲ್ಲಣ್ಣ ಪಾರ್ವತಮ್ಮ ನವರ ದ್ವಿತೀಯ ಪುತ್ರರಾಗಿ ದಿನಾಂಕ ೨೧-೧೧-೧೮೮೩ ರಲ್ಲಿ ಜನಿಸಿದರು ಇವರ ಹಿರಿಯರು ಶ್ರೀರಂಗಪಟ್ಟಣದಿಂದ ಮೈಸೂರಿಗೆ ಬಂದು ನೆಲೆಸಿದರೆಂದು ಹೇಳುತ್ತಾರೆ. ಇವರು ವಿದ್ಯಾಭ್ಯಾಸದ ನಂತರ ತಂದೆಯವರ ಜವಳಿ ವ್ಯಾಪಾರ, ಚೌಬೀನೆ ಅಂದರೆ ತೇಗದ ಮರದ ವ್ಯಾಪಾರದ ಜೊತೆಗೆ ಮೈಸೂರು-ಬೆಂಗಳೂರು ಮಧ್ಯೆ ಟಪ್ಪಾಲು ಕೊಂಡೊಯ್ಯುವ ಕಾರ್ಯವನ್ನು ಸರ್ಕಾರದಿಂದ ಗುತ್ತಿಗೆ ಪಡೆದಿದ್ದರು. ಮುಂದೆ ಮೈಸೂರಿನಿಂದ ಮಡಿಕೇರಿಗೂ ಟಪ್ಪಾಲು ಕೊಂಡ್ಯೊಯ್ಯುವ ಜವಾಬ್ದಾರಿಯನ್ನು ವಹಿಸಿಕೊಂಡರು. ಮೈಸೂರು ನಗರಸಭೆ ಸದಸ್ಯ ರಾಗಿದ್ದ ಇವರು ತಂದೆಯ ನಿಧನದ ನಂತರ 'ಯಜಮಾನ್' ಪಟ್ಟವನ್ನು ಪಡೆದರಲ್ಲದೆ ವ್ಯಾಪಕವಾಗಿ ಸಮಾಜ ಸೇವಾ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿ ಕೊಂಡರು.

**ಸಂಸ್ಕೃತ ಪಾಠಶಾಲೆ :**

ಸಂಸ್ಕೃತ ಭಾಷೆಯಲ್ಲಿದ್ದ ಜ್ಞಾನದ ಉಪಯುಕ್ತತೆ ಯನ್ನು ಮನಗಂಡು ಪಾಠಶಾಲೆ ಬಗ್ಗೆ ತಮ್ಮ ಬೀಗರಾದ ಗ್ರಂದಿಗೆ ಮಲ್ಲಪ್ಪನವರ ಮುಂದೆ ಪ್ರಸ್ತಾಪ ಮಾಡಲು ಅವರು ರೂ. ೨೦೦೦ ಸಹಾಯದ ವಾಗ್ದಾನ ಮಾಡಿದರು. ವೀರಸಂಗಪ್ಪನವರು ಶಾಲೆಯನ್ನು ತಮ್ಮ ಸ್ವಂತ ಕಟ್ಟಡದಲ್ಲಿ ಪ್ರಾರಂಭ ಮಾಡಿದರು. ಆಗಿನ ಕಾಲದ ಪ್ರಸಿದ್ಧ ವಿದ್ವಾಂಸರಾಗಿದ್ದ ವ್ಯಾಕರಣದ ಬಿ. ಮಲ್ಲಪ್ಪ ನವರು ಆಸ್ಥಾನ ವಿದ್ವಾಂಸ ಅಭಿನವ ಕಾಳಿದಾಸ ಶ್ರೀ ಬಸವಪ್ಪ ಶಾಸ್ತ್ರಿಗಳು, ಕರ್ನಾಟಕ ಭಾಷಾರತ್ನ ಶ್ರೀ ಪಿ.ಆರ್ ಕರಿಬಸವಶಾಸ್ತ್ರಿಗಳು, ಪಂಡಿತ ಸಿದ್ಧಲಿಂಗ ಶಾಸ್ತ್ರಿಗಳು ನಾಲ್ಕು ಜನರ ಒಂದು ಸಮಿತಿಯನ್ನು ಮಾಡಿದರು. ಈ ಶಾಲೆಗೆ ವೀರಸಂಗಪ್ಪನವರ ಶಾಲೆ ಎಂದು ಹೆಸರಾಯಿತು. ಈ ಪಾಠಶಾಲೆಗೆ ಹಣದ ಅಡಚಣೆ ಉಂಟಾಗಬಾರದು ಎಂದು ಗ್ರಂಥಿಗೆ ಅಂಗಡಿ ಮಲ್ಲಪ್ಪನವರು ದೊಡ್ಡಪೇಟೆಯಲ್ಲಿ ಒಂದು ಅಂಗಡಿ ಯನ್ನು ಕಟ್ಟಿಸಿ ಅದರಿಂದ ಬರುವ ಬಾಡಿಗೆಯನ್ನು ಶಾಲೆಗೆ ಹೋಗುವಂತೆ ವ್ಯವಸ್ಥೆ ಮಾಡಿದರು. ಈ ಪಾಠಶಾಲೆಯ ವಿದ್ಯಾರ್ಥಿಗಳು ವೇದ, ಶಾಸ್ತ್ರ, ಪುರಾಣ, ವೈದಿಕ ಕಾರ್ಯಗಳಲ್ಲಿ ಪರಿಣತರಾದರು. ಈ ಪಾಠ ಶಾಲೆಯನ್ನು ನೋಡಿ ಬಳ್ಳಾರಿಯಲ್ಲಿ ಸಕ್ಕರೆ ಕರೆಡಪ್ಪ ನವರು, ಸೋಲಾಪುರದಲ್ಲಿ ವಾರದ ಮಲ್ಲಪ್ಪನವರು ಸಂಸ್ಕೃತ ಪಾಠಶಾಲೆಗಳನ್ನು ಪ್ರಾರಂಭ ಮಾಡಿದರು.

ಮೈಸೂರಿನ ಸಂಸ್ಕೃತ ಪಾಠಶಾಲೆಯ ವಿದ್ಯಾರ್ಥಿ ಗಳಿಗೆ ಪ್ರಸಾದ ನಿಲಯವನ್ನು ಪ್ರಾರಂಭ ಮಾಡಲು ಮುಡುಕುತೊರ ತೋಪಿನಮಠದ ಮುಪ್ಪಿನಸ್ವಾಮಿಗಳು ರೂ. ೧೦೦೦ ಮುಡಿಗೊಂಡದ ವೀರಶೈವರಿಂದ ರೂ. ೫೦೦ ಒಟ್ಟು ೨೦೦೦ ಹಣವನ್ನು ಇಡುಗಂಟಾಗಿ ಇಟ್ಟು ಇದರ ಬಡ್ಡಿ ಹಣದಿಂದ ವಿದ್ಯಾರ್ಥಿ ನಿಲಯವನ್ನು ನಡೆಸುತ್ತಾ ಇದ್ದರು ಹತ್ತು ವಿದ್ಯಾರ್ಥಿಗಳಿಗೆ ಉಚಿತವಾದ ಊಟದ ವ್ಯವಸ್ಥೆಯಾಯಿತು. ಯಜಮಾನ್ ವೀರಸಂಗಪ್ಪನವರು ಕೊಟ್ಟೂರು ಪ್ರಾಂತದಲ್ಲಿ ಹಣ ಸಂಗ್ರಹ ಮಾಡಿ ಅಂಗಡಿಮಳಿಗೆ ಹಾಗೂ ಗದ್ದೆಯನ್ನು ಕೊಂಡು ವಿದ್ಯಾರ್ಥಿನಿಲಯಕ್ಕೆ ಸ್ಥಿರ ಆಸ್ತಿಯನ್ನು ಮಾಡಿ ಶಾಶ್ವತ ವ್ಯವಸ್ಥೆಯನ್ನು ಮಾಡಿದರು. ಸಾರ್ವಜನಿಕರಿಂದ ಮತ್ತೆ ಹಣವನ್ನು ಸಂಗ್ರಹಿಸಿ 'ಫಂಡ್' ಮಾಡಿ ಅದರಲ್ಲಿ ಬರುವ ಹಣವನ್ನು ಉನ್ನತ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಸಹಾಯ ಮಾಡಲು ಶುರು ಮಾಡಿದರು.

**ವೀರಶೈವ ಗ್ರಂಥ ಪ್ರಕಾಶನ :**

ಯಜಮಾನ್ ವೀರಸಂಗಪ್ಪನವರು ಪತ್ರಿಕೆ, ವಿದ್ಯಾದಾನ, ಸಮಾಜಸೇವೆ ಜೊತೆಗೆ ಹಲವು ಮಠ ಮಾನ್ಯ ಮನೆಗಳಲ್ಲಿ ಇದ್ದ ಓಲೆಕಟ್ಟುಗಳು, ಕೋರಿ ಕಾಗದದ ಕಟ್ಟುಗಳನ್ನು ಸಂಗ್ರಹಿಸಿ ಅದರ ಮುದ್ರಣದ ವ್ಯವಸ್ಥೆಯನ್ನು ಮಾಡಿದರು.

'೧೮೮೧ರ ಸೆನ್ಸಸ್ ರಿಪೋರ್ಟಿನಲ್ಲಿ ವೀರಶೈವ ರನ್ನು ಶೂದ್ರರ ಮಾಲಿಕೆಯಲ್ಲಿ ಸೇರಿಸಿದ್ದಾರೆ. ನಮ್ಮಲ್ಲಿ ಕೌಸ್ತುಭಾಚಾರ ಮುಂತಾದ ಇಪ್ಪತಕ್ಕೂ ಹೆಚ್ಚು ಗ್ರಂಥಗಳಿವೆ ಇವುಗಳನ್ನೆಲ್ಲಾ ಬೇರೆ ಮುದ್ರಣಾಲಯದಲ್ಲಿ ಅಚ್ಚು ಮಾಡಿಸಿ ಪ್ರಕಟಿಸಬೇಕೆಂದರೆ ಹೆಚ್ಚು ಹೆಚ್ಚು ಹಣ ಬೇಕಾಗುತ್ತದೆ. ಅದುದರಿಂದ ನಾವೇ ಒಂದು

ಮುದ್ರಣಯಂತ್ರವನ್ನು ಕೊಂಡು ಕೊಂಡರೆ ಸುಮಾರು ಹತ್ತು ಸಾವಿರದಲ್ಲಿ ಈ ಕೆಲಸವನ್ನು ಮುಗಿಸಬಹುದು. ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಮಠ ಗ್ರಂಥ ಮುದ್ರಣಾರ್ಥವಾಗಿ ಚಂದಾಹಣವನ್ನು ಕೊಟ್ಟರೆ ಅವರವರು ಕೊಟ್ಟ ಮೊಬಲಿಗುಗೆ ಮುದ್ರಿಸಲಾದ ಪುಸ್ತಕಗಳನ್ನು ಕೊಡಲಾಗುವುದು, ಎಂಬ ಅರ್ಥದ ನೋಟಿಸನ್ನು ಅಚ್ಚು ಹಾಕಿಸಿ ಪರಸ್ಥಳದವರಿಗೆ ಹಂಚಿದರು.

## ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ಪ್ರಕಟಿಸಿದ್ದ ಕರಸ್ಪಾರ್ಡೆನ್ಸು

ಮೊದಲನೆ ಮೈಸೂರು ಸ್ಟಾರ್ ಕರಸ್ಪಾರ್ಡೆನ್ಸು : ೧೮೮೭ನೇ ಇಸವಿ ಮೇ ತಿಂಗಳಿಂದ ೧೮೮೮ನೇ ಇಸವಿ ೩೦ನೇ ಮೇ ವರೆಗೆ ನಡೆದ ಆರೋಪ ಪ್ರತ್ಯಾರೋಪದ ಸಂಗ್ರಹ. ಈ ಗ್ರಂಥವನ್ನು ಯಜಮಾನ್ ವೀರಸಂಗಪ್ಪನವರು ತಮ್ಮ ಸ್ವಕೀಯ ಮುದ್ರಾಶಾಲೆಯೊಳ್ ೧೫ನೇ ಜೂನ್ ೧೮೯೮ನೇ ಇಸವಿಯಲ್ಲಿ ವಾಣಿವಿಲಾಸ ಪ್ರೆಸ್ ಮೈಸೂರು ಇಲ್ಲಿ ಮುದ್ರಿಸಲಾಯಿತು. ಇದರಲ್ಲಿ 'ಪಾಲಳ್ಳಿ ರಂಗಣ್ಣನವರು' 'ನಾಗಮಂಗಲದ ನರಸಿಂಹ ಶಾಸ್ತ್ರಿಗಳು' 'ಕಳಲೆ ವೆಂಕಟರಮಣಯ್ಯ' 'ಹಾವನೂರು ಭುಜಂಗಚಾರ್ಯ' ಮಾಡಿದ ಕರ್ಸಪಾಂಡೆನ್ಸ, ಅದಕ್ಕೆ ಯಜಮಾನ ವೀರಸಂಗಪ್ಪನವರು ನೀಡಿದ ಉತ್ತರ. ಈ ಉತ್ತರವನ್ನು ಬರೆದವರು ಅಸ್ಥಾನ ವಿದ್ವಾನ ಮಹಾರಾಜ ಕಾಲೇಜಿನ ಮುನಿಷಿಗಳಾದ ಶ್ರೀ ಪಿ.ಆರ್. ಕರಿಬಸವಶಾಸ್ತ್ರಿಗಳು ಎಂದು ತಿಳಿದು ಬರುತ್ತದೆ. ಇದೇ ರೀತಿಯಲ್ಲಿ ಐದು ಮೈಸೂರು ಸ್ಟಾರ್ ಕರೆಸ್ಪಾಡೆನ್ಸು ಗಳನ್ನು ಇವರು ಸಂಗ್ರಹಿಸಿದ್ದು ಅವುಗಳಲ್ಲಿ ಮೂರರ ವರೆಗೆ ಪ್ರಕಟವಾಗಿವೆ. ಉಳಿದೆರಡು ಹಸ್ತ ಪ್ರತಿ ರೂಪದಲ್ಲಿವೆ. ಮೊದಲನೇ ಕರಸ್ಪಾಂಡೆನ್ಸು ಎರಡನೇ ಮುದ್ರಣವನ್ನು ಕಂಡಿದೆ.

ಈ ಎಲ್ಲಾ ವ್ಯವಹಾರದಲ್ಲಿ ವೀರಸಂಗಪ್ಪನವರು ತಮ್ಮನ್ನು ತೊಡಗಿಸಿಕೊಂಡು ಕಡೆಗೆ ಮನೆಮಠಗಳನ್ನು ಕಳೆದುಕೊಳ್ಳುವ ಪ್ರಸಂಗ ಬಂದಿತು. ವೀರಶೈವ ಸಮಾಜದ ಜನಾಂಗ ಇವರಿಗೆ ನೆರವಾದರು. ೧೮೯೯ನೆ ಇಸವಿ ೨೫ನೇ ಏಪ್ರಿಲ್‌ನಲ್ಲಿ ತಮ್ಮ ೫೭ನೇ ವಯಸ್ಸಿನಲ್ಲಿ ಶಿವಾಧೀನರಾದರು.

ತಂದೆಯಂತೆ ಮಗನು ಸಹ ಗ್ರಂಥ ಪ್ರಚಾರ, ಮತ್ತು ಮೈಸೂರು ಸ್ಟಾರ್ ಇವರ ದುಡಿಮೆಯಿಂದ ಸ್ಟಾರ್ ಪತ್ರಿಕೆ ತನ್ನ ಹೆಸರನ್ನು ಜನರ ಮನದಲ್ಲಿ ಅಚ್ಚೊತ್ತಿತ್ತು. ಆ ಕಾಲದಲ್ಲಿ ಸ್ಟಾರ್ ಅಂದರೆ ಪತ್ರಿಕೆ ಅನ್ನುವ ಅರ್ಥವನ್ನು ಸಾಮಾನ್ಯ ಜನ ಮಾಡಿ ಕೊಂಡು ಬಿಟ್ಟಿದ್ದರು. ಹರ್ಡೇಕರ್ ಮಂಜಪ್ಪನವರು ದಾವಣ ಗೆರೆಯಲ್ಲಿ ಧನುರ್ಧಾರಿ ಪ್ರಕಟ ಮಾಡುವ ಮುಂಚೆ ಜನ ನಿಮ್ಮ 'ಸ್ಟಾರ್' ಪಾರಂಭ ಯಾವಾಗ ಎಂದು ಕೇಳುತ್ತಾ ಇದ್ದರು ಎಂದು ತಮ್ಮ ಆತ್ಮ ಚರಿತ್ರೆಯಲ್ಲಿ ಬರೆದಿದ್ದಾರೆ. ಮೈಸೂರು ಸ್ಟಾರ್‌ನಲ್ಲಿ ಬಂದಿರುವ ಲೇಖನಗಳನ್ನು ಸಂಪುಟಗಳಲ್ಲಿ ಪ್ರಕಟಿಸಿದರೆ ಅರ್ಧ ಶತಮಾನದ ಇತಿಹಾಸವನ್ನೆ ಬರೆಯುವಷ್ಟು ಮಾಹಿತಿ ದೊರೆಯುತ್ತದೆ. ಗ್ರಂಥ ಸಂಗ್ರಹದ ಮಾದರಿ ಈಗಿನ ಕಾಲಕ್ಕೂ ಮಾದರಿಯಾಗಿದೆ. ಅಷ್ಟು ಸೊಗಸಾದ ಬರಹ. ಆ ಕಾಲದ ಅನೇಕ ತೊಂದರೆಗಳು ಮಠ ಮಹಂತಗಳ ಪಟ್ಟಾಧಿಕಾರ, ಮರಣದ ಬಗ್ಗೆ ಕರಾರುವಾಕ್ಕಾದ ದಾಖಲೆ ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ಇದೆ.

ಯಜಮಾನ ವೀರಸಂಗಪ್ಪನವರು ಮೈಸೂರು ಸ್ಟಾರ್ ಪತ್ರಿಕೆ, ಮಠಗ್ರಂಥಗಳ ಪ್ರಕಟಣೆ ಮತ್ತು ಸಂಸ್ಕೃತ ಶಿಕ್ಷಣಗಳಿಗೆ ಸಂಬಂಧಿಸಿದ ಹೋರಾಟದಲ್ಲಿ ಹಣ್ಣಾದದ್ದನ್ನು ಗಮನಿಸಿದ ಸಮಾಜ ಅವರ ಸ್ಟಾರ್ ಪತ್ರಿಕೆಗೆ ಸಹಾಯ ಮಾಡುವ ದೃಷ್ಟಿಯಿಂದ ವಿವಾಹಾಧಿಶುಭ ಸಮಾರಂಭಗಳಲ್ಲಿ 'ವೀರಸಂಗಪ್ಪನವರ ಅಗ್ರ ತಾಂಬುಲ' ತೆಗೆದು ಕಾಣಿಕೆ ಇಟ್ಟು ಕೊಡುವ ಪದ್ಧತಿ ಇತ್ತು 'ತುಮಕೂರು ಜಿಲ್ಲೆ ಗುಬ್ಬಿ ತಾಲ್ಲೂಕ್ ಸಂಪಿಗೆ ಗ್ರಾಮ (ಈಗ ತುರುವೇಕೆರೆ ತಾಲ್ಲೂಕ್)ದಲ್ಲಿ ನಡೆದ 'ಶ್ರೀಮದ್ವೀರಶೈವ ಬ್ರಾಹ್ಮಣ ಸಮಾಜದ ಸಭೆಯ ವರದಿಯಲ್ಲಿ (೨೩-೭-೧೯೧೧) ಅವರ ಸೇವೆ ಯನ್ನು ಗಮನಿಸಿ ಅವರು ಹುಟ್ಟು ಹಾಕಿದ್ದ ಪತ್ರಿಕೆಗೆ ಸಹಾಯ ಮಾಡುವ ದೃಷ್ಟಿಯಿಂದ ವೀರಸಂಗಪ್ಪನವರ ಜ್ಞಾಪಕಾರ್ಥವಾಗಿ ತೆಗೆಯುತ್ತಿರುವ ತಾಂಬೂಲ ದೊಂದಿಗೆ ೧ ರೂ ಕಾಣಿಕೆಯನ್ನು ಕಳುಹಿಸಲೆಂದು ಸಭೆಯನ್ನು ವಿನಂತಿಸಿಕೊಂಡಿದೆ. ವೀರಸಂಗಪ್ಪನವರನ್ನು ಕುರಿತು ಜೇರಿಗೆ ಬಸವಲಿಂಗಪ್ಪನವರು ೫೩ ಕಂದ ಪದ್ಯ ಗಳನ್ನು ಬರೆದು ಚರಮ ಗೀತೆಯನ್ನು ಸಮರ್ಪಿಸಿದಾರೆ,

ಸ್ಟಾರ್ ಪ್ರೆಸ್ ಮುದ್ರಣಕ್ಕೆ ಬಹಳ ಹೆಸರುವಾಸಿಯಾಗಿತ್ತು. ೧೯೦೫ರಲ್ಲಿ ಗುಬ್ಬಿ ಶ್ರೀ ಚನ್ನಬಸವೇಶ್ವರ ಸ್ವಾಮಿ ಬೆಳ್ಳಿ ಪಲ್ಲಕ್ಕಿ ಆಹ್ವಾನ ಪತ್ರಿಕೆಯನ್ನು ಬಹಳ ಸುಂದರವಾಗಿ ಅಚ್ಚು ಮಾಡಿ ಕೊಟ್ಟಿದಾರೆ. ಮೈಸೂರು 'ಕರ್ನಾಟಕ ಗ್ರಂಥ ಮಂಜರಿ'ಮೊದಲನೆ ಪುಸ್ತಕ ಸ್ಟಾರ್ ಪ್ರೆಸ್‌ನಲ್ಲಿ ಅಚ್ಚಾಗಿದೆ ಮೈಸೂರು ವಿಶ್ವವಿದ್ಯಾನಿಲಯದ ಮೊದಲ ಪುಸ್ತಕಗಳನ್ನು ಸ್ಟಾರ್ ಪ್ರೆಸ್‌ನವರು ಅಚ್ಚು ಮಾಡಿಕೊಟ್ಟಿದ್ದಾರೆ. ಒಂದು ಪತ್ರಿಕೆ ತನ್ನ ಹಿತಮಿತದಲ್ಲಿ ಏನನ್ನು ಮಾಡಲು ಸಾಧ್ಯವೋ ಅದನೆಲ್ಲಾ ಮಾಡಿದೆ. ಜನಾಂಗದ ಈ ಪತ್ರಿಕೆ ಕೆಲವು ಸಾರಿ ಕಷ್ಟಕ್ಕೆ ಗುರಿಯಾಗಿ ಎಲ್ಲಾ ತರಹದ ತೊಂದರೆಯನ್ನು ಅನುಭವಿಸಿದರೂ ಒಂದು ಸಂಸ್ಕೃತಿಯನ್ನು ಉಳಿಸಲು ಸಾಕಷ್ಟು ಹೋರಾಟ ಮಾಡಿದ್ದು ಮಾತ್ರ ಕಟು ಸತ್ಯ.

## ಆಕರ ಗ್ರಂಥಗಳು


೧. ಮೈಸೂರು ವಿಶ್ವವಿದ್ಯಾನಿಲಯ-ಕನ್ನಡ ವಿಷಯ ವಿಶ್ವಕೋಶ

೨. MYSORE DISTRICT GAZETTEER—Dr. Suryanath Kamath

೩. ಮೈಸೂರು ಸ್ಟಾರ್ ಕರ್ಸಪಾಡೆನ್ಸ್ ಸಂಪುಟ ೧ ಮತ್ತು ೨

೪. ವೀರಶೈವ ಪುಣ್ಯ ಪುರುಷರು. ಪದ್ಮಶ್ರೀ ಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ ೧೯೫೩

೫. ಯಜಮಾನ್ ವೀರಸಂಗಪ್ಪನವರು : ಡಾ|| ಬಿ.ನಂ. ಚಂದ್ರಯ್ಯ ೧೯೮೧
ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ

೬. ಸಂಪಿಗೆ ವೀರಶೈವ ಬ್ರಾಹ್ಮಣರ ಸಭೆ, ವಿಶೇಷ ವರದಿ. ೧೯೧೧

೭. ವೀರಶೈವ ಮತ ಪ್ರಕಾಶಿಕೆ ಸಂಚಿಕೆ ೧೮೯೧ ಅಕ್ಟೋಬರ್
—ರುದ್ರಪ್ಪನವರು

೮. ಅಪ್ರಕಟಿತ ಮೈಸೂರು ಸ್ಟಾರ್ ಕರ್ಸಪಾಡೆನ್ಸ್‌ಗಳು

ಡಾ|| ಸಿ. ನಾಗಭೂಷಣ*

# ಆದಯ್ಯನ ವಚನಗಳಲ್ಲಿ ಸಾಂಸ್ಕೃತಿಕ ಅಂಶಗಳ ಸುಳುಹು

ವಚನಕಾರ ಆದಯ್ಯನು ಬಸವಪೂರ್ವಯುಗದ ಕೊನೆಯಿಂದಲೂ ಜೀವಿಸಿದ್ದು, ಬಸವಣ್ಣನವರ ಹಿರಿಯರ ಸಮಕಾಲೀನನಾಗಿಯೂ ಬದುಕಿದ್ದಾನೆ. 'ಸೌರಾಷ್ಟ್ರ ಸೋಮೇಶ್ವರ' ಎಂಬ ಅಂಕಿತದಲ್ಲಿ ವಚನಗಳನ್ನು ರಚಿಸಿದ್ದಾನೆ. ಇತ್ತೀಚೆಗೆ ದೊರೆತ ಹತ್ತು ವಚನಗಳನ್ನು ಸೇರಿಸಿದರೆ ಒಟ್ಟು ೪೦೫ ವಚನಗಳು ಉಪಲಬ್ಧವಿದೆ. ಈತನ ವಚನಗಳು ಬಹುತೇಕ ವೀರಶೈವ ಸಿದ್ಧಾಂತದ ತಾತ್ವಿಕ ನಿಲುವನ್ನು ಪ್ರತಿಪಾದಿಸುವ ಅಂಶಗಳನ್ನೇ ಒಳಗೊಂಡಿದ್ದರೂ, ಪ್ರಾಸಂಗಿಕವಾಗಿ ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿವೆ. ಕನ್ನಡ ನಾಡಿನ ಮಧ್ಯಕಾಲೀನ ಯುಗದ ಸಂಸ್ಕೃತಿಯನ್ನು ಪುನರ್‌ರಚಿಸಲು ಬೇಕಾದ ಕೆಲವೊಂದು ಆಕರಗಳು ಈ ವಚನಗಳಲ್ಲಿ ನಿರೂಪಿತವಾಗಿವೆ. ವಚನಗಳು ಉದ್ಭವಿಸುವ ಕಾಲಕ್ಕೆ ಇದ್ದಂತಹ ಯುದ್ಧರಂಗಕ್ಕೆ ಸಂಬಂಧಿಸಿದ, ಆರ್ಥಿಕ ವಿಷಯಕ್ಕೆ ಸಂಬಂಧಿಸಿದ, ವಿದ್ಯಾಭ್ಯಾಸ-ಲಲಿತ ಕಲೆಗಳಿಗೆ ಸಂಬಂಧಿಸಿದ ಸಂಗತಿಗಳು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಉಲ್ಲೇಖಗೊಂಡಿರುವುದನ್ನು ಗಮನಿಸಲಾಗಿದೆ. ಆ ಕಾಲದ ಸಾಂಸ್ಕೃತಿಕ ವೈಶಿಷ್ಟ್ಯವನ್ನು ಗುರುತಿಸಲು ಸಹಾಯಕವಾಗಿರುವ ಅಂಶಗಳನ್ನು ಕಾಲಾನುಕ್ರಮದಲ್ಲಿ ಗುರುತಿಸಲಾಗಿದೆ.

## ೧. ಯುದ್ಧರಂಗ

ಅಚ್ಯುತನ ಅಜ್ಞೆಯಲ್ಲಿ ಅಡಗಿದ ಕಪಿಯೊಳಗೆ
ಬಾವನ್ನ ವೀರರು ಮುಳುಗಿ[1]

ಬಾವನ್ನ ವೀರರು ಬಟ್ಟೆಯುಳಿದ ಲಿಂಗ
ವಾವರಿಸಿತು ಸರ್ವಾಂಗವನು[2]

ಎಂಬ ವಚನ ಮತ್ತು ಸ್ವರ ವಚನಗಳಲ್ಲಿ 'ಬಾವನ್ನ ವೀರರ' ಬಗೆಗೆ ಉಲ್ಲೇಖ ಇದೆ. 'ಬಾವನ್ನ ವೀರರು'[3] ಪದ ಯಾರೋ ಐವತ್ತೆರಡು ಮಂದಿ ವೀರರ ತಂಡವನ್ನು ಸೂಚಿಸುತ್ತದೆ. ಬಹುಶಃ ಈ ಪದ ಆ ಕಾಲದ ಪ್ರಸಿದ್ಧ ಐವತ್ತೆರಡು ಮಂದಿ ರಣಯೋಧರನ್ನು ಸೂಚಿಸುತ್ತದೆ ಎಂದೆನಿಸುತ್ತದೆ. ಹನ್ನೊಂದನೆಯ ಶತಕದ ಕೊನೆಯ ಭಾಗದ ಶಾಸನವೊಂದರಲ್ಲಿ 'ಉಗುರರೆಂಬ ಶ್ರೇಣಿಯ ಮುನ್ನೂರು ವೀರರನ್ನು ಬಾವನ್ನ ವೀರರ ಶರಣಾಗತ ರಕ್ಷಣಾ ಸಾಮರ್ಥ್ಯ, ವೈರಿ ವಿಧ್ವಂಸನ ಕೌಶಲ್ಯಕ್ಕೆ ಹೋಲಿಸಲಾಗಿದೆ. ಹನ್ನೆರಡನೆ ಶತಮಾನದ ಧಾರವಾಡ ಜಿಲ್ಲೆಯ ಸೇಡಿಂಬದಲ್ಲಿಯ ಶಾಸನದಲ್ಲಿಯೂ ಬಾವನ್ನ ವೀರರನ್ನು ಕುರಿತು ಹೊಗಳಿಕೆ ಇದೆ[4] ಬೇರೆ ವ್ಯಕ್ತಿಗಳ ಗುಣಗಳನ್ನು ಹೋಲಿಸಲು ಗಾದೆಯ ಮಾತುಗಳಾಗಿ ಬಹುಶಃ

---

* ಕನ್ನಡ ಉಪನ್ಯಾಸಕರು, ಸ್ನಾತಕೋತ್ತರ ಕೇಂದ್ರ ಗುಲ್ಬರ್ಗ, ವಿಶ್ವವಿದ್ಯಾಲಯ, ಸಂಡೂರು, ಬಳ್ಳಾರಿ ಜಿಲ್ಲೆ

1 ಆದಯ್ಯನ ವಚನಗಳು (ಸಂ : ಉತ್ತಂಗಿ ಚೆನ್ನಪ್ಪ) ವ. ಸಂ. ೩೮೦

2 ಆದಯ್ಯನ ಲಘು ಕೃತಿಗಳು ಸಂ : ಎಂ. ಎಂ. ಕಲಬುರ್ಗಿ) ಪು. ೩೨

3 ಬಾವನ್ನ ಪದಕ್ಕೆ ಐವತ್ತೆರಡು ಷಟ್ಚಕ್ರದಳದ ಮಂತ್ರಾಕ್ಷರಗಳು ಎಂಬ ಅರ್ಥವನ್ನು ಆದಯ್ಯನ ಲಘುಕೃತಿಗಳು ಕಾವ್ಯದಲ್ಲಿ ಕೊಟ್ಟಿರುತ್ತಾರೆ.

4 P.B. Desai, Jainisam in South India and some Jaina Epigraphs pp. 173-6

ಬಾವನ್ನ ವೀರರನ್ನು ಬಳಸುತ್ತಿದ್ದರು ಎಂದೆನಿಸುತ್ತದೆ. ಆ ಕಾಲದ ಶಾಸನದಲ್ಲಿ ಉಕ್ತರಾಗಿರುವ ಬಾವನ್ನ ವೀರರನ್ನೇ ಆದಯ್ಯನು ಉಲ್ಲೇಖಿಸಿದ್ದಾನೆ ಎಂದೆನಿಸುತ್ತದೆ.

### ೨ ಆರ್ಥಿಕ ವಿಷಯ

> ಬಾಹಿರವ ಕಳೆದು ಎಡೆನಾಣ್ಯವ ಸುಳಿದು
> ಹಲವು ನಾಣ್ಯವ ಕಳೆದು ಸಲುವ ನಾಣ್ಯವ
> ಹಿಡಿದು
> ತೂಕ ಕುಂದದ ನೋಟವ ನೋಡುವೆನಯ್ಯಾ
> ಅದ್ವೈತದ ನಾಣ್ಯವ ಕಣ್ಮುಚ್ಚಿದ ನೋಟದಿಂ
> ನೋಡುವೆನಯ್ಯಾ[5]

ಈ ವಚನದಲ್ಲಿ ಬಂದಿರುವ ನಾಣ್ಯ, ಬಾಹಿರ (ಖೋಟಾ ನಾಣ್ಯ) ಎಡೆ ನಾಣ್ಯ (ಉತ್ತಮ ನಾಣ್ಯ), ಸಲ್ಲುವ ನಾಣ್ಯ, ಚಲಾವಣೆಯಿಲ್ಲದ ನಾಣ್ಯ, ತೂಕ ಇತ್ಯಾದಿಗಳು ಆ ಕಾಲದ ವಿನಿಮಯ ಮತ್ತು ವ್ಯಾಪಾರ ವೃತ್ತಿಯನ್ನು ಸೂಚಿಸುತ್ತವೆ.

ಚಿನ್ನವನ್ನು ಶುದ್ಧಗೊಳಿಸುವ ವಿಧಾನದ ಬಗೆಗೂ ಉಲ್ಲೇಖ ಇದೆ. ಮೇಣ (ಮಯಣ)ವನ್ನು ಕರಗಿಸಿ ಅದಕ್ಕೆ ಕೊಳೆಯು ಅಂಟಿಕೊಳ್ಳುವಂತೆ ಮಾಡಿ ಚಿನ್ನವನ್ನು ಶುದ್ಧಿಗೊಳಿಸುತ್ತಿದ್ದರು. ಚಿನ್ನದ ಶುದ್ಧತೆಯನ್ನು ಒರೆಹಚ್ಚುವುದಕ್ಕಾಗಿ ಚಿನ್ನದ ಚೂರನ್ನು ಬಳಸುತ್ತಿದ್ದರು. ಇದನ್ನು 'ಮಚ್ಚ'[6] ಎಂದು ಕರೆಯುತ್ತಿದ್ದರು ಎಂಬುದಾಗಿ ವಚನದಿಂದ ತಿಳಿದು ಬರುತ್ತದೆ. ಇದಲ್ಲದೆ ಮಧ್ಯೆ ಮುಳ್ಳಿದ್ದ ತಕ್ಕಡಿಯ ಉಲ್ಲೇಖನವೂ ಒಂದು ವಚನದಲ್ಲಿ ಬಂದಿದೆ.

### ೩. ಅರಣ್ಯ ಉತ್ಪನ್ನಗಳು, ಪ್ರಾಣಿ-ಪಕ್ಷಿಗಳು, ಬೆಂಕಿಯ ಉತ್ಪತ್ತಿ, ಮನೆ ನಿರ್ಮಾಣ

ಅರಣ್ಯದಲ್ಲಿ ದೊರೆಯುವ ಉತ್ಪನ್ನಗಳಾದ ಮರ, ತಿಗಡು, ಹಗಿನ, ಚಿಗುರು, ತಳಿರು, ಪತ್ರಿ, ನಗೆ ಮೊಗ್ಗು ಕಾಯಿ ಡೋರೆ, ಹಣ್ಣುಗಳ ಬಗೆಗೂ ಉಲ್ಲೇಖ ಇದೆ[8] ವಿವಿಧ ಬಣ್ಣಗಳಾದ ಪೀತ (ಹಳದಿ) ಶ್ವೇತ, ಹರಿತ, ಮಾಂಜಿಷ್ಠ (ಕೆಂಪು) ಕಪೋತ (ಬೂದಿಯ ಬಣ್ಣ) ಮುಂತಾದ ಬಣ್ಣಗಳ ಬಗೆಗೂ, ಕಾಡಿನಲ್ಲಿ ವಾಸಿಸುವ ಕಳಹಂಸ, ಚಕೋರ, ನೀರು ಕಾಗೆ, ಕಾಕೋಳಿ, ಕಕ್ಕೋರ (ಕೊಕ್ಕರೆ), ಚಾದಗೆ, ಮರ್ಕಟ, ವಿಹಂಗ (ಹದ್ದು) ಉರಗ, ಗರುಡ, ಕರಿ, ಕೇಸರಿ, ಇತ್ಯಾದಿ ಪ್ರಾಣಿ ಪಕ್ಷಿಗಳ ಉಲ್ಲೇಖವು[9] ದೊರೆಯುತ್ತದೆ. ಒಂದು ವಚನದಲ್ಲಿ ಗಂಗೆ ಗೋದಾವರಿ ತುಂಗಭದ್ರಾ ನದಿಗಳ ಬಗೆಗೂ ಉಲ್ಲೇಖ ಇದೆ. ಬೆಂಕಿಯನ್ನು ಯಾವ ರೀತಿ ತಯಾರಿಸುತ್ತಿದ್ದರು ಎಂಬುದು ವಚನದಲ್ಲಿದೆ.[10] 'ತಳದಲೊಂದು ಕೋಲ ಕುಳಿಮಾಡಿ, ಮೇಲೊಂದು ಕೋಲ ಮನೆ ಮಾಡಿ ಮಂತ್ರಿಸಲು ಅಗ್ನಿದೃಷ್ಟವಾಗಿ ಕಾಣಿಸಿಕೊಂಬಂತೆ' ಉಲ್ಲೇಖದಿಂದ ತಿಳಿದು ಬರುತ್ತದೆ.

ಮನೆಯ ನಿರ್ಮಾಣದ ಬಗೆಗೂ ಪರೋಕ್ಷವಾಗಿ ಉಲ್ಲೇಖ[11] ಇದೆ. ಮನೆಗಳಿಗೆ ಆಸರೆಯಾಗಿ ಕಂಭಗಳನ್ನು ನಿಲ್ಲಿಸುತ್ತಿದ್ದರು. ನೆಲವನ್ನು ದಮ್ಮಸ್ಸು ಮಾಡಿ ಮೇಲ್ಮೈಯನ್ನು ನೆಲಗಟ್ಟಿನ ಮೂಲಕ ನಯಗೊಳಿಸುತ್ತಿದ್ದರು. ಬಾಗಿಲನ್ನು ಮುಚ್ಚಲು ಎರಡು ಪಡಕಿನ ದಪ್ಪ ಕದಗಳನ್ನು ಇಡುವ ಪದ್ಧತಿ ಆಗಲೂ ಇದ್ದಿದ್ದು ಅವನ್ನು ತಾರುಗದ (ಎರಡು ಪಡಕಿನ) ದಪ್ಪ ಎಂದು ಕರೆಯುತ್ತಿದ್ದರು. ಕದಗಳಿಗೆ ಅಗುಳಿಯು

---

5 ಆದಯ್ಯನ ವಚನಗಳು (ಸಂ: ಉತ್ತಂಗಿ ಚೆನ್ನಪ್ಪ) ವ. ಸಂ. ೨೩೬

6 ಅದೇ ವ. ಸಂ. ೨೩೭ ಪು. ೧೪೦

7 ಅದೇ ವ. ಸಂ. ೨೯೫ ಪು. ೧೬೭

8 ಅದೇ ವ. ಸಂ. ೩೫೧ ಪು. ೧೯೪

9 ಅದೇ ವ. ಸಂ. ೧೩೫, ೧೩೬, ೨೩೮, ಪುಟ. ೧೪೪, ೧೪೮

10 ಅದೇ ವ. ಸಂ. ೩೧೧, ಪು. ೧೭೪

11 ಅದೇ ವ.ಸಂ. ೫೨ ಪು. ೩೨

ಇದ್ದಿರುತ್ತಿತ್ತು. ಮನೆಯ ಮಾಳಿಗಳಿಗೆ ಬೆಳಕಿನ ಸೌಕರ್ಯ ಕಲ್ಪಿಸಲು ಗವಾಕ್ಷಗಳನ್ನು ಇಡುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ.

## ೪. ವಿದ್ಯಾಭ್ಯಾಸ

ಚನ್ನಬಸವಣ್ಣನವರು ವಚನವೊಂದರಲ್ಲಿ ಮತಿ ಜ್ಞಾನ, ಶ್ರುತಿಜ್ಞಾನ, ಖಂಡಜ್ಞಾನ, ಕೇವಲಜ್ಞಾನ, ಜ್ಯೋತಿಜ್ಞಾನ, ಮಹಾಜ್ಯೋತಿ ಜ್ಞಾನಗಳನ್ನು ಉಲ್ಲೇಖಿಸಿದ್ದಾರೆ.[12] ಆದಯ್ಯನು ಶ್ರುತಿಜ್ಞಾನ, ಮತಿ ಜ್ಞಾನ, ಖಂಡಿತಜ್ಞಾನಗಳನ್ನು ಅಲ್ಲಗಳೆದು ಕೇವಲ ಜ್ಞಾನವನ್ನು ಮಾತ್ರ ಅಂಗೀಕರಿಸಿದ್ದಾನೆ.

> ಶ್ರುತಿಜ್ಞಾನ, ಮತಿಜ್ಞಾನ, ಖಂಡಿತಜ್ಞಾನ, ಪೈಶಾಚಿಕ ಜ್ಞಾನಂಗಳನತಿಗಳೆದು ಶಿವಜ್ಞಾನ, ಸ್ವಯಂಜ್ಞಾನ, ಸಮ್ಯಜ್ಞಾನ, ಅವಧಿಜ್ಞಾನ, ಪರಜ್ಞಾನದಿಂ ಪರವಶನಾಗಿಪ್ಪುದೇ ಕೇವಲ ಜ್ಞಾನ.[13]

ಅವನ ಪ್ರಕಾರ ಶಿವಜ್ಞಾನ, ಸ್ವಯಜ್ಞಾನ, ಸಮ್ಯಜ್ಞಾನ, ಅವಧಿಜ್ಞಾನ, ಪರಜ್ಞಾನಗಳಿಂದ ಪರವಶ ನಾಗಿಪ್ಪುದೇ ಕೇವಲಜ್ಞಾನ. ಆದಯ್ಯನು ವೇದಾಧ್ಯ ಯನವನ್ನು ಖಂಡಿಸುವ ನೆಪದಲ್ಲಿ ವೇದಶಾಸ್ತ್ರ, ಆಗಮ, ಪುರಾಣ, ಇತಿಹಾಸ, ರಹಸ್ಯ, ಛಂದಸ್ಸು, ಅಲಂಕಾರ, ನಿಘಂಟು ತರ್ಕಗಳನ್ನು ಪ್ರಾಸಂಗಿಕವಾಗಿ ವಚನದಲ್ಲಿ ಉಲ್ಲೇಖಿಸಿದ್ದಾನೆ. ಒಂದು ವಚನದಲ್ಲಿ ನಾಲ್ಕು ವೇದ ಗಳು, ಹದಿನಾರು ಶಾಸ್ತ್ರ, ಹದಿನೆಂಟು ಪುರಾಣ, ಇಪ್ಪತ್ತೆಂಟು ಆಗಮ, ಮೂವತ್ತೆರಡು ಉಪನಿಷತ್ತು ರಸಸಿದ್ಧಿ, ಪಾಷಾಣಸಿದ್ದಿ, ಲೋಹಸಿದ್ದಿ, ವಯಸ್ತಂಭ, ಗಳು, ಏಳುಕೋಟಿ ಮಂತ್ರ, ಚೌಷಷ್ಠಿ ವಿದ್ಯೆಗಳನ್ನು ಖಂಡಿಸುವ ನೆಪದಲ್ಲಿ ಹೇಳಿದ್ದಾನೆ.[14] ಚೌಷಷ್ಠಿ ವಿದ್ಯೆ ಗಳಲ್ಲಿ ಕೆಲವನ್ನು ಆದಯ್ಯನು ವಚನವೊಂದರಲ್ಲಿ[15] ಉಲ್ಲೇಖಿಸಿದ್ದಾನೆ. ಅವನ ಪ್ರಕಾರ ಅಂಜನಸಿದ್ಧಿ, ಗುಟಿಕಾಸಿದ್ಧಿ, ಮೂಲಿಕಾಸಿದ್ಧಿ, ಶರೀರಸಿದ್ಧಿ, ಪರಕಾಯ ಪ್ರವೇಶ, ತ್ರಿಕಾಲಜ್ಞಾನ, ದೂರಶ್ರವಣ, ದೂರದೃಷ್ಟಿ, ಸ್ವರವಂಚ, ಕಾಯವಂಚನೆ, ವೇದಶಾಸ್ತ್ರಸಿದ್ಧಿ, ಭರತ ಸಿದ್ಧಿ, ಕಿನ್ನರಸಿದ್ಧಿ, ಖೇಚರತ್ವ, ಮಹೇಂದ್ರಜಾಲವೊಳ ಗಾದ ಚೌಷಷ್ಠಿ, ವಿದ್ಯಾಸಿದ್ಧಿ, ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರತ್ಯಕ್‌ಪ್ರಾಕಾಮ್ಯ, ಈಶತ್ವ, ವಶಿತ್ವವೆಂಬ ಅಷ್ಟೈಶ್ವರ್ಯ ಸಿದ್ಧಿಗಳು ಚೌಷಷ್ಠಿ ವಿದ್ಯಾ ಪ್ರಕಾರಗಳಲ್ಲಿ ಕೆಲವು ಆಗಿವೆ. ಆದಯ್ಯನು ಹೇಳಿರುವ ಚೌಷಷ್ಠಿ ವಿದ್ಯೆಗಳಲ್ಲಿ ಕೆಲವು ಮಡಿವಾಳ ಮಾಚಯ್ಯನು ಹೇಳುವ ಚೌಷಷ್ಠಿ ವಿದ್ಯೆಗಳಲ್ಲಿ ಕಂಡುಬರುವುದಿಲ್ಲ.[16] ಆದಯ್ಯನು ಉಲ್ಲೇಖಿಸಿರುವ ಚೌಷಷ್ಠಿ ವಿದ್ಯೆಗಳಲ್ಲಿ ವೇದಾಭ್ಯಾಸದಿಂದ ಹಿಡಿದು ಲೌಕಿಕವಾಗಿ ಪರಿಗಣಿಸ ಲಾದ ಯಕ್ಷಿಣಿ ವಿದ್ಯೆಗಳು ದೇಹದಾರ್ಢ್ಯ ಸೂಚಕ ವಿದ್ಯೆ ಗಳು ಯೋಗಸಿದ್ಧಿಗಳು ಸೇರಿವೆ. ಬಹುಶಃ ಈ ಚೌಷಷ್ಠಿ ವಿದ್ಯೆಗಳನ್ನೆಲ್ಲಾ ಆ ಕಾಲದಲ್ಲಿ ಜನರು ಅಭ್ಯಸಿಸುತ್ತಿದ್ದರು ಎಂದು ಭಾವಿಸಲು ಸಾಧ್ಯವಿಲ್ಲ.

ಹಿಂದಣ ಕಥೆಯ ಮುಂದು ಹೇಳುವ ಕಾವ್ಯ ವಲ್ಲ ಮುಂದಣ ಕಥೆಯನಿಂದು ಹೇಳುವ ನಾಟಕವಲ್ಲ ಎಂಬ ವಚನದಲ್ಲಿ[17] ಕಾವ್ಯ ನಾಟಕಗಳನ್ನು ಪ್ರಾಸಂಗಿಕವಾಗಿ ಉಲ್ಲೇಖಿಸಿದ್ದಾನೆ. ಜ್ಯೋತಿಷ್ಯದ ಅಂಗಗಳಾದ ತಿಥಿ ವಾರ ನಕ್ಷತ್ರಯೋಗ ಮತ್ತು ಕರಣಂ ಗಳ ಬಗೆಗೆ ವಚನದಲ್ಲಿ ಉಲ್ಲೇಖವಿದೆ. ಇವನ್ನು ಪಂಚ ಲಗ್ನವೆಂದು ಕರೆದಿದ್ದಾನೆ.[18] ಯೋಗಾಸನದ ಬಗೆಗೂ ಉಲ್ಲೇಖ ಇದೆ. ಪದ್ಮಾಸನ, ಸಿದ್ಧಾಸನ, ಬದ್ಧಾಸನ,

---

12 ಚನ್ನಬಸವಣ್ಣನವರ ವಚನಗಳು (ಸಂ. ಆರ್.ಸಿ. ಹಿರೇಮಠ) ವ.ಸಂ. ೧೪೩೩, ಪು. ೬೩೯

13 ಆದಯ್ಯನ ವಚನಗಳು (ಸಂ. ಉತ್ತಂಗಿ ಚೆನ್ನಪ್ಪ) ವ.ಸಂ. ೧೦೭, ಪು. ೬೭-೬೮

14 ಅದೇ, ವ.ಸಂ. ೯೧ ೧೦೬, ಪು. ೫೮-೫೯, ೬೬

15 ಅದೇ, ವ.ಸಂ. ೨೩೧, ಪು. ೧೩೩

16 ಆರ್.ಆರ್. ದಿವಾಕರ, ವಚನಶಾಸ್ತ್ರ ರಹಸ್ಯ ಪು. ೫೦೬

17 ಆದಯ್ಯನ ವಚನಗಳು (ಸಂ. ಉತ್ತಂಗಿ ಚೆನ್ನಪ್ಪ) ವ.ಸಂ. ೧೪೬, ಪು. ೪೯

18 ಅದೇ, ವ.ಸಂ. ೪೫, ೨೩೪, ಪು. ೨೬, ೧೩೭

ವಜ್ರಾಸನ, ಮಯೂರಾಸನ, ಕೂರ್ಮಾಸನ, ಗರುಡಾಸನ, ಅರ್ಧಾಸನ, ವೀರಾಸನ, ಸ್ಮಶಾನಾಸನ, ಹಸ್ತಾಸನ-ಮಸ್ತಕಾಸನ, ಕುಠರಾಸನ, ಸಿಂಹಾಸನ, ಮಧ್ಯಲವಣಿ, ಶಿರೋಮಣಿ ಮುಂತಾದ ಇಪ್ಪತ್ತು ಬಗೆಯ ಯೋಗಾಸನಗಳನ್ನು ಉಲ್ಲೇಖಿಸಿದ್ದಾನೆ.[19]

### ೫. ಲಲಿತ ಕಲೆಗಳು

ಲಲಿತ ಕಲೆಗಳಲ್ಲಿ ಒಂದಾದ ಸಂಗೀತದ ಬಗೆಗೂ ಉಲ್ಲೇಖ ಇದೆ. ಸಂಗೀತದಲ್ಲಿ ಬಳಸುವ ವಿವಿಧ ಬಗೆಯ ವಾದ್ಯಗಳನ್ನು ಆದಯ್ಯನು ಹೇಳಿದ್ದಾನೆ. ಗಂಟೆ, ಜಯಗಂಟೆ, ತಾಳ, ಕಂಸಾಳ, ವೀಣೆ, ರುದ್ರವೀಣೆ, ತುಂಬುರ ವೀಣೆ, ಕಿನ್ನರಿ ವೀಣೆ, ಕೈಲಾಸ ವೀಣೆ ಮುಂತಾದ ತಂತಿ ಕಟ್ಟಿನುಡಿವ ವಾದ್ಯಗಳು, ಪಟಹ, ಪಡ, ಡಕ್ಕೆ, ಡಮರುಗ, ಡಿಂಡಿಮ, ಅವ್ರಜ, ಪಜಾವ್ರಜ, ಮೃದಂಗ, ಮುರಜ, ಭೇರಿ, ಕಹಳೆ, ಹೆಗ್ಗಳೆ, ಶಂಖ, ವಾಸ, ನಾಗಸ್ವರ, ಉಪಾಂಗ ಮೊದಲಾದ ವಾದ್ಯಪ್ರಕಾರಗಳ ವಿವರ ಇದೆ. ಇವುಗಳಲ್ಲಿ ಬಹಳಷ್ಟು ಲೋಹವಾದ್ಯ, ಚರ್ಮವಾದ್ಯ, ತಂತಿವಾದ್ಯ, ಮರುದ್ವಾದ್ಯಗಳ ಪ್ರಕಾರಗಳವೆ ಸೇರಿದವುಗಳಾಗಿವೆ. ಆದರೆ ಆದಯ್ಯನು ಹೇಳುವ ಐದು ಬಗೆಯ ವೀಣೆಗಳು ಸಂಗೀತರತ್ನಾಕರದಲ್ಲಿ ಉಲ್ಲೇಖಿಸಿರುವ ಹತ್ತು ವೀಣೆಯ ಪ್ರಭೇದಗಳಲ್ಲಿ ಕಂಡುಬರುವುದಿಲ್ಲ. ಗಂಟೆ ಜಯಗಂಟೆಗಳು ದೇವತಾ ಸೇವಾ ವಾದ್ಯಗಳಾಗಿವೆ. ಸುನಾದ, ಮಹಾನಾದ, ಹಂಸನಾದ ಎಂದು ಮೂರು ಬಗೆಯ ನಾದಗಳನ್ನು ಹೇಳಿದ್ದಾನೆ.[20]

> ಗಗನದ ಪುತ್ಥಳಿಯ ಬಯಲ ಬಣ್ಣವನುಟ್ಟು
> ಅಂಜನದ ತಿಲಕವನಿಟ್ಟು
> ಬ್ರಹ್ಮವಿಷ್ಣು ರುದ್ರರನಲಂಕರಿಸಿಕೊಂಡು
> ತ್ರಿಜಗದೊಳಗೆ ತನ್ಮಯವಾಗಿ ಸುಳಿಯಿತ್ತು

ಎಂಬುವ ವಚನದಲ್ಲಿ[21] ಪರೋಕ್ಷವಾಗಿ ಗೊಂಬೆಯಾಟದ ಬಗೆಗೆ ಉಲ್ಲೇಖ ದೊರೆಯುತ್ತದೆ. ತಾಂಬೂಲಗಳಲ್ಲಿ ಒಂದಾದ ವೀಳೆಯ ಬಗೆಗೆ ಉಲ್ಲೇಖ ಇದೆ. ಆದಯ್ಯನು ವೀಳೆಯ ಮತ್ತು ಕರ್ಪೂರ ವೀಳೆಯ ಬಗೆಗೆ ಹೇಳಿದ್ದು ಅವನ್ನು ಪೂಜೆಗೆ ಉಪಯೋಗಿಸುತ್ತಿದ್ದರು ಎಂಬುದಾಗಿ ತಿಳಿದುಬರುತ್ತದೆ. ರುಚಿಯ ಪ್ರಕಾರಗಳಾದ ಸಿಹಿ (ಮಧುರ), ಒಗರು, ಖಾರ, ಅಮ್ಲ, ಕಹಿ, ಲವಣ ರುಚಿಗಳ ಬಗೆಗೂ ಉಲ್ಲೇಖ ಇದೆ. ಸ್ಪರ್ಶದ ನಾಲ್ಕು ಪ್ರಕಾರಗಳಾದ ಕಠಿಣ, ಮೃದು, ಉಷ್ಣ, ಶೈತ್ಯ ಸ್ಪರ್ಶ ಉಲ್ಲೇಖವೂ ಇದೆ.[22]

### ೬. ಇತರೆ ಸಂಗತಿಗಳು

ಶಿವಲಿಂಗದ ಮಹಿಮೆಯನ್ನು ಹೇಳುವ ನೆಪದಲ್ಲಿ ಪುರಾಣದ ದೇವತೆಗಳನ್ನು ವಚನವೊಂದರಲ್ಲಿ ಹೇಳಿದ್ದಾನೆ. ಅವನು ಉಲ್ಲೇಖಿಸಿರುವ ದೇವತೆಗಳು ಎಂದರೆ ಹರಿ-ಬ್ರಹ್ಮ, ಶಕ್ರ (ಇಂದ್ರ) ಸೂರ್ಯ. ಸೋಮ, ಕುಬೇರ, ನಾಗ, ವರುಣ, ವಾಯು, ನೈರುತ್ಯ, ದಶರಥ, ಅಶ್ವಿನಿ, ಗಾಯತ್ರಿ, ಲಕ್ಷ್ಮಿ, ಸರಸ್ವತಿ, ಚಾಮುಂಡಿ, ಭೂದೇವಿ, ದುರ್ಗಿ, ಸಪ್ತಮಾತೃಕೆಯರು ಪುರಾಣ ಕಥೆಗಳಲ್ಲಿ ಬರುವ ಶಾಪಕ್ಕೆ ಗುರಿಯಾದ ಮಾಂಡವ್ಯ, ಇಂದ್ರ, ಶೂದ್ರಿಕಾ, ನಾಗಾರ್ಜುನರ ಉಲ್ಲೇಖವು ಮತ್ತೊಂದು ವಚನದಲ್ಲಿದೆ.

ಶಾಕ್ತ ಪಂಥದವರು ಯೋಗಶಕ್ತಿಯಿಂದ ಪಡೆಯುವ ಶಕ್ತಿಯು, ಶಿವಶರಣರ ಯೋಗಶಕ್ತಿಗೆ ಸರಿಸಾಟಿಯಲ್ಲ ಎಂಬ ಅಂಶವನ್ನು ಹೇಳುವಲ್ಲಿ ಶಾಕ್ತ ಪಂಥದ ಅಷ್ಟಾಂಗ ಯೋಗಗಳಾದ ಹಠಯೋಗ, ಅಭ್ಯಾಸಯೋಗ, ಅಂಬಿಕಾಯೋಗ, ಆತ್ಮಯೋಗ, ಸಿದ್ಧಯೋಗ, ಪಿಶಾಚಯೋಗಗಳನ್ನು ಹೆಸರಿಸಿ ಅವುಗಳ ಸಿದ್ಧಿಸಲು ಅನುಸರಿಸಬೇಕಾದ ಆಚರಣೆಗಳನ್ನು ವಿಸ್ತೃತವಾಗಿ ತಿಳಿಸಿದ್ದಾನೆ. ಆದಯ್ಯನು ನವನಾಥಸಿದ್ಧನನ್ನು ಭೇಟಿಯಾದ ಬಗೆಗೆ ಸಾಹಿತ್ಯಕೃತಿಗಳಲ್ಲಿ ಅಥವಾ ಇತರ ಕಡೆಗಳಲ್ಲಿ ಆಧಾರ ದೊರೆಯುವುದಿಲ್ಲ. ಅದಾಗ್ಯೂ ನಾಥ ಸಂಪ್ರದಾಯದ ನವನಾಥರಾದ ವ್ಯಾಳಿ, ಚರ್ಪಟಿ, ಕೋರಾಂಟ, ರತ್ನಘೋಷ, ಭೂತನಾಥ, ನಾಗಾರ್ಜುನ,

---

19 ಆದಯ್ಯನ ವಚನಗಳು (ಸಂ: ಉತ್ತಂಗಿ ಚೆನ್ನಪ್ಪ) ೨೩೧, ಪು. ೧೩೪

20 ಅದೇ, ವ.ಸಂ. ೩೪೧, ಪು. ೧೮೬

21 ಅದೇ, ವ.ಸಂ. ೩೪೮, ಪು. ೧೮೯

22 ಅದೇ, ವ.ಸಂ. ೩೫೧, ಪು. ೧೯೪-೫

ಮಚ್ಚೇಂದ್ರ, ಗೋರಕ, ಮಂಜುನಾಥರನ್ನು ಉಲ್ಲೇಖಿಸಿದ್ದಾನೆ.[23]

ಆದಯ್ಯನ ವಚನಗಳು ಷಟ್‌ಸ್ಥಲ ಸಿದ್ಧಾಂತದ ಚೌಕಟ್ಟಿಗೆ ಒಳಗಾಗಿದ್ದರೂ ಪ್ರಾಸಂಗಿಕವಾಗಿ ಆ ಕಾಲದ ಕೆಲವು ಸಾಂಸ್ಕೃತಿಕ ಅಂಶಗಳನ್ನು ಒಳಗೊಂಡಿದೆ ಎಂಬುದು ಈ ಕಿರು ಲೇಖನದಿಂದ ವಿದಿತವಾಗುತ್ತದೆ.

---

23 ಅದೇ, ವ.ಸಂ. ೨೩೧, ಪು. ೧೩೨

# SUMMARIES

## 1. Mooganyakanakote: A Neolithic Site

*K.B. Shivatarak*

Dozens of Stone Age sites have been identified in Tumkur dt. A newly located site has been Mooganayakana Kote 11 km from Gubbi and in Nittur Hobli, where explorations were conducted in 1992-93 and microliths were found and it is identified as a centre of microlithic industry. Dr. Sheshadri had conducted excavations at Kibbanahalli and the lithic weapons found here are similar to those unearthed by him, and they include clevers, scrapping edges and choppers. The microliths found here are of granite, crystal stone and white granite. Scrappers, sharp edged flat stones, crescent-shaped weapons, arrow-heads, thin hooks, etc., have been found here in new patterns not known till now. The weapons give an idea of special techniques employed in shaping them, and also that south-east Karnataka was strategically important from the point of Stone-Age man.

## 2. Hoojigallu: Its Growth from Megalithic Age to the 16th Century

*Dr. H.S. Gopala Rao*

Hujigallu is very near to Kallya, noted historical place in Magadi tq. and in addition to the worn-out inscriptions published in *Epigraphia Carnatica*, seven not so clear epigraphs in the 16th century Kannada characters have been newly found in a place called Majjinabhavi and many of these are Jaina writings, some being *Nishidhi* records. Some have images of Jaina sages in relief. During our earlier visit a weapon resembling an axe and many megalithic tombs had been located. Though some people had tampered with some of the tombs (and there are a total of 70 of them now) and those people are believed to have been subjected to trouble and inconvenience as a result of it; many tombs thereafter remained untouched, and in those tombs were found iron weapons including one resembling a trident. These stone block tombs are surrounded by circular fencings of stone. Some capstones are 15 to 20 feet in length, 10 to 12 feet in breadth and one feet in thickness. Some nearby hillocks have more such tombs. The megalithic people appear to have lived in three separate groups. The sixteenth century *nishidhis* indicate migration of Jains from Kalya to this place. When the megaliths near Savandurga are also borne in mind, it can be concluded that Magadi tq. had been the popular haunt of the megalithic man.

## 3. Chaluvanahalli Gavimatha - A Pre - Historic Site

*Hanuma Nayak*

Chaluvanahalli, which is two km west from the State highway (Bangalore-Honnavar) in Arasikere taluk, has three small hills which have a number of caves and rock - shelters. In one of the rock shelters which measures about 10 x 20 x 2 1/2 feet there are dark red-paintings of manily a group of snakes, and the figures of men. Just opposite to this is another rock-shelter, which has white paintings mainly depicting a hunting scene. In this we can easily make out the figures of animals like dog, peacock, hunting net, ladder and many human figures. According to scholars, these paintings can eassily be ascribed to early Neolithic period which roughly covers from 9,000 B.C. to 3,000 B.C. At the foot of the hill in the middle of land there is one menhir (dolmen) measuring about 2 to 4 feet height. Here a variety of potsherds like cups, jars etc. are found in red ware and black ware. These are burnt and finely polished. These potsherds have beautiful drawings and paintings.

Only one stone tool, a chisel is found here. Redware is also found in abundance. This place was one of the early settlements of man in Karnataka and perhaps this is the only place in Hassan district having pre-historic paintings.

## 4. Archaeological Excavations at Talakadu: A Brief Report

*Dr. M.S. Krishna Murthy*

In the ancient town of Talakadu, excavations were conducted by digging seven trenches. At the lowest level megalithic pottery of the 7th century B.C. were found. The pottery was black and black-and-red ware with thin shining layers and also those with grafitti work on them.

Of the proto-historic age, highly polished decorative pottery of red, black and black-and-red colour with white drawings on them and jewellery of ivory and shell, bangles and stone beads of various colours etc., were unearthed. A furnace was also unearthed together with a mould of an imitative Roman coin, and also material connected with goldsmithy. This is contemporaneous to the culture of the Shatavahana times.

Of the days of the Ganga rule of 500 years, a cemetery has been located where there were pots containing burnt bones and ashes and also pieces of iron, beautifully shaped pots, semi-precious stones beads, pieces of ivory and shell jewellery etc.

A Jain basti of brick existed. Its ground plan is seen. It has three *sanctums* in a row, each with a verandah and a *mandapa*. There are postholes and the structure perhaps had wooden roofing. The charred remains indicate the structure being burnt down. It could have been built during 7th or 8th century and repaired during 9th or 10 th century. It resembles in plan the Chandragupta basti of Sravanabelagola. A Ganga record speaks of a Vijaya Jinalaya of the place, and must be referring to this.

Portions of a long wall 2 mtr broad, 2 mtr thick and 20 mtr in length has been found. Near the Kirtinarayana two earthen ring wells have been unearthed. These are of the type found at Harappa. What is visible above ground is structure of Vijayanagar and later times, and the sand accumulation in the town appears to be the post 16th or 17th century.

## 5. The Sannati Fort Viewed Again

*Dr. S. K. Joshi*

Of the ancient forts, those of Banavasi and Sannati had been assigned, to 2nd century B.C. Sannati on the banks of the Bhima has not only the Chandralamba temple but the remains of a fort and *stupas*. When first examined in 1976-78, the brick and mud fort was assigned to Shatavahana times. It has rows of semi-circular walls and it covers an area of 80 ha. The recent discovery of the Ashokan edict at the place indicates that the territory was under Ashoka, and the fort was built during his time, contemporaneous to the forts of Shravasti, Shisupalgad, Patalipura and Rajagriha. Thus Sannati becomes the oldest fort in the South and a notably old Buddhist centre also.

## 6. Kurakalappalli Copper Plate of Erigalvadi Cholas

*Dr. Devarakonda Reddy*

Found at Kurakalapalli in Anantapur district, the copper inscription with five sheets is in 10th century Kannada characters. One of the sheets is lost and it is not possible to trace the details of the donor kings. The donor is Chola Muttarasa and donee is a brahmin called Sukkeriya and the village donated was Kollur. This Chola family claims origin from Ureyur, and the first ruler of the line is Arkka, followed by Karapatti, Punyavallabha, Sirirama, Dhananjaya, Voleyamma, Davaleya, Narasinga etc. Dhananjaya was a contemporary of Ganga Sripurusha. Their territory is called 'Erigalvadi' whose capital was Nidugal. Many villages in their territory are mentioned and this is a very old record of the Nidugal branch.

## 7. Unpublished Records from Shravanabelgola and nearby Villages

*K. Vasantalakshmi*

The unpublished records from Shravanabelgola brought to light here include one

from the Keshava temple at Hale Belagola, one from the *antarala* of the Parswanatha basadi on Chikkabetta, one from a pillar in the Eradukatte basadi on Chikkabetta, two from the inner wall of the Shantishwara of Jinanathapura and those on the frontal wall of the Akkana Basadi and one record from Baralu village.

Except the Eradukatte Inscription which is of the 8th century others are of Hoysala times and the 8th century record only states that the four pillars of *navakanda* were wrought by Dugga Marovaja.

The Halebelgola record speaks of the name of the place at Jaragarahalli and enumerates grants made for the services in the Parshwanatha basadi in 1170 A.D. The Baralu record of 1148 A.D. narrates the receiving of certain grants by a Jaina ascetic Gunabhadra who was the teacher of Nayakirti Siddhantadeva. The donors were Sunkada Adhikari, Bittimayya Heggade (who had built a tank and the Suparshwa basadi in the villages) and his wife for the services in the basadi. Later, during the 13th century, a trader Viramanikya Setty of the Kalbappu trade guild repaired the tank and the basadi. The record from Chikkabetta speaks of a grant to the Parshwanatha basadi in 1257 by Chikkamadukanna who is also known from his other donations to other institutions dated 1256.

The Jinanathapura record of the 13th century speaks of donation of many items necessary for daily service in the basadi by one Chamisetty. Two records from Akkana basadi have been noticed and published by Sri L.K. Srinivasan, but his reading is not correct. One of them speaks of the installation of Mukkode Kallu to demarcate the land granted to the basadi. Another record there, in fact, mentions the appointment of a *davasiga* to oversee the income and expenses of the basadi and land grant made for meeting his remuneration. The Perumala mentioned in this record is the name of the Sthanika of the basadi.

## 8. Tenkanahalli Doddi Stone Record of Ballala III

*J.T. Jayaramayya and K.Kumar Yadav*

This stone record dated 1338 is founed at Tenkanahalli Doddi of Chennapattana tq in a private land. It speaks of a land grant to a trader of Malayali origin, Rayappa Setty by one official Guleya Nayaka. The lands were in Lankere. The reocrd is of greater interest as it speaks of Ballala III as ruling from Virupaksha Pattana, indicating that he still ruled from Hampi in 1338 and Hairhara was not in full control of the place then.

## 9. Persian Record from Chandragutti

*Dr. H.R. Raghunatha Bhat*

A Persian record is found on the bastion of the fort of Chandragutti at a height of 14 meters, and is in Arabic Nask script. It reads that by the grace of God this fort with bastions was built by Ibrahim Adilshah in A.H. 1043 (1634 A.D.). This is an addition to the half-a-dozen Persian records found already in Shimoga dt, and of them one was found on the sixth round of the Chandragutti fortification in 1992. The record supports the testimony of Ferishta who states that the fort here was built by the Adilshahis.

## 10. Copper Plate from Muttatti

*Mutturaju*

Muttatti in Malavalli tq of Mandya dt has a famous Hanuman temple and this copper plate found at Nayakanahalli of Kankapura tq narrates the tradition that God Anjaneya came in the form of a tiger and the tiger demanded a palanquin from Srirangaraya, a descendant of Vijayanagar at Shivasamudra in 1660 and the prince granted his own royal palanquin and donated land at Byadarahalli to the God in 1660.A.D. One Kalamuttadasa built a shelter of leaves for the God at Muttatti. Two brothers Kalegouda and Kenchegouda from Hulagur gave the devotee succour, and they were called Kalamutta

